(೨) ಇನ್ನೊಂದು ವಿಧವಾಗಿಯೂ ಅರ್ಥವಿರುವದು; ಶಬ್ದದಶಕ್ತಿ ವೃತ್ತಿ[೨]ಯಿಂದ ಬುದ್ಧಿಯು ಬ್ರಹ್ಮನನ್ನು ತಿಳಿಯಲಿಲ್ಲ. ಶಬ್ದದ ಲಕ್ಷಣ ವೃತ್ತಿಯಿಂದ ಬುದ್ಧಿಯು ಆ ಬ್ರಹ್ಮನನ್ನು ತಿಳಿಯಿತು.

(೩) ಮುನ್ನೊಂದು ವಿಧವಾಗಿಯೂ ಅರ್ಥವಿರುವದು; ಮಲಿನವಾದ[೩] ಬುದ್ಧಿಯು[೪] ಆ ಬ್ರಹ್ಮನನ್ನು ತಿಳಿಯಲಿಲ್ಲ. ಶುದ್ಧವಾದ ಬುದ್ಧಿಯು ಆ ಬ್ರಹ್ಮನನ್ನು ತಿಳಿಯಿತು. ಈ ಅರ್ಥದಿಂದ ಹೀಗೆ ತಿಳಿಯಬೇಕಲ್ಲಾ? ಶುದ್ಧಬುದ್ಧಿ[೬]ಯಾದರೂ ಫಲವ್ಯಾಪ್ತಿ[೫]ಯಿಂದಾ ಆ ಬ್ರಹ್ಮನನ್ನು ತಿಳಿಯಲಿಲ್ಲ; ಆದರೆ ವೃತ್ತಿವ್ಯಾಪ್ತಿಯಿಂದ ತಿಳಿಯಿತು; ಈ ವೃತ್ತಿಯಾದರೂ ದೀಪವು ಹೇಗೆ ಅನ್ಯಪದಾರ್ಥಗಳನ್ನು ಪ್ರಕಾಶಿಸುವದೋ ಹಾಗೆ ಬ್ರಹ್ಮನನ್ನು ಪ್ರಕಾಶಿಸಲು ಸಮರ್ಥವಾಗಲಿಲ್ಲ. ಆದರೆ ಪಾತ್ರೆಯಲ್ಲಿ ಬಚ್ಚಿಟ್ಟ ರತ್ನವು (ಕತ್ತಲೆಯಲ್ಲಿ ಆ ಪಾತ್ರೆಯು ಇದ್ದರೂ ಸಹ) ಅದನ್ನು ದಂಡದಿಂದ ಒಡೆಯಲು, ರತ್ನವು ಪ್ರಕಾಶಿಸುವದು. ಅದರಂತೆಯೇ "ಅಹಂ ಬ್ರಹ್ಮಾಸ್ಮಿ" ಎಂಬ ವೃತ್ತಿಯಿಂದ[೭] ಬ್ರಹ್ಮನ ಆವರಣರೂಪವಾದ ಅಜ್ಞಾನದ ನಿವೃತ್ತಿಮಾಡುವದೂ, ಬ್ರಹ್ಮನನ್ನು ಪ್ರಕಾಶಮಾಡುವದು; ಎಂದು ಹೇಳಿದೆ. ಆದ್ದರಿಂದ ಬ್ರಹ್ಮನು ಸ್ವಪ್ರಕಾಶದಿಂದ ಬುದ್ಧಿ ಮೊದಲಾದ ಅನ್ಯಪ್ರಕಾಶಗಳ ಆಪೇಕ್ಷೆರಹಿತನಾಗಿ ಸರ್ವವನ್ನೂ ಅವನೇ ಪ್ರಕಾಶಿಸುವನು. ಈ ಕಾರಣದಿಂದ "ಮತಿ ನಲಕ್ಷ್ಯೆ ಜಿಹಿ ಮತಿಲಕ್ಷ್ಯೆ" ಈ ಅರ್ಥದಿಂದ ಬ್ರಹ್ಮನು ಸ್ವಯಂಪ್ರಕಾಶನಾಗಿದ್ದಾನೆ ಎಂದು ಸಿದ್ಧವಾಗಿದೆ.

(೧) ಶಕ್ತಿ ವೃತ್ತಿ ಎಂಬದರ ಅರ್ಥವನ್ನು ಇದೇ ಗ್ರಂಥದ ಷಷ್ಟಸ್ತರಂಗದ ೪೯-ನೇ ವಾಕ್ಯವಾದ "ಗುರುವಾಕ್ಯ" ಎಂಬ ಶಂಕರಖಂಡದಲ್ಲಿ ವಿವರಿಸಲ್ಪಟ್ಟದೆ.

(೨) ಲಕ್ಷಣವೃತ್ತಿ ಇದರ ಅರ್ಥವನ್ನು ಷಷ್ಟಸ್ತರಂಗದ ೪೯-ನೇ ವಾಕ್ಯವಾದ "ಗುರುವಾಕ್ಯ" ಎಂಬ ಶಂಕರಖಂದದಿಂದಲೂ ೪೩೨-ನೇ ವಾಕ್ಯವಾದ "ಏಕವಾಚ್ಯ" ಎಂಬ ವಾಕ್ಯದಿಂದಲೂ, ೪೩೮-ನೇ ವಾಕ್ಯವಾದ ಮಹಾವಾಕ್ಯದಿಂದ ಭಾಗತ್ಯಾಗದ "ಅಂಗೀಕಾರ" ಎಂಬದರಿಂದಲೂ ಸ್ಪಷ್ಟವಾಗಿ ತಿಳಿಯಬಹುದು.

(೩) ಮಲಿನವಾದ ಬುದ್ಧಿಯು ಅಂದರೆ ಮಲ ವಿಕ್ಷೇಪಗಳೆಂಬ ದೋಷವಾಗಿದ್ದ ಬುದ್ಧಿಯು.

(೪) ಶುದ್ಧಮತಿ ಅಂದರೆ ಚತುರ್ಥಸಾಧನ ಸಹಿತವಾದ ಮಲವಿಕ್ಷೇಪ ಮೊದಲಾದ ದೋಷರಹಿತವಾದ ಬುದ್ಧಿಯು.

(೫) ಫಲವ್ಯಾಪ್ತಿ, ಅಂದರೆ ಚಿದಾಭಾಸದ ವಿಷಯಗಳಿಂದ ಅಥವಾ ಚತುರ್ಥ ಸ್ತರಂಗದ "ಪ್ರಮಾತಾ ಮೊದಲಾದ ನಾಲ್ಕು ಚೇತನಗಳ ಸ್ವರೂಪ" ಎಂಬ ೨೦೫-ನೇ ವಾಕ್ಯದಿಂದ ಸ್ಪಷ್ಟವಾಗಿ ತಿಳಿಯುವದು.

(೬) ವೃತ್ತಿವ್ಯಾಪ್ತಿ, ಅಂದರೆ ಕೇವಲ ವೃತ್ತಿಯು ವಿಷಯಗಳಿಂದ ಅಥವಾ ಚತುರ್ಥ ಸ್ತರಂಗದ ೨೦೫-ನೇ ವಾಕ್ಯವಾಗಿದ್ದ "ಪ್ರಮಾತಾಮೊದಲಾದ ನಾಲ್ಕು ಚೇತನಗಳ ಸ್ವರೂಪ" ಎಂಬ ವಾಕ್ಯದಿಂದ ತಿಳಿಯುವದು.

(೭) ಆವರಣರೂಪ, ಇದರ ಅರ್ಥವು ಚತುರ್ಥಸ್ತರಂಗದಲ್ಲಿಯ ೧೪೭-ನೇ ವಾಕ್ಯವಾಗಿದ್ದ ಅಥ ೧ ಅಜ್ಞಾನ, ಮತ್ತು ೨ ಆವರಣಸ್ವರೂಪ ವರ್ಣನ ಎಂಬರದಲ್ಲಿ ಸ್ಪಷ್ಟವಾಗಿ ವಿವರಿಸಿದೆ.

---

## ಪುನಃ ಆ ಬ್ರಹ್ಮನು[೧] ಹೇಗೆ ಇರುವನು!

(೭) ಅವನು "ಶುದ್ಧ[೨]" ವಿರುವನು.

(೮) ಅವನು "ಅಪಾರ" ಇರುವನು.

[೩] ಹೇಳಿದ ಬ್ರಹ್ಮನ ಲಕ್ಷಣಗಳ ಪದಕೃತಿಗಳನ್ನು ತೋರಿಸಲ್ಪಟ್ಟದೆ.

೧. ಆ ಕೇವಲ ಬ್ರಹ್ಮನು "ಸುಖ" ವಿರುವನು. ಹೀಗೆ ಹೇಳಿದರೆ [೪] ವಿಷಯ ಸುಖ, ಅಥವಾ ನ್ಯಾಯಮತದಿಂದ ಆತ್ಮನಿಗೆ, ಆನಂದಗುಣನೆಂದು [೫] ಉಲ್ಲೇಖಿಸಿದ್ದಾರೆ. ಅವುಗಳಲ್ಲಿ ಬ್ರಹ್ಮನ ಲಕ್ಷಣಗಳ ಅತಿವ್ಯಾಪ್ತಿಯು ಉಂಟು; ಅದರ ನಿವಾರಣಾರ್ಥವಾಗಿ ಬ್ರಹ್ಮನ ಲಕ್ಷಣದಲ್ಲಿ "ಸುಖ,, ಎಂಬದಕ್ಕೆ ಪ್ರತಿಯಾಗಿ "ನಿತ್ಯ,, ಎಂದು ಹೇಳಿರುವರು. (೧) ವಿಷಯಾನಂದವು ಅನಿತ್ಯ [೬] ವಿರುವದು. ಮತ್ತು (೨) ನೈಯಾಯಿಕರು ಆತ್ಮನನ್ನು "ಆನಂದ,, ಗುಣನೆಂದು ತಿಳಿದಿರುವರು; ಅವರಾದರೂ "ಅನಿತ್ಯ,, ಎಂದು ತಿಳಿದಿರುವರು.

೨. ಆ ಕೇವಲ ಬ್ರಹ್ಮನು "ನಿತ್ಯ" ವಿರುವನು, ಹೀಗೆ ಹೇಳಿದ ಅವ



[೭] ರು ನ್ಯಾಯಮತದಲ್ಲಿ ಆಕಾಶ, ಕಾಲ, ಮೊದಲಾದವುಗಳು ನಿತ್ಯವೆಂದು ತಿಳಿದಿರುವರು. ಹೀಗೆ ಹೇಳುವದರಿಂದ ಅತಿವ್ಯಾಪ್ತಿಯು ಉಂಟಾಗುವದು. ಇದರ ನಿವಾರಣಾರ್ಥವಾಗಿ, ಬ್ರಹ್ಮನ ಲಕ್ಷಣದಲ್ಲಿ "ನಿತ್ಯ"ದ ಪ್ರತಿಯಾಗಿ "ಪ್ರಕಾಶ" ಎಂದು ಹೇಳಿರುವರು. ನೈಯಾಯಿಕರು ಆಕಾಶಾದಿಗಳಿಗೆ ನಿತ್ಯವೆಂದು ತಿಳಿದಿರುವರು. ಆದರೆ ಪ್ರಕಾಶರೂಪವಲ್ಲ, ಎಂದು ತಿಳಿದಿರುವರು, ಆದರೆ ಜಡವೆಂದು ತಿಳಿದಿರುವರು, ಆದ್ದರಿಂದ ಬ್ರಹ್ಮನು 'ನಿತ್ಯ,, ಮತ್ತು "ಪ್ರಕಾಶ" ಎಂದು ಹೇಳದೆ, ಆದ್ದರಿಂದ ಆ ಮತದಲ್ಲಿ ಅತಿವ್ಯಾಪ್ತಿ ಇಲ್ಲ.

೩. ಆ ಕೇವಲಬ್ರಹ್ಮನು "ಪ್ರಕಾಶ" ಇರುವನು. ಹೀಗೆ ಹೇಳುವದರಿಂದ (೧) ಸೂರ್ಯಾದಿಗಳ ಪ್ರಕಾಶದಲ್ಲಿ ಅತಿವ್ಯಾಪ್ತಿಯು ಆಗುವದು. [೮] (೨) ಅಥವಾ ನ್ಯಾಯಮತದಲ್ಲಿ ಆತ್ಮನನ್ನು ಜ್ಞಾನಗುಣನೆಂದು ತಿಳಿದಿರು[೯]ವರು ಇದರಿಂದ ಅತಿವ್ಯಾಪ್ತಿಯುಂಟಾಗುವದು. (೩) ಅಥವಾ ಕ್ಷಣಿಕ ವಿಜ್ಞಾನವಾದಿಗಳ ಮತದಲ್ಲಿ ಆತ್ಮನು ಕ್ಷಣಿಕ ವಿಜ್ಞಾನ ರೂಪನೆಂದು ತಿಳಿದಿರುವರು ಇದರಲ್ಲಿ ಅತಿ ವ್ಯಾಪ್ತಿಯುಂಟಾಗುವದು.

ಇದರ ನಿವಾರಣಾರ್ಥವಾಗಿ ಬ್ರಹ್ಮನ ಲಕ್ಷಣದಲ್ಲಿ "ಪ್ರಕಾಶ" ಎಂಬದರೊಡನೆ "ವಿಭು" ಎಂದು ಹೇಳಿರುವರು.

(೧) ಸೂರ್ಯಾದಿಗಳ ಪ್ರಕಾಶವು ವ್ಯಾಪಕವಿರುವದಿಲ್ಲ, ಆದರೆ ಪರಿಚ್ಛಿನ್ನವಿರುವದು.

(೨) ನೈಯಾಯಿಕರು ಆತ್ಮನ ಜ್ಞಾನಗುಣವು ವ್ಯಾಪಕ ವಲ್ಲವೆಂದು ತಿಳಿದಿರುವರು. ಆದರೆ ಪರಿಚ್ಛಿನ್ನನೆಂದು ತಿಳಿದಿರುವರು.

(೩) ಇದರಂತೆ ಕ್ಷಣಿಕ ವಿಜ್ಞಾನವಾದಿಗಳು ಕ್ಷಣಿಕ ವಿಜ್ಞಾನವನ್ನು ವ್ಯಾಪಕವಲ್ಲವೆಂದು ತಿಳಿದಿರುವರು, ಆದರೆ ಪರಿಚ್ಛಿನ್ನವೆಂದು ತಿಳಿದಿರುವರು.

ಇಲ್ಲಿ ಬ್ರಹ್ಮನು "ಪ್ರಕಾಶ" ಮತ್ತು "ವಿಭು,, ಎಂದು ಹೇಳಿರುವರು ಆದ್ದರಿಂದ ಇದರಲ್ಲಿಯೂ ಅತಿವ್ಯಾಪ್ತಿಯು ಇಲ್ಲ.

೪. ಆ ಕೇವಲ ಬ್ರಹ್ಮನು "ವಿಭು,, ಇರುವನು, ಹೀಗೆ ಹೇಳುವದರಿಂದ (೧) ಆಕಾಶಾದಿಗಳೂ ವ್ಯಾಪಕವಿರುವವು, ಇದರಿಂದ ಅತಿವ್ಯಾ[೧೦]ಪ್ತಿಯುಂಟಾಗುವದು. ಮತ್ತು (೨) ನೈಯಾಯಿಕ ಪ್ರಭಾಕರರು

ಆತ್ಮನನ್ನು ವಿಭು ಎಂದು ತಿಳಿದಿರುವರು. ಇದರಲ್ಲಿ ಅತಿವ್ಯಾಪ್ತಿಯು[ಂ] ಟಾಗುವದು. (೩) ಸಾಂಖ್ಯಮತದಲ್ಲಿ ಪ್ರಕೃತಿಯನ್ನು ವ್ಯಾಪಕವೆಂದ[ು] ತಿಳಿದಿರುವರು. ಇದರಿಂದ ಅತಿ ವ್ಯಾಪ್ತಿಯು ಉಂಟಾಗುವದು. ಇದ[ರ] ನಿವಾರಣಾರ್ಥವಾಗಿ ಬ್ರಹ್ಮನ ಲಕ್ಷಣದಲ್ಲಿ ವಿಭು ಎಂಬದರೊಡನೆ ನಾವ[ು] ರೂಪದ ಆಧಾರ ಎಂದು ಹೇಳಿದೆ.

೧೧

(೧) ಆಕಾಶಾದಿಗಳು ವಿಭುವಾಗಿರುವವು. ಆದರೆ ನಾಮರೂಪಕ್ಕೆ ಆಧಾರವಾಗಿರುವದಿಲ್ಲ.

(೨) ಇದರಂತೆ ನೈಯಾಯಿಕ ಪ್ರಭಾಕರರು ಆತ್ಮನನ್ನು ವಿಭು ಎಂದು ತಿಳಿದಿರುವರು. ಆದರೆ ನಾಮರೂಪಕ್ಕೆ ಆಧಾರವೆಂದು ತಿಳಿದಿರುವದಿಲ್ಲ ಮತ್ತು,

(೩) ಸಾಂಖ್ಯ ಮತದಲ್ಲಿ ಪ್ರಕೃತಿಯನ್ನು ವ್ಯಾಪಕವೆಂದು ತಿಳಿದಿರುವರು.ಆದರೆ ನಾಮರೂಪದ ಆಧಾರವೆಂದು ತಿಳಿದಿರುವದಿಲ್ಲ.

ಇಲ್ಲಿ ಬ್ರಹ್ಮನು "ವಿಭು ಮತ್ತು "ನಾಮರೂಪ ಆಧಾರ,, ಎಂದು ಹೇಳಿದೆ, ಈ ಕಾರಣದಿಂದ ಇಲ್ಲಿಯೂ ಅತಿವ್ಯಾಪ್ತಿಯು ಇಲ್ಲ.

೫. ಆ ಕೇವಲ ಬ್ರಹ್ಮವು "ನಾಮರೂಪ ಆಧಾರ,, ವಿರುವದು.

೧೨.

ಹೀಗೆ ಹೇಳುವದರಿಂದ ಪ್ರಾತಿಭಾಸಿಕ ಸರ್ಪಾದಿಗಳ ನಾಮ ಮತ್ತು ರೂಪಗಳ ಆಧಾರವು ರಜ್ಜು ಮೊದಲಾದವುಗಳು ಇರುವವು. ಇದರಿಂದ ಅತಿ ವ್ಯಾಪ್ತಿಯು ಉಂಟಾಗುವದು. ಇದರ ನಿವಾರಣಾರ್ಥವಾಗಿ ಬ್ರಹ್ಮನ ಲಕ್ಷಣದಲ್ಲಿ ನಾಮರೂಪಗಳ ಆಧಾರ, ಎಂಬದರೊಡನೆ "ಮತಿಸಲಖೈಜಿಹಿ

೧೩

ಮತಿಲಖ್ಯೆ" (ಸ್ವಯಂಪ್ರಕಾಶ) ಎಂದು ಹೇಳಿದೆ, ಯದ್ಯಪಿ ನಾಮರೂಪಗಳ ಆಧಾರ, ಎಂಬ ಈ ಒಂದೇ ವಿಶೇಷಣದಿಂದಲೇ ಯಾವ ಮತದ

೧೪

ಯಾವ ಪದಾರ್ಥದಲ್ಲಿಯೂ ಬ್ರಹ್ಮನಲಕ್ಷಣಕ್ಕೆ ಅತಿವ್ಯಾಪ್ತಿಯು ಉಂಟಾಗುವದಿಲ್ಲ. ವೇದಾಂತ ಮತದಲ್ಲಿ ರಜ್ಜು ಮೊದಲಾವುಗಳ ಸ್ಥಳದಲ್ಲಿ ಕಲ್ಪಿತ ಸರ್ಪಾದಿಗಳ ನಾಮರೂಪಗಳ ಆಧಾರವು, ರಜ್ಜುವು ಉಪಹಿತ ಚೇತನವೆಂದು ಅಂಗೀಕರಿಸಲ್ಪಟ್ಟಿರುವದು. ರಜ್ಜು ಮೊದಲಾದವಲ್ಲ, ಆದರೂ ಇಲ್ಲಿ ಆ ರಜ್ಜು ಮೊದಲಾದವುಗಳಿಗೇ, ನಾಮರೂಪಗಳ ಆಧಾರವೆಂದು ಹೇಳಿ ಅತಿವ್ಯಾಪ್ತಿಯ ನಿವಾರಣವನ್ನು ಮಾಡಿದೆ.ಇದನ್ನಾದರೂ ಸಹ ಸ್ಥೂಲದೃಷ್ಟಿಯಿಂದಲೇ ಮಾಡಿದೆ.

೬. ಆ ಕೇವಲ ಬ್ರಹ್ಮನು "ಸ್ವಯಂಪ್ರಕಾಶ,,ನಿರುವನು. ಹೀ[ಗೆ]



ಹೇಳುವದರಿಂದ (೧) ಬೇರೆ ಬೇರೆ ಉಪಾಸಕರ ಮತದಲ್ಲಿ ಆತ್ಮನು ಸ್ವಯಂಪ್ರಕಾಶ,, ಎಂದು ತಿಳಿದಿರುವರು. ಇದರಿಂದ ಅತಿವ್ಯಾಪ್ತಿಯು ಉಂಟಾಗುವದು. ಇದರ ನಿವಾರಣಾರ್ಥವಾಗಿ ಬ್ರಹ್ಮನ ಲಕ್ಷಣದಲ್ಲಿಯು "ಸ್ವಯಂಪ್ರಕಾಶ,,ದೊಡನೆ "ಶುದ್ಧ,, ಎಂದು ಹೇಳಿರುವರು. (೨) ಉಪಾಸಕರ ಮತದಲ್ಲಿ ಆತ್ಮನು ಸ್ವಯಂಪ್ರಕಾಶ ಮತ್ತು ಅವಿದ್ಯಾದಿ ಮಲಸಹಿತ ಎಂದು ತಿಳಿದಿರುವರು, ಇಲ್ಲಿ ಬ್ರಹ್ಮನು "ಸ್ವಯಂಪ್ರಕಾಶ,, ಮತ್ತು ಶುದ್ಧ,, ಎಂದು ಹೇಳಿದೆ. ಈಕಾರಣದಿಂದ ಅತಿವ್ಯಾಪ್ತಿಯು ಇಲ್ಲ.

೧೫

೭. ಆ ಕೇವಲ ಬ್ರಹ್ಮನು "ಶುದ್ಧ,, ಎಂದು ಹೇಳಿದೆ ಆ ಸಾಂಖ್ಯ ಮತದಲ್ಲಿ ಆತ್ಮನು ಶುದ್ಧ ಎಂದು ತಿಳಿಯಲ್ಪಟ್ಟಿದೆ. ಈ ಕಾರಣದಿಂದ ಅತಿವ್ಯಾಪ್ತಿಯು ಉಂಟಾಗುವದು ಇದರ ನಿವಾರಣಾರ್ಥವಾಗಿ ಬ್ರಹ್ಮನ ಲಕ್ಷಣದಲ್ಲಿ "ಶುದ್ಧ,, ಎಂಬುದರೊಡನೆ "ಅಪಾರ,, ಎಂದು ಹೇಳಿದ್ದಾರೆ, ಸಾಂಖ್ಯಮತದಲ್ಲಿ ಆತ್ಮನು ಶುದ್ಧನೆಂದು ಮಾತ್ರ ತಿಳಿದಿದ್ದಾರೆ, ಆದರೆ ಅಪಾರನೆಂದು ತಿಳಿದಿರುವದಿಲ್ಲ, ಆದರೂ ಸಾಂಖ್ಯಮತದಲ್ಲಿ ಆತ್ಮನು ದೇಶ ಕಾಲಗಳಿಂದ ಅಂತವುಳ್ಳವನಲ್ಲ, ಆದರೆ ವಸ್ತುಗಳಿಂದ ಅಂತವುಳ್ಳವನಾಗಿದ್ದಾನೆ. ಈ ಕಾರಣದಿಂದ ಸರ್ವಥಾ ಅಪಾರನಲ್ಲ, ಮತ್ತು ಇಲ್ಲಿ ಬ್ರಹ್ಮನು "ಶುದ್ಧ,, ಮತ್ತು "ಅಪಾರ,, (ದೇಶ, ಕಾಲ, ವಸ್ತುಗಳಂತೆ, ಅಂತರಹಿತನು) ಎಂದು ಹೇಳಿದೆ. ಈ ಕಾರಣದಿಂದ ಇಲ್ಲಿ ಅತಿವ್ಯಾಪ್ತಿಯು ಇಲ್ಲ.

ಯದ್ಯಪಿ "ಸುಖನಿತ್ಯ "ಅಥವಾ ನಿತ್ಯಪ್ರಾಕಾಶ,, ಈ ರೀತಿಯಾಗಿ ಎರಡೆರಡು ವಿಶೇಷಣಗಳು ಮೇಲೆ ತೋರಿಸಲ್ಪಟ್ಟಿರುವವು. ಆ ಎರಡೆರಡು ವಿಶೇಷಣಗಳಿಂದಲೇ ಅತಿವ್ಯಾಪ್ತಿಯು ದೂರವಾಗುವದು ಆದರೂ ಅಧಿಕ ವಿಶೇಷಣವನ್ನು ಏನು ಹೇಳಿರುವದಿಲ್ಲಾ ! ಅದು ಜಿಜ್ಞಾಸುಗಳಿಗೆ ಆ ವಿಶೇಷಣಗಳ ಬೋಧವುಂಟಾಗುವದು ಈ ಕಾರಣದಿಂದಲೇ ಹೇಳಿರುವದು ಅಥವಾ ಅನೇಕ ರೀತಿಯಿಂದ ಬ್ರಹ್ಮನ ಲಕ್ಷಣಗಳ ಜ್ಞಾನವಾಗುವದು. ಈ ಕಾರಣದಿಂದಲೂ ಹೇಳಿದೆ.

ಈಪ್ರಕಾರ ಹೇಳಿದ ವಿಶೇಷಣಗಳಿಂದ ಯುಕ್ತನಾದ ಯಾವ ಬ್ರಹ್ಮನಿರುವನಲ್ಲಾ ? ಅವನೇ ನಾನು ಇರುವೆನು. ಎಂಬುದೇ ಈ ದೋಹಾದ ಭಾವಾರ್ಥವು. ॥ ೧ ॥

(೧) ಮಾಯಾ ಮತ್ತು ಅದರ ಕಾರ್ಯರೂಪ ಮಲದಿಂದ ರಹಿತನು. (೨) ದೇಶ, ಕಾಲ, ವಸ್ತುಗಳಂತೆ ಅಂತ್ಯರಹಿತನು. (೩) ಪರೀಕ್ಷೆಗೆ (೪)

ನ್ಯಾಯಮತವೆಂಬುದನ್ನು ಈ ಗ್ರಂಥದ ಷಷ್ಟಸ್ತರಂಗದ ೩೪೩ನೇ ವಾಕ್ಯದಲ್ಲಿಯೂ ಮತ್ತು ೩೬೩ನೇ ವಾಕ್ಯದಲ್ಲಿಯೂ ಸ್ಪಷ್ಟವಾಗಿ ವಿವರಿಸಲ್ಪಟ್ಟದೆ (೫) ಯಾವದರ ಲಕ್ಷಣದಂತೆ ಮಾಡುವದೋ ಅದ್ದರಲ್ಲಿ ವರ್ತಿಸುವದಲ್ಲದೆ ಅದರಂತೆ ಬೇರೆ ಪದಾರ್ಥಗಳಲ್ಲಿಯು ಲಕ್ಷಣಗಳನ್ನೂ ಅನುವರ್ತಿಸುವದು. (೬) ಆನಂದವೆಂಬ ಗುಣವುಂಟು, ಆದರೆ ಆದು ಅನಿತ್ಯವೂ ಆಗುವದು ಎಂಬ ನಿಯಮವಿರುವದು. (೭) ಇದೇ ಗ್ರಂಥದ ೩೪೩ನೇ ವಾಕ್ಯದಲ್ಲಿ ವಿವರಿಸಲ್ಪಟ್ಟದೆ. (೮) ಇದೇ ಗ್ರಂಥದ ಷಷ್ಟಸ್ತರಂಗದ ೩೪೩ ಮತ್ತು ೩೫೩ನೇ ವಾಕ್ಯಗಳಲ್ಲಿ ಸ್ಪಷ್ಟವಾಗಿ ವಿವರಿಸಲ್ಪಟ್ಟದೆ. (೯) ಇದೇ ಗ್ರಂಥದ ಚತುರ್ಥಸ್ತರಂಗದ ಅತ್ಮಖ್ಯಾತಿ ಎಂಬ ೧೨೭ನೇ ವಾಕ್ಯದಲ್ಲಿ ಸ್ಪಷ್ಟೀಕರಿಸಿದೆ, (೧೦) ಇದೇ ಗ್ರಂಥದ ಷಷ್ಟಸ್ತರಂಗದ ೩೪೫ನೇ ವಾಕ್ಯದಲ್ಲಿ ಸ್ಪಷ್ಟೀಕರಿಸಿದೆ. (೧) ಆಕಾಶಾದಿಗಳ ವ್ಯಾಪಕತೆಯು ಅಪೇಕ್ಷಿಕವಾಗಿರುವದು, ಈ ವಿಷಯವನ್ನು ಇದೇ ಗ್ರಂಥದ ಚತುರ್ಥಸ್ತರಂಗದ ೧೭೨ನೇ ವಾಕ್ಯವಾಗಿದ್ದ ಬ್ರಹ್ಮಸ್ವರೂಪವರ್ಣನ ಎಂಬುದರಲ್ಲಿ ಸ್ಪಷ್ಟೀಕರಿಸಿದೆ (೧೨) ಪ್ರತೀತಿಮಾತ್ರ ಅಥವಾ ಕಲ್ಪಿತ ಇದೇ ಗ್ರಂಥದ ಷಷ್ಟಸ್ತರಂಗದ ೩೧೫ನೇ ವಾಕ್ಯದಲ್ಲಿ ಸ್ಪಷ್ಟೀಕರಿಸಿದೆ. (೧೩) ಸ್ವಯಂಪ್ರಕಾಶವೆಂಬುದನ್ನು ಇದೇ ಗ್ರಂಥದ ೧ನೇ ಪುಟದಲ್ಲಿ ವಿವರಿಸಿದೆ. (೧೪) ಇದೇ ಗ್ರಂಥದ ಚತುರ್ಥಸ್ತರಂಗದ ೧೩೬ನೇ ವಾಕ್ಯದಲ್ಲಿ ವಿಶದವಾಗಿ ಹೇಳಿದೇ (೧೫) ಇದೇ ಗ್ರಂಥದ ಷಷ್ಟಸ್ತರಂಗದ ೩೪೨ನೇ ವಾಕ್ಯದಲ್ಲಿ ವಿವರಿಸಲ್ಪಟ್ಟದೆ.

ಶಂಕಾ....ವಿಷ್ಣು, ಶಿವ, ಮೊದಲಾದ ದೇವತೆಗಳ ಸ್ಮರಣರೂಪ ಮಂಗಲವನ್ನು ಗ್ರಂಥಾರಂಭದಲ್ಲಿ ಮಾಡುವದನ್ನು ಬಿಟ್ಟು ತನ್ನ ಸ್ಮರಣರೂಪ ಮಂಗಲವನ್ನು ಮಾಡುವದು ವುಚಿತವಲ್ಲ. ಎಂಬದರ ಸಮಾಧಾನಾರ್ಥವಾಗಿ,—

॥ ದೋ ೯ ಹಾ ॥

ಅಬ್ಧಿ ಅಪಾರ ಸ್ವರೂಪ ಮಮ । ಲಹರೀ ವಿಷ್ಣು ಮಹೇಶ ।
ವಿಧಿರವಿ ಚಂದಾ ವರುನ ಯಮ । ಸಕ್ತಿ ಧನೇಶ ಗನೇಶ॥೨॥

ಟೀಕಾ॥ ನನ್ನ (ಪ್ರತ್ಯಕ್ಷಆತ್ಮನ) ಸ್ವರೂಪವು ಸಮುದ್ರದಂತೆ[೧] ಅಪಾರವಿರುವದು, ಆನನ್ನ ಸ್ವರೂಪಭೂತವಾದ ಸಮುದ್ರದಲ್ಲಿ ವಿಷ್ಣು ಮಹೇಶ[೨]



ವಿಧಿ[೩], ರವಿ, ಚಂದ್ರ[೯], ವರುಣ[೪], ಯಮ[೫],ಶಕ್ತಿ[೬],ಧನೇಶ[೭], ಗಣೇಶ[೮], ಇವರೇ ಮೊದಲಾದ ಉಪಲಕ್ಷಿತ ಸರ್ವದೇವತೆಗಳು ತರಂಗಗಳಾಗಿರುವರು. ಸ್ವಸ್ವರೂಪ ಸಮುದ್ರದಲ್ಲಿ ಸರ್ವದೇವತೆಗಳು ತರಂಗಗಳಾಗಿರುವದರಿಂದ, ಈ ಮಂಗಲದಲ್ಲಿಯೇ ಸರ್ವದೇವತೆಗಳ ಮಂಗಲವೂ ಸಿದ್ಧವಾದಂತಾಯಿತು. ಆದ್ದರಿಂದ ತನ್ನ ಮಂಗಲವನ್ನು ಮಾಡಿದ್ದರಿಂದ ಏನೂ ಅನುಚಿತವಾದಂತಾಗಲಿಲ್ಲ॥೨॥

(೧) ಸಮುದ್ರವು ಅಪಾರವಿದ್ದರೂ, ನೌಕಾಸಹಾಯದಿಂದ ಪಾರಾಗುವದಕ್ಕೆ ಬರುತ್ತದೆ. ಈ ಕಾರಣದಿಂದ ಸಮುದ್ರದ ಉಪಮೆಯು ಉಪಮೇಯವಾದ ಸ್ವಸ್ವರೂಪಕ್ಕೆ ಸಮಾನವಲ್ಲ. ಅಲ್ಲದೆ ಉಪಮೆಯು ಸಮಾನವಸ್ತುವಿನದಾಗಿಯೇ ಇರುವದು. ಆದರೂ ಹಸ್ತ, ಪಾದ, ಮೊದಲಾದ ಅಂಗಗಳ ಕ್ರಿಯೆಯಿಂದ ಸಮುದ್ರವನ್ನು ಪಾರಾಗಲು ಸಾಧ್ಯವಲ್ಲ.ಆದ್ದರಿಂದ ಸಮುದ್ರಕ್ಕೆ ಸಮಾನವಾದ ಸ್ವರೂಪವೆಂದು ಹೇಳಿದೆ. ಈ ಸಮುದ್ರದ ಉಪಮೆಯು ಪೂರ್ಣ ಉಪಮೆಯಲ್ಲ. ಆದರೆ ಲುಪ್ತ ಉಪಮೆಯಾಗಿರುವದು. (೨) ಶಿವ, (೩) ಬ್ರಹ್ಮ, ವೇದಮತದಿಂದ ವಿಷ್ಣು, ಇವರು ಈಶ್ವರಕೋಟಿಯಲ್ಲಿ ಎಣಿಸಲ್ಪಟ್ಟರುವದರಿಂದ,ಅವರನ್ನು ಪ್ರಥಮದಲ್ಲಿಯೇ ಗ್ರಹಣಮಾಡಲ್ಪಟ್ಟದೆ. ಬ್ರಹ್ಮನು ಜೀವಕೋಟಿಯಲ್ಲಿ ಎಣಿಸಲ್ಪಟ್ಟರುವದರಿಂದ ಅವನನ್ನು ಹಿಂದುಗಡೆಯಲ್ಲಿ ಗ್ರಹಣಮಾಡಿದೆ. (೪) ಜಲಾಭಿಮಾನ ದೇವತೆಯು, (೫) ಧರ್ಮರಾಜ, (೬) ದೇವಿ, (೭) ಕುಬೇರ,(೮)ಗಣಪತಿ, (೯) ಇದೇ ಗ್ರಂಥದ ಸಪ್ತಮ ಸ್ತರಂಗದ ೫೧೬ನೇ ವಾಕ್ಯದಲ್ಲಿ ಸ್ಪಷ್ಟೀಕರಿಸಿದೆ.

ಶಂಕಾ—ವಿಷ್ಣು,ಶಿವ, ಮೊದಲಾದ ದೇವತೆಗಳು ಈಶ್ವರನ[೧] ತರಂಗಗಳಾಗುವ ಸಂಭವವುಂಟು. ನಿನ್ನ ಸ್ವರೂಪವು [ಪ್ರತ್ಯಕ್ಷ ಆತ್ಮಾ] ತರಂಗವಾಗುವ ಸಂಭವವಿಲ್ಲ. ಆದ್ದರಿಂದ ಈಶ್ವರನ ಮಂಗಲವನ್ನೇ ಮಾಡತಕ್ಕದ್ದು. ಯಾಕಂದರೆ ವೃಕ್ಷಮೂಲದಲ್ಲಿ ಜಲಸೇಚನೆ ಮಾಡುವದರಿಂದ, ಶಾಖೋಪಶಾಖೆಗಳ ಪೋಷಣವಾಗುವಂತೆಯೂ, ಪ್ರಾಣರಕ್ಷಣಾರ್ಥವಾಗಿ ತೆಗೆದುಕೊಂಡ ಆಹಾರದಿಂದ ಇಂದ್ರಿಯಗಳ ತೃಪ್ತಿಯಾಗುವಂತೆಯೂ, ಈಶ್ವರನ ಮಂಗಲವನ್ನೇ ಮಾಡುವದರಿಂದ ಸರ್ವ ದೇವತೆಗಳ ಮಂಗಲವೂ ಸಿದ್ಧವಾದಂತಾಯಿತು.ನಿನ್ನ [ಪ್ರತ್ಯಕ್ಷ ಆತ್ಮನ]ಮಂಗಲದಿಂದ ಸರ್ವದೇವತೆಗಳ ಮಂಗಲವು ಸಿದ್ಧಿಯಾಗಲಾರದು.ಎಂಬ ಶಂಕೆಗೆ ಸಮಾಧಾನಾರ್ಥವಾಗಿ,

॥ದೋಹಾ॥

ಜಾ ಕೃಪಾಲು ಸರ್ವಜ್ಞಕೋ। ಹಿಯ ಧಾರತ ಮುನಿಧ್ಯಾನ।
ತಾಕೊ ಹೋತ ಉಪಾಧಿತೈ। ಮೋಮೈಮಿಥ್ಯಾಭಾನ ॥೩॥

ಟೀಕಾ॥ ಯಾವ ಕೃಪಾಳುವೂ. ಸರ್ವಜ್ಞನೂ ಆದ ಈಶ್ವರನ ಧ್ಯಾನವನ್ನು ಮುನಿಗಳು ಅಂತರಂಗವಲ್ಲಿಯೇ ಮಾಡುವರೋ, ಆ ಈಶ್ವರನ ಮಾಯೋಪಾಧಿಯಲ್ಲಿ ರಜ್ಜುವನಲ್ಲಿ ಹೇಗೆ ಸರ್ಪವೂ, ಸ್ವಪ್ನದಲ್ಲಿ ನಗರಾದಿಗಳ ಭಾನವೂ ಹೇಗೆ ಉಂಟಾಗುವದೋ, ಹಾಗೆ ನನ್ನ ಸ್ವರೂಪ(ಪ್ರತ್ಯಕ್ಷತತ್ವ) ವಿಷಯದಲ್ಲಿ (ಈಶ್ವರ) ಅಸತ್ಯಭಾನವು ಉಂಟಾಗಿರುವದು. ಈ ಕಾರಣದಿಂದ ನನ್ನ ಸಸ್ವರೂಪ ಮಂಗಲದಿಂದಲೇ ಈಶ್ವರಾದಿ ಸರ್ವದೇವತೆಗಳ ಮಂಗಲವು ಸಿದ್ಧಿಯಾಗುವದು. ಹ್ಯಾಗಂದರೆ:-ಯಾವ ವಸ್ತುವು ಯಾವ ವಿಷಯದಲ್ಲಿ ಕಲ್ಪಿತವಾಗಿರುವದೋ, ಅದು ಅದರ ರೂಪದಂತೆಯೇ ಉಂಟಾಗುವದು ಎಂಬ ನಿಯಮವಿರುವದು. ಆದ್ದರಿಂದ ಸ್ವಸ್ವರೂಪ ಮಂಗಲವೇ ಉಚಿತವಾಗಿರುವದು. ॥೩॥

---

೧

ಶಂಕಾ—ಈಶ್ವರನು ಶುದ್ಧ ಬ್ರಹ್ಮನಲ್ಲಿ ಅಧ್ಯಸ್ತನಾಗಿರುವನು. ನಿನ್ನ ಸ್ವರೂಪವು (ಪ್ರತ್ಯಕ್ಷ ಆತ್ಮ)ನಲ್ಲಿ ಅಧ್ಯಸ್ತವಾಗಿರುವದಿಲ್ಲ. ಈ ಕಾರಣದಿಂದ ನಿರ್ಗುಣ ಬ್ರಹ್ಮನ ಮಂಗಲವನ್ನೇ ಮಾಡತಕ್ಕದ್ದು. ಈ ಮಂಗಲದಿಂದ ಸರ್ವಮಂಗಲಗಳ ಸಿದ್ಧಿಯುಂಟಾಗುವದು. ನಿನ್ನ ಮಂಗಲದಿಂದ ಆಗಲಾರದು ಎಂಬ ಶಂಕೆಯ ಸಮಾಧಾನಾರ್ಥವಾಗಿ;—

॥ದೋಹಾ॥

ಹ್ವೈಜಿಹಿಜಾನ್ಯೆ ಬಿನ ಜಗತ। ಮನಹುಜೇವರಿ ಸಾಪ।
ನಸ್ಯೆ ಭುಜಗ ಜಿಹಿ ಲಹ್ಯೆ। ಸೋಹಂ ಆಪೇ ಆಪ ॥೪॥

ಟೀ ॥ ಹೇಗೆ ರಜ್ಜುವೆಂಬ ಜ್ಞಾನವಾಗದೆ ಸರ್ಪಪ್ರತೀತಿ ಯುಂಟಾಗುವದೋ, ಹಾಗೆ ಆ ಬ್ರಹ್ಮನನ್ನು ತಿಳಿಯದಲೆ ಜಗತ್ತಿನ ಪ್ರತೀತಿಮುಂಟಾಗಿರುವದು. ಅಲ್ಲದೆ ರಜ್ಜುವೆಂಬ ಜ್ಞಾನವಾಗಲು, ಸರ್ಪಜ್ಞಾನವು ಹ್ಯಾಗೆ ನಾಶಹೊಂದುವದೋ, ಹಾಗೆ ಬ್ರಹ್ಮನನ್ನು ತಿಳಿಯುವದರಿಂದ ಈಜಗತ್ತಿನ ಜ್ಞಾನವು ನಿವೃತ್ತವಾಗುವದು.ಆ ಅಧಿಷ್ಠಾನರೂಪ ಶುದ್ಧಬ್ರಹ್ಮನು ನಾನು ನಾನೇ ನಾನಾಗಿರುವೆನು. "ನಾನೇ ನಾನು" ಎಂದು ಹೇಳುವದು. ಅಂಶ



ಅಂಶ್ರೀಭಾವದಂತೆಯೂ,ವಿಕಾರ ವಿಕಾರಿಭಾವದಂತೆಯೂ,ಉಪಾಸಕ ಉಪಾಸ್ಯಭಾವದಂತೆಯೂ ನನ್ನ ಮತ್ತು ಬ್ರಹ್ಮನಲ್ಲಿ ಕಿಂಚಿತ್ತೂಭೇದವಿಲ್ಲವೆಂಬುದನ್ನು ಸೂಚಿಸಿದಂತಾಯಿತು. ಭೇದದ ಅಭಾವದಿಂದ ಕಾರ್ಯತಾ೨ರೂಪ, ಪ್ರಕಾಶ್ಯತಾರೂಪ, ಮತ್ತು ಆಧೇಯತಾರೂಪ ಎಂಬ ಮೂರುಪ್ರಕಾರದ ಪರತಂತ್ರತೆಗಳಿಂದ, ನಾನು ರಹಿತನಾಗಿರುವೆನು ಎಂಬಪನ್ನೂಸೂಚಿಸಿದಂತಾಯಿತು. ಈ ಕಾರಣದಿಂದ ನನ್ನ (ಪ್ರತ್ಯಕ್ಷ ಆತ್ಮನ) ಮಂಗಲವಾದರೂ ಶುದ್ಧಬ್ರಹ್ಮನ ಮಂಗಲವೇ ಆಗಿರುವದು. ॥೪॥

(೧) ಕಲ್ಪಿತ, (೨) ಕಾರಣ ಅಧೀನತೆ, ಪ್ರಕಾಶಕ ಅಧೀನತೆ, ಆಧಾರಅಧೀನತೆ ಎಂಬವೇ ಮೂರು ಪರತಂತ್ರತೆಗಳು.

---

೧

ಶಂಕಾ—ನಿಮ್ಮ ಪರಂಪರ ಗುರುಗಳಾದ ದಾದೂಜಿಯವರ ಸಾಂಪ್ರದಾಯದ ಇಷ್ಟದೇವತೆಯು ಶ್ರೀರಾಮನು. ಆ ಶ್ರೀರಾಮನ ನಮಸ್ಕಾರ ರೂಪ ಮಂಗಲವನ್ನು ಮಾಡತಕ್ಕದ್ದು ಎಂಬದರ ಸಮಾಧಾನಾರ್ಥವಾಗಿ:—

॥ದೋಹಾ॥

ಬೋಧ ಚಾಹಿ ಜಾಕೋ ಸುಕೃತಿ। ಭಜತ ರಾಮ ನಿಷ್ಕಾಮ।
ಸೋಮೇ ರೋಹ್ಯೆ ಅತಮಾ। ಕಾಕೂ ಕರೂ ಪ್ರನಾಮ ॥೫॥

ಟೀ ॥ ಆ ಶ್ರೀರಾಮನನ್ನೇ ಬೋಧಕನನ್ನಾಗಿ ಮಾಡಿಕೊಳ್ಳಬೇಕಂತಲೇ ಸುಕೃತಿಯಿಂದ ನಿಷ್ಕಾಮನಾಗಿ ಭಜಿಸಿರುವೆನು. ಆ ರಾಮನೇ ನನ್ನ ಆತ್ಮಾ (ಸ್ವರೂಪ)ಆಗಿರುವನು. (ದಾದೂ ದಯಾಲಜಿಯವರ ಸಾಂಪ್ರದಾಯದಲ್ಲಿ, ಆ ಶ್ರೀರಾಮನನ್ನುನಿರ್ಗುಣಬ್ರಹ್ಮರೂಪನನ್ನಾಗಿ ಎಣಿಸಿರುವರು.) ಈ ಕಾರಣದಿಂದ ನಾನು ಯಾರಿಗೆ ಪ್ರಣಾಮವನ್ನು ಮಾಡಲಿ? ನನ್ನ ಸ್ವರೂಪದಿಂದ ಭಿನ್ನ ಮತ್ತು ವಸ್ತು ಅಭಾವವಿರುವದರಿಂದ ನಾನು ಯಾರಿಗೂ ಪ್ರಣಾಮವನ್ನು ಮಾಡುವದಿಲ್ಲ, ಎಂಬ ಭಾವವಿರುವದು.

ಅಥವಾ ಆ (ಪರಬ್ರಹ್ಮ) ನ ಬೋಧವಾಗಬೇಕೆಂದು, ಸುಕೃತಿಪುರುಷ ಶ್ರೀರಾಮಚಂದ್ರನನ್ನು ನಿಷ್ಕಾಮನಾಗಿ ಭಜಿಸಿರುವೆನು. ಆ ಪರಬ್ರಹ್ಮನು ನನ್ನ ಆತ್ಮಾ (ಸ್ವರೂಪ) ಇರುವನು. (ಆವನೂ ಶ್ರೀರಾಮನೇ ಇರುವನು) ಈ ಕಾರಣದಿಂದ ಸರ್ವಕ್ಕೂ ಅಧಿಷ್ಠಾನನಾದ ನಾನು ಯಾರಿಗೆ ಪ್ರಣಾಮವನ್ನು ಮಾಡಲಿ! ತನ್ನಿಂದ ಭಿನ್ನವಾದ ಬೇರೆವಸ್ತುವೇ ಇಲ್ಲವೆ ಅಂದಮೇಲೆ

ಯಾರಿಗೆ ಪ್ರಮಾಣಾಮವನ್ನು ಮಾಡಲಿ ? ಎಂಬ ಭಾವವಿರುವದು.

(೧) ದಾದೂ ಪಂಥಿಗಳು ರಾಮಚಂದ್ರನ ನಾಮದ ಧ್ಯಾನವನು ಹೆಚ್ಚು ವರು.

ಇತಿ ಶ್ರೀ ವಿಚಾರಸಾಗರದ ಮಂಗಲದ ಪಂಚದೋಹಾಗಳ ಟೀಕೆಯು ಸಂಪೂರ್ಣವು.

ಓಂ

॥ ವಿಘ್ನೇಶಾಯನಮಃ ॥

# ಸಟೀಕಾ ತಾತ್ಪರ್ಯ ವಿವರಣಸಹಿತ

# ವಿಚಾರ ಸಾಗರ

## ಪ್ರಥಮಸ್ತರಂಗಃ

ಅಥ ಅನುಬಂಧ ಸಾಮಾನ್ಯ ನಿರೂಪಣಂ.

ಅಥ ವಸ್ತುನಿರ್ದೇಶ ರೂಪ ಮಂಗಲ.

॥ ದೋಹಾ ॥

ಜೋ ಸುಖ ನಿತ್ಯ ಪ್ರಕಾಸ ವಿಭು । ನಾಮ ರೂಪ ಆಧಾರ ॥
ಮತಿ ನ ಲಖೈ ಜಿಹಿ ಮತಿ ಲಖೈ । ಸೋಮೈ ಶುದ್ಧ ಅಪಾ॥೧॥
ಅಬ್ಧಿ ಅಪಾರ ಸ್ವರೂಪ ಮಮ । ಲಹರೀ ವಿಷ್ಣು ಮಹೇಸ ॥
ವಿಧಿ ರವಿ ಚಂದಾ ವರುನ ಯಮ । ಸಕ್ತಿ ಧನೇಶ ಗನೇಶ ॥೨॥
ಜಾಕೃಪಾಲು ಸರ್ವಜ್ಞಕೋ । ಹಿಯ ಧಾರತ ಮುನಿಧ್ಯಾನ ॥
ತಾಕೋ ಹೋತ ಉಪಾಧಿತೈ । ಮೋಮೈ ಮಿಥ್ಯಾ ಭಾನ ॥೩॥



ಹ್ವೈ ಜಿಹಿ ಜಾನೈ ಬಿನ ಜಗತ । ಮನಹುಜೇವರಿಸಾಪ ।
ನಸೈ ಭುಜಗಜಗ ಜಿಹಿ ಲಹೈ । ಸೋಽಹಂ ಆಪೇಆಪ ॥೪॥
ಬೋಧಚಾಹಿ ಜಾಕೋ ಸುಕೃತಿ । ಭಜತ ರಾಮ ನಿಷ್ಕಾಮ ॥
ಸೊ ಮೇರೊ ಹ್ವೈ ಆತಮಾ । ಕಾಕೂ ಕರೂ ಪ್ರನಾಮ ॥೫॥

॥೨॥ ಗ್ರಂಥಮಹಿಮಾ ॥೨—೪॥

ಭರ್ಯೊಷೇದ ಸಿದ್ಧಾಂತ ಜಲ । ಜಾಮೈ ಅತಿ ಗಂಭೀರ ॥
ಅಸ ವಿಚಾರಸಾಗರ[೧] ಕಹೂ । ಪೇಖಿ[೨]ಮುದಿತ[೩] ಹ್ವೈ ಧೀರ[೪] ॥೬॥
ಸೂತ್ರ[೫] ಭಾಷ್ಯ[೬]ವಾರ್ತಿಕ[೭] ಪ್ರಭೃತಿ[೮] । ಗ್ರಂಥಬಹುತಸುರಬಾನಿ
ತಥಾಪಿಮೈ ಭಾಷಾಕರೂ । ಲಖಿ ಮತಿಮಂದಅಜಾನಿ ॥೭॥

ಟೀಕಾ॥ ಒಂದುವೇಳೆ ಸೂತ್ರ ಭಾಷ್ಯ, ವಾರ್ತಿಕ, ಮೊದಲಾದ ಅನೇಕ ಸಂಸ್ಕೃತ ಗ್ರಂಥಗಳುಂಟು. ಆದರೂ ಸಂಸ್ಕೃತ ಗ್ರಂಥಗಳಿಂದ ಮಂದ ಬುದ್ಧಿಗಳಿಗೆ ಬೋಧವಾಗುವದಿಲ್ಲ. ಹಿಂದುಸ್ತಾನಿ ಭಾಷೆಯಲ್ಲಿದ್ದ ಗ್ರಂಥ ಗಳಿಂದಲೂ ಸಾಕಷ್ಟು ಬೋಧವಾಗುವದಿಲ್ಲ. ಕರ್ನಾಟಕ ಭಾಷೆಯಲ್ಲಿ ಬರೆಯುವದರಿಂದ ಮಂದಬುದ್ಧಿಗಳಿಗೂ, ಸಹಜ ತಿಳಿದುಕೊಳ್ಳಲು, ಸಾಧ್ಯ ವಾಗುವದು. ಈ ಕಾರಣದಿಂದ ಕರ್ನಾಟಕ ಭಾಷೆಯಲ್ಲಿ ಬರೆದ ಗ್ರಂಥವು ನಿಷ್ಫಲವೆನಿಸುವದಿಲ್ಲ. ಸಂಸ್ಕೃತ ಮತ್ತು ಹಿಂದುಸ್ತಾನೀ ಗ್ರಂಥಗಳಿಂದ್ಯ ತಿಳಿದುಕೊಳ್ಳಲು ಯಾರ ಬುದ್ಧಿಯು ಸಮರ್ಥವಿರುವದಿಲ್ಲವೋ, ಅಂಥವರ್ಕ ನಿಮಿತ್ಯವಾಗಿ ಗ್ರಂಥಾರಂಭವು ಸಫಲವಾಗಿರುವದು. ॥೭॥

೧. ಪ್ರತಿವಾದಿ ಮತ್ತು ಸಿದ್ಧಾಂತಿಯೆಂತಲೂ, ಅಥವಾ ಗುರುಶಿಷ್ಯ ರೆಂತಲೂ, ಮಾಡಿದ ಯಾವ ಜಡ, ಚೇತನ ಮೊದಲಾದ ಪದಾರ್ಥ ಗಳ ವಿವೇಚನವೆಂದರೆ ನಿರ್ಣಯ ಇದಕ್ಕೆ ವಿಚಾರವೆಂದು ಹೇಳುವರು. ಇಲ್ಲಿ ವಿಚಾರ ಎಂಬ ಶಬ್ದದಿಂದ ಅಜಹತ್ ಲಕ್ಷಣದಿಂದಲೂ, ಪ್ರತಿವಾದಿ ಮೊದ ಲಾದವುಗಳಿಂದಲೂ, ನಿರ್ಣಯಿಸಲ್ಪಟ್ಟ ಅರ್ಥರೂಪ ವಿಚಾರದ ವಿಷಯವೂ ಗ್ರಹಣ ಮಾಡಲ್ಪಟ್ಟರುವದು. ಆ ವಿಚಾರದ ವಿಷಯ ರೂಪ ನಿರ್ಣೀತ ಅರ್ಥವೇ ಸಿದ್ಧಾಂತವೆನಿಸುವದು. ಈ ಕಾರಣದಿಂದ (೧) ಪ್ರತಿವಾದಿ

ಅಥವಾ ಶಿಷ್ಯರೂಪ ವಾಯುವಿನಿಂದ ಪ್ರೇರಿತವಾದ ಯಾವ ಸಿದ್ಧಾಂ ಅಥವಾ ಗುರುರೂಪ ಮೇಘವು. (೨) ಆ ಮೇಘದಿಂದ ವಿಚಾರರೂ ಜಲವರ್ಷಣವು. (೩) ಆ ಜಲವರ್ಷಣ ಅಂದರೆ ಪರ್ಜನ್ಯದಿಂದ ವಿಷ ರೂಪ ವೇದಸಿದ್ಧಾಂತ ಜಲವು. (೪) ಆ ಜಲಸಮೂಹದಂತೆ ಅಂದ ವಿಸ್ತಾರವಾದ ಸಾಗರದಂತೆ ಈ ಗ್ರಂಥವಿರುವದು. ಈ ಕಾರಣದಿಂ "ವಿರಚಾಸಾಗರ" ಎಂದು ಹೇಳಲ್ಪಟ್ಟದೆ.

(೧) ಇದರಲ್ಲಿ ಆದಿ ಮೊದಲ್ಗೊಂಡು ಅಂತ್ಯಪರ್ಯಂತದ ವರ್ಣಗ ಸಮಷ್ಟಿರೂಪ ಭೂಮಿಕೆಯು ಇರುವದು.

(೨) ಅದರಲ್ಲಿ ವೇದಗಳ ಸಿದ್ಧಾಂತರೂಪ ಜಲವು ತುಂಬಿರುವದು.

(೩) ಆಜಲದಲ್ಲಿ ಸಪ್ತಪ್ರಕರಣರೂಪ ತರಂಗ ಅಂದರೆ ತೆರೆಗಳಿರುವವು

(೪) ಈ ಸಮುದ್ರದಲ್ಲಿ ಅನೇಕ ಛಂದೋರೂಪ ಜಲಜಂತುಗಳಿರುವವು

(೫) ಕಠಿಣ ಪ್ರಸಂಗರೂಪ ಮಕರ ಅಂದರೆ ಮೊಸಳೆಗಳು ಇರುವವು

(೬) ಉತ್ತಮ ಛಂದರೂಪ ಸಿಂಪುಗಳಿರುವವು.

(೭) ವರ್ಣ ಮೈತ್ರೇಯಿಯಾ ಮೊದಲಾದ ಮೌಕ್ತಿಕಗಳಿರುವವು.

(೮) ಶಬ್ದಸ್ವರೂಪದ ನಿರ್ಣಯರೂಪ ಮಣಿಮಾಣಿಕ್ಯ ಮೊದಲಾದವ ಗಳಿರುವವು. (೯) ವಿವೇಕಾದಿ ಸಾಧನರೂಪ ಚತುರ್ದಶ ರತ್ನಂಳುಂಟು.

(೧೦) ಈ ಸಾಗರವನ್ನು ಉಲ್ಲಂಘಿಸುವದಕ್ಕೆ ಜಿಜ್ಞಾಸುಗಳ ಬುದ್ಧಿ ರೂಪ ನಾಕೆಯು ಇರುವದು.

(೧೧) ಅಭ್ಯಾಸರೂಪವಾದ ಶುಭಪವನ ಅಂದರೆ ಅನುಕೂಲವಾ ವಾಯುವು ಇರುವದು.

(೧೨) ಬ್ರಹ್ಮವಿಷ್ಣು ಗುರುರೂಪ ಕರ್ಣಧಾರ ಅಂದರೆ ನಾವಿಕನಿರುವನು

(೧೩) ಈ ಸಮುದ್ರಕ್ಕೆ ಸಂಸಾರರೂಪ ಕುದೇಶಕ್ಕೆ ಸಂಬಂಧಿಸಿ ಅಜ್ಞಾನರೂಪ ದಂಡೆಯಿರುವದು.

(೧೪) ಮೋಕ್ಷರೂಪ ಸುದೇಶಕ್ಕೆ ಸಂಬಂಧಿಸಿದ ಜ್ಞಾನರೂಪ ಪ ತೀರವಿರುವದು.

(೧೫) ಈ ಗ್ರಂಥವನ್ನು ಭಕ್ತಿಪೂರ್ವಕ ಪಠಣರೂಪ ಉಲ್ಲಂಘನಮಾ ಡುವದರಿಂದ, ಮೋಕ್ಷರೂಪ ಸುದೇಶಪ್ರಾಪ್ತಿಯ ಫಲವು ಲಭಿಸುವದು.

ಇಂಥ ಈ ವಿಚಾರಸಾಗರ ನಾಮಕ ಗ್ರಂಥವಿರುವದು.

॥೨॥ ಶೇಖಿ ಅಂದರೆ ಗುರುಮುಖ ದ್ವಾರದಿಂದ ಶ್ರದ್ಧಾಭಕ್ತಿಪೂರ್ವ ವಾಗಿ ಈ ಗ್ರಂಥದ ಶ್ರವಣ ಮನನರೂಪ ವಿಚಾರಮಾಡಿ

॥೩॥ ಮುದಿತ, ಅಂದರೆ ಸ್ವರೂಪದ ಸಾಕ್ಷಾತ್ಕಾರರೂಪ ಅಪರೋಕ್ಷ



ಜ್ಞಾನದ್ವಾರಾ ಅವಿದ್ಯಾ ತತ್ಕಾರ್ಯರೂಪ ಅನರ್ಥದ ನಿವೃತ್ತಿಪೂರ್ವಕ ಪರಮಾನಂದವನ್ನು ಪ್ರಾಪ್ತಮಾಡಿಕೊಳ್ಳತಕ್ಕದ್ದು.

॥೪॥ "ಧೀ" ಅಂದರೆ ಬುದ್ಧಿ "ರ" ಅಂದರೆ ವಿಷಯಗಳ ಭಸ್ಮವನ್ನು ಮಾಡತಕ್ಕ ಬ್ರಹ್ಮಚರ್ಯ ಮೊದಲಾದ ಸಾಧನಗಳಿಂದ ಸಂಪನ್ನವಾದ ಅಧಿಕಾರಿಗೆ "ಧೀರ" ಎಂದು ಹೇಳಲ್ಪಟ್ಟದೆ.

॥೫॥ ಸ್ವಲ್ಪ ಅಕ್ಷರಗಳಿಂದ ಅಸಂದಿಗ್ಧ, ಅಂದರೆ ನಿಸ್ಸಂಶಯವಾಗಿ ತಿಳಿಯಲಸಾಧ್ಯವಾದ ಸರ್ವ, ಮತ್ತು ಪ್ರವೃತ್ತನನ್ನು ಮಾಡುವಂಥ, ಯಾರಿಂದಲೂ ಆತಂಕಪಡಿಸಲಿಕ್ಕೆ ಅಶಕ್ಯ ಮತ್ತು ನಿರ್ದೋಷವಾದ ಯಾವ ವಾಕ್ಯವಿರುವವೋ ಅವಕ್ಕೆ "ಸೂತ್ರ"ವೆಂಬ ಹೆಸರು. ಇಂಥ ಸೂತ್ರಗಳ ಸಮುದಾಯ ರೂಪವಾದ ಷಟ್‌ಶಾಸ್ತ್ರ ಮೊದಲಾದ ಅನೇಕ ಗ್ರಂಥಗಳಿರುವವು. ಅವುಗಳಲ್ಲಿ ವೇದವ್ಯಾಸರಿಂದ ರಚಿತವಾದ ೫೫೫ ಬ್ರಹ್ಮಸೂತ್ರರೂಪ ಉತ್ತರ ಮೀಮಾಂಸಾಶಾಸ್ತ್ರದ "ಸೂತ್ರ"ಶಬ್ದಗಳೆಂದು ಗ್ರಹಣ ಮಾಡಲ್ಪಟ್ಟವೆ. ಅಲ್ಲದೆ ಉಪನಿಷತ್, ಗೀತಾ, ಮೊದಲಾದ ಅನ್ಯಗ್ರಂಥಗಳನ್ನು "ಪ್ರಭೃತಿ" ಶಬ್ದಗಳೆಂದು ಗ್ರಹಣಮಾಡಲ್ಪಟ್ಟವೆ.

॥೬॥ ಸೂತ್ರಾದಿರೂಪ ಮೂಲಗ್ರಂಥಗಳಲ್ಲಿದ್ದ ಪದಗಳನ್ನು ತೆಗೆದುಕೊಂಡು ಅವುಗಳ ಪರ್ಯಾಯರೂಪ ಸ್ವಪದಗಳನ್ನು ಹೇಳಿ ಪುನಃ ಮೂಲಗತಪದಗಳ ಅನುಸಾರವಾಗಿ ಪದಗಳನ್ನು ಮಾಡಿ ಯಾವ ಸ್ವಪದಗಳ ವಿವರಣ ಅಂದರೆ ವಿಶೇಷವರ್ಣನ ಮಾಡುವದೇ "ಭಾಷ್ಯ"ವೆಂದು ಹೇಳಲ್ಪಡುತ್ತದೆ. ಇಂಥ ಭಾಷ್ಯಗಳು ಅನೇಕವಿರುವವು, ಅವುಗಳಲ್ಲಿ, ಶ್ರೀಶಂಕರಾಚಾರ್ಯಕೃತ ಭಾಷ್ಯವನ್ನು ಗ್ರಹಣಮಾಡಲ್ಪಟ್ಟದೆ.

॥೭॥ ಮೂಲಗ್ರಂಥಗಳಲ್ಲಿ ಉಕ್ತ, ಅನುಕ್ತ, ಮತ್ತು ವಿರುದ್ಧ, ಉಕ್ತ ಅರ್ಥಗಳ ಚಿಂತನ ಇವುಗಳ ವಿಚಾರವಿಷಯವನ್ನು ಶ್ಲೋಕಬದ್ಧ ವ್ಯಾಖ್ಯಾನಗಳಿಂದ ಹೇಳಿರುವ ಗ್ರಂಥಗಳಿಗೆ "ವಾರ್ತಿಕ"ಗಳೆಂಬ ಹೆಸರು. ಇಂಥ ವಾರ್ತಿಕ ಗ್ರಂಥಗಳೂ ಅನೇಕವಿರುವವು. ಅವುಗಳಲ್ಲಿ ಶ್ರೀ ಶಂಕರಾಚಾರ್ಯರ ಶಿಷ್ಯರಾದ ಶ್ರೀಸುರೇಶ್ವರಾಚಾರ್ಯ (ಮಂಡನಮಿಶ್ರ) ಕೃತ ವಾರ್ತಿಕವನ್ನು ಗ್ರಹಣಮಾಡಲ್ಪಟ್ಟದೆ.

॥೮॥ "ಮತಿಮಂದ" ಅಂದರೆ ಸಂಸ್ಕೃತ ಗ್ರಂಥಗಳನ್ನು ತಿಳಿದುಕೊಳ್ಳುವದದರಲ್ಲಿ ಯಾರು ಅಲ್ಪಬುದ್ಧಿಯುಳ್ಳವರಿರುವರೋ, ಮತ್ತು ಅಜ್ಞಾನಿ ಅಂದರೆ,ಸ್ವರೂಪದ ಅಜ್ಞಾನಿಗಳಿರುವರೋ, ಅಂಥಪುರುಷರಸಲುವಾಗಿ,ಅವರಿಗೆ ಜ್ಞಾನವಾಗುವದಕ್ಕೋಸುಗ ಸ್ವಭಾಷಾ ಗ್ರಂಥವನ್ನು ರಚನೆ ಮಾಡಿ

ದ್ದೇನೆ. ಈಗ ಹೇಳಿದ ಸಂಸ್ಕೃತ ವಿಷಯದಲ್ಲಿ ಅಲ್ಪಮತಿಯಾದವರು
ಮತ್ತು ಸ್ವರೂಪದ ಅಜ್ಞಾನಿಗಳೂ, ಈ ಭಾಷಾಗ್ರಂಥಕ್ಕೆ "ಅಧಿಕಾರಿ
ಎಂದು ಹೇಳಿದೆ. ಈ ಲಕ್ಷಣದ ಪರೀಕ್ಷೆಯು ಹೀಗೆ ಇರುವದು.

(೧) ಸ್ವಭಾಷಾ ಮತ್ತು ಸಂಸ್ಕೃತ ಈ ಎರಡೂ ಭಾಷೆಗಳಲ್ಲಿ
ಅಲ್ಪಮತಿಗಳೂ, ಮತ್ತು ಅಜ್ಞಾನಿಗಳೂ, ಹಾಗೆಯೇ ಪಾಮರರೂ ಮತ್ತು
ವಿಷಯಿಜೀವರೂ ಇರುವರು. ಇವರು ಮೂರ್ಖರಾಗಿದ್ದರೂ, ತಾವು
ಅಜ್ಞಾನಿಗಳೆಂದು ತಿಳಿದುಕೊಳ್ಳುವದಿಲ್ಲ. ಜ್ಞಾನಿಗಳೆಂತಲೇ ತಿಳಿದುಕೊ
ಳ್ಳುವರು. ಈ ಕಾರಣದಿಂದ ಜಿಜ್ಞಾಸುಭಾವದಿಂದ ವಿವಾಹ ವಿಷಯದಲ್ಲಿ
ಅನಧಿಕಾರಿಯಾದ ಷಂಡಪುರುಷನಂತೆ ಈ ಗ್ರಂಥ ವಿಷಯದಲ್ಲಿ ಅಧಿಕಾ
ಗಳಲ್ಲ. (೨) ಸಂಸ್ಕೃತ ವಿಷಯದಲ್ಲಿ ಅಲ್ಪಬುದ್ಧಿಯುಳ್ಳವರು ಬೇರೆ ಅನೇ
ಭಾಷಗಳಲ್ಲಿ ಜ್ಞಾನಿಗಳಾಗಿರುವರು. ಅವರು ಸ್ವಭಾಷಾಗ್ರಂಥವಿಷಯಗಳ
ಅಲ್ಪಮತಿಯಾದವರಲ್ಲ. ಆದರೆ ಜಿಜ್ಞಾಸಾ ಭಾವದಿಂದ ಗ್ರಂಥವಿ
ಯದಲ್ಲಿ ಅಧಿಕಾರಿಗಳಲ್ಲ; ಆದರೆ ಮುಕ್ತರಿರುವರು.

(೩) ಅಜ್ಞಾನಿಗಳಾದ ಎಷ್ಟೋ (ಪಾಮರ ಮತ್ತು ವಿಷಯಿ ಮತ್ತು
ಜಿಜ್ಞಾಸುರೂಪ) ಸಂಸ್ಕೃತಭಾಷಾ ಕೋವಿದರೂ ಉಂಟು. ಅವರು ಅ
ಮತಿಗಳಲ್ಲ. ಈ ಕಾರಣದಿಂದ ಸ್ವಭಾಷಾಗ್ರಂಥವಿಷಯದಲ್ಲಿ ಅಧಿಕಾ
ಗಳಲ್ಲ. ಈ ಮೇಲೆ ಹೇಳಿದ ಲಕ್ಷಣಗಳ ಹೊರತು ಯಾವ ಲಕ್ಷಣಗಳು
ಟೋ ಅವು ನಿರ್ದೋಷವಾಗಿರುವವು.

॥ ೩ ॥ ॥ ದೋಹಾ ॥

ಕವಿಜನ ಕೃತಭಾಷಾ ಬಹುತ। ಗ್ರಂಥ ಜಗತ ವಿಖ್ಯಾತ ॥
ಬಿನ ವಿಚಾರಸಾಗರ ಲಖ್ಯೆ। ನಹಿ ಸಂದೇಹ ನಸಾತ ॥ ೮ ॥

ಟೀಕಾ॥ ಯದ್ಯಪಿ ಭಾಷಾಗ್ರಂಥಗಳು ಅನೇಕವಿರುವವು. ತಥಾ
ವಿಚಾರಸಾಗರದ ಹೊರತು ಬೇರೆ ಭಾಷಾಗ್ರಂಥಗಳಿಂದ ಆತ್ಮವಸ್ತು ವಿ
ಯದಲ್ಲಿ, ಸಂದೇಹವು ದೂರವಾಗುವದಿಲ್ಲ. ಯಾಕಂದರೆ:—

(೧) ಎಷ್ಟೋ ಜನರು ಶ್ರವಣದಿಂದ ಭಾಷ್ಯಗ್ರಂಥಗಳನ್ನು ರಚಿಸಿದ್ದಾ
ರೆ. ಅಂಥ ಭಾಷ್ಯಗಳು ಐದುಂಟು. ಅವುಗಳ ಪ್ರಕ್ರಿಯೆಗಳಲ್ಲಿ ಕೆಲವ
ಅಂಶಗಳು ಶಾಸ್ತ್ರಗಳ ಅನುಸಾರವಾಗಿರುವವು. ಮತ್ತು ಅಶ್ರವಣಮಾಡಿದ
ಅರ್ಥವು ಯಥಾರ್ಥ ಗ್ರಹಣವಾಗುವದಿಲ್ಲ. ಈ ಅಂಶದಿಂದ ಅವು ಶಾಸ್ತ್ರ



ಳಿಂದ ವಿರುದ್ಧವಾಗಿರುವವು. ಈ ಕಾರಣದಿಂದ "ಶ್ರೋತ್ರಾಕೃತ" ಅಂದರೆ
ಶ್ರವಣಬಲದಿಂದ ಮಾಡಿದ ಗ್ರಂಥಗಳಿಂದ, ಸಂದೇಹರಹಿತವಾದ ಬೋಧ
ವಾಗುವದಿಲ್ಲ.

(೨) ಬೇರೆ ಕೆಲವರು ಕಿಂಚಿತ್ ಶಾಸ್ತ್ರಪಠಣಮಾಡಿ ಭಾಷ್ಯಗ್ರಂಥ
ಗಳನ್ನು ರಚಿಸಿದ್ದಾರೆ. ಉದಾಹರಣಾರ್ಥವಾಗಿ ಆತ್ಮಬೋಧವೆಂಬ ಗ್ರಂಥವಿ
ರುವದು. ಅದರಿಂದಲೂ ಸಂದೇಹರಹಿತವಾದ ಬೋಧವಾಗುವದಿಲ್ಲ. ಯಾ
ಕಂದರೆ, ಅದರಲ್ಲಿ ವೇದಾಂತದ ಪ್ರಕ್ರಿಯೆಗಳು ಸಂಪೂರ್ಣವಾಗಿಲ್ಲ. ಆದ
ರೆ, ಈ ವಿಚಾರಸಾಗರ ಗ್ರಂಥದಲ್ಲಿ ಸಂಪೂರ್ಣ ಪ್ರಕ್ರಿಯೆಗಳು ಇರುವವು.
ಅವು ವೇದಾಂತಶಾಸ್ತ್ರಗಳಿಗೆ ಅನುಸಾರವಾಗಿರುವವು. ಇವು ಯಾವಸ್ಥಳದ
ಲ್ಲಿಯೂ ವಿರುದ್ಧವಾಗಿರುವದಿಲ್ಲ. ಅಲ್ಲದೆ ಆತ್ಮಜ್ಞಾನಕ್ಕೆ ಉಪಯೋಗ
ವುಳ್ಳ ಯಾವ ಪದಾರ್ಥಗಳಿರುವವೋ, ಅವುಗಳ ನಿರೂಪಣವನ್ನು ವಿಸ್ತಾರ
ವಾಗಿ ಮಾಡಲ್ಪಟ್ಟದೆ. ಈ ಕಾರಣದಿಂದ ಈ ಗ್ರಂಥಕ್ಕೆ ಸರಿಯಾದ ಬೇರೆ
ಗ್ರಂಥಗಳು ಯಾವವು ಇಲ್ಲ. ಇಷ್ಟೆಯಲ್ಲದೆ ಸರ್ವಭಾಷ್ಯ ಗ್ರಂಥಗಳಿಗಿಂತಲೂ
ಈ ಗ್ರಂಥವು ಅತ್ಯುತ್ತಮವಾದದ್ದಾಗಿದೆ. ॥೮॥

(೧) ಷಟ್‌ಪ್ರಶ್ನಿ, ಶತಪ್ರಶ್ನಿ, ಜ್ಞಾನಮಂಜರಿ, ಜ್ಞಾನಚೂರ್ಣ, ವೇ
ದಾಂತಸಾರ, ಪಂಚೀಕರಣ, ಎಂಬ ಆರುಭಾಷ್ಯಗಳನ್ನು, ಮನೋಹರದಾ
ಸರು ರಚಿಸಿದ್ದಾರೆ. ಅವುಗಳಲ್ಲಿ ಪಂಚೀಕರಣವೆಂಬದು ಸ್ವಲ್ಪ ಇರುವದು.
ಅದನ್ನು ಬಿಟ್ಟು ಮೇಲೆ ವಿವರಿಸಿದ ಐದು ಭಾಷ್ಯಗಳುಂಟು.

(೨) ಇಂದ್ರಿಯಗಳ ಮತ್ತು ಮನಸ್ಸಿನ ಚಂಚಲತೆಯಿಂದ, ಶ್ರವಣ
ಮಾಡಿದ ಅರ್ಥವು ಭೂತ, ಅಗ್ನಿ ಇವುಗಳ ನ್ಯಾಯದಂತೆ ಯಥಾಸ್ಥಿತವಾಗಿ
ಗ್ರಹಣ ಮಾಡಲ್ಪಟ್ಟರುವದಿಲ್ಲ.

(೩) ಸಾಧು ಶ್ರೀ ಮಾಣಿಕದಾಸಜಿಯವರು ಮಾಡಿದ, ಮಾಣಿಕಬೋ
ಧವೆಂಬ ಗ್ರಂಥಕ್ಕೆ ಆತ್ಮವಿಚಾರವೆಂದೂ ಅನ್ನುವರು. ಈ ಗ್ರಂಥಕ್ಕೆ ಮೂ
ಲಚಂದ್ರಜ್ಞಾನಿ,ಎಂಬವರು "ಸಾರೋದ್ಧಾರ" ನಾಮಕ ವ್ಯಾಖ್ಯಾನವನ್ನೂ
ಬರೆದಿದ್ದಾರೆ.

---

॥೪॥ ಅನುಬಂಧನಾಮ ॥ ಚೌಪಾಈ ॥

ನಹಿ ಅನುಬಂಧ ಪಿಛಾನ್ಯೆ ಚಾಲಾ।
ಹ್ವೈನ ಪ್ರವೃತ್ತ ಸುಘರನರ ತಾಲಾ ॥

ಜಾಸಿ ಜಿನ್ಹೆ ಯುಹ ಸುನ್ಯೆ ಪ್ರಬಂಧಾ ।
ಕಹೂ ವ ಯಾತ್ಯೆತೆ ಅನುಬಂಧಾ ॥೯॥

ಟೀಕಾ ॥ ಅಧಿಕಾರಿ, ಸಂಬಂಧ, ವಿಷಯ, ಪ್ರಯೋಜನ ಎಂ ಅನುಬಂಧಗಳಿರುವವು. ಅಧಿಕಾರಿ ಮೊದಲಾದ ಗ್ರಂಥಗಳ ಅನುಬಂಧವನ್ನು ತಿಳಿಯುವ ಹೊರ್ತು,ವಿವೇಕಿ ಪುರುಷನಿಗೆ, ಈ ಗ್ರಂಥದಲ್ಲಿ ಪ್ರವೃತಿಯುಂಟಾ ಗುವದಿಲ್ಲ. ಈ ಕಾರಣದಿಂದ ಆ ಅನುಬಂಧವನ್ನು ತಿಳಿದುಕೊಂಡು ಪ್ರಬಂ ಧ ಅಂದರೆ ಗ್ರಂಥವನ್ನು ಕೇಳಬೇಕು. ಆ ಅನುಬಂಧವನ್ನು ಈಗ ಹೇಳಲು ಪಕ್ರಮಿಸುವೆನು. ॥೯॥

ಸೋರಠಾ॥ ಅಧಿಕಾರೀಸಂಬಂಧ । ವಿಷಯಪ್ರಯೋಜನಮೇ
ಚವ ॥ ಕಹತಸುಕವಿಅನುಬಂಧ । ತಿನಮೈಅಧಿಕಾರೀಸುನಹು।

॥೫॥ ಅಧಿಕಾರೀ ವರ್ಣನ ॥ ೫—೭೩॥

ಮಲ ವಿಛೇಪ ಜಾಕೆ ನಹೀ । ಕಿಂತು ಏಕ ಅಜ್ಞಾನ ॥
ಹ್ವೆ ೃ ಚವಸಾಧನ ಸಹಿತ ನರ । ಸೋ ಅಧಿಕೃತಮತಿವಾನ ॥

ಟೀಕಾ॥ ಅಂತಃಕರಣದಲ್ಲಿ ಮೂರು ದೋಷಗಳಿರುವವು. (೧)ಮ (೨) ವಿಕ್ಷೇಪ,(೩) ಆವರಣ ಎಂದು. ಇವುಗಳಲ್ಲಿ ಮೊದಲನೆಯದಾದ ಮ ವೆಂಬ ದೋಷವು, ನಿಷ್ಕಾಮಕರ್ಮದಿಂದ ದೂರವಾಗುವದು. ಎರಡನೆ ದಾದ ವಿಕ್ಷೇಪವೆಂಬ ದೋಷವು, ಉಪಾಸನೆಯಿಂದ ದೂರವಾಗುವದು ಮೂರನೆಯದಾದ ಆವರಣವೆಂಬ ದೋಷವು ಜ್ಞಾನದಿಂದ ದೂರವಾ ಗುವದು.

ಯಾವ ಪುರುಷನು ನಿಷ್ಕಾಮಕರ್ಮ ಮತ್ತು ಉಪಾಸನೆಗಳನ್ನು ಮಾ ಮಲ ಮತ್ತು ವಿಕ್ಷೇಪ ದೋಷಗಳನ್ನು ಕಳೆದುಕೊಂಡಿರುವನೋ, ಅಜ್ಞಾ ಅಂದರೆ ಸ್ವರೂಪದ ಆವರಣವನ್ನು ನೀಗಿ ಚಿತ್ತವನ್ನು ಏಕಾಗ್ರ ಮಾಡಿಕೊಂ ಡಿರುವನೋ ಮತ್ತು ಚತುಃಸಾಧನ ಸಂಯುಕ್ತವಾಗುವನೋ, ಅಂತ ಪುರುಷನು "ಅಧಿಕೃತ" ಅಂದರೆ ಅಧಿಕಾರಿಯೆನಿಸುವನು.

॥೬॥ ಚತುಃಸಾಧನ ವರ್ಣನ ॥೬—೧೪॥

॥ ದೋಹಾ ॥

ಪ್ರಥಮ ವಿವೇಕ ವಿರಾಗ ಪುನಿ । ಸಮಾದಿ ಷಟ್‌ಸಂಪತ್ತಿ ॥
ಕಹಿಂಚತುರ್ಥ ಮುಮುಚ್ಛುತಾ । ಯೇಚವಸಾಧನಸತ್ತಿ ॥೧೨॥



ಅರ್ಥ—ವಿವೇಕ, ವೈರಾಗ್ಯ, ಸಮಾದಿ ಷಟ್‌ಸಂಪತ್ತಿಗಳು, ಮತ್ತು ಮುಮುಕ್ಷುತಾ ಎಂಬ ಇವೇ ನಾಲ್ಕು ಸಾಧನಗಳು.

॥೭॥ (೧) ಅಥ ವಿವೇಕ ಲಕ್ಷಣ ॥

॥ ದೋಹಾ ॥

ಅವಿನಾಸೀ ಆತಮ ಅಚಮ । ಜಗತಾತ್ಯೆಪ್ರತಿಕೂಲ ॥
ಐಸೊ ಜ್ಞಾನ ವಿವೇಕ ಹೈ। ಸಬಸಾಧನ ಕೋ ಮೂಲ ॥೧೩॥

ಟೀಕಾ ॥ (೧) ಆತ್ಮಾ ಅವಿನಾಶಿ ಅಂದರೆ ನಾಶರಹಿತವಾದದ್ದು ಎಂದರ್ಥ. ಅಚಲವೆಂದರೆ ಕ್ರಿಯಾರಹಿತವಾಗಿರುವದು. ಮತ್ತು (೨) ಜಗತ್ತು ಆತ್ಮಾದಿಂದ ಪ್ರತಿಕೂಲ ಅಂದರೆ, ವಿಪರೀತ ಸ್ವಭಾವವುಳ್ಳದ್ದಿರು ವದು. ವಿನಾಶಿಯಾಗಿರುವದು. ಮತ್ತು ಚಲನೆಯುಳ್ಳದ್ದಿರುವದು; ಎಂಬ ಜ್ಞಾನಕ್ಕೇ ವಿವೇಕವೆಂಬ ಹೆಸರು.

ಈ ವಿವೇಕವೇ, ಸರ್ವಸಾಧನಗಳಿಗೂ ಮೂಲವಾಗಿರುವದು. ಯಾಕಂ ದರೆ ಪ್ರಥಮದಲ್ಲಿ ವಿವೇಕ ಉಂಟಾಗಲು, ಅದರಿಂದ ವೈರಾಗ್ಯ ಮೊದಲಾ ದ ಉತ್ತರಸಾಧನಗಳು ಉಂಟಾಗುವವು ವಿವೇಕವೇ ಉತ್ಪನ್ನವಾಗದಿದ್ದ ಪಕ್ಷದಲ್ಲಿ ಉತ್ತರಸಾಧನಗಳು ಸಾಧಿಸಲಾಗದು. ಈ ಕಾರಣದಿಂದ ವೈರಾ ಗ್ಯ, ಸಮಾದಿ, ಷಟ್‌ಸಂಪತ್ತಿ, ಮುಮುಕ್ಷುತಾ ಇವುಗಳಿಗೆ ಮೂಲವಾದ ದ್ದು ವಿವೇಕವು. ॥ ೧೩ ॥

॥೧॥ ಇದಕ್ಕೆ ಈ ಶಂಕೆ ಇರುವದು;-ವಿಜಿಗೀಷು, ಅಂದರೆ[ಅನ್ಯರನ್ನು ಪರಾಜಯಗೊಳಿಸಬೇಕೆಂಬ ಇಚ್ಛೆಯುಳ್ಳ] ಯಾವಪಂಡಿತನಿರುವನೋ, ಅ ವನಿಗೆ"ಆತ್ಮಾ ನಿತ್ಯವು, ಮತ್ತು ಆತ್ಮನಿಂದ ಭಿನ್ನವಾದ ದೇಹಾದಿ ಪ್ರಪಂ ಚರೂಪ ಅನಾತ್ಮಾ ಅನಿತ್ಯವು."ಎಂಬ ಪ್ರಕಾರದ ಭೇದಜ್ಞಾನರೂಪ ವಿವೇ ಕವು ಉಂಟಾಗಿರುವದು. ಅಂಥವನಿಗೆ ಉತ್ತರಸಾಧನವೇನಂದರೆ:—

ಮೇಲೆ ಹೇಳಿದ ಪಂಡಿತನಿಗೆ ಯದ್ಯಪಿ ಶಾಸ್ತ್ರಗಳ ಅಭ್ಯಾಸದಿಂದ ವಿ ವೇಕಜ್ಞಾನ ಉಂಟಾಗಿರುವದು. ತಥಾಪಿ ಅದು ನಿಷ್ಕಾಮಕರ್ಮ ಉಪಾಸನೆ ಯಿಂದ ಶುದ್ಧಿರಹಿತವಾದಂಥಾ ಮಲಿನ ಅಂತಃಕರಣದಲ್ಲಿ ಉದಯವಾಗಿ ರುವದು. ಈ ಕಾರಣದಿಂದ (೧) ಫಲಸತ್ತಾದ ಭೂಮಿಯೊಳಗಿಂದ ಕಿತ್ತು ಜಲಸಂಬಂಧ ರಹಿತವಾದ ಮಳಲು ಪ್ರದೇಶದಲ್ಲಿ ಹಚ್ಚಿದ ಕದಲೀವೃಕ್ಷ

ದಂತೆ, ವೈರಾಗ್ಯಾದಿ ಉತ್ತರಸಾಧನರೂಪ ಅನ್ಯವೃಕ್ಷಗಳಪರಂಪರಾಹೇ ವುಂಟಾಗಿರುವದಿಲ್ಲ. ಆದರೆ ಆ ವಿವೇಕವು ಚಿತ್ರಾಂಗವವತ್ ಮತ್ತು ಚಿತ್ರ ವೃತವತ್, ಮತ್ತು ಚಿತ್ರಾಗ್ನಿವತ್, ಪಾಣಿಮಾತ್ರದಿಂದ ಮಾಡಲ್ಪಟ್ಟ ದರಿಂದ ಅವಿವೇಕವೇ ಆಗಿರುವದು. ಅಲ್ಲದೆ (೨) ಶುದ್ಧಿಯುಕ್ತವಾದ ತಃಕರಣದಲ್ಲಿ ಉದಯವಾದಂಥಾ ವಿವೇಕವು ಜಲಸಹಿತವಾದಂಥಾ, ಪತ್ತಾದಂಥಾ ಭೂಮಿಯಲ್ಲಿ ಹಚ್ಚಿದ ಕದಲೀವೃಕ್ಷದಂತೆ, ವೈರಾಗ್ಯಾ ವುತ್ತರ ಸಾಧನರೂಪ ಅನ್ಯವೃಕ್ಷಗಳ ಪರಂಪರಾಹೇತುವು ವುಂಟಾಗುವ ಇದರಂತೆ ಶುದ್ಧಚಿತ್ತರೂಪ ಭೂಮಿಯಲ್ಲಿ ಉದಯವಾದಂಥಾ ವಿವೇ ವೈರಾಗ್ಯಕ್ಕೆ ಅಸಾಧಾರಣ ಕಾರಣವಾಗಿರುವದು. ಮತ್ತು ವೈರಾಗ್ಯ ಷ ಸಂಪತ್ತಿಗೂ ಅಸಾಧಾರಣ ಕಾರಣವಾಗಿರುವದು. ಈ ರೀತಿಯಿಂದ ಉ ರೋತ್ತರಸಾಧನಗಳಿಗೆ ಪೂರ್ವ ಪೂರ್ವಸಾಧನಗಳು ನಿಮಿತ್ತ ಕಾರಣವಾಗಿ ವವು. ಮತ್ತು ಶುದ್ಧಾಂತಃಕರಣರೂಪ ಭೂಮಿಯು ಸರ್ವಕ್ಕೂ ಉ ದಾನಕಾರಣವಾಗಿರುವದು.

ಆದ್ದರಿಂದ ಮುಮುಕ್ಷು ಪುರುಷನು ಚಿತ್ತಶುದ್ಧಿಪೂರ್ವಕ ವಿವೇ ಸಂಪಾದನೆಮಾಡುವದು ಯೋಗ್ಯವಾಗಿರುವದು.

||೮|| (೨) ವೈರಾಗ್ಯ ಲಕ್ಷಣ ||

|| ದೊಹಾ ||

ಬ್ರಹ್ಮಲೋಕ ಲೌ ಭೋಗಜೋ । ಚಹ್ಯೆ ಸಬನಕೊ ತ್ಯಾಗ।
ವೇದ ಅರ್ಥ ಜ್ಞಾತಾ ಮುನೀ। ಕಹತ ತಾಹಿ ವೈರಾಗ್ಯ ||೧೪

ಅರ್ಥ—ವೇದಾರ್ಥವನ್ನು ತಿಳಿದ ಋಷಿಗಳು, ಬ್ರಹ್ಮಲೋಕ ಯರ್ಂತರ ಇರತಕ್ಕ ಸರ್ವ ಸುಖಸಾಧನಗಳನ್ನು ತುಚ್ಛೀಕರಿಸುವದೇ ವೈ ಗ್ಯಸಾಧನವೆಂದು ಹೇಳುತ್ತಾರೆ.

||೮|| (೩) ಅಥ ಶಮಾದಿ ಷಟ್ ನಾಮ ||೬—೧೩||

|| ದೋಹಾ ||

ಸಮ ದಮ ಶ್ರದ್ಧಾ ತೀಸರೀ। ಸಮಾಧಾನ ಉಪರಾಮ ||
ಛಠೀ ತಿತಿಚ್ಛಾ ಜಾನಿಯೆ। ಭಿನ್ನ ಭಿನ್ನ ಯುಹನಾಮ ||೧೫||

ಅರ್ಥ—ಶಮ, ದಮ, ಶ್ರದ್ಧಾ, ಸಮಾಧಾನ, ಉಪರಮ, ಮತ್ತು ತಿತಿಕ್ಷಾ, ಎಂಬವೇ ಷಟ್ಸಂಪತ್ತಿ ಲಕ್ಷಣಗಳು.



||೧೦|| (೧—೨) ಅಥ ಶಮ ದಮ ಲಕ್ಷಣ ||

|| ದೋ ಹಾ ||

ಮನ ವಿಷಯನತೈ ರೋಕನೊ। ಸಮ ತಿಹಿ ಕಹತ ಸುಧೀರ ।
೧
ಇಂದ್ರಿಯಗನಕೊ ರೋಕನೊ । ದಮ ಭಾಖತ ಬುಧವೀರ ||

ಅರ್ಥ—ವಿಷಯಗಳಲ್ಲಿ ಮನಸ್ಸನ್ನು ಹರಿಯಗೊಡದಿರುವುದೇ ಶಮ ವೆಂತಲೂ, ಬಾಹ್ಯೇಂದ್ರಿಯ ಸಮೂಹಗಳನ್ನು ಹರಿಯಗೊಡದಿರುವದೇ ದಮವೆಂತಲೂ ಅನ್ನುತ್ತಾರೆ.

(೧) ಸ್ವಚ್ಛವಾಗಿದ್ದ ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳಲು ನೇತ್ರಗಳ ವೃತ್ತಿಯು ಹೇಗೆ ಹೊರಗೆ ಹೊರಟು ಹೋಗುವದೋ, ಹಾಗೆ ಇಂದ್ರಿಯರೂಪ ದ್ವಾರವಾಗಿ ವಿಷಯಗಳನ್ನು ನಿರೋಧಿಸತಕ್ಕ ದಮವಿಲ್ಲದೆ ಮನಸ್ಸಿನ ನಿರೋಧರೂಪ ಶಮವು ಸಿದ್ಧವಾಗಲಾರದು. ಮತ್ತು ಕಡಿವಾಣ ವನ್ನು ಹಾಕಿ ಹಿಡಿಯದ ಹೊರತು, ಅಶ್ವವು ಹೇಗೆ ವಶವಾಗುವದಿಲ್ಲವೋ, ಅದರಂತೆ ಮನಸ್ಸನ್ನು ನಿರೋಧಿಸಲು ನಿರೋಧರೂಪಶಮವಿಲ್ಲದೆ ಇಂದ್ರಿಯ ಗಳನ್ನು ನಿರೋಧಮಾಡತಕ್ಕ ದಮವು ಸಿದ್ಧವಾಗಲಾರದು. ಈಕಾರಣದಿಂದ ಶಮದಮಗಳು ಪರಸ್ಪರ ಸಹಾಯಕಾರಿಗಳಾಗಿರುವವು.

ಇದರಂತೆಯೇ ಎಲ್ಲ ಷಟ್ಸಂಪತ್ತಿಗೂ ಪರಸ್ಪರ ಸಹಾಯಕಾರಿಗೆ ಳಾಗಿರುವವೆಂಬ ಅರ್ಥವನ್ನು ಮುಂದೆ ೨೦-ನೇ ದೋಹಾದ ಟಿಪ್ಪಣಿಯಲ್ಲಿ ನಿರೂಪಿಸುವೆನು.

೧
|| ೧೧ || (೩—೪) ಅಥ ಶ್ರದ್ಧಾ ಸಮಾಧಾನ ಲಕ್ಷಣ.

|| ದೋಹಾ ||

ಸತ್ಯವೇದ ಗುರು ವಾಕ್ಯಹೈ । ಶ್ರದ್ಧಾ ಆಸ ವಿಶ್ವಾಸ ||
ಸಮಾತಾನ ತಾಕೂ ಕಹತ।ಮನ ವಿಛೇಪಕೋ ನಾಸ ||೧೬||

ಅರ್ಥ—ವೇದ, ಮತ್ತು ಗುರುವಾಕ್ಯಗಳಲ್ಲಿ ಅತಿ ವಿಶ್ವಾಸವನ್ನಿಡುವದೇ ಶ್ರದ್ಧಾ, ಎನಿಸಿಕೊಳ್ಳುವದು. ಮನಸ್ಸಿನ ವಿಕ್ಷೇಪವನ್ನು ದೂರೀಕರಿಸು ವದೇ ಸಮಾಧಾನ ಲಕ್ಷಣವು.

೧. (೧) ಸರ್ವಸಾಧನಗಳ ಸಂಪತ್ತಿರೂಪವಾದ, ದಧಿಮಥನ(ಮೊಸರು ಕಡಿ ಯುವ) ಸಾಮಗ್ರಿಗಳಲ್ಲಿ ಶ್ರದ್ಧಾರೂಪವೇ ಮಥನಪಾತ್ರೆಯು. ಈ ಶ್ರದ್ಧಾರೂಪ

ಪಾತ್ರೆಯು ಭಂಗವಾದರೆ ಸರ್ವಸಾಧನೆಗಳೂ ನಿರುಪಯೋಗವಾಗುವ

೨. ಅಥವಾ ಸರ್ವಸಾಧನಗಳ ಸಂಪತ್ತಿರೂಪವೆಂಬ ವೃಕ್ಷಕ್ಕೆ ಶ್ರ ರೂಪವೆಂಬದೇ ಫಲವೆಂದು ತಿಳಿಯಿರಿ. ಆ ಫಲವು ನಾಶವಾದರೆ ಸರ್ವಸಾ ರೂಪ ವೃಕ್ಷವು ನಿರುಪಯೋಗವಾಗುವದು.

ಶ್ರದ್ಧೆಯುಂಟಾದರೇ, ಅನ್ಯ ಸರ್ವಸಾಧನಗಳಸಫಲತೆಯುಂಟಾಗುವ ಈ ಕಾರಣದಿಂದ ಜ್ಞಾನಕ್ಕೆ ಸಾಧನವಾದ ಸರ್ವಸಾಧನಗಳಲ್ಲಿ "ಶ್ರದ್ಧಾ ಎಂಬದೇ ಮುಖ್ಯಸಾರವಾಗಿರುವದು. ಅದನ್ನು ಕುಸಂಗ ಮೊದಲಾ ಗಳಿಂದ ರಕ್ಷಣೆ ಮಾಡುವದು ಯೋಗ್ಯವಾಗಿರುವದು.

ಸಾಧನ ಸಂಪತ್ತಿರೂಪ ದಧಿ ಮಥನದ ಸಾಮಗ್ರಿಗಳ ರೂಪವ "ಶ್ರೀಬೋಧರತ್ನಾಕರ"ಎಂಬ ಗ್ರಂಥದ ಪ್ರಥಮ ರತ್ನದಲ್ಲಿ ಸವಿಸ್ತರ ನಿರೂಪಿಸಲ್ಪಟ್ಟದೆ. ಇದರಂತೆ ಸಾಧನ ಸಾಮಗ್ರಿರೂಪ ವೃಕ್ಷದ ರೂಪ ವನ್ನು ಟೀಕಾಸಹಿತನಾಗಿದ್ದ "ಶ್ರೀಬಾನಬೋಧಿನಿ"ಎಂಬಗ್ರಂಥದ ಪ್ರಥ ಉಪದೇಶದಲ್ಲಿ ವಿಸ್ತಾರವಾಗಿ ವರ್ಣಿಸಲ್ಪಟ್ಟಿರುವದು.

---

ಗ

॥೧೨॥ (೫) ಅಥ ಉಪರಾಮ ಲಕ್ಷಣ.

॥ ಚೌ ಪಾ ಯಿ ॥

ಸಾಧನ ಸಹಿತ ಕರ್ಮ ಸಬತ್ಯಾಗೈ ।
ಲಿಖಿವಿಖ ಸಮ ವಿಷಯನತೈ ಭಾಗೈ ॥
ದೃಗ ನಾರೀ ಲಖೀ ಹ್ವೈ ಜಿಯಗ್ಲಾನಾ ।
ಯಹ ಲಚ್ಛನ ಉಪರಾಮ ಬಖಾನಾ ॥೧೮॥

ಅರ್ಥ—ಸಾಧನ ಸಹಿತವಾಗಿದ್ದ ಸರ್ವಕರ್ಮಗಳನ್ನು ತ್ಯಾಗಮಾ ವಿಷಯಗಳನ್ನು ವಿಷಸಮಾನವೆಂದು ತುಚ್ಛೀಕರಿಸಿ, ಸ್ತ್ರೀಯರನ್ನು ಕಣ್ಣಿ ಸಹಾ ನೋಡುವದಕ್ಕೆ ಹಿಂಜರಿಯುತ್ತಿರುವ ಲಕ್ಷಣವೇ "ಉಪರಾ ಲಕ್ಷಣವೆಂದು ತಿಳಿಯತಕ್ಕದ್ದು.

(೧) ತ್ಯಾಜ್ಯಮಾಡಿ ಬಿಟ್ಟ ಬಳಿಕ, ಪ್ರಾಪ್ತವಾದ ವಿಷಯಗಳಲ್ಲಿ ಇಚ್ಛೆ ಅಭಾವವಾಗುವದೇ, "ಉಪರಾಮವೆಂದು" ಹೇಳಲ್ಪಡುವದು, ಇದ "ಉಪರತಿ"ಎಂತಲೂ ಹೆಸರು. ಇದುಪುನಃ ಭೋಗಿಸಲ್ಪಟ್ಟರೆ ಅಧೀನ



ರೂಪ ವೈರಾಗ್ಯದ ಫಲವುಂಟಾಗುವದು.

(೨) ಸ್ತ್ರೀ, ಧನ, ಜಾತಿ, ಅಭಿಮಾನ ಮೊದಲಾದ ಕರ್ಮಗಳ ಸಾಮಗ್ರೀ ಸಹಿತ.

(೩) ಯದ್ಯಪಿ ಇಲ್ಲಿ "ವಿಷಯಗಳಿಂದ ದೂರವಾಗಿರು" ಎಂದು ಹೇ ಳಿದ ಬಳಿಕ, ಸ್ತ್ರೀ ಮೊದಲಾದ ಸರ್ವವಿಷಯಗಳ ಸಲುವಾಗಿಯೇ ಹೇಳಿ ದಂತಾಯಿತು. ಆದರೂ ಪುನಃ ನಾರೀರೂಪ ವಿಷಯದಲ್ಲಿ ಹೇಳುವದರಿಂದ ಪುನರುಕ್ತಿ ದೋಷವುಂಟಾಗುವದು. ಆದರೂ ಅನಂತ ಜನ್ಮಗಳಲ್ಲಿ ಮಾಡಿದ ನಾರೀಸಂಗದ ಸಂಸ್ಕಾರ ತೀವ್ರತೆಯಿಂದ ಅಲ್ಲದೆ ನಾರಿಯರ ವಿಷ ಯದಲ್ಲಿ ಶಬ್ದ, ಸ್ಪರ್ಶ, ರೂಪ, ಮುಖಚುಂಬನ ಮೊದಲಾದ ರಸಗಳೂ, ಸುವಾಸನೆಯುಳ್ಳ ತೈಲ, ಪುಷ್ಪಹಾರ ಮೊದಲಾದ ಗ್ರಂಥಗಳೂ ಮತ್ತು ಮೈಥುನವೂ ಎಂಬ ಆರುವಿಷಯಗಳು ಲಭಿಸುವದರಿಂದ ನಾರೀರೂಪ ವಿಷ ಯವು ಅನ್ಯಸರ್ವವಿಷಯಗಳಿಗಿಂತಲೂ ಪ್ರಬಲವಾಗಿರುವದು. ಈ ಕಾರಣ ದಿಂದ ಈ ವಿಷಯವನ್ನು ಪುನಃ ಹೇಳಬೇಕಾಯಿತು. ಆದ್ದರಿಂದ ಪುನ ರುಕ್ತಿಯಾದದ್ದು ದೋಷವಲ್ಲ. ಭೂಷಣರೂಪವಾಗಿರುವದು.

---

॥೧೩॥ (೬) ಅಥ ತಿತಿಕ್ಷಾ ಲಕ್ಷಣ.

॥ ದೋ ೯ ಹಾ ॥

ಆತವ ಸೀತ ಛುದಾ ತೃಷಾ । ಇನಕೊ ಸಹನ ಸ್ವಭಾವ ॥
ತಾಹಿ ತಿತಿಚ್ಛಾ ಕಹತಹೈ । ಕೋವಿದಮುನಿವರರಾವ ॥೧೯॥

ಅರ್ಥ—ಶೀತ, ಉಷ್ಣ, ಕ್ಷುಧಾ, ತೃಷ್ಣೆ ಮೊದಲಾದವುಗಳನ್ನು ಸಹನ ಮಾಡಿಕೊಳ್ಳುವ ಸ್ವಭಾವಕ್ಕೆ "ತಿತಿಕ್ಷಾ ಲಕ್ಷಣವೆಂದು" ಪಂಡಿತರಾದ ಋಷಿ ಶ್ರೇಷ್ಠರು ಹೇಳಿರುವರು.

(೧) ಕೋವಿದ ಅಂದರೆ ಪಂಡಿತ, ಇಂಥ ಮುನಿಗಳು ಅಂದರೆ ಸನ್ಯಾ ಸಿಗಳು, ಇವರಲ್ಲಿ ವರ ಅಂದರೆ ಶ್ರೇಷ್ಠ ಯಾವ ವಿದ್ವಾನ್ ಸನ್ಯಾಸಿಯು ಇರುವನೋ, ಅವನಿಗೆ ರಾವ ಅಂದರೆ ಆಚಾರ್ಯ ಎಂದು ಹೆಸರು.

---

॥ ದೋ ೯ ಹಾ ॥

ಸಮಾದಿ ಷಟ್ ಸಂಪತ್ತಿಕೊ । ಭಾಖತ ಸಾಧನ ಏಕ ॥
ಇಮನವ ನಹಿ ಸಾಧನ ಭನೈ । ಕಿಂತು ಚಾರಿ ಸವಿವೇಕ ॥೨೦॥

ಟೀಕಾ॥ ಶಮಾದಿ ಷಟ್‌ಸಂಪತ್ತಿ, ಅಂದರೆ ಪ್ರಾಪ್ತಿ. ಈ ಶಮಾದಿಷ
ಗಳೆಲ್ಲ ಕೂಡಿ ಒಂದೇ ಸಾಧನವೆಂದು ಅನ್ನುತ್ತಾರೆ. ಅದ್ದರಿಂದ ಒಂಭತ್ತು
ಸಾಧನಗಳು ಆಗುವದಿಲ್ಲ. ಆದರೆ ವಿವೇಕಿಜನರು ನಾಲ್ಕು ಸಾಧನಗಳ
ಎಂದು ಹೇಳುತ್ತಾರೆ.

(೧) ಸುವರ್ಣರಚಿತವಾದ ಅನೇಕ ಮಣಿ ಅಂದರೆ ಗುಂಡುಗಳಿಂ
ಕೂಡಿದ ಮಾಲೆಗೆ ಒಂದೇ ಭೂಷಣವೆಂದು ಎಣಿಸಿರುತ್ತಾರೆ. ಇದರಂ
ಪರಸ್ಪರ ಸಹಕಾರಿಗಳಾದ ಶಮದಮಾದಿ ಷಟ್‌ಸಾಧನಗಳ ಪ್ರಾಪ್ತಿರೂ
ಷಟ್‌ಸಂಪತ್ತಿಯಾದರೂ ಒಂದೇ ಸಾಧನವೆಂದು ಎಣಿಸಿರುವರು. ಶಮಾ
ಷಟ್‌ಸಾಧನಗಳ ಪರಸ್ಪರ ಸಹಕಾರಿತ್ವವು ಈ ಪ್ರಕಾರವಾಗಿರುವದು.

೧. (೧) ಮನನಿರೋಧರೂಪ ಶಮದ ಹೊರತು, ಇಂದ್ರಿಯಗ
ನಿರೋಧವಾಗುವದಿಲ್ಲ. ಈ ಕಾರಣದಿಂದ "ದಮ"ಕ್ಕೆ "ಶಮ"
ಅಪೇಕ್ಷೆಯು ಇರುವದು.

(೨) ಮನಸ್ಸನ್ನು ನಿರೋಧಮಾಡದ ಹೊರ್ತು ಬಹಿರ್ಮುಖ (ಸ್ತ್ರೀ
ಪುತ್ರಾದಿಗಳ ವಿಷಯಗಳ ವಿಷಯದಲ್ಲಿ ಆಸಕ್ತಿಯು) ವಾದ ಮನಸ್ಸ
ವೇದಾಂತಶಾಸ್ತ್ರ ಮತ್ತು ಸದ್ಗುರು ವಿಷಯದಲ್ಲಿ ಪೂರ್ಣವಿಶ್ವಾಸವುಳ್ಳದ
ಆಗಗುವದಿಲ್ಲ. ಆದ್ದರಿಂದ ಶ್ರದ್ಧೆಗಾದರೂ "ಶಮ"ದ ಅಪೇಕ್ಷೆ ಇರುವದ

(೩) ಮನಸ್ಸನ್ನು ನಿರೋಧಪಡಿಸದ ಹೊರತು ಬ್ರಹ್ಮವಿಷಯದ
ಏಕಾಗ್ರತೆಯುಂಟಾಗಲಾರದು. ಇದರಿಂದ ಸಮಾಧಾನಕ್ಕಾದರೂ ಶ
ದ ಅಪೇಕ್ಷೆಯಿರುವದು.

(೪) ಹಾಲು ಮೊದಲಾದ ಉತ್ತಮವಾದ ಆಹಾರದಿಂದ, ಪಾಲನಮಾ
ದಂಥ ಮಾರ್ಜಾಲ ಅಂದರೆ ಬೆಕ್ಕು ಮೂಷಕ ಅಂದರೆ ಇಲಿಯನ್ನುನೋಡಿ
ಕೂಡಲೆ ಸುಮ್ಮನೆ ಕುಳಿತುಕೊಳ್ಳದೆ ಹ್ಯಾಗೆ ಅದನ್ನು ಹಿಡಿಯಲಿಕ್ಕೆ ಧಾ
ಸುವದೋ, ಅದರಂತೆ ವಿಷಯಗಳಿಂದ ಉಪರಾಮ ಅಥವಾ ಉಪರತಿದ
ನ್ನು ಹೊಂದಿದ ಮನಸ್ಸು, ನಿರೋಧರೂಪ ರಜ್ಜುವಿನಿಂದ ಮುಕ್ತವಾಗ
ತಡೆಯುವದಿಲ್ಲ. ಪ್ರಾಪ್ತವಿಷಯಗಳ ಕಡೆಗೆ ಹರಿಯಹತ್ತುವದು.
ಕಾರಣದಿಂದ "ಉಪರಾಮ"ಕ್ಕಾದರೂ "ಶಮ"ದ ಅಪೇಕ್ಷೆ ಇರುವದು.

(೫) ಅಂತರ್ಮುಖವಾದ ಮನಸ್ಸು ಶೀತೋಷ್ಣ ಮೊದಲಾದ ದ್ವಂ
ದ್ವಗಳನ್ನು ಸಹನಮಾಡುವದು. ಬಹಿರ್ಮುಖ ಮನಸ್ಸಿನಿಂದ ಈಕಾರ್ಯವು
ಲಾರದು. ಈಕಾರಣದಿಂದ "ತಿತಿಕ್ಷೆ" ಗಾದರೂ "ಶಮ"ದ ಅಪೇಕ್ಷೆಯಿರುವ



ಈ ರೀತಿಯಾಗಿ "ಶಮ"ಕ್ಕೆ ದಮಾದಿಗಳ ಸಹ ಕಾರತೆಯು ಇರುವದು.
(ಅಂದರೆ ಸಹಾಯ ವಿರುವದು.)

೨ (೧) ಕಲೆಯಿದ್ದ ಕನ್ನಡಿಯಲ್ಲಿ "ನೇತ್ರವೃತ್ತಿ" ಅಂದರೆ, ಕಣ್ಣಿನ
ಕಾರ್ಯವು ಹ್ಯಾಗೆ ನಡೆಯುವದಿಲ್ಲವೋ, ಹಾಗೆ ಇಂದ್ರಿಯ ರೂಪದ್ವಾರಗಳ
ನಿರೋಧವಾಗದ ಹೊರ್ತು, ಮನಸ್ಸು ನಿರೋಧವಾಗುವದಿಲ್ಲ. ಈ ಕಾರಣ
ದಿಂದ ಶಮಕ್ಕೆ ದಮದ ಅಪೇಕ್ಷೆಯು ಇರುವದು.

(೨) ರೂಪಾದಿ ವಿಷಯಗಳಲ್ಲಿ ತತ್ಪರನಾದ ಪುರುಷನಿಗೆ ಸತ್‌ಶಾಸ್ತ್ರ
ಮತ್ತು ಸದ್ಗುರುಇವುಗಳ ವಿಷಯಗಳಲ್ಲಿ ಶ್ರದ್ಧೆಯು ಉತ್ಪನ್ನವಾಗುವದಿಲ್ಲ.
ಈ ಕಾರಣದಿಂದ ಶ್ರದ್ಧೆಗೆ ದಮದ ಅಪೇಕ್ಷೆಯು ಇರುವದು.

(೩) ಇಂದ್ರಿಯಗಳನ್ನುನಿಗ್ರಹಿಸದ ಹೊರ್ತು, ಚಂಚಲವಾದ ಮನ
ಸ್ಸಿನಲ್ಲಿ ಏಕಾಗ್ರತೆಯು ಉತ್ಪನ್ನವಾಗಲಾರದು.

(೪) ಇಂದ್ರಿಯಗಳ ನಿರೋಧದ ವಿನಹಾ, ಪ್ರತ್ಯಕ್ಷ, ಅನುಭವಮಾಡಿದ
ಅನುಕೂಲವಾದ ವಿಷಯಗಳ ವಿಷಯದಲ್ಲಿ, ರಾಗೋತ್ಪತ್ತಿ ಸಂಸ್ಕಾರ
ದ್ವಾರ ಇಚ್ಛೆಯು ಉಂಟಾಗುವದು. ಈ ಕಾರಣದಿಂದ "ಉಪರಾಮ"
ಕ್ಕಾದರೂ "ದಮ"ದ ಅಪೇಕ್ಷೆಯು ಇರುವದು.

(೫) ಇಂದ್ರಿಯಗಳ ನಿಗ್ರಹದ ಹೊರ್ತು,ವಿಷಯಗಳ ದರ್ಶನದಿಂದ
ವಿಕ್ಷಿಪ್ತವಾದ ಮನಸ್ಸಿನಿಂದ, ದ್ವಂದ್ವ ಧರ್ಮಗಳನ್ನು ಸಹನ ಮಾಡಲಾ
ಗುವದಿಲ್ಲ; ಈ ಕಾರಣದಿಂದ "ತಿತಿಕ್ಷೆ" ಗಾದರೂ "ದಮ"ದ ಅಪೇಕ್ಷೆಯು
ಇರುವದು.

ಈ ರೀತಿ "ದಮ"ಕ್ಕೆ ಶಮಾದಿಗಳ ಸಹಾಯವು ಇರುವದು.

೩. ಹೇಗೆ ಸದ್ಗುರು, ಮತ್ತು ಸತ್ ಶಾಸ್ತ್ರ ವಚನಗಳಲ್ಲಿ ವಿಶ್ವಾಸ
ರೂಪವಾದ ಶ್ರದ್ಧೆಯಿಲ್ಲದೆ, ಶ್ರವಣ ಪ್ರವೃತ್ತಿಯ ಅಭಾವದಿಂದ "ಪತಿಯ
ಸಾನ್ನಿಧ್ಯಕ್ಕೆ ಹೋಗುವ ವಿಷಯದಲ್ಲಿ ಸತಿಯು ಉಪಯೋಗಿಸಿದ ಶೃಂಗಾ
ರವನ್ನು ಹಾಕಿಕೊಂಡ ವಿಧವೆಯಂತೆ" ಶ್ರವಣ ವಿಷಯದಲ್ಲಿ ಉಪಯೋಗಿ
ಯಾದ ಶಮಾದಿ ಮೊದಲಾದವುಗಳಲ್ಲಿ, ಯಾವ ಸಾಧನವನ್ನೂ, ಪುರುಷನು
ಗ್ರಹಣಮಾಡುವದಿಲ್ಲ. ಮತ್ತು ಶ್ರದ್ಧೆಯಿಲ್ಲದೆ ಗ್ರಹಣಮಾಡಿದ ಸರ್ವಸಾ
ಧನಗಳು, ವಿಧವೆಯು ಮಾಡಿಕೊಂಡ ಶೃಂಗಾರದಂತೆ ವ್ಯರ್ಥವಾಗುವವು.
ಈ ಕಾರಣದಿಂದ ಶಮಾದಿ ಸರ್ವಸಾಧನಗಳಿಗೆ ಶ್ರದ್ಧೆಯ ಅಪೇಕ್ಷೆಯು
ಇರುವದು.

ಈ ರೀತಿಯಿಂದ ಶ್ರದ್ಧೆಗೆ ಶಮಾದಿ ಸರ್ವಸಾಧನಗಳ ಸಹಾಯ ಇರುವದೆಂದು ಸ್ಪಷ್ಟವಾಗುವದು.

೪. ಚಿತ್ತದ ಏಕಾಗ್ರತೆಯ ಹೊರ್ತು ಶಮಾದಿ ಸಾಧನಗಳು ಸಿದ್ಧವಾಗುವದಿಲ್ಲ. ಈ ಕಾರಣದಿಂದ ಶಮಾದಿ ಸಾಧನಗಳಿಗೆ ಸಮಾಧಾನದ ಅಪೇಕ್ಷೆಯಿರುವದು. ಆದುದರಿಂದ, ಸಮಾಧಾಕ್ಕೆ ಶಮಾದಿಗಳ ಸಹಾಯವು ಬೇಕಾಗುವುದು.

೫. ವಿಷಯಗಳಿಂದ ಚಿತ್ತವು ಉಪರತಿಯನ್ನು ಹೊಂದದ ಹೊರ್ತು ಶಮಾದಿ ಸಾಧನಗಳಲ್ಲಿ ಯಾವ ಸಾಧನವೂ ಸಿದ್ಧವಾಗುವದಿಲ್ಲ. ಈ ಕಾರಣದಿಂದ "ಉಪರತಿ"ಗೆ ಶಮಾದಿಗಳ ಸಹಕಾರತೆಯು ಇರುವದು.

೬. ಶೀತ, ಉಷ್ಣ, ಕ್ಷುಧಾ, ತೃಷಾ, ಹಾನಿ, ಲಾಭ ಮೊದಲಾದ ಅನೇಕ ವ್ಯಾವಹಾರಿಕ ಉಪದ್ರವಗಳನ್ನು ಸಹನಮಾಡದ ಹೊರ್ತು, ಮನೋನಿರೋಧ, ಇಂದ್ರಿಯನಿರೋಧ, ಗುರುಶಾಸ್ತ್ರ ವಚನಗಳಲ್ಲಿ ಆಸ್ತಿಕತಾ, ಚಿತ್ತೈಕಾಗ್ರತಾ, ಮತ್ತು ಪ್ರಾಪ್ತಧನ ಮೊದಲಾದ ವಿಷಯಗಳಲ್ಲಿ ಉಪರತಿಯು ಸಿದ್ಧವಾಗಲಾರದು. ಈ ಕಾರಣದಿಂದ ಶಮಾದಿಗಳಿಗೆ ತಿತಿಕ್ಷಾರೂಪ ತಪದ ಅಪೇಕ್ಷೆಯು ಉಂಟಾಗುವದು. ಆದ್ದರಿಂದಲೇ ತಿತಿಕ್ಷೆಗೆ ಶಮಾದಿಗಳ ಸಹಕಾರತೆಯು ಇರುವದು.

ಈ ಪ್ರಕಾರ ಶಮಾದಿಗಳು ಪರಸ್ಪರ ಸಹಾಯಕಾರಿಗಳಾಗಿರುವವು. ಈ ಕಾರಣದಿಂದ ಈ ಷಟ್ಕಕ್ಕೆ ಒಂದೇ ಸಾಧನರೂಪವು ಬರುವದು.

## ||೧೪|| (೪) ಅಥ ಮುಮುಕ್ಷುತಾ ಲಕ್ಷಣ.

|| ದೋಹಾ ||

ಬ್ರಹ್ಮಪ್ರಾಪ್ತಿ ಅರು ಬಂಧಕೀ । ಹಾನಿ ಮೋಛಕೋ ರೂಪ ||
ತಾಕೀ ಚಾಹ ಮುಮುಚ್ಛುತಾ । ಭಾಖತ ಮುನಿವರ[೧] ಭೂಪ ||

ಟೀಕಾ|| ಬ್ರಹ್ಮಪ್ರಾಪ್ತಿಯು, ಮತ್ತು ಅನರ್ಥ ನಿವೃತ್ತಿಯು, ಮೋಕ್ಷ ಸ್ವರೂಪವಾಗಿರುವವು. ಇವರ ಇಚ್ಛೆಯ ನಾಮವೇ "ಮುಮುಕ್ಷುತಾ"[೨] ಮುಮುಕ್ಷುತಾ, ಮತ್ತು ಮುಮುಕ್ಷುತ್ವ ಇವೆರಡೂ ಪರ್ಯಾಯ ಶಬ್ದಗಳಾಗಿರುವವು. ||೨೧||

(೧) ಮುನಿ ಅಂದರೆ ಸನ್ಯಾಸಿ ಇವರಲ್ಲಿ ವರ ಅಂದರೆ ಶ್ರೇಷ್ಠನಾದ ವಿದ್ವಾನ್ ಸನ್ಯಾಸಿಯು, ಇವರಲ್ಲಿ ಭೂಪ ಅಂದರೆ ಆಚಾರ್ಯ, ಎಂದರ್ಥ.

(೨) ಒಂದೇ ಅರ್ಥವನ್ನು ಬೋಧಿಸತಕ್ಕ ಎರಡು ಶಬ್ದಗಳಿಗೆ ಪರಸ್ಪರ ಪರ್ಯಾಯಶಬ್ದವೆಂದು ಹೆಸರು.



|| ದೋಹಾ ||

ಯೆ ಚವಸಾಧನ ಜ್ಞಾನಕೆ । ಶ್ರವನಾದಿಕ ತ್ರಯ ಮೇಲಿ ||
ತತ್ಪದ ತ್ವಂಪದ ಅರ್ಥಕೊ । ಸೋಧನ ಅಷ್ಟಮ ಭೇಲಿ ||೨೨||

ಟೀಕಾ|| ವಿವೇಕ ಮೊದಲಾದ ನಾಲ್ಕು, ಶ್ರವಣ, ಮನನ, ನಿದಿಧ್ಯಾಸನೆ ಎಂಬ ಮೂರು, ತತ್ಪದದ[೧] ಅರ್ಥಶೋಧನವು, ಎಂಬ ಈ ಎಂಟೂ ಜ್ಞಾನದ ಸಾಧನಗಳಾಗಿರುವವು. ||೨೨||

(೧) ಚೇತನದ ಮತ್ತು ಜಡದ ಕಾರ್ಯಕಾರಣತ್ವವು, ಮತ್ತು ಅಧಿಷ್ಠಾನತ್ವ, ಅಧ್ಯಸ್ತತ್ವವು, ದೃಷ್ಟಾದೃಶ್ಯತ್ವವು, ಸಾಕ್ಷಿಸಾಕ್ಷ್ಯತ್ವವು ಇರುವವು. ಆವುಗಳನ್ನು ಶಾಸ್ತ್ರೋಕ್ತವಾದ ಅನೇಕ ಪ್ರಕ್ರಿಯೆಗಳನ್ನಾಗಿ ಮಾಡಿ, ವಿಚಾರಮಾಡಬೇಕು. ಅಂದರೆ-ಹಂಸಪಕ್ಷಿಯಿಂದ ಮಾಡಲ್ಪಟ್ಟ ನೀರ ಕ್ಷೀರ ನ್ಯಾಯದಂತೆಯೂ, ಅಥವಾ ಘೃತ ತಕ್ರ ವಿಭಾಗದ ನ್ಯಾಯದಂತೆಯೂ, ಇಲ್ಲವೆ ಮೃತ್ತಿಕಾ ಕೂಪ, ಆಕಾಶ ವಿಭಾಗದ ನ್ಯಾಯದಂತೆಯೂ, ವಿಭಾಗ ಮಾಡುವದಕ್ಕೆ ಪದಾರ್ಥಶೋಧನವೆಂದು ಹೇಳಲ್ಪಟ್ಟದೆ. ವೇದಾಂತ ಶಾಸ್ತ್ರಗಳಲ್ಲಿ ಹೇಳಿದ ಸರ್ವ ಪ್ರಕ್ರಿಯೆಗಳನ್ನೂ, ಈ ಅರ್ಥದಿಂದ ಪ್ರಕಾಶ ಮಾಡಬೇಕೆಂಬದೇ ತಾತ್ಪರ್ಯವಾಗಿರುವದು. ಇಷ್ಟಯಲ್ಲದೆ, ಇದೇ ಅರ್ಥವು ಮಹಾವಾಕ್ಯದ ಅರ್ಥಜ್ಞಾನ ವಿಷಯದಲ್ಲಿಯೂ ಉಪಯೋಗವಾಗಿರುವದು. ಈ ಕಾರಣದಿಂದ ಉಕ್ತಪದಾರ್ಥಶೋಧನವು, ಮುಮುಕ್ಷುಗಳಿಗೆ ಮುಖ್ಯಕರ್ತವ್ಯವಾಗಿರುವದು.

## ||೧೫|| ಅಂತರಂಗ ಮತ್ತು ಬಹಿರಂಗ ಸಾಧನ.

|| ದೋಹಾ ||

ಅಂತರಂಗ ಯೆ ಆಠ ಹೈ । ಯಜ್ಞಾದಿಕ ಬಹಿರಂಗ ||
ಅಂತರಂಗ ಧಾರೈ ತಜೈ । ಬಹಿರಂಗ ನಕೊ ಸಂಗ ||೨೩||

ಟೀಕಾ|| ೧ ಪೂರ್ವದೋಹಾದಲ್ಲಿ ವಿವೇಕಾದಿ ಎಂಟು ಅಂತರಂಗ[೧] ಸಾಧನಗಳೆಂದು ಹೇಳಿದೆ.

೨. ಯಜ್ಞಾದಿ ಕರ್ಮಗಳು ಬಹಿರಂಗ[೨] ಸಾಧನವೆಂದು ಹೇಳಿದೆ. ಈ ಎರಡುವಿಧ ಸಾಧನಗಳಲ್ಲಿ ಜಿಜ್ಞಾಸುಗಳು ಬಹಿರಂಗಸಾಧನಗಳನ್ನು

೩

ತ್ಯಾಗಮಾಡಿ ಅಂತರಂಗ ಸಾಧನಗಳನ್ನು ಸ್ವೀಕರಿಸಿದ್ದಾರೆ.

೧. ಶ್ರವಣದಿಂದ ಅಥವಾ ಜ್ಞಾನದಿಂದ ಯಾವದರ ಪ್ರತ್ಯಕ್ಷ ಫಲವುಂಟಾಗುವದೋ, ಅದಕ್ಕೆ ಅಂತರಂಗಸಾಧನವೆಂದು ಅನ್ನಬೇಕು.

ಅದರಲ್ಲಿ ವಿವೇಕಾದಿ ನಾಲ್ಕು ಸಾಧನಗಳ ಉಪಯೋಗವಿರುವದು ಯಾಕೆಂದರೆ:- (೧) ವಿವೇಕಾದಿಗಳ ಹೊರ್ತು ಬಹಿರ್ಮುಖ ಪುರುಷನಿಗೆ ಶ್ರವಣವು ಆಗುವದಿಲ್ಲ. (೨) ಈಶ್ರವಣ ಮನನ ನಿದಿಧ್ಯಾಸನಗಳ ಉಪಯೋಗವು ಜ್ಞಾನದಲ್ಲಿ ಆಗುವದು. ಶ್ರವಣಾದಿಗಳಿಲ್ಲದೆ ಜ್ಞಾನ ಪ್ರಾಪ್ತಿಯಾಗದ ರದು. (೩) ಹಾಗೆಯೇ 'ತತ್' ಪದದ ಅರ್ಥವನ್ನೂ 'ತ್ವಂ' ಪದದ ಅರ್ಥವನ್ನೂ ತಿಳಿಯದ ಹೊರತು ಅಭೇದ ಜ್ಞಾನವು ಉಂಟಾಗುವದಿಲ್ಲ.

ಈ ರೀತಿಯಾಗಿ ವಿವೇಕಾದಿ ನಾಲ್ಕು ಸಾಧನಗಳು, ಶ್ರವಣದಲ್ಲಿ ಉಪಯೋಗವುಂಟು. ಮತ್ತು ಶ್ರವಣಾದಿ ನಾಲ್ಕು ಸಾಧನಗಳು, ಜ್ಞಾನದಲ್ಲಿ ಉಪಯೋಗವುಂಟು. ಈ ಕಾರಣದಿಂದ ಈ ಎಂಟು ಸಾಧನಗಳು ಅಂತರಂಗವೆನಿಸುವವು.

‖೧೭‖ ೨ ಯಾವದರ ಜ್ಞಾನದಲ್ಲಿ ಅಥವಾ ಶ್ರವಣದಲ್ಲಿ ಪ್ರತ್ಯಕ್ಷ ಫಲವು ಉಂಟಾಗದೆ, ಅಂತಃಕರಣ ಶುದ್ಧಿಯು ಮಾತ್ರ ಯಾವದರ ಫಲವಾಗುವದೋ, ಅದು ಜ್ಞಾನದ ಬಹಿರಂಗಸಾಧನವೆನಿಸುವದು. ಇಂಥ ಸಾಧನಗಳೆಂದರೆ ಯಜ್ಞಾದಿ ಕರ್ಮಗಳು.

ಯದ್ಯಪಿ ಯಜ್ಞಾದಿ ಕರ್ಮಗಳು ಸಂಸಾರ ಸಾಧನಗಳಾಗಿರುವವು

೪

ಇವುಗಳಿಂದ ಅಂತಃಕರಣ ಶುದ್ಧಿಯು ಸಂಭವಿಸಲಾರದು. ತಥಾಪಿ ಸಕಾಮ ಪುರುಷನಿಗೆ ಇವು ಸಂಸಾರದ ಹೇತುವಾಗಿರುವವು. ಮತ್ತು ನಿಷ್ಕಾಮ ಪುರುಷನಿಗೆ ಅಂತಃಕರಣಶುದ್ಧಿಯು ಹೇತುವಾಗಿರುವದು. ಈಪ್ರಕಾರವಾಗಿ ನಿಷ್ಕಾಮ ಪುರುಷನಿಗೆ ಅಂತಃಕರಣ ಶುದ್ಧಿದ್ವಾರಾ ಯಜ್ಞಾದಿಕರ್ಮಗಳು ಬಹಿರಂಗ ಸಾಧನವೆಂದು ಹೇಳಿದರು. ಅಲ್ಲದೆ ವಿವೇಕಾದಿಗಳು ಅಂತರಂಗಸಾಧನವೆಂದು ಹೇಳಿದರು. ಬಹಿರಂಗವೆಂದರೆ ದೂರತ್ವವೆಂತಲೂ ಅಂತರಂಗವೆಂದರೆ ಸಮೀಪತ್ವವೆಂತಲೂ ಇರುವದು. ಯಜ್ಞಾದಿ ಕರ್ಮಗಳನ್ನೂ, ಅದಕ್ಕೆ ಸಾಧನಗಳಾದ ಸ್ತ್ರೀ ಧನ ಪುತ್ರಮೊದಲಾದ ಸರ್ವವನ್ನೂ ತ್ಯಾಗಮಾಡಿದವನನ್ನೇ ಜ್ಞಾನಾಧಿಕಾರಿಯೆನ್ನಬೇಕು. ಜ್ಞಾನಾಧಿಕಾರಿಯಲ್ಲಿ ಯಜ್ಞಾದಿಗಳ ಸಂಭವವಿಲ್ಲ. ಅಂತೆಯೇ ದೂರವಾಗಿರುವದು.



‖೧೭‖ ವಿವೇಕಾದಿಗಳ ಅಂತರಂಗ ಸಾಧನೆಯು.

ವಿವೇಕಾದಿಗಳು ಜ್ಞಾನಾಧಿಕಾರಿಯಲ್ಲಿ ಸಂಭವವಿರುವುದರಿಂದಲೇ ಸಮೀಪವಾಗಿರುವವು. ಆದರೆ ಅವರಲ್ಲಿ ಇಷ್ಟೇ ಭೇದವಿರುವದಲ್ಲಾ.

೫ ೬

ವಿವೇಕಾದಿಗಳ ಉಪಯೋಗವು ಶ್ರವಣದಲ್ಲಿಯೂ ಶ್ರವಣಾದಿಗಳ ಉಪಯೋಗವು ಜ್ಞಾನದಲ್ಲಿಯೂ ಆಗುವದು. ಈ ಕಾರಣದಿಂದ ವಿವೇಕಾದಿಗಳ ಅಪೇಕ್ಷೆಯಿಂದ ಶ್ರವಣಾದಿಗಳು ಅಂತರಂಗವಾಗಿರುವವು. ಇಷ್ಟೆಯಲ್ಲದೆ ಶ್ರವಣಾದಿಗಳ ಅಪೇಕ್ಷೆಯಿಂದ ವಿವೇಕಾದಿಗಳು ಬಹಿರಂಗವಾಗಿರುವವು. ಹೀಗಿದ್ದರೂ ಸರ್ವಗ್ರಂಥಗಳಲ್ಲಿ ವಿವೇಕಾದಿ ಚತುಷ್ಟಯಕ್ಕೆ ಅಂತರಂಗ ಸಾಧನವೆಂದು ಹೇಳಿದ್ದಾರೆ. ಬಹಿರಂಗ ಸಾಧನವೆಂದು ಹೇಳಿರುವದಿಲ್ಲ. ತಥಾಪಿ ಶ್ರವಣಾದಿ ಜ್ಞಾನಸಾಧನಗಳಲ್ಲಿ ವಿವೇಕಾದಿಗಳ ಪ್ರತ್ಯಕ್ಷಫಲವಿರುವದರಿಂದ ಶ್ರವಣಾದಿಗಳಂತೆ ವಿವೇಕಾದಿಗಳೂ ಜಿಜ್ಞಾಸುಗಳಿಗೆ ಗ್ರಾಹ್ಯವಾಗಿರುವವು. (ಯಜ್ಞಾದಿಗಳಂತೆ ತ್ಯಾಜ್ಯವಿರುವದಿಲ್ಲ.) ಈ ಕಾರಣದಿಂದ ಅಂತರಂಗವಾಗಿರುವವು. ಮತ್ತು ಯಜ್ಞಾದಿಗಳ ಅಪೇಕ್ಷೆಯಿಂದಲೂ ಅಂತರಂಗವಾಗಿರುವವು. ಮತ್ತು ಯಜ್ಞಾದಿಗಳ ಅಪೇಕ್ಷೆಯಿಂದಲೂ ಅಂತರಂಗವಾಗಿರುವವು.) ಈ ಕಾರಣದಿಂದಲೂ ಅಂತರಂಗತ್ವವನ್ನು ಹೇಳಿದರು.

‖ ೧೮ ‖ ಜ್ಞಾನಕ್ಕೆ ಮುಖ್ಯ ಅಂತರಂಗ ಸಾಧನವು (ಮಹಾವಾಕ್ಯ) ಶ್ರವಣ, ಮನನ, ಮತ್ತು ನಿದಿಧ್ಯಾಸಗಳ ಲಕ್ಷಣ.

ಇನ್ನು ವಿಚಾರದಿಂದ ನೋಡಿದರೆ ಜ್ಞಾನಕ್ಕೆ ಮುಖ್ಯ ಅಂತರಂಗ ಸಾಧನವು "ತತ್ವಮಸಿ"ಮೊದಲಾದ ಮಹಾ ವಾಕ್ಯಗಳು, ಶ್ರವಣಾದಿಗಳಲ್ಲ, ಕಾರಣವೇನೆಂದರೆ :—

೭

೧. ಯುಕ್ತಿಯಿಂದ ವೇದಾಂತ ವಾಕ್ಯಗಳ ತಾತ್ಪರ್ಯ ನಿಶ್ಚಯವೇ ಶ್ರವಣವೆಂದು ಹೇಳಲ್ಪಡುತ್ತದೆ.

೮ ೯

೨. ಜೀವ ಬ್ರಹ್ಮರ ಅಭೇದ ಸಾಧಕ, ಮತ್ತು ಭೇದಬಾಧಕ ಯುಕ್ತಿಯಿಂದ ಅದ್ವಿತೀಯ ಬ್ರಹ್ಮಚಿಂತನವೇ ಮನನವೆಂದು ಹೇಳಲ್ಪಡುತ್ತದೆ.

೩. ಅನಾತ್ಮಾಕಾರ ವೃತ್ತಿಯ ತ್ಯಾಗಮಾಡಿ, ಬ್ರಹ್ಮಾಕಾರವೃತ್ತಿಯ

೧೦

ಸ್ಥಿತಿಯೇ ನಿದಿಧ್ಯಾಸನವೆಂದು ಹೇಳಲ್ಪಡುತ್ತದೆ. ನಿದಿಧ್ಯಾಸನದ ಪರಿಪಾಕಾವಸ್ಥೆಗೇನೇ ಸಮಾಧಿಯೆಂದು ಹೇಳುತ್ತಾರೆ. ಈ ಕಾರಣದಿಂದ ಈ ಸಮಾಧಿ

ಸ್ಥಿತಿಯಾದರೂ, ನಿಧಿಧ್ಯಾಸನದಲ್ಲಿಯೇ[೧೧] ಅಂತರ್ಭಾವವಾಗುತ್ತದೆ. ಸ್ವ... ಸಾಧನವಲ್ಲ.

ಈ ಶ್ರವಣ, ಮನನ, ನಿದಿಧ್ಯಾಸನಗಳು, ಸಾಕ್ಷಾತ್ ಜ್ಞಾ... ಸಾಧನಗಳಲ್ಲ. ಆದರೆ ಬುದ್ಧಿಯ ಅಸಂಭಾವನಾ ಮತ್ತು ವಿಪ... ಭಾವನಾ ಮೊದಲಾದವುಗಳ ನಾಶಕವಿರುವವು.

(೧) ಸಂಶಯಕ್ಕೆ ಅಸಂಭಾವನಾ[೧೨] ಎನ್ನುತ್ತಾರೆ.

(೨) ವಿಪರ್ಯಯಕ್ಕೆ[೧೩] ವಿಪರೀತಭಾವನಾ ಎನ್ನುತ್ತಾರೆ.

||೧೯|| ಶ್ರವಣಾದಿಗಳಿಗೆ ಪರಂಪರೆಯಿಂದ ಜ್ಞಾನದ ಹೇತು...

ಶ್ರವಣದಿಂದ ಪ್ರಮಾಣದ ಸಂದೇಹವು ದೂರವಾಗುವದು. ಮ... ದಿಂದ ಪ್ರಮೇಯದ ಸಂದೇಹವು ದೂರವಾಗುವದು.

೧. ವೇದಾಂತ[೧೪] ವಾಕ್ಯಗಳು ಅದ್ವಿತೀಯ ಬ್ರಹ್ಮಪ್ರತಿಪಾದಕವಾ... ವವೋ ? ಅಥವಾ ಅನ್ಯಾರ್ಥಪ್ರತಿಪಾದಕವಾಗಿರುವವೋ! ಎಂದೂ, ಪ್ರ... ಣದಲ್ಲಿ ಸಂದೇಹಬರುವದು. ಈ ಸಂದೇಹವು ಶ್ರವಣದಿಂದ ದೂ... ಗುವದು.

೨. "ಜೀವಬ್ರಹ್ಮರ ಅಭೇದವು ಸತ್ಯವೋ? ಅಥವಾಭೇದವು ಸತ್ಯ... ಎಂಬ[೧೫] ಸಂದೇಹವೂ, ಪ್ರಮೇಯದಲ್ಲುಂಟಾಗುವದು. ಇದು ಮನನ... ದೂರವಾಗುವದು.

೩. ದೇಹಾದಿಗಳು ಸತ್ಯವಾಗಿರುವವು. ಮತ್ತು ಜೀವಬ್ರಹ್ಮರ ಭೇ... ಸತ್ಯವಾಗಿದೆ. ಎಂಬ ಜ್ಞಾನಕ್ಕೆ "ವಿಪರೀತಭಾವನಾ" ಎನ್ನಬೇಕು. ಇದಕ್ಕೆ[೧೬] "ವಿಪರ್ಯಯ" ಎಂದೂ ಹೇಳಿದ್ದಾರೆ. ಈ ಜ್ಞಾನವು ನಿಧಿಧ್ಯಾ... ದಿಂದ ನಿವೃತ್ತವಾಗುತ್ತದೆ.

ಹೀಗೆ ಶ್ರವಣಾದಿತ್ರಯಗಳು ಅಸಂಭಾವನಾದಿಗಳ ನಾಶಕವಾ... ವವು. ಮತ್ತು ಅಸಂಭಾವನಾ ಮತ್ತು ವಿಪರೀತಭಾವನಾ ಜ್ಞಾ... ಪ್ರತಿಬಂಧಕವಾಗಿರುವವು. ಈ ಕಾರಣದಿಂದ ಜ್ಞಾನಪ್ರತಿಬಂಧ...



...ದ್ವಾರ ಶ್ರವಣಾದಿತ್ರಯಗಳು ಜ್ಞಾನದ ಹೇತುವಾಗಿರುವವು. ಸಾಕ್ಷಾತ್ ಹೇತುಗಳಲ್ಲ.

||೨೦|| ಅವಾಂತರ ವಾಕ್ಯಗಳಿಗೆ ಪರೋಕ್ಷಜ್ಞಾನದ ಮತ್ತು ಮಹಾವಾಕ್ಯಗಳಿಗೆ ಅಪರೋಕ್ಷಜ್ಞಾನದ ಹೇತುವು.

[೧೯]

ಜ್ಞಾನದ ಸಾಕ್ಷಾತ್ ಸಾಧನಕ್ಕೆ ಶ್ರೋತೃಸಂಬಂಧವಾದ ವೇದಾಂತ ವಾಕ್ಯಗಳಿರುವವು. ಈ ವೇದಾಂತವಾಕ್ಯಗಳು. (೧) ಅವಾಂತರವಾಕ್ಯ, (೨) ಮಹಾವಾಕ್ಯ. ಎಂದು ಎರಡು ಪ್ರಕಾರವಾಗಿರುವವು.

೧. ಪರಮಾತ್ಮನ, ಅಥವಾ ಜೀವನ, ಸ್ವರೂಪದ ಬೋಧಕವಾಗಿರುವ ವಾಕ್ಯಗಳೇ, ಅವಾಂತರ ವಾಕ್ಯಗಳು.

೧. ಅವಾಂತರ ವಾಕ್ಯಗಳಿಂದ ಪರೋಕ್ಷಜ್ಞಾನವಾಗುವದು.

೨. ಮಹಾ ವಾಕ್ಯಗಳಿಂದ ಅಪರೋಕ್ಷ ಜ್ಞಾನವಾಗುವದು.

೧. "ಬ್ರಹ್ಮನಿರುವನು" ಎಂಬ ಜ್ಞಾನಕ್ಕೆ ಪರೋಕ್ಷಜ್ಞಾನವೆಂಬ ಹೆಸರು.

೨. ನಾನು "ಬ್ರಹ್ಮನಿರುವೆನು" ಎಂಬ ಜ್ಞಾನಕ್ಕೆ ಅಪರೋಕ್ಷ ಜ್ಞಾನವೆಂಬ ಹೆಸರು.

"ನೀನು ಬ್ರಹ್ಮನಿರುವಿ" ಎಂದು ಆಚಾರ್ಯರು ಉಚ್ಚರಿಸಿದ ಯಾವ ವಾಕ್ಯಗಳು ಇರುತವಲ್ಲಾ ? ಅವುಗಳ ಸಂಬಂಧವು ಶ್ರೋತೃದ್ವಾರದಿಂದ ...ಗಲು, ಶ್ರೋತೃವಿಗೆ "ನಾನೇ ಬ್ರಹ್ಮನಿರುವೆನು" ಎಂಬ ಅಪರೋಕ್ಷ ಜ್ಞಾನವು ವುಂಟಾಗುವದು. ಶ್ರೋತೃವಿಗೆ ಕರ್ಣದ್ವಾರದಿಂದ ವಾಕ್ಯ ಸಂಬಂಧವಾಗದಿದ್ದರೆ ಜ್ಞಾನವಾಗುವದಿಲ್ಲ. ಈ ಕಾರಣದಿಂದ ಶ್ರೋತೃ ಸಂಬಂಧವಾದ ಮಹಾ ವಾಕ್ಯಗಳು ಜ್ಞಾನಕ್ಕೆ ಹೇತುವಾಗಿರುವವು.

೧. ಶ್ರೋತೃ ಸಂಬಂಧವಾದ ಮಹಾ ವಾಕ್ಯಗಳು ಅಪರೋಕ್ಷ ಜ್ಞಾನದ ಹೇತುವಾಗಿರುವವು. ಮಹಾ ಕಾವ್ಯಗಳಿಂದ ಸರ್ವರಿಗೂ ಅಪರೋಕ್ಷ ಜ್ಞಾನವಾಗುತ್ತದೆಯಲ್ಲದೆ ಪರೋಕ್ಷಜ್ಞಾನವು ಆಗುವದಿಲ್ಲ.

## ||೨೧|| ವೇದಾಂತದ ಏಕದೇಶೀಯ ಮತವು.
## (ಕೇವಲ ವಾಕ್ಯದಿಂದ ಪರೋಕ್ಷ ಜ್ಞಾನವು.)

೨೦

**ಏಕದೇಶೀಯ ಮತವು ಈ ಪ್ರಕಾರವಿರುವದು.**

೧. ಶ್ರವಣ, ಮನನ, ನಿದಿಧ್ಯಾಸನ ಸಹಿತ ವಾಕ್ಯದಿಂದಲೇ
ರೋಕ್ಷ ಜ್ಞಾನವಾಗುವದು.

೨. ಕೇವಲ ವಾಕ್ಯದಿಂದ ಅಪರೋಕ್ಷ ಜ್ಞಾನವಾಗುದಲ್ಲದೆ ಅಪ
ಜ್ಞಾನವಾಗುವದಿಲ್ಲ.

ಕೇವಲ ವಾಕ್ಯದಿಂದಲೇ ಅಪರೋಕ್ಷ ಜ್ಞಾನವಾದರೆ ಶ್ರವಣ ಮ
ನಿಧಿಧ್ಯಾಸನಗಳು ವ್ಯರ್ಥವಾಗುವವು. ಯದ್ಯಪಿ ಸಿದ್ಧಾಂತಮತದಿ
ಕೇವಲ ವಾಕ್ಯದಿಂದ ಅಪರೋಕ್ಷ ಜ್ಞಾನವಾಗುವದು. ಮತ್ತು
ಣಾದಿಗಳಿಂದ ಅಸಂಭಾವನಾ ವಿಪರೀತ ಭಾವನಾ, ಎಂಬಿವು ನಾಶವಾಗುವ
ಎಂದು ಇರುವದರಿಂದ ಶ್ರವಣಾದಿಗಳು ವ್ಯರ್ಥವಲ್ಲ. ತಥಾಪಿ ಯ
ವಸ್ತುವಿನ ಅಪರೋಕ್ಷ ಜ್ಞಾನವಾಗುವದೋ, ಆ ವಸ್ತುವಿನ ವಿ
ದಲ್ಲಿ ಅಸಂಭಾವನಾ, ವಿಪರೀತ ಭಾವನಾದುಗಳು ಸಂಭವಿಸುವದಿ
ಈ ಕಾರಣದಿಂದ ಕೇವಲ ವಾಕ್ಯದಿಂದ ಅಪರೋಕ್ಷ ಜ್ಞಾನಿಗಳ ಸಿದ್ಧಾ

೨೧

ತದಲ್ಲ "ತತ್ವಮಸಿ" ಮೊದಲಾದ ವಾಕ್ಯಗಳಿಂದ ಬ್ರಹ್ಮದ ಅಪರೋ
ಜ್ಞಾನವಾದಮೇಲೆ, ಅಸಂಭಾವನಾ ವಿಪರೀತ ಭಾವನಾದಿಗಳು ಸಂಭವಿ
ಸುವದಿಲ್ಲ. ಆದ್ದರಿಂದ ಶ್ರವಣಾದಿ ಸಾಧನಗಳು ವ್ಯರ್ಥವಾಗುವ
ಮತ್ತು ಕೇವಲ ವಾಕ್ಯದಿಂದ ಪರೋಕ್ಷಜ್ಞಾನವಾಗುವದು. ಎಂಬ
ಮತದಿಂದ ಶ್ರವಣಾದಿಗಳು ವ್ಯರ್ಥವಲ್ಲ. ಎಂದು ಬಹುಜನ ಗ್ರ

೨೨ ೨೩

ಕಾರರ ಮತವಿರುವದು. ಹಾಗೆ ಇದ್ದರೂ ಈ ಮತವು ಸಮೀಚೀನವಾ
ವದಿಲ್ಲ. ಯಾಕೆಂದರೆ:—

## || ೨೨ || ಮೇಲೆ ಹೇಳಿದ ಏಕದೇಶೀಯ ಮತದ ಅಸಮೀಚೀನತೆಯು || ೨೨—೨೩ ||

ಶಬ್ದ ಸ್ವಭಾವವು ಹೀಗೆ ಇರುವದಲ್ಲಾ ?

೨೪

೧. ಯಾವ ವಸ್ತುವು ವ್ಯವಹಿತವಾಗಿರುವದೋ, ಅದು ಶಬ್ದ



ಪರೋಕ್ಷ ಜ್ಞಾನವಾಗುವದು. ಯಾವ ಪ್ರಕಾರದಿಂದಲೂ ವ್ಯವಹಿತ ವಸ್ತುವಿನ ಶಬ್ದ ದ್ವಾರಾ ಅಪರೋಕ್ಷ ಜ್ಞಾನವಾಗುವದಿಲ್ಲ. ವ್ಯವಹಿತ ಸ್ವರ್ಗದ ಮತ್ತು ಇಂದ್ರಾದಿ ದೇವತೆಗಳ, ಜ್ಞಾನವು ಶಾಸ್ತ್ರರೂಪ ಶಬ್ದದಿಂದ ಪರೋಕ್ಷಜ್ಞಾನವಾಗುವದು.

೨. ಯಾವ ವಸ್ತುವು ಅವ್ಯವಹಿತವಾಗಿರುವದೋ, ಅದರ ಶಬ್ದದಿಂದ (೧) ಅಪರೋಕ್ಷಜ್ಞಾನವೂ, ಮತ್ತು (೨) ಪರೋಕ್ಷ ಜ್ಞಾನವೂ ಉಂಟಾಗುವದು.

(೧) ಯಾವಾಗ ಅವ್ಯವಹಿತ ವಸ್ತುವು "ಅಸ್ತಿ" ಎಂಬ ಶಬ್ದದಿಂದ ಬೋಧಮಾಡುವದೋ, ಆವಾಗ ಅವ್ಯವಹಿತ ವಸ್ತುವಿನ ಪರೋಕ್ಷಜ್ಞಾನ

೨೫

ವಾದರೂ ಆಗುವದು. ಹೇಗೆ "ದಶಮ ಪುರುಷನಿರುವನು" ಎಂಬ ಕಡೆಯಲ್ಲಿ "ಅಸ್ತಿ" ಎಂಬ ಶಬ್ದದಿಂದ ಬೋಧಿತವಾದ ಯಾವ ಅವ್ಯಹಿತ "ದಶಮ ಎಂಬ ಶಬ್ದದಿಂದ ಪರೋಕ್ಷಜ್ಞಾನವಾದರೂ ಆಗುವದೋ, ಹಾಗೆ ಎಂದು ತಿಳಿಯಬೇಕು.

(೨) ಯಾವಾಗ ಅವ್ಯವಹಿತ ವಸ್ತುವು "ಇಲ್ಲಿ ಇರುವದು" ಎಂಬ ರೀತಿಯಾಗಿ ಶಬ್ದಬೋಧನಮಾಡುವದೋ, ಅವಾಗ ಅವ್ಯವಹಿತವಸ್ತುವಿನ ಶಬ್ದದಿಂದ ಅಪರೋಕ್ಷಜ್ಞಾನವಾದರೂ ಆಗುವದು. ಪರೋಕ್ಷಜ್ಞಾನವಾಗುವದಿಲ್ಲ. ಹ್ಯಾಗೆ "ದಶಮ ನೀನು ಇರುವಿ" ಎಂಬ ಕಡೆಯಲ್ಲಿ ಶಬ್ದವು ಬೋಧಮಾಡಲು ಆ "ದಶಮ"ದ ಅಪರೋಕ್ಷಜ್ಞಾನವುಆಗುವದು.

(೧) ತದ್ವತ್, ಬ್ರಹ್ಮವು ಸರ್ವವಸ್ತುಗಳ ಆತ್ಮಾ ಇರುವದರಿಂದ ಅತ್ಯಂತ ಅವ್ಯಹಿತ ಇರುವದು. ಇದಕ್ಕೇಅವಾಂತರವಾಕ್ಯವು. "ಬ್ರಹಾಸ್ತಿ" ಎಂದು ಬೋಧಮಾಡುತ್ತದೆ. ಈ ಕಾರಣದಿಂದ ಅವ್ಯವಹಿತ ಬ್ರಹ್ಮಜ್ಞಾನವಾದರೂ ಅವಾಂತರ ವಾಕ್ಯಗಳಿಂದ ಪರೋಕ್ಷ ಜ್ಞಾನವಾಗುವದು.

(೨) "ದಶಮ ನೀನು ಇರುವಿ!" ಎಂಬ ವಾಕ್ಯದಂತೆ ಮಹಾವಾಕ್ಯವು ಶ್ರೋತೃವಿಗೆ ಆತ್ಮರೂಪದಿಂದ ಬ್ರಹ್ಮಬೋಧವನ್ನು ಮಾಡುತ್ತದೆ. ಆದ

೨೬

ಕಾರಣ ಮಹಾವಾಕ್ಯದಿಂದ ಅವ್ಯವಹಿತ ಬ್ರಹ್ಮದ ಪರೋಕ್ಷಜ್ಞಾನವಾಗುವ ಸಂಭವವಿಲ್ಲ. ಆದರೆ ಪರೋಕ್ಷ ಜ್ಞಾನವಾಗುತ್ತದೆ.

||೨೩|| ಮತ್ತು ಹೇಳುವದೇನೆಂದರೆ:-ಯಾವ ವಸ್ತುವಿನ ಅಪರೋಕ್ಷ ಜ್ಞಾನವಾಗುವದೋ, ಆ ವಿಷಯದಲ್ಲಿ ಅಸಂಭಾವನಾ ವಿಪರೀತಭಾವನಾ

೨೭

ಗಳು ಸಂಭವಿಸುವದಿಲ್ಲ. ಈಕಾರಣದಿಂದ ಶ್ರವಣಾದಿಗಳು ವ್ಯರ್ಥವಾಗುವವು

೨೮

ಈ ಶಂಕೆಯು ಘಟಿಸುವದಿಲ್ಲ. ಯಾಕಂದರೆ, ರಾಜನಿಗೆ ಛರ್ಘನ ಮಕ ಮಂತ್ರಿಯೆಂಬ ನೇತ್ರದಿಂದ ಅಪರೋಕ್ಷಜ್ಞಾನವಾದರೂ, ಅ ಭಾವನಾ, ವಿಪರೀತಭಾವನಾ ದೋಷಗಳು ನಿವೃತ್ತವಾಗಲಿಲ್ಲ, ಅ ದೋಷರೂಪವಾದ ಕಲಂಕ ಸಹಿತ ಜ್ಞಾನವು ಫಲದ ಹೇತುವಾಗ ದಿಲ್ಲ. ಅದರಿಂದ ದೋಷದ ನಿವೃತ್ತಿಯು ಸಲುವಾಗಿ ಶ್ರವಣಾದಿಗ ಮಾಡಬೇಕು. ಯಾವನ ಬುದ್ಧಿಯಲ್ಲಿ ದೋಷವಿಲ್ಲವೋ ಅವನುಮಾ ಅನವಶ್ಯಕವು. ಈಪ್ರಕಾರದಿಂದ ಜ್ಞಾನಕ್ಕೆ ಸಾಧನವು ಮಹಾವಾಕ್ಯ ರುವದಲ್ಲದೆ ಶ್ರವಣಾದಿಗಳು ಅಲ್ಲ. ಆದರೆ ಜ್ಞಾನಪ್ರತಿಬಂಧಗಳ ದೋ ಗಳ ನಾಶಕ್ಕೆ ಶ್ರವಣಾದಿಗಳು ಕಾರಣವಾಗಿರುವವು. ಈಕಾರಣದಿಂದ ಶ್ರ ಣಾದಿಗಳಿಗೆ ಜ್ಞಾನಸಾಧನವೆಂದು ಹೇಳಲ್ಪಟ್ಟಿರುವದು. ಶ್ರವಣಾದಿ ವಿವೇಕಾದಿಗಳು ಹೇತುವಾಗಿರುವುದರಿಂದ ವಿವೇಕಾದಿಗಳೂಜ್ಞಾನಸಾ

೨೯

ವೆಂದೇ ಹೇಳಲ್ಪಟ್ಟದೆ. ವಿವೇಕಾದಿ ಚತುಸ್ಸಾಧನ ಯುಕ್ತ ಪುರುಷನು ಯಾವನಿರುವನೋ, ಅವನಿಗೇ ಅಧಿಕಾರಿ ಎನ್ನಬೇಕು. ||

(೧) ಧನುಸ್ಸಿನಿಂದ ಬಿಡಲ್ಪಟ್ಟ ಬಾಣವು ಲಕ್ಷ್ಯ (ಗುರಿ)ವನ್ನು ಭೇ ತಕ್ಕ ಸಮೀಪವರ್ತಿ ಸಾಧನವಾಗಿರುವದು. ಈ ಕಾರಣದಿಂದ ಅದು ಅ ಅಂತರಂಗ ಸಾಧನವಾಗಿರುವದು.

ಇದರಂತೆ ವಿವೇಕಾದಿ ಎಂಟು ಸಾಧನಗಳು ಜ್ಞಾನಕ್ಕೆ ಸಮೀಪವ ಗಳಾದ ಸಾಧನಗಳಾಗಿರುವವು. ಈ ಕಾರಣದಿಂದ ಇವಕ್ಕೆ ಜ್ಞಾ ಅಂತರಂಗ ಸಾಧನಗಳೆಂದು ಹೇಳಿದೆ.

(೨) ಇನ್ನು ಧನುಸ್ಸಿರುವದಲ್ಲಾ ! ಅದು ಲಕ್ಷ್ಯವನ್ನು ಭೇದಿಸತ ದೂರವರ್ತಿಯಾದ ಬಾಣದ ಬಿಡುವಿಕೆಗೆ ಸಾಧನವಾಗಿರುವದರಿಂದ ಅ ಅದರ ಬಹಿರಂಗ ಸಾಧನವಾಗಿರುವದು.

ಇದರಂತೆ ಯಜ್ಞ, ಮತ್ತು ಸಗುಣೋಪಾಸನಾ, ಮೊದಲಾ ಕರ್ಮಗಳು ಜ್ಞಾನಕ್ಕೆ ದೂರವರ್ತಿಯಾದ ಪಾಪ, ಮತ್ತು ವಿಕ್ಷೇಪರೂ ಮಲವನ್ನು ಯಥಾಯೋಗ್ಯವಾಗಿ ನಿವೃತ್ತಿ ಮಾಡಿ, ಚಿತ್ತಶುದ್ಧಿಪೂ ಜಿಜ್ಞಾಸ ದ್ವಾರದಿಂದ ಸಾಧನವಾಗಿರುವದು. ಈ ಕಾರಣದಿಂದ ಇದ ಜ್ಞಾನದ ಬಹಿರಂಗ ಸಾಧನವೆಂದು ಹೇಳಿದೆ.

(೩) ಕೂಪ ಅಂದರೆ ಭಾವಿಯಲ್ಲಿ ಬಿದ್ದಪುರುಷನು ಪ್ರಥಮದಲ್ಲಿ ಸ್ವತ ಬೇರು ಮೊದಲಾದ ಜಡಪದಾರ್ಥಗಳ ಆಶ್ರಯವನ್ನು ಹಿಡಿದುಕೊ



ವನು. ಅಮೇಲೆ ಯಾವಾಗ ಯಾವನಾದರೊಬ್ಬ ದಯಾಳು ಪುರುಷನಿಂದ ರಜ್ಜು ಮೊದಲಾದ ಆಶ್ರಯವು ದೊರೆಯುವದೋ, ಆಗ ಮೊದಲಿನ ಆಶ್ರಯವನ್ನು ಬಿಟ್ಟು ಹಗ್ಗವನ್ನು ಹಿಡಿದುಕೊಳ್ಳುವನು. ಆದರೆ ರಜ್ಜುವಿನಿಂದ ಆಶ್ರಯವಿಲ್ಲದೆ, ಪ್ರಥಮದಲ್ಲಿ ಸಿಕ್ಕ ಜಡಪದಾರ್ಥಗಳ ಆಶ್ರಯವನ್ನುಬಿಟ್ಟು ಬಿಟ್ಟರೆ ಉಭಯಭ್ರಷ್ಟನಾಗಿ ಬಾವಿಯಲ್ಲಿ ಬಿದ್ದು ಮುಳುಗಿ ಹೋಗುವನು.

ಇದರಂತೆ ಜನ್ಮಮರಣರೂಪ ಜಲಯುಕ್ತವಾದ ಸಂಸಾರರೂಪ ಕೂಪದಲ್ಲಿ ಬಿದ್ದ ಜೀವನು ಸತ್ಸಂಗ ಮೊದಲಾದ ನಿಮಿತ್ತಗಳಿಂದ ಪ್ರಾಪ್ತವಾದ ಶುಭವಾಸನೆಯಿಂದ,ಕರ್ಮೋಪಾಸನಾ ವಿಷಯಗಳಲ್ಲಿ ಪ್ರವೃತ್ತನಾಗುವನು. ಯಾವಾಗ ಈಶ್ವರರೂಪ ದಯಾಳುಪುರುಷನ ಕೃಪೆಯಿಂದ ಚಿತ್ತಶುದ್ಧಿಪೂರ್ವಕ ಜಿಜ್ಞಾಸಾ ಮೊದಲಾದ ಸಾಧನಗಳ ಪ್ರಾಪ್ತಿಯಾಗುವದೋ, ಆಗ ಆ ಪುರುಷನು ಜಿಜ್ಞಾಸುವಾಗಿ ಕರ್ಮರೂಪ ಬಹಿರಂಗ ಸಾಧನವನ್ನು ತ್ಯಾಗ ಮಾಡಿ, ವಿವೇಕಾದಿ ಅಂತರಂಗ ಸಾಧನಗಳನ್ನು ಚಿತ್ತದಲ್ಲಿ ಧಾರಣಮಾಡುವನು. ಆದರೆ ಅಂತರಂಗ ಸಾಧನಗಳ ಪ್ರಾಪ್ತಿಯು ಹೊರತು ಬಹಿರಂಗ ಸಾಧನಗಳನ್ನು ತ್ಯಾಗಮಾಡಿದರೆ, ಆ ಜೀವನು ಉಭಯಭ್ರಷ್ಟನಾಗಿ ಸಂಸಾರರೂಪ ಕೂಪದಲ್ಲಿ, ಮರಳಿ ಮುಳುಗಿ ಹೋಗುವನು.

(೪) ಒಬ್ಬ ರಸಾಯನ ಶಾಸ್ತ್ರವೇತ್ತಿಯಾದಸಾಧುಪುರುಷನು ಒಂದು ಸ್ಥಾನದಲ್ಲಿದ್ದುಕೊಂಡು ಧ್ಯಾನಾಸಕ್ತನಾಗಿರುತ್ತಿದ್ದನು. ಒಂದು ದಿವಸ ತನ್ನ ಶಿಷ್ಯಸಮುದಾಯವನ್ನು ಸಮೀಪದಲ್ಲಿ ಕುಳ್ಳಿರಿಸಿಕೊಂಡು ಯಾವದೊ ಒಂದು ವನಸ್ಪತಿಯ ರಸವನ್ನು ತಾಮ್ರದ ಮೇಲೆ ಹಿಂಡಿ ರಸಾಯನವನ್ನು ಮಾಡಿ ತೋರಿಸಿದನು. ಆಮೇಲೆ ಅವನು ಅನೇಕ ವರುಷ ಪರಿಯಂತ ತೀರ್ಥಯಾತ್ರೆ ಮಾಡುತ್ತ ದೇಶಾಟನ ಮಾಡುತ್ತಿದ್ದನು. ಅವನು ಹೋದ ಮೇಲೆ ಆ ಶಿಷ್ಯರಿಂದ ರಸಾಯನ ಕ್ರಿಯೆಯು ನಡಿಯಲಿಲ್ಲ. ಮತ್ತು ಪರಮಾರ್ಥದ ಮಾರ್ಗವೂ ಕಟ್ಟಾಯಿತು. ಮುಂದೆ ಕೆಲವು ಸಂವತ್ಸರಗಳಾದ ಬಳಿಕ ಆ ಗುರುವು ಬರಲು, ಆ ಶಿಷ್ಯರು ರಸಾಯನದ ಸಂಗತಿಯನ್ನೆಲ್ಲ ಹೇಳಿದರು. ಆಗವನು "ತಾಮ್ರದಲ್ಲಿ ವನಸ್ಪತಿಯ ರಸವನ್ನು ಬಲಗೈಯಿಂದ ಹಿಂಡಲು ಅಥವಾ ಇದರಲ್ಲಿಯೇ ತಾಮ್ರವನ್ನು ಮುಳುಗಿಸಲು ರಸಾಯನ ಕ್ರಿಯೆಯು ನಡೆಯುವದಿಲ್ಲ, ಆದರೆ ಎಡಗೈಯಿಂದ ವನಸ್ಪತಿಯ ರಸವನ್ನು ಹಿಂಡಿ, ಅದನ್ನೇ ತಾಮ್ರದಲ್ಲಿ ಬೆರಿಸಲು, ರಸಾಯನ ಕ್ರಿಯೆಯು ನಡಿಯುವದು. ಮತ್ತು ದರಿದ್ರವು ನಿವೃತ್ತವಾಗುವದು,ಎಂದು ಹೇಳಿದನು. ಆಗ ಅವರು ಅದರಂತೆಯೇ ಮಾಡಿದರು.

ಹೀಗೆ ಶಾಸ್ತ್ರರೂಪ ಗುರುವು ಜೀವನಿಗೆ ಚಿತ್ತಶುದ್ಧಿರೂಪ ರಸಾಯ: ಸಿದ್ಧ್ಯರ್ಥವಾಗಿ ಬೋಧಮಾಡಿದ ಯಾವ ಕರ್ಮಸಾಧನವಿರುವದಿಲ್ಲ ಅದನ್ನು ಫಲಾಪೇಕ್ಷೆಯಿಂದ ಮಾಡಲು, ಚಿತ್ತಶುದ್ಧಿ ರೂಪ ರಸಾ: ನೇಚ್ಛೆಯು ಪೂರ್ಣವಾಗುವದಿಲ್ಲ. ಆದರೆ ಸಂಸಾರರೂಪ ದರಿದ್ರತ್ವ: ಹೇತುವಾಗುವದು. ಆದರೆ ಅದೇಕರ್ಮವನ್ನು ಫಲಾಪೇಕ್ಷೆಯಿಲ್ಲದೆ ಮಾಡ: ಚಿತ್ತಶುದ್ಧಿರೂಪ ರಸಾಯನೇಚ್ಛೆಯು ಪೂರ್ಣವಾಗುವದಲ್ಲದೆ ಸಂಸಾ: ರೂಪ ದರಿದ್ರತ್ವವೂ ನಿವೃತ್ತವಾಗುವದು. ಇದರಂತೆಯೇ ಅನುಪಾನ ಭೇ: ದಿಂದ ಔಷಧದ ಗುಣಭೇದ ದೃಷ್ಟಾಂತವಾದರೂ ಇರುವದು.

(೫) ವಿವೇಕ ಮೊದಲಾದ ನಾಲ್ಕು ಸಾಧನಗಳಿಲ್ಲದೆ ಬಹಿರ್ಮುಖಪು: ಷನಿಗೆ ವೇದಾಂತಶಾಸ್ತ್ರಗಳ ನಿಶ್ಚಿದ್ರಶ್ರವಣವು ನಿರಂತರ ಆದರಸಹಿತವಾ: ದೀರ್ಘಕಾಲವಾದರೂ ಆಗುವದಿಲ್ಲ. ಮತ್ತು ಶ್ರವಣವಿಲ್ಲದೆ ಮ: ಮತ್ತು ನಿಧಿಧ್ಯಾನಗಳು ಪ್ರಾಪ್ತವಾಗುವದಿಲ್ಲ. ಈಕಾರಣದಿಂದ ಮ: ಮತ್ತು ನಿದಿಧ್ಯಾಸನಗಳಿಗೆ ಹೇತುವಾದ ಆಶ್ರವಣದಲ್ಲಿ ವಿವೇಕಾದಿ ನಾಲ: ಸಾಧನಗಳ ಉಪಯೋಗ ಅಂದರೆ ಫಲವಿರುವದು.

(೬) ಶ್ರವಣಾದಿಗಳ ಹೊರ್ತು ದೃಢಜ್ಞಾನವುಂಟಾಗುವದಿಲ್ಲ. ಕಾರಣದಿಂದ ಶ್ರವಣಾದಿ ನಾಲ್ಕುಸಾಧನಗಳು, ಜ್ಞಾನದಲ್ಲಿ ಉಪಯೋ: ವಾಗುವವು.

(೭) ಇಲ್ಲಿ "ಯುಕ್ತಿ"ಎಂಬ ಶಬ್ದದಿಂದ ಅಗ್ನಿಯ ನಿರ್ಣಾಯಕ ಧೂ: ರೂಪ ಚಿಹ್ನದ ನ್ಯಾಯದಂತೆ ವೇದಾಂತ ಯಾವ ಉಪನಿಷತ್, ಅ: ಅದ್ವೈತ ತತ್ವರೂಪ ತಾತ್ಪರ್ಯಾರ್ಥವಿರುವದೋ, ಅದರ ನಿರ್ಣಾಯ: ಅಂದರೆ ನಿಶ್ಚಾಯಕ ಷಡ್ಲಿಂಗವಿರುವವೋ, ಅವುಗಳನ್ನು ಗ್ರಹಣಮಾಡ: ಟ್ಟದೆ. ಆ ಷಡ್ಲಿಂಗಗಳು ಯಾವವೆಂದರೆ,—

೧. ಉಪಕ್ರಮ ಅಂದರೆ ಪ್ರಕರಣದ ಆರಂಭ, ಮತ್ತು ಉಪಸಂಹಾ: ಅಂದರೆ ಪ್ರಕರಣದ ಸಮಾಪ್ತಿ, ಇವುಗಳ ಏಕರೂಪತೆಯು ಪ್ರಥಮಲಿಂ: ವಾಗಿರುವದು.

೨. ಅಭ್ಯಾಸ, ಅಂದರೆ ಅದ್ವೈತರೂಪ ಅರ್ಥವನ್ನು ಮೇಲಿಂದಮೇ: ಪಠಣಮಾಡುವದು. ಇದು ದ್ವಿತೀಯ ಲಿಂಗವು.

೩. ಅಪೂರ್ವತಾ ಅಂದರೆ ಶ್ರುತಿಯಿಂದ ಭಿನ್ನಪ್ರಮಾಣದ ಅವಿಷಯತೆ: ಅಥವಾ ಸ್ವಪ್ರಕಾಶತಾರೂಪ ಅಲೌಕಿಕತ್ವವು. ಇದು ತೃತೀಯ ಲಿಂಗ:



೪. ಅದ್ವೈತ ತತ್ವದ ಜ್ಞಾನದ ಫಲದ ಪ್ರತಿಪಾದನವು ಚತುರ್ಥ ಲಿಂಗವಾಗಿರುವದು.

೫. ಭೇದಜ್ಞಾನದ ನಿಂದೆಯು ಮತ್ತು ಅಭೇದ ಜ್ಞಾನದ ಸ್ತುತಿ ರೂಪ ಅರ್ಥವಾದವು ಪಂಚಮಲಿಂಗವಾಗಿರುವದು.

೬. ಕಾರ್ಯಕಾರಣದ ಅಭೇದದ ಬೋಧಕತ್ವದಿಂದ ಅದ್ವೈತಜ್ಞಾನದ ಅನುಕೂಲ ದೃಷ್ಟಾಂತರೂಪ ಉಪಪತ್ತಿಯು ಷಷ್ಠಲಿಂಗವಾಗಿರುವದು.

ಈ ಷಡ್ಲಿಂಗಗಳಿಂದ ವೇದಾಂತ ವಾಕ್ಯಗಳ ಅದ್ವೈತ ಬ್ರಹ್ಮವಿಷಯದಲ್ಲಿಯ ತಾತ್ಪರ್ಯದ ನಿಶ್ಚಯವಾಗುವದು. ಅದೇ ಶ್ರವಣವೆನಿಸುವದು. ಮತ್ತು ವೇದಾಂತಶಾಸ್ತ್ರದ ಅಭ್ಯಾಸವು ಅದರ ಸಾಧನವಾಗಿರುವದು. ಈ ಕಾರಣದಿಂದ ಇದಾದರೂ ಶ್ರವಣವೆಂದೇ ಹೇಳಿರುವರು. ಈ ಲಿಂಗಗಳ ಸ್ಪಷ್ಟೀಕರಣವನ್ನು ಶ್ರುತಿಷಡ್ಲಿಂಗ ಸಂಗ್ರಹ ವಿಷಯದಲ್ಲಿ ಮಾಡಲ್ಪಟ್ಟಿರುವದು.

(೮) ಜೀವ ಬ್ರಹ್ಮರ ಅಭೇದದ ಸಾಧಕಯುಕ್ತಿಗಳು, ಯಾವವೆಂದರೆ:-

೧. ಜೀವವು ಬ್ರಹ್ಮನಿಂದ ಅಭಿನ್ನವಾಗಿರುವದು. ಸಚ್ಚಿದಾನಂದ ರೂಪವಾಗುವದರಿಂದ ಈಶ್ವರಚೇತನ ನ್ಯಾಯದಂತೆ, ಯಾವದು ಸಚ್ಚಿದಾನಂದ ರೂಪವಲ್ಲವೋ, ಅದು ಬ್ರಹ್ಮನಿಂದ ಅಭಿನ್ನವೂ ಅಲ್ಲ. ಹೇಗೆ ಘಟವಿರುವದೋ ಹಾಗೆ ಈ ಜೀವವು ಅಲ್ಲ. ಈ ಕಾರಣದಿಂದ ಬ್ರಹ್ಮನಿಂದ ಭಿನ್ನವೂ ಅಲ್ಲ; ಆದರೆ ಅಭಿನ್ನವಾಗಿರುವದು ಇಲ್ಲಿ ಈ ಅನುಮಾನದಲ್ಲಿ.

(೧) ಜೀವವು ಪಕ್ಷವಾಗಿರುವದು.

(೨) ಆದರ ಅಭೇದವು ಬ್ರಹ್ಮನಿಂದ ಸಾಧ್ಯವಿರುವದು.

(೩) ಸಚ್ಚಿದಾನಂದ ರೂಪತೆಯು ಹೇತುವಾಗಿರುವದು.

(೪) ಈಶ್ವರಚೇತನ, ಮತ್ತು ಘಟಗಳು, ಉದಾಹರಣ ಅಂದರೆ— ದೃಷ್ಟಾಂತವಾಗಿರುವವು.

ಇತ್ಯಾದಿ ಅನುಮಾನ ಪ್ರಮಾಣರೂಪ ಯುಕ್ತಿಗಳು ಇರುವವು.

೨ (೧) ಘಟಮಠ ಉಪಾಧಿಗಳನ್ನು ದೂರಮಾಡಲು, ಘಟಾಕಾಶ, ಮಠಾಕಾಶಗಳ ಅಭೇದವಿರುವದು. ಇದರಂತೆಯೇ ಬುದ್ಧಿ, ಮತ್ತು ಮಾಯಾ ಇವುಗಳ ಉಪಾಧಿಯನ್ನು ದೂರಮಾಡಲು ಜೀವ ಬ್ರಹ್ಮರ ಅಭೇದವು ತೋರುವದು.

(೨) ಘಟಾಕಾಶ, ಜಲಾಕಾಶ, ಮಹಾಕಾಶ, ಮತ್ತು ಮೇಘಾಕಾಶ ಎಂಬ ನಾಲ್ಕು ಆಕಾಶಗಳಿರುವವು. ಇವುಗಳಲ್ಲಿನ ಜಲಾಕಾಶ ಮತ್ತು ಮೇಘಾಕಾಶಕ್ಕೆ ಅಭೇದವು ಇಲ್ಲವೇ ಇಲ್ಲ. ತಥಾಪಿ ಘಟಾಕಾಶ ಮತ್ತು ಮಹಾ

ಕಾಶವೆಂದು ನಾಮ ಮಾತ್ರದಿಂದ ಭೇದವಿರುವದು. ಪರಮಾರ್ಥ
ಇರುವದಿಲ್ಲ. ಕೂಟಸ್ಥ, ಜೀವ, ಬ್ರಹ್ಮ, ಮತ್ತು ಈಶ್ವರ ಎಂಬ
ಚೇತನಗಳಿರುವವು. ಇವುಗಳಲ್ಲಿ ಜೀವ ಮತ್ತು ಈಶ್ವರರಲ್ಲಿ ಅ
ಇಲ್ಲ, (ತಥಾಪಿ ಇವುಗಳ) ಅಧಿಷ್ಠಾನ ಲಕ್ಷ್ಯಾರ್ಥರೂಪ, ಕೂ
ಮತ್ತು ಬ್ರಹ್ಮ ಎಂಬ ನಾಮ ಮಾತ್ರದಿಂದ ಭೇದವಿರುವದು. ಪರ
ದಿಂದ ಇಲ್ಲ;ಇತ್ಯಾದಿ ಉಪಮಾನ ಪ್ರಮಾಣರೂಪ ಯುಕ್ತಿಗಳು ಇರು

೩. “ನೇಹ ನಾನಾಸ್ತಿ ಕಿಂಚನ” ಇತ್ಯಾದಿ ಶ್ರುತಿಗಳಲ್ಲಿ ಭೇದದ
ಧಮಾಡಲ್ಪಟ್ಟಿರುವದು. ಆ ನಿಷೇಧವು, ವಾಸ್ತವಿಕವಾದ ಅಭೇದವಾಗ
ಅದು ಸಂಭವವಾಗುವದು. ಅದರ ಹೊರ್ತು ಸಂಭವವಾಗುವದಿಲ್ಲ,
ಕಾರಣದಿಂದ ಭೇದ ನಿಷೇಧದ ಅನುಪಪತ್ತಿಯ ಜ್ಞಾನರೂಪ ಅರ್ಥಾ
ಪ್ರಮಾಣದಿಂದ ಜೀವಬ್ರಹ್ಮ ಅಭೇದ ಜ್ಞಾನರೂಪವಾದ ಅರ್ಥಾ
ಪ್ರಮೆಯು ಉಂಟಾಗುವದು. ಇತ್ಯಾದಿ ಅರ್ಥಾಪತ್ತಿ ಪ್ರಮಾಣ
ಯುಕ್ತಿಗಳು ಇರುವವು.

ಈ ರೀತಿಯಿಂದ ಪ್ರತ್ಯಕ್ಷ ಪ್ರಮಾಣ ಮತ್ತು ಶಬ್ದ ಪ್ರಮಾಣಗಳಿಂದ
ಯುಕ್ತಿ ಶಬ್ದದವಾಚ್ಯ ಅನುಮಾನ,ಉಪಮಾನ, ಎಂಬ ಅರ್ಥಾಪತ್ತಿ
ವಾದ ಮೂರು ಪ್ರಮಾಣಗಳು ಅಭೇದದಸಾಧಕ ಯುಕ್ತಿಗಳು ಇರು

(೯) ಭೇದದ ಬಾಧಕ ಯುಕ್ತಿಗಳು ಯಾವವೆಂದರೆ:—

೧. ಜೀವ ಬ್ರಹ್ಮರಲ್ಲಿಯ ಭೇದವು ಮಿಥ್ಯವಾಗಿರುವದು; ಇದು
ಧಿಕವಾಗುವದರಿಂದ, ಘಟಾಕಾಶ, ಮಹಾಕಾಶಗಳ ಬೇಧವತ್, ಯಾ
ಮಿಥ್ಯವಲ್ಲವೋ, ಅದು ಔಪಾಧಿಕವೂ ಅಲ್ಲ. ಹೇಗೆ ಘಟಪಟಗಳ ವ್ಯವ
ರದಶೆಯಲ್ಲಿ ಭೇದವುಂಟೋ ಹಾಗೆ ಅದು ಔಪಾಧಿಕವಲ್ಲ. ಈ ಕಾರಣದಿ
ಮಿಥ್ಯವೂ ಅಲ್ಲ; ಹೀಗೇನು ಅಲ್ಲ; ಆದರೆ ಮಿಥ್ಯವೂ ಇರುವದು ಇಲ್ಲಿ.

(೧) ಭೇದ ಪಕ್ಷ ವಿರುವದು.

(೨) ಮಿಥ್ಯತ್ವವು ಸಾಧ್ಯವಿರುವದು.

(೩) ಔಪಾಧಿಕತೆಯು ಹೇತು ವಿರುವದು.

(೪) ಎರಡು ಆಕಾಶಗಳ ಭೇದವೂ, ಮತ್ತು ಘಟಪಟಗಳ ಭೇ
ಉದಾಹರಣವಾಗಿರುವವು.

ಇತ್ಯಾದಿ ಅನುಮಾನ ಪ್ರಮಾಣರೂಪ ಯುಕ್ತಿಗಳು ಇರುವವು.
ಆದಿ ಎಂಬ ಶಬ್ದದಿಂದ “ಮುಮುಕ್ಷು ಸರ್ವಸ್ವಸಾರಸಂಗ್ರಹ”ದಲ್ಲಿ ಹೇ
ಮತ್ತು “ವೇದಾಂತ ಪದಾರ್ಥ ಮಂಜೂಷಾ”ದಲ್ಲಿ ಹೇಳಿದ ಮತ್ತು
ಇದೇ ಗ್ರಂಥದ ತೃತೀಯ ತರಂಗದಲ್ಲಿ ತೃತೀಯ ಚೌಪಾಯಿಯ ಟಿಪ್ಪ



ದಲ್ಲಿ ಹೇಳಿದ ಪಂಚಭೇದಗಳ ನಿವರ್ತಕವಾದ ಐದು ಅನುಮಾನಗಳಲ್ಲಿ
ನಾಲ್ಕು ಅನುಮಾನಗಳನ್ನು ಗ್ರಹಣಮಾಡಿದೆ.

೨ (೧) ಹೇಗೆ ಬಿಂಬ ಪ್ರತಿಬಿಂಬದ ಭೇದವು ಮಿಥ್ಯವಿರುವದೋ,
ಹಾಗೆಯೇ ಜೀವ ಬ್ರಹ್ಮರಭೇದವಾದರೂ ಮಿಥ್ಯವಾಗಿರುವದು.

(೨) ಹೇಗೆ ಅನೇಕ ಘಟಾಕಾಶಗಳ ಪರಸ್ಪರ ಭೇದವು ಮಿಥ್ಯವಿರುವ
ದೋ, ಹಾಗೆ ಜೀವ ಜೀವಗಳಲ್ಲಿಯೆ ಪರಸ್ಪರ ಭೇದವೂ ಮಿಥ್ಯವಿರುವದು.

(೩) ಹೇಗೆ ಸ್ವಪ್ನ ಜೀವನದ, ಮತ್ತು ಸ್ವಪ್ನ ಘಟಾದಿಗಳ ಭೇದವು
ಮಿಥ್ಯವಿರುವದೋ, ಹಾಗೆ ಜೀವ ಜಡಗಳ ಭೇದವು ಮಿಥ್ಯವಿರುವದು.

(೪) ಹೇಗೆ ರಜ್ಜು ಮತ್ತು ಕಲ್ಪಿತ ಸರ್ಪಗಳ ಭೇದವೂ, ಅಥವಾ
ಸಾಕ್ಷಿ ಚೇತನಗಳ, ಮತ್ತು ಸ್ವಪ್ನ ಪ್ರಪಂಚಗಳ ಭೇದವೂ ಮಿಥ್ಯವಿರುವ
ದೋ ಹಾಗೆ ಜಡಜಗತ್ ಮತ್ತು ಈಶ್ವರರಲ್ಲಿಯ ಭೇದವು ಮಿಥ್ಯವಿರುವದು.

(೫) ಹೇಗೆ ರಜ್ಜುವಿನ ವಿಷಯದಲ್ಲಿ ಕಲ್ಪಿತ ಸರ್ಪ ದಂಡಾದಿಗಳ
ಅಥವಾ ಸ್ವಪ್ನಪದಾರ್ಥಗಳ ಪರಸ್ಪರ ಭೇದವು ಮಿಥ್ಯವಿರುವದೋ, ಹಾಗೆ
ಜಡ ಜಡಗಳಲ್ಲಿಯೇ ಭೇದವು ಮಿಥ್ಯವಿರುವದು.

ಇತ್ಯಾದಿ ಉಪಮಾನ ಪ್ರಮಾಣರೂಪ ಯುಕ್ತಿಗಳು ಇರುವವು.

೩. ಮಹಾವಾಕ್ಯದಲ್ಲಿ ಹೇಳಿದ ಯಾವಜೀವಬ್ರಹ್ಮರ ಅಭೇದವಿರುವ
ದೋ ಅದುಪ್ರತೀಯಮಾನ ಭೇದದ ಮಿಥ್ಯತ್ವದಹೊರ್ತು ಒಂದಕ್ಕೊಂದು
ಕೂಡುವದಿಲ್ಲ. ಜೀವಬ್ರಹ್ಮರ ಭೇದದ ಮಿಥ್ಯತ್ವವನ್ನು ಕಲ್ಪಿಸುತ್ತದೆ.
ಇತ್ಯಾದಿ ಅರ್ಥಾಪತ್ತಿ ಪ್ರಮಾಣರೂಪ ಯುಕ್ತಿಗಳು ಇರುವವು.

೪. ಹೇಗೆ ಜಾಗ್ರತಸ್ವಪ್ನ ವಿಷಯದಲ್ಲಿ ಉಪಾಧಿಯುಂಟಾಗಿ ಜೀವ
ಬ್ರಹ್ಮರ ಭೇದವು ಭಾಸವಾಗುವದೋ, ಹಾಗೆ, ಸುಷುಪ್ತಿ ವಿಷಯದಲ್ಲಿ
ಉಪಾಧಿಯ ಅಭಾವವುಂಟಾಗಿ, ಭೇದವು ಭಾಸವಾಗುವದಿಲ್ಲ. ಈ ಕಾರಣ
ದಿಂದ ಜೀವ ಬ್ರಹ್ಮರ ಪಾರಮಾರ್ಥಿಕ ಭೇದದ ಅಭಾವ ವುಂಟಾಗುವದು
ಎಂಬದು ನಿಶ್ಚಯವಾಗುತ್ತದೆ. ಇತ್ಯಾದಿ ಅನುಪಲಬ್ಧಿ ಪ್ರಮಾಣರೂಪ
ಯುಕ್ತಿಗಳಿರುವವು (ಇವೆಲ್ಲ ಭೇದಬಾಧಕ ಯುಕ್ತಿಗಳಿರುವವು.)

(೧೦) ಸಾಕ್ಷಾತ್ಕಾರ ವಿಷಯದಲ್ಲಿ ಅನಾತ್ಮಾಕಾರ ವೃತ್ತಿಯ ಅಂತರಾಯ
ದಿಂದ ರಹಿತವಾದ ಬ್ರಹ್ಮಾಕಾರ ವೃತ್ತಿಯ ಸ್ಥಿತಿಯು ಯಾವದಿರುವದೊ,
ಅದು ನವ್ರಶಾಖಾ ನ್ಯಾಯದಂತೆ, ಅಪ್ರಯತ್ನದಿಂದ ಉಂಟಾಗಿರುವದುಮ
ತ್ತು ನಿದಿಧ್ಯಾಸನ ವಿಷಯದಲ್ಲಿ ಉಕ್ತಪ್ರಕಾರ ಸ್ಥಿತಿಯು ಯಾವದಿರುವದ
ಲ್ಲಾ ಅದು ಹಸ್ತಗಳಿಂದ ಹಿಡಿದು ಬಗ್ಗಿಸಿದ ಉಚ್ಚ ಶಾಖಾನ್ಯಾಯದಂತೆ

ಪ್ರಯತ್ನದಿಂದ ಉಂಟಾಗಿರುವದಲ್ಲದೆ, ಹಸ್ತಗಳಿಂದ ಹಿಡಿಯುವ ಪ್ರ
ತ್ನವನ್ನು ತ್ಯಾಗಮಾಡಲು, ಹೇಗೆ ಎತ್ತರದಮೇಲೆ ಇದ್ದ ಶಾಖೆಯು ನ
ಯು ನಿಲ್ಲುವದಿಲ್ಲವೋ, ಹಾಗೆ ನಿಧಿಧ್ಯಾಸನ ವಿಷಯದಲ್ಲಿ ಪ್ರಯತ್ನ
ತ್ಯಾಗಮಾಡಲು, ಉಕ್ತಪ್ರಕಾರದ ಸ್ಥಿತಿಯು ನಿಲ್ಲುವದಿಲ್ಲ.

ಅಥವಾ ಸಾಕ್ಷಾತ್ಕಾರವನ್ನು ಹೊಂದಿದ ಪ್ರಾಣಿಗೆ ವ್ಯವಹಾರಕಾ
ದಲ್ಲಿ ಕದಾಚಿತ್ ಉಕ್ತವೃತ್ತಿಯ ಸ್ಥಿತಿಯ ಅಭಾವ ಉಂಟಾಗಲು,ಕರ್ತ
ಬುದ್ಧಿಯಿಂದ ಪಶ್ಚಾತ್ತಾಪವು ಉಂಟಾಗುವದಿಲ್ಲ. ನಿಧಿಧ್ಯಾಸನ
ಪ್ರಾಣಿಗೆ ವ್ಯವಹಾರಕಾಲದಲ್ಲಿ ಕದಾಚಿತ್ ಉಕ್ತವೃತ್ತಿಯ ಸ್ಥಿತಿ
ಅಭಾವವುಂಟಾಗಲು ಕರ್ತವ್ಯಬುದ್ಧಿಯಿಂದ ಪಶ್ಚಾತ್ತಾಪವಾಗುತ್ತದೆ.
ಈ ಪ್ರಕಾರ ಸಾಕ್ಷಾತ್ಕಾರ ಮತ್ತು ನಿದಿಧ್ಯಾಸನ ಇವುಗಳಲ್ಲಿ ಭೇದವುಂಟು.

(೧೧) ತ್ರಿಪುಟಿಯ ಎಚ್ಚರಿಕೆಯ ಸಹಿತ ಯಾವ ಸವಿಕಲ್ಪ ಸಮಾಧಿ
ಯು ಇರುವದೋ, ಅದು ನಿದಿಧ್ಯಾಸನವಾಗಿರುವದು. ಅದರ ಪರಿಪಾಕಾ
ವಸ್ಥೆಯು "ನಿರ್ವಿಕಲ್ಪಸಮಾಧಿ" ಎನ್ನಿಸಿಕೊಳ್ಳುವದು. ಈ ಕಾರಣದಿ
ಇಲ್ಲಿ "ಸಮಾಧಿ" ಎಂಬ ಶಬ್ದದಿಂದ ತ್ರಿಪುಟಿಯು ಎಚ್ಚರಿಕೆಯು ಇಲ್ಲ
ನಿರ್ವಿಕಲ್ಪ ಸಮಾಧಿಯನ್ನು ಗ್ರಹಿಸಿದೆ. ಈ ನಿರ್ವಿಕಲ್ಪ ಸಮಾಧಿಯು
ಬಾಹ್ಯ, ಮತ್ತು ೨ ಆಂತರಭೇದ, ಎಂದು ಎರಡು ವಿಧವಾಗಿರುವದು.

(೧) ಮೂರ್ತಿಮೊದಲಾದ ಬಾಹ್ಯ ಅವಲಂಬನದ ಚಿಂತನೆಯಿ
ಯಾವದು ಉಂಟಾಗಿರುವದೋ, ಅದು "ಬಾಹ್ಯನಿರ್ವಿಕಲ್ಪ ಸಮಾಧಿ
ಎನ್ನಿಸಿಕೊಳ್ಳುವದು.

(೨) ಸರ್ವಾಂತರ ಅದ್ವೈತಬ್ರಹ್ಮದ ಚಿಂತನೆಯಿಂದ, ಯಾವದು ಉಂ
ಟಾಗಿರುವದೋ, ಅದು"ಅಂತರ ನಿರ್ವಿಕಲ್ಪಸಮಾಧಿ" ಎನ್ನಿಸಿಕೊಳ್ಳುವ

ಇವುಗಳಲ್ಲಿ ಆಂತರ ನಿರ್ವಿಕಲ್ಪ ಸಮಾಧಿಯು(೧)ಸಾಕ್ಷಾತ್ಕಾರರೂ
ಮತ್ತು (೨) ಅಸಾಕ್ಷಾತ್ಕಾರರೂಪ ಎಂದು ಎರಡು ವಿಧವಾಗಿರುವದು.

(೧) ಗುರುಮುಖದ್ವಾರ ಅರ್ಥಸಹಿತ ಮಹಾವಾಕ್ಯದ ಶ್ರವಣ, ಮ
ನನ, ಮೊದಲಾದ ವಿಚಾರಪೂರ್ವಕವಾಗಿ ಅದ್ವೈತ ಬ್ರಹ್ಮನ ಚಿಂತನವ
ಮಾಡಿ, ಬ್ರಹ್ಮಾತ್ಮರ ಐಕ್ಯತೆಯ ಅಪರೋಕ್ಷ ಎಚ್ಚರಿಕೆ ಸಹಿತ ಉಂಟಾಗಿ
ರುವ ಸಮಾಧಿಗೆ "ಸಾಕ್ಷಾತ್ಕಾರ ರೂಪ ಆಂತರ ನಿರ್ವಿಕಲ್ಪಸಮಾಧಿ"ಎಂ
ಹೆಸರು.

(೨) ವಿಚಾರಪೂರ್ವಕವಾಗಿ ಅದ್ವೈತ ಬ್ರಹ್ಮನ ಚಿಂತನೆಯನ್ನುಮಾ
ಏಕತ್ವದ ಪರೋಕ್ಷ ಎಚ್ಚರಿಕೆಯ ಸಹಿತ ಯಾವದು ಉಂಟಾಗಿರುವದೋ



ಆ ಸಮಾಧಿಯು "ಅಸಾಕ್ಷಾತ್ಕಾರ ರೂಪಾಂತರ ನಿರ್ವಿಕಲ್ಪಸಮಾಧಿ"
ಎನ್ನಿಸಿಕೊಳ್ಳುವದು.

(೧) ಇವುಗಳಲ್ಲಿ ಅಸಾಕ್ಷಾತ್ಕಾರ ರೂಪವಾದ ಸಮಾಧಿಯು,ಸಾಕ್ಷಾ
ತ್ಕಾರರೂಪ ಸಮಾಧಿಯು ಸಾಧನವಾಗಿರುವದು. ಈ ಕಾರಣದಿಂದ, ಅದರ
ನಿದಿಧ್ಯಾಸನದಲ್ಲಿ ಅಂತರ್ಭಾವವಾಗುವದು; ಪೃಥಕ್ ಸಾಧನವಲ್ಲ.

(೨) ಸಾಕ್ಷಾತ್ಕಾರರೂಪ ಸಮಾಧಿಯು ಇರುವದಲ್ಲಾ ! ಅದು ಒಂದು
ಕ್ಷಣದಲ್ಲಿ ಉದಯವಾಗುವದಲ್ಲದೆ ಉತ್ತರ ಕ್ಷಣದಲ್ಲಿ ಸ್ಥಿರವಾಗಿ ಆವರಣದ
ನಾಶದ ಪ್ರಾರಂಭ ಮಾಡುವದು. ಮೂರನೇ ಕ್ಷಣದಲ್ಲಿ ಆವರಣದ ನಾಶವ
ನ್ನೇ ಮಾಡಿ ಬಿಡುವದು.ಇದರಿಂದ ಜೀವನ್ಮುಕ್ತಿಯಾಗುವದು. ಮೊದಲನೇ
ಕ್ಷಣದಲ್ಲಿಯಾದರೂ, ಆವರಣದ ಭಂಗವನ್ನು ಮಾಡುವದು. ಈ ಕಾರಣ
ದಿಂದ ವಿದ್ವಾಂಸರ ವಿಷಯದಲ್ಲಿ ಋತಂಭರಾಬುದ್ಧಿ ಮೊದಲಾದ ಸಿದ್ಧಿಗಳ
ಉದ್ಭವದ ಶಂಕೆಯು ಇರುವದಿಲ್ಲ. ಹೇಗೆ ಘಟದ ಸಾಕ್ಷಾತ್ಕಾರವು ಉಂ
ಟಾದ ಕೂಡಲೆ ಆ ಘಟದ ಆವರಣವು ಭಂಗವಾಗುವದೋ, ಹಾಗಾದೊ
ಡನೆಯೇ ಹೇಗೆ ಬುದ್ಧಿಯು ನಿರೋಧದ ಪ್ರಯೋಜನವಿಲ್ಲವೋ, ಹಾಗೆಯೇ
ಬ್ರಹ್ಮನ ಆವರಣದ ಭಂಗವಾದ ಬಳಿಕ, ಹಠದಿಂದ ವೃತ್ತಿಯ ನಿರೋಧ
ಮಾಡುವ ಪ್ರಯೋಜನವಿಲ್ಲ. ಹೀಗಾದ ಬಳಿಕಾದರೂ, ಸಪ್ತಭೂಮಿಕಾ
ಪರ್ಯಂತ ಯಾವ ವೃತ್ತಿಯ ನಿರೋಧವು ಮಾಡಲ್ಪಟ್ಟಿರುವದೋ,ಆ ನಿರೋ
ಧವು ವಾಸನಾಕ್ಷಯ, ಮತ್ತು ಮನೋನಾಶದ್ವಾರಾ, ಅಂದರೆ ಮನಸ್ಸಿನ
ಚಂಚಲಭಾವದ ನಿವೃತ್ತಿದ್ವಾರಾ, ಜೀವನ್ಮುಕ್ತಿಯ ವಿಲಕ್ಷಣ ಆನಂದದ
ಹೇತುವಾಗಿರುವದೇ ಹೊರತು ಆವರಣಭಂಗದ ಹೇತುವಾಗಿರುವದಿಲ್ಲ.
ಈರೀತಿಯಿಂದ ಸಮಾಧಿಯು ಅಂತರ್ಭಾವವು ನಿದಿಧ್ಯಾಸನದಲ್ಲಿ ಆಗುವದು.

(೧೨) "ಇದು ರಜ್ಜುವೋ,ಅಥವಾ ಸರ್ಪವೋ?" ಈ ರೀತಿಯಿಂದ
ಎರಡು ಪಕ್ಷಗಳನ್ನು ಕಲ್ಪಿಸುವ ಜ್ಞಾನಕ್ಕೆ"ಸಂಶಯ"ಎಂದುಹೇಳಿರುವರು.

(೧೩) "ಇದು ಸರ್ಪವಿರುವದು" ಎಂಬ ಯಾವ ಅವಿದ್ಯೆಯ ವೃತ್ತಿ
ಇರುವದೋ, ಅದು ಭ್ರಾಂತಿ ಜ್ಞಾನವು. ಇದಕ್ಕೆ ವಿಪರ್ಯಯ ಮತ್ತು
ವಿಪರೀತಭಾವನಾ ಎಂದು ಹೇಳಿದೆ. ಇದಕ್ಕೇ ಜ್ಞಾನಾಧ್ಯಾಸ, ಮತ್ತು
ವಿಪರೀತಜ್ಞಾನವೆಂದೂ ಅನ್ನುತ್ತಾರೆ. ಹೀಗೆ ಇಲ್ಲಿ ಮಿಥ್ಯಾ ಅನಾತ್ಮ
ರೂಪ ದೇಹಾದಿಗಳ ಸತ್ಯರೂಪತೆಯೂ, ಮತ್ತು ಆತ್ಮಾರೂಪತೆಯಿಂದ
ಯಾವ ಜ್ಞಾನವುಂಟಾಗಿರುವದಲ್ಲಾ ! ಅದು ವಿಪರ್ಯಯವು.

(೧೪) ವೇದದ ಅಂತರ್ಭಾಗರೂಪವಾದ ಉಪನಿಷತ್, ವೇದದ ಅಂತ, ಅಂದರೆ-ನಿರ್ಣಯವು ಯಾವದರ ವಿಷಯದಲ್ಲಿ ದೆಯೋ, ಅಂಥಾ ಸೂತ್ರಭಾಷ್ಯರೂಪ ಉತ್ತರ ಮೀಮಾಂಸಾ ವೇದಾಂತ ಎಂದು ಹೇಳಿದ್ದಾರೆ. ಇವುಗಳ ವಾಕ್ಯ, ಅಂ ಸಮುದಾಯವು.

(೧೫) ಪ್ರಮಾಜ್ಞಾನದ ಯಾವ ಕರಣವಿರುವದಲ್ಲಾ! ಅದು ಣವೆನಿಸಿಕೊಳ್ಳುವದು. ಇಲ್ಲಿ ವೇದಪ್ರತಿಪಾದಿತ ಮೋಕ್ಷಾದಿ ಪದಾ ಯಥಾರ್ಥವಾದ ಅನುಭವರೂಪವಾದ ಯಾವಶಾಬ್ದಪ್ರಮೆಯು, ಕರಣ ರೂಪವಾದ ಯಾವ ಉಪನಿಷದ್‌ರೂಪ ಶಬ್ದವು, ಅದು ಪ್ರ ಶಬ್ದದ ಅರ್ಥವಿರುವದು. ಅದರ ಸ್ವರೂಪದಲ್ಲಿ ಯಾವ ಉಕ್ತಪ್ರ ಸಂಶಯ ಉಂಟಾಗಿರುವದೋ ಅದು ಪ್ರಮಾಣಗತ ಸಂಶಯವಾಗಿ ವಿಚಾರಮಾಡಿ ನೋಡಲು, ಆ ವಿಷ್ಯಪ್ರಮೇಯ ಗತಸಂಶಯದ ಭ ಶಾಸ್ತ್ರದಲ್ಲಿ ಹೇಳುವೆವ್ರೋ ಅಷ್ಟು ಪ್ರಮಾಣಗತ ಸಂಶಯದ ಭ ಸಿದ್ಧವಾಗಿರುವದು.

(೧೬) "ಹೀಗೆ" ಅಂದರೆ ಇದರಿಂದ ಆದಿಯಾಗಿ, ಅನೇಕ ಆಕಾ ಪ್ರಮೇಯಗತ ಸಂಶಯವು ಅದೆ. ಪ್ರಮೇಯಗತ ಸಂಶಯದ ಭೇದಗಳನ್ನು ಪಂಚದಶಿಯ ಭಾಷಾ ಟೀಕೆಯ ಗ್ರಂಥದಲ್ಲಿ ಹಾ ಬಾಲಬೋಧದ ಬಾಲಬೋಧಿನೀ ಟೀಕೆಯಲ್ಲಿ ವಿವರಿಸಲ್ಪಟ್ಟವೆ.

(೧೭) ಪ್ರಮಾಜ್ಞಾನದಿಂದ ಅಥವಾ ಅದರ ಸಾಧನ ಪ್ರಮಾಣ ತಿಳಿಯಲಿಕ್ಕೆ ಯೋಗ್ಯವಾದ ಯಾವ ಮೋಕ್ಷಾದಿ ಪದಾರ್ಥಗಳಿಯ ಅವು ಇಲ್ಲಿ ಪ್ರಮೇಯವೆಂದು ಹೇಳಿರುವದು.

(೧೮) ಇಲ್ಲಿ "ವಿಪರ್ಯಯ" ಶಬ್ದದ ಅಪಭ್ರಂಶರೂಪ "ವಿಪ್ರಷ್ಯೆ" ಎಂಬ ತಪ್ಪುವನ್ನು ಬರೆದಿರುವರು.

(೧೯) ನೇತ್ರದಲ್ಲಿ ಹಾಕಿದ ಅಂಜನವು ನೇತ್ರರೋಗದ ನಿ ದ್ವಾರಾ ಸೂರ್ಯನ ದರ್ಶನ ಸಾಧನವಾಗಿರುವದು. ಸಾಕಾತ್ ಸೂರ್ಯ ದರ್ಶನಕ್ಕೆ ಸಾಕ್ಷಾತ್ ಸಾಧನವು ನೇತ್ರವು ಹೇಗೋ ಶ್ರವಣಾದಿಗಳು ಜ್ಞಾನದ ಪ್ರತಿಬಂಧರೂಪ ರೋಗದ ನಿವೃತ್ತಿದ್ವಾರ ನಕ್ಕೆ ಸಾಕ್ಷಾತ್ ಸಾಧನವು ಶ್ರೋತ್ರ ಸಂಬಂಧಿ ವೇದಾಂತ ವಾಕ್ಯ ರೂಪವು.

(೨೦) ಏಕದೇಶೀಯ ಮತದ ಸಿದ್ಧಾಂತದ ಆಶ್ರಯಮಾಡಿ,ಸ್ವ ಅಧಿಕ ಅರ್ಥದ ನಿರೂಪಣವನ್ನು ಯಾವದರಲ್ಲಿ ಮಾಡಿರುವದೋ, ಯಾವ ಪಂಚದಶಿಮೊದಲಾದ ವೇದಾಂತಪ್ರಕರಣಗ್ರಂಥಗಳು ಇರುವ



ಅವುಗಳ ಕರ್ತರಾದ ಯಾವ ಆಚಾರ್ಯರು ಇರುವರಲ್ಲಾ; ಅವರೇ ಇಲ್ಲಿ ಏಕದೇಶೀಯರೆಂದು ಹೇಳಲ್ಪಟ್ಟಿರುವದು. ಭರ್ತೃಪ್ರಪಂಚದ ಅನುಸಾರ ವಾಗಿ ಅಲ್ಲ.

(೨೧) ಕೇವಲ ವಾಕ್ಯದಿಂದ ಅಪರೋಕ್ಷಜ್ಞಾನದ ವಾದಿ, ಅಂದರೆ ಹೇಳತಕ್ಕ ಯಾವ ಸಿದ್ಧಾಂತಿಯು ಅವನ ಮತದಲ್ಲಿ;

(೨೨) ಮಂದಮತಿಗಳಾದವರಿಗೆ ಶ್ರವಣಾದಿ ಸಾಧನಗಳಲ್ಲಿ ಆಲಸ್ಯ ದಿಂದ ಬುದ್ಧಿಯು ಉಂಟಾಗುವದು,ಎಂಬ ಅಭಿಪ್ರಾಯದಿಂದ ಇಲ್ಲಿ ಹೇಳಿದ ಪ್ರಕಾರಗಳ ಸಂಕ್ಷೇಪ ಶಾರೀರಕದಿಂದ ಭಿನ್ನವಾದ ಬಹಳ ಪ್ರಕರಣ ಗ್ರಂಥ ಗಳ ಕರ್ತೃಗಳ ಮತವಿರುವದು.

(೨೩) ಸೂಜ್ಞರಾದವರಿಗೆ ಸಹಾ ಶ್ರವಣಾದಿಗಳ ವಿಷಯದಲ್ಲಿಕರ್ತವ್ಯ ಬುದ್ಧಿಯ ಉದ್ಭವ ಮತಿಯುಂಟಾಗುವದು. ಈ ಅಭಿಪ್ರಾಯದಿಂದ ಕೇವಲ ವಾಕ್ಯದಿಂದ ಅಪರೋಕ್ಷಜ್ಞಾನವನ್ನು ಹೇಳತಕ್ಕ ಸಿದ್ಧಾಂತಿಗಳ ಅನುಸಾರವಾಗಿ ಇಲ್ಲಿ ಸಮಾಧಾನವನ್ನು ಹೇಳಲ್ಪಟ್ಟಿರುವದು.

(೨೪) ದೇಶಕೃತ ಅಥವಾ ಕಾಲಕೃತ ಅಂತರಾಯಗಳಿಗೆ ವ್ಯವಧಾನ ವೆಂದು ಹೇಳಲ್ಪಟ್ಟಿರುವದು. ವ್ಯವಧಾನ ವಸ್ತುಗಳಿಗೆ ವ್ಯವಹಿತವೆಂದು ಹೇಳಿದೆ.

೧. ಯಾವ ವಸ್ತುವು ದೂರದೇಶದಲ್ಲಿ ಇರುವದೋ,ಅದು ಈ ದೇಶ ದಿಂದ ವ್ಯವಹಿತವಾಗಿರುವದು. ಮತ್ತು ಯಾವ ವಸ್ತುವು ಭೂತ ಇಲ್ಲವೆ ಭವಿ ಷ್ಯತ್ ಕಾಲಗಳಲ್ಲಿ ಆಗುವದೋ,ಅದು ಕಾಲಕೃತ ವ್ಯವಹಿತವಾಗಿರುವದು.

೨. ವ್ಯವಹಿತದಿಂದ ಭಿನ್ನವಾದ ಯಾವ ವಸ್ತುವು ಅಂತರಾಯ ದಿಂದ ರಹಿತವಾಗಿರುವದೋ ಅದು ಅವ್ಯವಹಿತವೆಂದು ಹೇಳಿದೆ.

(೨೫) ಇಲ್ಲಿ ಈ ಪ್ರಸಂಗವಿರುವದು:- ಒಂದು ಊರಲ್ಲಿ ಹತ್ತು ಜನ ಬಾಲಕರಿದ್ದರು. ಅವರು ಒಕ್ಕಟ್ಟಾಗಿದೇಶಾಂತರಕ್ಕೆವಿನೋದಾರ್ಥವಾಗಿ ಹೋಗುತ್ತಿದ್ದರು. ಆಗ ಮಾರ್ಗದಲ್ಲಿ ಮೃಗಜಲದ ನದಿಯು ಪ್ರಾಪ್ತ ವಾಯಿತು. ಅದನ್ನು ಎಲ್ಲರೂ ಕೂಡಿ ಉಲ್ಲಂಘನಮಾಡಿದರು. ಆ ಮೇಲೆ ಒಬ್ಬ ಪ್ರಮುಖಬಾಲಕನು ಉಳಿದ ಬಾಲಕರ ಗಣನೆ ಮಾಡಿದನು. ತನ್ನ ಗಣನೆಯನ್ನು ಮಾಡುವದನ್ನು ಬಿಟ್ಟುಬಿಟ್ಟನು. ಆಗ ಅವನು ಅಂದದ್ದೇ ನಂದರೆ:-

೧. "ನನ್ನ ಜೀವದ ಗೆಳೆಯನಾದ ಹತ್ತನೆಯವನೊಬ್ಬನು ಕಾಣು

ಪವಿಲ್ಲವಲ್ಲಾ?" ಎಂದನು. ಇದು ಅಜ್ಞಾನಾವಸ್ಥೆಯು.

೨-೩. ಅವರಲ್ಲಿ "ಹತ್ತನೆಯವನು ಇಲ್ಲವಲ್ಲ?" ಮತ್ತು "ಕಾ
ವದೂ ಇಲ್ಲ." ಎಂಬವು ದ್ವಿತೀಯ ಆವರಣವಾಯಿತು.

೪. ಅದರಿಂದ ಉಂಟಾದ ರೋದನಾದಿರೂಪವು "ವಿಕ್ಷೇಪ"ವಾಯಿ

೫. ಹಿಂದುಗಡೆಯಲ್ಲಿ ಒಬ್ಬ ಆಪ್ತ ಅಂದರೆ-ಯಥಾರ್ಥವನ್ನು ಹೇ
ವವನು ಬಂದನು. ಆವನು ಎಲ್ಲರನ್ನೂ ನೋಡಿ "ಹತ್ತನೆಯವನು ಇ
ನು." ಹೀಗೆ ಅವಾಂತರ ವಾಕ್ಯವನ್ನು ಹೇಳಿದನು. ಅದನ್ನು ಕೇಳಿ ಆ
ನೆಯ ಬಾಲಕನಿಗೆ ಸ್ವಸ್ವರೂಪ ಭೂತದಶಮನವಾದ" ದಶಮಪುರುಷ
ವನು" ಎಂಬ ಪರೋಕ್ಷಜ್ಞಾನವುಂಟಾಯಿತು.

೬. ಹಿಂದುಗಡೆಯಲ್ಲಿ "ದಶಮ ಪುರುಷನು ಎಲ್ಲಿರುವನು?" ಎಂ
ಪ್ರಶ್ನೆಮಾಡಲು, ಆ ಆಪ್ತಪುರುಷನು "ದಶಮಪುರುಷನು ನೀನೇ ಆಗಿ
ಎಂಬ ವಚನವನ್ನು ಹೇಳಿದನು. ಆಗ "ದಶಮಪುರುಷನು ನಾನೇ ಆಗಿ
ನು." ಎಂಬ ಅಪರೋಕ್ಷಜ್ಞಾನವಾಯಿತು.

೭. ಈ ಕಾರಣದಿಂದ ಅಜ್ಞಾನಕೃತ ಆವರಣಸಹಿತ ರೋದ
ವಿಕ್ಷೇಪದ ನಾಶವಾಯಿತು.ಅದರಿಂದ ಹರ್ಷರೂಪ ತೃಪ್ತಿಯುಂಟಾಯ

ಹಾಗೆಯೇ ಇಲ್ಲಿ ಪುರುಷ ಅಂದರೆ-ಜೀವನು, ಅವನು ಸ್ಥೂಲ
ಸಹಿತ ಅಷ್ಟಪುರಿರೂಪ, ನವಪುರುಷರೊಡನೆ ಕೂಡಿ, ಸಂಸಾರರೂಪ
ಜಲದ ನದಿಯನ್ನು ಪ್ರವೇಶಮಾಡಿ ಅದರ ಮನುಷ್ಯದೇಹರೂಪ ತೀ
ಬಂದು, ಕದಾಚಿತ್ ಜಜ್ಞಾಸಕಾಲದಲ್ಲಿ ವಿಚಾರಮಾಡಹತ್ತಲು ಆಗ

೧. ತನ್ನನ್ನು ಬಿಟ್ಟು ನವಪುರುಷನನ್ನು ತಿಳಿಯುವನು. ಆ
ಅವರನ್ನು ತಿಳಿಯತಕ್ಕ ತನ್ನ ನಿಜರೂಪ ಬ್ರಹ್ಮನನ್ನು ತಿಳಿಯುವದಿಲ್ಲ.
ಅಜ್ಞಾನ ಅವಸ್ಥೆಯಾಯಿತು.

೨—೩. ಅದರಲ್ಲಿ "ಬ್ರಹ್ಮನು ಇರುವನೋ? ಇಲ್ಲವೋ!" ಮ
"ಕಾಣುವದಿಲ್ಲವಲ್ಲಾ!" ಎಂಬದು ದ್ವಿವಿಧ ಆವರಣವಾಯಿತು.

೪. ಆದರಿಂದ ಅರ್ಥಾಧ್ಯಾಸ, ಮತ್ತು ಜ್ಞಾನಾಧ್ಯಾಸರೂಪ ವಿಕ್ಷೆ
ಆದರೆ ಶೋಕವುಂಟಾಯಿತು.

೫. ಹಿಂದುಗಡೆ "ಬ್ರಹ್ಮನಿರುವನು" ಹೀಗೆ ಗುರುವು ಅವಾಂತ
ಕ್ಯವನ್ನು ಹೇಳಿದನು. ಅದನ್ನು ಕೇಳಿ "ಬ್ರಹ್ಮನಿರುವನು." ಎಂಬ ಪ
ಜ್ಞಾನ ಉಂಟಾಯಿತು.

೬. ಆ ಮೇಲೆ "ಬ್ರಹ್ಮನು ಯಾವನು ?" ಎಂದು ಪ್ರಶ್ನೆಮಾ



ಗುರುವು "ನೀನೇ ಬ್ರಹ್ಮನಿರುವಿ ?" ಎಂಬ ಮಹಾವಾಕ್ಯವನ್ನು ಹೇಳಿದನು. ಅದನ್ನು ಕೇಳಿ "ಶಿಷ್ಯನಿಗೆ ನಾನೇ ಬ್ರಹ್ಮನಿರುವೆನು" ಎಂಬ ಅಪರೋಕ್ಷ ಜ್ಞಾನವುಂಟಾಯಿತು.

೭. ಅದರಿಂದ ಅಜ್ಞಾನಕೃತ ಆವರಣಸಹಿತ ದ್ವಿವಿಧ ಅಧ್ಯಾಸರೂಪ ವಿಕ್ಷೇಪದ ನಾಶವಾಗುವದು. ಅದರಿಂದ ಅತ್ಯಂತ ಹರ್ಷರೂಪ ನಿರಂಕುಶ ತೃಪ್ತಿವುಂಟಾಗುವದು.

ಈ ಚಿದಾಭಾಸದ ಏಳು ಅವಸ್ಥೆಗಳ ವರ್ಣನೆಯನ್ನು ಆಚಾರ್ಯಕೃತ ಉಪದೇಶಸಹಸ್ರಿ, ಮತ್ತು ಪಂಚದಶಿ, ಎಂಬಗ್ರಂಥಗಳಲ್ಲಿಯೂ, ಮತ್ತು ಈ ವಿಚಾರಸಾಗರದ ಚತುರ್ಥತರಂಗದಲ್ಲಿಯೂ ಸವಿಸ್ತರವಾಗಿ ವರ್ಣಿಸಲ್ಪಟ್ಟಿದೆ. ಇಲ್ಲಿ ಆ ಅವಸ್ಥೆಗಳನ್ನು ಸಂಕ್ಷೇಪದಿಂದಲೇ ರೀತಿಮಾತ್ರ ವಿವರಿಸಲ್ಪಟ್ಟಿದೆ. (೨೭) ಇಲ್ಲಿ ಈ ರಹಸ್ಯವಿರುವದು:—ದಶಮ ಪುರುಷನನ್ನು ಪ್ರತ್ಯಕ್ಷಮಾಡಿಕೊಳ್ಳುವದು ಮನಸ್ಸು ಮತ್ತು ನೇತ್ರಗಳೆಂಬಸಾಮಗ್ರಿಯ ಸಂಗ್ರಹದಿಂದ ಆಗುತ್ತದೆ. ಆದರೆ ಅಪರೋಕ್ಷಬೋಧವು ಆಗುವದಿಲ್ಲ. ಆದರೆ "ದಶಮ ಪುರುಷನೇ ನೀನು ಇರುವಿ"ಎಂಬ ವಾಕ್ಯದಿಂದಲೇ ಬೋಧವಾಗುತ್ತದೆ. ಈ ಕಾರಣದಿಂದ ದಶಮಪುರುಷನ ಅಪರೋಕ್ಷಬೋಧರೂಪ ಪ್ರಮೆಗೆ ಶಬ್ದವು ಕರಣವಾಗಿರುವದು. ಅದರಿಂದ ಅದು ಪ್ರಮಾಣವಾಗಿರುವದು. ಅದಕ್ಕೆ ಮನಸ್ಸು ಮತ್ತು ನೇತ್ರಗಳು ಸಹಕಾರಿಗಳಾಗಿರುವವು. ಹಾಗೆ ಬ್ರಹ್ಮನ ಅಪರೋಕ್ಷಬೋಧರೂಪ ಪ್ರಮೆಗೆ ಮಹಾವಾಕ್ಯರೂಪ ಶಬ್ದವಿರುವದು. ಈ ಕಾರಣದಿಂದ ಅದುಪ್ರಮಾಣವಾಗಿದೆ. ಅದನ್ನುಸಾಧನ ಮಾಡಿಕೊಳ್ಳಲಿಕ್ಕೆ ಸಂಸ್ಕೃತ ಮನಸ್ಸು ಸಹಕಾರಿಯಾಗಿರುವದು.

(೨೮) "ಎಲೈ ಮೈತ್ರೇಯಿಯೇ ? ಆತನು ನೋಡಲಿಕ್ಕೆ ಯೋಗ್ಯನಿರುವನು, ಶ್ರವಣಮಾಡಲಿಕ್ಕೆ ಯೋಗ್ಯನಿರುವನು, ಮನನ ಮಾಡುವದಕ್ಕೆ ಯೋಗ್ಯನಿರುವನು, ಮತ್ತು ನಿಧಿಧ್ಯಾಸನಮಾಡಲಿಕ್ಕೆ ಯೋಗ್ಯನಿರುವನು," ಇತ್ಯಾದಿ ಶೃತಿಗಳಿಂದ ಪ್ರತಿಪಾದಿತ ಆತ್ಮದರ್ಶನದ ಸಾಧನಗಳು ವಿಫಲ, ಅಂದರೆ ನಿಷ್ಫಲಗಳಾಗುವದಕ್ಕೆ ಯೋಗ್ಯವಲ್ಲ. ಆದರೆ ಸಫಲವಾಗುವದಕ್ಕೆ ಯೋಗ್ಯವುಂಟು. ಕೇವಲ ಮಹಾವಾಕ್ಯದಿಂದ ಅಪರೋಕ್ಷ ಜ್ಞಾನವನ್ನು ತಿಳಿಸುವದಕ್ಕೆ ಶೃತಿಯಲ್ಲಿ ಹೇಳಿದ ಶ್ರವಣಾದಿ ಸಾಧನಗಳು ನಿವರ್ತನೀಯ ದೋಷದ ಅಭಾವದಿಂದ "ರೋಗ ನಿವಾರಣವಾದ ಬಳಿಕ ಸೇವಿಸುವ ಔಷಧದ" ನ್ಯಾಯದಂತೆ ವಿಫಲ ಅಂದರೆ ನಿಷ್ಫಲವಾಗುವವು. ಎಂಬ ಅಭಿಪ್ರಾಯವಿರುವದು.

(೨) ಭರ್ಥರ್ನಾಮಕ ಮಂತ್ರಿಯ ಸವಿಸ್ತರ ವೃತ್ತಾಂತವು... ಪಂಚಮತರಂಗದಲ್ಲಿ ಬರುವದು. ಆದರಿಂದ ಇಲ್ಲಿ ಅವನ ನಾಮ... ಮಾತ್ರ ಹೇಳಿದ್ದೇವೆ.

(೨೯) ಜ್ಞಾನವಾಗುವದಕ್ಕಿಂತ ಪೂರ್ವದಲ್ಲಿ ಸಗುಣಬ್ರಹ್ಮನ ಸಾ... ತ್ಕಾರ ಪರ್ಯಂತರ ಯಾವನ ಉಪಾಸನೆಯು ಆಗಿರುವದೋ, ಅ... ಕೃತೋಪಾಸನೆನ್ನುವರು. ಅವನಿಂದ ಭಿನ್ನನಾಗಿದ್ದವನಿಗೆ ಅಕೃತೋ... ನೆನ್ನುವರು. ಈ ಉಭಯತ್ರರಲ್ಲಿ ಕೃತೋಪಾಸನನಲ್ಲಿ ವೈರಾಗ್ಯಾದಿ ಸಾ... ಗಳು ತೀವ್ರವಾಗಿರುವವು. ಇದರಿಂದ ಪ್ರಸಿದ್ಧವಾಗಿ ಕಾಣುವನು. ಪ್ರ... ಅಕೃತೋಪಾಸನ ಸಾಧನಗಳು ಮಂಡವಾಗಿರುವವು. ಇದರಿಂದ ಪ್ರ... ವಾಗಿ ಕಾಣುವದಿಲ್ಲ, ಆದರೆ ಗುಪ್ತನಾಗಿರುವನು. ಆದರೆ ವಸ್ತ್ರದ ... ಶರಗನ್ನು ಹಿಡಿದು ಎಳೆಯಲು, ಎಲ್ಲ ವಸ್ತ್ರವು ಹೇಗೆ ಕೈಗೆ ಬರುತ್ತದೆ... ಇದರಂತೆ ಚತುರ್ಥಸಾಧನಗಳಲ್ಲಿ ಒಂದು ಸಾಧನವು ನಿಶ್ಚಯವಾಗಿ ಸಾ... ದ್ದರೆ ಉಳಿದ ಎಲ್ಲ ಸಾಧನಗಳು ಗುಪ್ತವಾಗಿ ಸಾಧ್ಯವಾಗುವವು. ... ನಿಶ್ಚಯವುಂಟಾಗುವದು. ಏಕೆಂದರೆ,—ವಿವೇಕಾದಿ ನಾಲ್ಕು ಸಾ... ಗಳು ಪರಸ್ಪರ ಸಹಕಾರಿಗಳಾಗಿರುವವು. ಆದರೆ ಶ್ರದ್ಧಾಳು, ಮು... ವ್ಯಸನಿ, ತೀವ್ರಬುದ್ಧಿ, ಪುರುಷರಿಗೆ ಆ ಪ್ರಕಾರವಾಗಿ ಬೋಧವಾಗು... ಇದೇ ವಿವೇಕವಾಗಿರುವದು.

---

## ॥ ೨೪ ॥ ಅಥ ಸಂಬಂಧ ವರ್ಣನ.

### ॥ ದೋಹಾ ॥

ಪ್ರತಿಪಾದಕ ಪ್ರತಿಪಾದ್ಯತಾ । ಗ್ರಂಥ ಬ್ರಹ್ಮ ಸಂಬಂಧ ॥
ಪ್ರಾಪ್ಯ ಪ್ರಾಪಕತಾ ಕಹತ । ಫಲ ಅಧಿಕೃತಕೋ ಛಂದ॥೨...

ಟೀಕಾ॥ ೧. ಗ್ರಂಥ ಮತ್ತು ವಿಷಯಗಳ ಪ್ರತಿಪಾದ್ಯ, ಪ್ರತಿಪಾ... ಭಾವಸಂಬಂಧವಿರುವದು. ಗ್ರಂಥವು ಪ್ರತಿಪಾದಕವಾಗಿರುವದು. ... ಯವು ಪ್ರತಿಪಾದ್ಯವಾಗಿರುವದು. ಯಾವನು ಪ್ರತಿಪಾದನಮಾಡು... ಅವನಿಗೆ ಪ್ರತಿಪಾದಕನೆಂದು ಹೇಳಿದ್ದಾರೆ. ಯಾವದು ಪ್ರತಿಪಾದನ... ಲಿಕ್ಕೆ ಯೋಗ್ಯವಿಷಯವಿರುವದೋ, ಅದುಪ್ರತಿಪಾದ್ಯವೆಂದು ಹೇಳಿ...

೨. ಅಧಿಕಾರಿಯು ಮತ್ತು ಫಲದ, ಪ್ರಾಪ್ಯಪ್ರಾಪಕಭಾವ ಸಂಬಂ... ರುವದು. ಫಲವು ಪ್ರಾಪ್ಯವಾಗಿರುವದು. ಅಧಿಕಾರಿಯು ಪ್ರಾಪಕ... ರುವನು. ಯಾವವಸ್ತುವು ಪ್ರಾಪ್ತವಾಗುವದೋ, ಅದು ಪ್ರಾಪ್ಯವೆ...



ಳ್ಳುವದು, ಯಾವನಿಗೆ ಆ ವಸ್ತುವು ಪ್ರಾಪ್ತವಾಗುವದೋ ಅವನಿಗೆ ಪ್ರಾಪಕನೆನ್ನುವರು.

೩. ಅಧಿಕಾರಿಯು ಮತ್ತು ವಿಚಾರದ ಕರ್ತೃ ಕರ್ತವ್ಯಭಾವ ಸಂಬಂಧ ವಿರುವದು. ಅಧಿಕಾರಿಯು ಕರ್ತೃವಾಗಿರುವನು. ವಿಚಾರವು ಕರ್ತವ್ಯ ವಾಗಿರುವದು. ಯಾವನು ಮಾಡುವವನಿರುವನೋ, ಅವನಿಗೆ ಕರ್ತಾ ಎನ್ನುವರು. ಮಾಡಿಸಿಕೊಳ್ಳುವದಕ್ಕೆ ಯಾವದು ಯೋಗ್ಯವಾಗಿರುವದೋ, ಅದಕ್ಕೆ ಕರ್ತವ್ಯ. ಎನ್ನುವರು.

೪. ಗ್ರಂಥ ಮತ್ತು ಜ್ಞಾನ, ಇವುಗಳಲ್ಲಿ ಜನ್ಯಜನಕಭಾವ ಸಂಬಂಧ ವಿರುವದು. ವಿಚಾರದ್ವಾರಾ ಗ್ರಂಥವು ಜ್ಞಾನದ ಜನಕವಾಗಿರುವದು. ಜ್ಞಾನವು ಜನ್ಯವಾಗಿರುವದು. ಯಾನನು ಉತ್ಪತ್ತಿ ಮಾಡುವನಿರುವನೋ ಅವನಿಗೆ ಜನಕನೆನ್ನುವರು. ಯಾವದರ ಉತ್ಪತ್ತಿಯಾಗುವದೋ ಅದಕ್ಕೆ ಜನ್ಯ, ಎನ್ನುವರು.

ಇವುಗಳೇ ಆದಿಯಾಗಿ[೧] ಮತ್ತು ಬೇರೆ[೨] ಸಂಬಂಧಗಳನ್ನು ತಿಳಿದು ಕೊಳ್ಳಬೇಕು. ॥೨೪॥

೧. ಇಲ್ಲಿ "ಆದಿ"ಶಬ್ದದಿಂದ ಶ್ರವಣಾದಿ ಸಾಧನಗಳ ಮತ್ತು ಜ್ಞಾನದ ಹಾಗೆಯೇ ವಿಜ್ಞಾನದ ಮತ್ತು ಮೋಕ್ಷದ ಸಾಧ್ಯಸಾಧನಭಾವ ಮೊದ ಲಾದ ಸಂಬಂಧಗಳನ್ನು ತಿಳಿದುಕೊಳ್ಳಬೇಕು.

೨. ಜಲ ಮತ್ತು ಸೇಚನ ನ್ಯಾಯದಂತೆ ಆಗುವ ಯೋಗ್ಯತೆಯುಳ್ಳ ಪರಸ್ಪರೋಪಯೋಗಿ ಎರಡುಪದಾರ್ಥಗಳ ಸಂಬಂಧವು ಸಿದ್ಧವಾಗುವದು. ನಿರುಪಯೋಗೀ ಪದಾರ್ಥಗಳ ಸಂಬಂಧವು ಅಲ್ಲ. ಈ ಕಾರಣದಿಂದ ಯೋಗ್ಯತೆಯ ಹೊರ್ತು ಸಂಬಂಧದ ಅಸಂಭವದ ಜ್ಞಾನರೂಪ ಅರ್ಥಾ ಪತ್ತಿ ಪ್ರಮಾಣದಿಂದ ಮೂರುಮೂರು ಪದಾರ್ಥಗಳ ಯೋಗ್ಯತೆಯ ಕಲ್ಪ ನಾರೂಪವಾದ ಅರ್ಥಾಪತ್ತಿಯ ಪ್ರಮೆಯು ಉಂಟಾಗಿರುವದು. ಈ ಹೇತುವಿನಿಂದ ಶಾಸ್ತ್ರದಲ್ಲಿ ಸಂಬಂಧದ ವ್ಯವಹಾರವನ್ನು ಬರೆದಿರುವರು. ಅನ್ಯಪ್ರಯೋಜನಾರ್ಥವಾಗಿ ಅಲ್ಲ.

---

## ॥ ೨೫ ॥ ಅಥ ವಿಷಯ ವರ್ಣನ.

### ॥ ದೋಹಾ ॥

ಜೀವಬ್ರಹ್ಮಕೀ ಏಕತಾ । ಕಹತ ವಿಷಯ ಜನ ಬುದ್ಧೀ ॥

ತಿನಕೆೊ ಜ ಅಂತರ ಲಖೈ । ತೆ ಮತಿಮಂದ ಅಯಾನಿ ॥

ಟೀಕಾ॥ ಜೀವ ಬ್ರಹ್ಮರ ಏಕತೆಯು ಈ ಗ್ರಂಥದ ವಿಷಯ ವದು. ಯಾವದು ಪ್ರತಿಪಾದನ ಮಾಡುವದೋ, ಅದು ವಿಷಯ ಹೇಳಿದ್ದೇವೆ. ಈ ಗ್ರಂಥದಲ್ಲಿ ಜೀವಬ್ರಹ್ಮರ ಏಕತೆಯನ್ನು ಪ್ರತಿ ಪಾದಿಸಿದ್ದೇವೆ. ಈ ಕಾರಣದಿಂದ ಏಕತೆಯು, ಗ್ರಂಥದ ವಿಷಯ ವದು. ಆ ಏಕತೆಯನ್ನು ಸರ್ವವೇದಗಳ ವಚನಗಳನ್ನು ಪ್ರತಿಪಾದಿಸು ರುವದು. ಈ ಕಾರಣದಿಂದ ಜೀವಬ್ರಹ್ಮರ ಭೇದವನ್ನು ಹೇಳುವ ವನು ಶಠನಾಗಿರುವನಲ್ಲದೆ ವೇದವಿರೋಧಿಯಾಗಿರುವನು ॥

೧. ಯಾವ ಪುರುಷನು ಪರಪುರುಷನ ಮುಂದೆ, ಅಂದರೆ ಪುರುಷನು ಎದುರಿನಲ್ಲಿ ಇದ್ದಾಗ್ಗೆ ಪ್ರಿಯವಚನಗಳನ್ನು ನುಡಿಯುತ್ತಿ ಅವನು ಹೋದಮೇಲೆ ಅವನನ್ನು ಬಹಳ ಅಪ್ರಿಯವಚನಗಳಿಂದ ಸುತ್ತಿರುವನೋ ಅವನಿಗೆ ಶಠನೆಂದು ಹೇಳುತ್ತಾರೆ.

॥೩೬॥ ಅಥ ಪ್ರಯೋಜನ ವರ್ಣನ ॥೩೬—೩೭॥

॥ ದೋಹಾ ॥

ಪರಮಾನಂದ ಸ್ವರೂಪಕೀ । ಪ್ರಾಪ್ತಿ ಪ್ರಯೋಜನ ಜಾನ ।
ಜಗತ ಸಮೂಲ ಅನರ್ಥ ಪುನಿ । ತ್ಯೈ ತಾಕೀ ಅತಿಹಾನಿ ॥೩೬॥

ಟೀಕಾ॥ ಪ್ರಪಂಚಕ್ಕೆ ಕಾರಣವಾದದ್ದು ಅಜ್ಞಾನ ಮತ್ತು ತತ್ಕಾರ್ಯ ವಾದ ಜಗದ ಪ್ರಪಂಚವಿರುವದಿಲ್ಲ! ಅದು ಜನ್ಮಮರಣ ರೂಪದುಃಖ ಹೇತುವಾಗಿರುವದು. ಈ ಕಾರಣದಿಂದ ಅನರ್ಥವೆಂದು ಹೇಳಿದೆ. ಆ ಅನರ್ಥದ ನಿವೃತ್ತಿಗೆ,ಮತ್ತು ಪರಮಾನಂದ ಪ್ರಾಪ್ತಿಗೆ ಮೋಕ್ಷವೆ ಹೇಳಿದ್ದಾರೆ. ಇದಲ್ಲದೆ, ಈ ಗ್ರಂಥದ ಪರಮ ಪ್ರಯೋಜನ ವದು. ಎರಡನೇದು ಅವಾಂತರ ಪ್ರಯೋಜನದ ಜ್ಞಾನವಾಗಿರುವದು.

೧. ಯಾವ ವಿಷಯದಲ್ಲಿ ಪುರುಷನ ಅಭಿಲಾಷೆಯುಂಟಾಗುವದೋ ಅದು ಪರಮ ಪ್ರಯೋಜನವೆಂದು ಹೇಳಿದ್ದಾರೆ. ಆ ಅಭಿಲಾಷೆಯು ದುಃಖ ನಿವೃತ್ತಿ ವಿಷಯದಲ್ಲಿಯೂ, ಮತ್ತು ಸುಖದ ಪ್ರಾಪ್ತಿ ವಿಷಯದಲ್ಲಿ ಸರ್ವಪುರುಷರಿಗೂ ಉಂಟಾಗುತ್ತದೆ. ಅದೇ ಮೋಕ್ಷದ ಸ್ವರೂಪವಾ ವದು. ಈ ಕಾರಣದಿಂದ ಪರಮಪ್ರಯೋಜನವು ಮೋಕ್ಷವಾಗಿರು ಜ್ಞಾನವಲ್ಲ. ಯಾಕೆಂದರೆ, ಸುಖದ ಪ್ರಾಪ್ತಿಗೆ ಮತ್ತು ದುಃಖನಿವೃ



ಸಾಧನವಾದದ್ದು. ಜ್ಞಾನ ಮತ್ತು ಸುಖಪ್ರಾಪ್ತಿಯು ದುಃಖನಿವೃತ್ತಿ ರೂಪವಾದ ಜ್ಞಾನವಲ್ಲ. ಈ ಕಾರಣದಿಂದ ಜ್ಞಾನವು ಅವಾಂತರ ಪ್ರಯೋಜನವಾಗಿರುವದು.

೨. ಯಾವ ವಸ್ತುವಿನ ದ್ವಾರ, ಪರಮ ಪ್ರಯೋಜನದ ಪ್ರಾಪ್ತಿಯಾಗುವದೋ, ಅದು ಅವಾಂತರ ಪ್ರಯೋಜನವೆನಿಸಿಕೊಳ್ಳುವದು. ಇಂಥವಸ್ತುವು ಜ್ಞಾನವು, ಯಾಕಂದರೆ:-ಗ್ರಂಥದಿಂದ ಜ್ಞಾನವುಂಟಾಗುತ್ತದೆ, ಆಜ್ಞಾನ ದ್ವಾರವಾಗಿ ಮುಕ್ತಿರೂಪ ಪರಮ ಪ್ರಯೋಜನದ ಪ್ರಾಪ್ತಿಯಾಗುತ್ತದೆ. ಈ ಕಾರಣದಿಂದ ಜ್ಞಾನವು ಅವಾಂತರ ಪ್ರಯೋಜನವಾಗಿರುವದು ॥೩೬॥

॥೩೭॥ ಗ್ರಂಥ ಪ್ರಯೋಜನದಲ್ಲಿ ಶಂಕೆಯು ಮತ್ತು ಅದರ ಸಮಾಧಾನವು ॥ ೩೭—೪೨ ॥

॥ ಶಂಕಾ ಪೂರ್ವಕ ಉತ್ತರದ ಕವಿತೆ ॥

ಜೀವಕೋ ಸ್ವರೂಪ ಅತಿ ಆನಂದ ಕಹತ ವೇದ ।
ತಾಕೂ ಸುಖಪ್ರಾಪ್ತಿಕೊ ಅಸಂಭವ ಬಖಾನಿಯೆ ॥
ಆಗೆ ಜೊ ಅಪ್ರಾಪ್ತವಸ್ತು ತಾಕೀ ಪ್ರಾಪ್ತಿ ಸಂಭವತ ।
ನಿತ್ಯಪ್ರಾಪ್ತವಸ್ತುಕೀ ತೌ ಪ್ರಾಪ್ತಿಕಿಮು ಮಾನಿಯೆ ?
ಐಸೀ ಶಂಕಾ ಲೇಸ ಆನಿ ಕೀಜೈನ ವಿಶ್ವಾಸ ಹಾನಿ ।
ಗುರ್ರುಕೆ ಪ್ರಸಾದತೈ ಕುತರ್ಕಭಲೆ ಭಾನಿಯೆ ॥
ಕರಕೋ ಕಂಕನ ಖೋಯೊ ಐಸೊ ಭ್ರಮ ಭಯೊಜಿಹಿ ।
ಜ್ಞಾನತೈ ಮಿಲತ ಇಮ ಪ್ರಾಪ್ತ ಪ್ರಾಪ್ತಿ ಜಾನಿಯೆ ॥೩೭॥

॥೩೭॥ ಟೀಕಾ॥ ಈ ಪೂರ್ವದಲ್ಲಿ ಹೇಳಿದ್ದೇನೆಂದರೆ,-"ಅನರ್ಥನಿವೃತ್ತಿಯೂ, ಈ ಗ್ರಂಥದಪ್ರಯೋಜನವದೆ"ಎಂದು ಹೇಳಿದೆ. ಇದು ಸಂಭವಿಸುವದಿಲ್ಲ, ಯಾಕಂದರೆ ಸರ್ವವೇದಗಳು ಜೀವನ ಪರಮಾನಂದ ಸ್ವರೂಪವನ್ನು ವರ್ಣನಮಾಡುತ್ತವೆ. ಆ ಮಾತನ್ನು ನೀವೂ ಒಪ್ಪಿಕೊಳ್ಳುತ್ತೀರಿ. ಮತ್ತು ಅಪ್ರಾಪ್ತದ ಪ್ರಾಪ್ತಿಯು ಸಂಭವಿಸುತ್ತದೆ. ಸದಾಪ್ರಾಪ್ತವಸ್ತುವಿನ ಪ್ರಾಪ್ತಿಯು ಸಂಭವಿಸುವದಿಲ್ಲವಾದ ಕಾರಣ "ಸದಾ ಪರಮಾನಂದ ಸ್ವರೂಪನಾದ ಆತ್ಮನಿಗೆ ಪರಮಾನಂದ ಪ್ರಾಪ್ತಿಯಾಗುವದೆಂಬ ಹೇಳಿಕೆಯು ಸರ್ವಪ್ರಕಾರವಾಗಿಯೂ ಅಸಂಭವನಾಗಿ ತೋರುತ್ತದೆ. ಎಂದು

ಕೆಲವರು ಶಂಕೆಯನ್ನು ತೆಗೆದುಕೊಳ್ಳುತ್ತಾರೆ.

॥ ೨೯ ॥ ಈ ಶಂಕೆಯನ್ನು ಕೇಳಿ ಗ್ರಂಥ ಪ್ರಯೋಜನದಲ್ಲಿ ಅವಿಶ್ವಾ ವನ್ನು ಮಾಡಕೂಡದು. ಆತ್ಮವಿದ್ಯೆಯನ್ನು ಉಪದೇಶಿಸತಕ್ಕ ಗುರು ಕೃಪೆಯಿಂದ ಆ ಶಂಕಾರೂಪೀ ಕುತರ್ಕವನ್ನು, ದೃಷ್ಟಾಂತಗಳ ಶ್ರವಣ ನಿವೃತ್ತಮಾಡಿಕೊಳ್ಳಬೇಕು.

ಇದಕ್ಕೆ ದೃಷ್ಟಾಂತವನ್ನು ಹೇಳುತ್ತೇನೆ; ಒಬ್ಬಾನೊಬ್ಬ ಗೃಹಸ್ಥ ಕೈಯಲ್ಲಿ ಸುವರ್ಣ ಕಂಕಣವಿತ್ತು. ಅವನಿಗೆ ನನ್ನ ಕಂಕಣವು ಕ ಹೋಗಿದೆ, ಎಂಬ ಭ್ರಾಂತಿಯು ಉತ್ಪನ್ನವಾಯಿತು, ಆ ಕಾಲದಲ್ಲಿ ಅ ಯಾವನೋ ಒಬ್ಬನು ನಿನ್ನ ಕಂಕಣವು ನಿನ್ನ ಕೈಯಲ್ಲಿಯೇ ಇರುವದು. ಬೋಧಮಾಡಲು, ಆಗ ಅವನಿಗೆ ನನ್ನ ಕಂಕಣವು ನನ್ನಲ್ಲಿಯೆ ಇತ್ತು, ಆಗ ಅವನು ಹೀಗೆ ಅನ್ನುವನಲ್ಲಾ ? ನನ್ನ ಕಂಕಣವು ನನಗೆ ಸಿಕ್ಕಿತು. ಪ್ರಕಾರ ಮೊದಲು ಪ್ರಾಪ್ತವಾಗಿ ಇದ್ದದ್ದೇ ಪ್ರಾಪ್ತವಾಯಿ ಹೇಳುವನು.

ಇದರಂತೆಯೇ ಪರಮಾನಂದ ಸ್ವರೂಪನಾದ ಆತ್ಮನ ವಿಷಯದಲ್ಲಿ ದ್ಯಾಬಲದಿಂದ ಹೀಗೆ ಭ್ರಾಂತಿಯು ಉತ್ಪನ್ನವಾಗುವದಲ್ಲಾ, "ಆತ್ಮ ಪರಮಾನಂದ ಸ್ವರೂಪನಾಗಿರುವದಿಲ್ಲ. ಆದರೆ ಪರಮಾನಂದರೂಪ ಬ್ರ ನಾಗಿದ್ದಾನೆ. ಆ ಬ್ರಹ್ಮನ ಮತ್ತು ನನ್ನ ವಿಯೋಗವಾಗಿದೆಯಾದ್ದ ಉಪಾಸನೆಯನ್ನು ಮಾಡಿ ಆ ಬ್ರಹ್ಮನನ್ನು ನಾನು ಪ್ರಾಪ್ತಮಾಡಿಕೊ ವೆನು" ಈ ಪ್ರಕಾರದ ಭ್ರಾಂತಿಯು ಬಹುಜನ ಮೂರ್ಖಪ್ರಾಣಿಗಳಿಗು ಗಿದೆ. ಯದ್ಯಪಿ ಬಹುಜನರು ಪಂಡಿತರಾಗಿದ್ದೂ ಹೀಗೆಯೇ ಹೇಳು ಅವರು ಸಹಾ ಮೂರ್ಖರೇ ಆಗಿದ್ದಾರೆ. ಕಾರಣವೇನೆಂದರೆ,- ಜೀವ ಬ್ರಹ್ಮರ ವಿಯೋಗವನ್ನು ಅಂಗೀಕರಿಸಿರುವರೋ, ಅವರು ಮೂ ರೆಂದು ಹೇಳಿದ್ದಾರೆ, ಅಂಥವರಿಗೆ ಉತ್ತಮಸಂಸ್ಕಾರದಿಂದ ಯಾವನ ರೊಬ್ಬ ಬ್ರಹ್ಮವೇತ್ತನಾದ ಆಚಾರ್ಯನಿಂದ ಯಾವಾಗ ವೇದಾಂತ ಶ್ರ ಪ್ರಾಪ್ತಿಯು ಆಗುವದೋ ಆಗ ಕೇಳಿದ ಅರ್ಥವನ್ನು ವಿಚಾರಮಾಡಿಕೊ ಹೀಗೆ ನುಡಿಯುವನಲ್ಲಾ ! "ನನಗೆ ಆಚಾರ್ಯರ ಕೃಪೆಯಿಂದ ಪ ನಂದವು ಪ್ರಾಪ್ತವಾಯಿತು." ಎಂಬ ಹೇಳುವಿಕೆಯ ಅಭಿಪ್ರಾಯವೇನ "ಆತ್ಮನು ಈ ಪೂರ್ವದಲ್ಲಿಯೇ ಪರಮಾನಂದ ಸ್ವರೂಪನಾಗಿದ್ದನು. ಆ ನನ್ನ ಆತ್ಮನು ಪರಮಾನಂದ ಸ್ವರೂಪನಾಗಿದ್ದಾನೆಂಬ ಭಾನವು ಲ್ಲವಾದ ಕಾರಣದಿಂದ ಆ ಆನಂದವು ಅಪ್ರಾಪ್ತವಾಗಿತ್ತು. ಆಚಾರ್ಯ



ದಿಂದಲೂ ಗ್ರಂಥಶ್ರವಣದಿಂದಲೂ ಬುದ್ಧಿಯಲ್ಲಿ ಪರಮಾನಂದಭಾನವುಂಟಾಗುತ್ತದೆ. ಈ ಕಾರಣದಿಂದ ಪರಮಾನಂದಪ್ರಾಪ್ತಿ ಎಂದು ಹೇಳಿದ್ದಾರೆ ಈ ಪ್ರಕಾರವಾಗಿ ಪ್ರಾಪ್ತಿಯಪ್ರಾಪ್ತಿಯು ಆಗುತ್ತದೆ. ಈ ಕಾರಣದಿಂದ ಪರಮಾನಂದ ಪ್ರಾಪ್ತಿರೂಪ ಗ್ರಂಥದಪ್ರಯೋಜನವು ಸಿದ್ಧವಾಗುತ್ತದೆ.

॥೩೦॥ ಹೇಗೆ ಪ್ರಾಪ್ತದ ಪ್ರಾಪ್ತಿಯು ಗ್ರಂಥದ ಪ್ರಯೋಜನವಾಗಿರುವದೋ, ಹಾಗೆಯೇ ನಿತ್ಯನಿವೃತ್ತಿಯ ನಿವೃತ್ತಿಯಾದರೂ ಪ್ರಯೋಜನವಾಗಿ ಸಂಭವಿಸುವದು.

ದೃಷ್ಟಾಂತ;—ರಜ್ಜುವಿನಲ್ಲಿ ಸರ್ಪವು ನಿತ್ಯನಿವೃತ್ತವಾಗಿದೆ; ಆದರೆ ರಜ್ಜುವಿನ ಜ್ಞಾನದಿಂದ ಅದರ ನಿವೃತ್ತಿಯಾಗುವದು. ಇದರಂತೆ ಆತ್ಮನಲ್ಲಿ ಸಂಸಾರವು ನಿತ್ಯನಿವೃತ್ತವಾಗಿರುವದು, ಅದರ ನಿವೃತ್ತಿಯು ಆತ್ಮನಜ್ಞಾನದಿಂದ ಆಗುವದು. ಈ ಕಾರಣದಿಂದ ನಿತ್ಯನಿವೃತ್ತಿಯ ನಿವೃತ್ತಿಯೂ, ನಿತ್ಯಪ್ರಾಪ್ತಿಯ ಪ್ರಾಪ್ತಿಯೂ, ಗ್ರಂಥದ ಪ್ರಯೋಜನವಾಗಿರುವದು ॥೨೭॥

## ॥ ೩೧ ॥ ಶಂಕಾ ಒಂದೇ ಪದಾರ್ಥ (ಮೋಕ್ಷ) ವಿಷಯದಲ್ಲಿ ಭಾವ ಅಭಾವ ಈ ಎರಡೂ ಉಂಟಾಗುವದಿಲ್ಲ.

"ಕಾರಣಸಹಿತ ಜಗತ್ತಿನ ನಿವೃತ್ತಿಯೂ, ಮತ್ತು ಪರಮಾನಂದ ಪ್ರಾಪ್ತಿಯೂ, ಗ್ರಂಥದ ಪ್ರಯೋಜನವಾಗಿದೆ" ಎಂದು ಈ ಪೂರ್ವದಲ್ಲಿ ಹೇಳಿದ ವಚನವು ಸಂಭವಿಸುವದಿಲ್ಲ. ಏಕೆಂದರೆ, ನಿವೃತ್ತಿಯ ನಾಮವು ಧ್ವಂಸ ಅದೆ, ಧ್ವಂಸಮತ್ತು ನಾಶ ಈ ಎರಡೂ ಪರ್ಯಾಯ ಶಬ್ದಗಳಾಗಿವೆ, "ಆ ನಾಶವು ಅಭಾವರೂಪವಾಗಿರುವದು. ಈ ಕಾರಣದಿಂದ ಮೋಕ್ಷ ಭಾವ ರೂಪತೆಯೂ, ಮತ್ತು ಅಭಾವರೂಪತೆಯೂ, ಈ ಎರಡೂ ಪ್ರತೀತವಾಗುತ್ತವೆ.

೧. ಅನರ್ಥದ ನಿವೃತ್ತಿ ಎನ್ನುವುದರಿಂದ ಅಭಾವರೂಪತೆಯು ಪ್ರತೀತವಾಗುತ್ತದೆ.

೨. ಪರಮಾನಂದ ಪ್ರಾಪ್ತಿ ಎನ್ನುವದರಿಂದ ಭಾವರೂಪತೆಯು ಪ್ರತೀತವಾಗುತ್ತದೆ.

ಈ ಎರಡೂ ಒಂದು ಪದಾರ್ಥದಲ್ಲಿ ಇರಲಾರವು. ಏಕೆಂದರೆ ಭಾವರೂಪತಾ, ಮತ್ತು, ಅಭಾವರೂಪತಾ ಎಂಬೀ ಎರಡರಲ್ಲಿ ಪರಸ್ಪರ ವಿರೋಧವುಂಟು. ವಿರೋಧ ಧರ್ಮಗಳು ಒಂದೇ ಕಾಲದಲ್ಲಿ ಒಂದೇ ವಸ್ತುವಿನಲ್ಲಿ ಇರುವದಿಲ್ಲವಾದಕಾರಣ ಗ್ರಂಥದಪ್ರಯೋಜನವು ಸಂಭವಿಸುವದಿಲ್ಲ,ಎಂದು

ಯಾರಾದರೂ ಶಂಕಿಸಿದರೆ:—

೧. "ಪ್ರಜ್ಞಾನ ಮಾನಂದಂ ಬ್ರಹ್ಮ' ಅಂದರೆ, ಪ್ರಜ್ಞಾನ ಅ... ಜೀವನು, ಆನಂದರೂಪ ಬ್ರಹ್ಮನಿರುವನು. ಎಂಬ ಈ ವಾಕ್ಯ... ಮೊದಲು ಮಾಡಿಕೊಂಡು ನಾಲ್ಕೂ ವೇದಗಳ ವಾಕ್ಯಗಳು, ಜೀವನ... ಸ್ವಭಾವರೂಪಸಿದ್ಧ ಆನಂದ ರೂಪನೆಂದು ಹೇಳುತ್ತವೆ.

೨. ವಾದಿ, ಪ್ರತಿವಾದಿ ಈ ಉಭಯುತ್ರರಿಗೂ ಸಮ್ಮತವಾದ ಯ... ಅರ್ಥವಿರುವದೋ, ಅದು ದೃಷ್ಟಾಂತವೆನಿಸಿಕೊಳ್ಳುವದು. ಇದಕ್ಕೆ ಉ... ಹರಣವೆಂದೂ ಅನ್ನುವರು. ದೃಷ್ಟಾಂತದಿಂದ ಸಿದ್ಧವಾದಅರ್ಥಕ್ಕೆ ದಾಷ್ಟಾ... ತವೆಂದು ಅನ್ನುವರು. ಇವಕ್ಕೆ ಸಿದ್ಧಾಂತವೆಂತಲೂ ಅನ್ನುವರು.

೩. ವ್ಯಾವಹಾರಿಕ ಅಥವಾ ಪ್ರಾತಿಭಾಸಿಕ ಪ್ರಪಂಚವು ವರ್ತಮಾ... ಕಾಲದಲ್ಲಿ ಭಾವರೂಪವಾಗಿ ತೋರಿದರೂ ಪಾರಮಾರ್ಥಿಕ ಸತ್ತೆ... ಪ್ರಪಂಚವು ತ್ರಿಕಾಲದಲ್ಲಿ ನಿಷೇಧಮುಖ ಶೃತಿಯಿಂದಲೂ ಮತ್ತು ವಿದ್ವ... ಸರ ಅನುಭವದಿಂದಲೂ ಸಿದ್ಧವಾದಅತ್ಯಂತಾಭಾವವಾಗಿರುವದು. ಇ... ಪ್ರಪಂಚದ ನಿವೃತ್ತಿಯಾಗಿರುವದು. ಇದಕ್ಕೇ ವಿಷಯರೂಪ ನಿವೃ... ಯೆಂದೂ ಅನ್ನುತ್ತಾರೆ. ಈ ಪ್ರಕಾರ ಹೇಳಿದ ನಿವೃತ್ತಿಯುಳ್ಳ ಯ... ಪ್ರಪಂಚವಿರುವುದೋ,ಅದು ನಿತ್ಯನಿವೃತ್ತ ಅಂದರೆತುಚ್ಛವೆಂದು ಹೇಳಿ... ಆ ನಿತ್ಯನಿವೃತ್ತ ಪ್ರಪಂಚದ ನಿವೃತ್ತಿ ಅಂದರೆ ವಿದ್ಯಮಾನ ಪರಮಾರ್ಥ... ಸತ್ತೆಯಿಂದ ತ್ರೈಕಾಲಿಕ ಅಭಾವದ ಶ್ರುತಿ, ಯುಕ್ತಿ, ಮತ್ತು ತತ್ವಜ್ಞಾ... ದಿಂದ ನಿಶ್ಚಯಿಸಿದ ಯಾವ ವಿಷಯರೂಪ ನಿವೃತ್ತಿಯು ಇರುವದಲ್ಲ... ಅದೇ ನಿತ್ಯನಿವೃತ್ತಿಯ ನಿತ್ಯವೃತ್ತಿಯಾಗಿರುವದು.

೪. ಹೇಗೆ ಸ್ವಗೃಹದಲ್ಲಿ ಹುಗಿದು ಇಟ್ಟಿದ್ದ ನಿಧಿಯು ಅಂದರೆ ದ್ರವ್ಯ... ಅಜ್ಞಾನದಿಂದ ಅಪ್ರಾಪ್ತ ವಸ್ತುವಿನಂತೆ ಆಗಿರುವದು, ಅಂದರೆ ಆದ... ಸ್ಥಳವು ಸಿಕ್ಕದಿರಲು ಅದನ್ನು ಅಂಜನಾದಿ ಸಾಧನಗಳಿಂದ ವಿದಿತಮಾಡಿ... ಳ್ಳುವ ನಿಶ್ಚಯರೂಪ ಜ್ಞಾನವೇ ನಿತ್ಯಪ್ರಾಪ್ತಿಯ ಪ್ರಾಪ್ತಿಯಾಗಿರುವ... ಹಾಗೆಯೇ ಪರಮಾನಂದರೂಪನಾದ ಯಾವಬ್ರಹ್ಮನು ಅವನುಸರ್ವರಿಗೆ... ಪ್ರತ್ಯಕ್ಷತಾನೇ ಪ್ರಾಪ್ತನಾಗುವದರಿಂದನಿತ್ಯಪ್ರಾಪ್ತನಾಗಿರುವನು.ಹೀಗಿ... ಅಜ್ಞಾನದಿಂದ ಅಪ್ರಾಪ್ತವತ್ ಆಗಿದ್ದಾನೆ, ಈ ಜ್ಞಾನವನ್ನು ತತ್ವ... ನದಿಂದ ಹೋಗಲಾಡಿಸಿ "ನಾನೇ ಪರಮಾನಂದರೂಪ ಬ್ರಹ್ಮನಿರು... ಎಂಬನಿಶ್ಚಯರೂಪ ಜ್ಞಾನವೇ ನಿತ್ಯಪ್ರಾಪ್ತಿಯ ಪ್ರಾಪ್ತಿಯಾಗಿರು...



॥೩೨॥ ಆ ಶಂಕೆಯ ಉತ್ತರದ ದೋಹಾ.

ಅಧಿಷ್ಠಾನತೈ ಭಿನ್ನನಹಿ । ಜಗತ ನಿವೃತ್ತಿ ಬಖಾನ ॥
ಸರ್ಪ ನಿವೃತ್ತಿ ರಜ್ಜು ಜಿಮು । ಭಯೆ ರಜ್ಜುಕೊ ಜ್ಞಾನ॥೨೮॥

ಟೀಕಾ ॥ ಕಾರಣಸಹಿತ ಜಗತ್ತಿನ ನಿವೃತ್ತಿಯು ಅಧಿಷ್ಠಾನ ಬ್ರಹ್ಮ ಸ್ವರೂಪವಾಗಿದೆ. ಬ್ರಹ್ಮನಿಂದ ಪೃಥಕ್ಕಾಗಿ ಇಲ್ಲ. ಸರ್ಪದ ನಿವೃತ್ತಿಯು ಅಧಿಷ್ಠಾನ ರಜ್ಜುರೂಪವಾಗಿದೆ. ಹಾಗೆ ಸರ್ವಕಲ್ಪಿತ ವಸ್ತುಗಳ ನಿವೃತ್ತಿಯು ಅಧಿಷ್ಠಾನರೂಪವಾಗಿರುವುದಲ್ಲದೆ ಪೃಥಕ್ಕಾಗಿ ಇಲ್ಲ; ಇದು ಭಾಷ್ಯಕಾರರ ೧ ಸಿದ್ಧಾಂತವಾಗಿದೆ. ಆ ಕಾರಣಾ ಈ ಸ್ಥಳದಲ್ಲಿ ಅನರ್ಥದನಿವೃತ್ತಿ ಬ್ರಹ್ಮರೂಪ ಅದೆ. ಕಾರಣವೇನಂದರೆ,ಸರ್ವ ಅನರ್ಥರೂಪ ಯಾವ ಜಗತ್,ಅದರ ಅಧಿಷ್ಠಾನ ಬ್ರಹ್ಮವಾಗಿದೆಯೋ ಆ ಬ್ರಹ್ಮನು ಭಾವರೂಪನಾಗಿದ್ದಾನೆ. ಆದ್ದರಿಂದ ಅನರ್ಥದ ನಿವೃತ್ತಿಯು ಭಾವರೂಪವಾಗುವದರಸಲುವಾಗಿ ಗ್ರಂಥದ ಪ್ರಯೋಜನವು ಉಂಟಾಗುತ್ತದೆ; ಎಂಬದು ಸಿದ್ಧವಾಯಿತು ॥೨೮॥

(೧) ಕಲ್ಪಿತ ಅನರ್ಥದ ನಿವೃತ್ತಿವಿಷಯದಲ್ಲಿ ಎರಡು ಪಕ್ಷವದೆ.

೧ "ಜ್ಞಾತತ್ವ ಧರ್ಮದಿಂದ ಉಪಲಕ್ಷಿತವಾದ ಕಲ್ಪಿತ ಅಧಿಷ್ಟಾನರೂಪವು ನಿವೃತ್ತಿ ಅದೆ." ಎಂಬದು ಪ್ರಥಮಪಕ್ಷವು.

೨ " ಕಲ್ಪಿತದ ನಿವೃತ್ತಿ ಅಂದರೆ—ಅಭಾವ, ಅದು ಅಧಿಷ್ಠಾನ ಅಂದರೆ-ಅಧಿಕರಣದಿಂದ ಭಿನ್ನ ಅನಿರ್ವಚನೀಯವಾಗಿದೆ." ಎಂಬದು ದ್ವಿತೀಯಪಕ್ಷವು.

ಇವುಗಳಲ್ಲಿ ಪ್ರಥಮಪಕ್ಷವು ಭಾಷ್ಯಕಾರರದು ದ್ವಿತೀಯಪಕ್ಷವು ನ್ಯಾಯವಾಚಸ್ಪತ್ಯಕಾರರಾದ "ವಾಚಸ್ಪತಿಮಿಶ್ರ" ಎಂಬವರದದೆ.

ಹೇಗೆ ಪ್ರಥಮಪಕ್ಷ ವಿಷಯದಲ್ಲಿ "ಪುರುಷಸ್ಥಾಣುವದೆ" ಎಂಬ ವಾಕ್ಯದಲ್ಲಿ "ಪುರುಷನ ಅಭಾವರೂಪವು ಸ್ಥಾಣುವದೆ." ಎಂದು ಬಾಧ ಸಾಮಾನಾಧಿಕರಣ್ಯವನ್ನು ಮಾಡಿ ಅರ್ಥವಾಗಿರುವದು. ಹಾಗೆ "ಸರ್ವಂಖಲ್ವಿದಂಬ್ರಹ್ಮ" ಅಂದರೆ-ಈ ಸರ್ವಜಗತ್ತು ನಿಶ್ಚಯದಿಂದ ಬ್ರಹ್ಮವದೆ. ಈ ನಿಯಮ ಮುಖದಿಂದ ಸರ್ವಜಗತ್ತಿನ ಬ್ರಹ್ಮರೂಪತೆಯ ಪ್ರತಿಪಾದಕ ಶೃತಿ ವಾಕ್ಯವಾದರೂ, "ಈ ಪ್ರತೀಯಮಾನ ಸರ್ವಜಗತ್ತು ಅಭಾವರೂಪ ಬ್ರಹ್ಮವದೆ." ಹೀಗೆ "ಸರ್ವ" ಮತ್ತು "ಬ್ರಹ್ಮ" ಎಂಬ ಈ ಸಮಾನ ವಿಭಕ್ತಿಯ ಅಂದರೆ ಪ್ರಥಮವಿಭಕ್ತಿಯುಳ್ಳ ಎರಡು ಪದಗಳ ಬಾಧಸಾಮಾನಾಧಿ

ಕರಣ್ಯರೂಪ ಸಂಬಂಧಮಾಡಿ ಅರ್ಥ ವುಂಟಾಗಿದೆ. ಈ ಕಾರಣ
ಕಲ್ಪಿತ ಅನರ್ಥದ ನಿವೃತ್ತಿಯು ಅಂದರೆ-ಪರಮಾರ್ಥಸತ್ತೆಯಿಂದ
ತಾಭಾವವು. ಇವನ್ನು ಬ್ರಹ್ಮರೂಪವನ್ನಾಗಿ ಮಾಡಲು, ಮೋಕ್ಷವಿ
ದಲ್ಲಿ ಭಾವರೂಪತೆಯು ಮತ್ತು ಅಭಾವರೂಪದ ಅಭಾವದಿಂದ ದ್ವೈ
ಪತ್ತಿಯ ಶಂಕೆಯೂ ಇಲ್ಲ. ಎಂಬ

೨ ದ್ವಿತೀಯಪಕ್ಷ ವಿಷಯದಲ್ಲಿ "ಪುರುಷಸ್ಥಾಣುವದೆ" ಎಂಬ
ಕ್ಯದ "ಪುರುಷನ ಅಭಾವರೂಪವುಳ್ಳದ್ದು ಸ್ಥಾಣುವದೆ" ಎಂಬ ಅರ್ಥ
ಟಾಗಿರುವದು. "ಸರ್ವಂ ಖಲ್ವಿದಂ ಬ್ರಹ್ಮ" ಈಶ್ರುತಿ ಎಂಬ ವಾಕ್ಯ
ರೂ "ಈ ಪ್ರತೀಯಮಾನ ಸರ್ವಜಗತ್ತಿನ ಅಭಾವವುಳ್ಳದ್ದು ಬ್ರಹ್ಮ
ಗಿದೆ" ಎಂದು ಅರ್ಥ ವುಂಟಾಗಿರುವದು.

ಈ ಮೇಲೆ ಹೇಳಿದ ಅಭಾವರೂಪ ನಿವೃತ್ತಿಯಾದರೂ ಅನಿರ್ವ
ಯ ಅಂದರೆ ಮಿಥ್ಯಾ ಆದೆ ಯಾವ ವಸ್ತುವು ಅನಿರ್ವಚನೀಯವಾಗಿದೆ
ಅದು ನಿಜವಾಗಿ ಅಧಿಷ್ಠಾನದಿಂದ ಭಿನ್ನವಾಗಿರುವದಿಲ್ಲ. ಆದರೆ ಅಧಿ
ನರೂಪವಾಗಿರುವದಾದ ಕಾರಣ ದ್ವೈತಾಪತ್ತಿಯ ಶಂಕೆಯು ಇಲ್ಲ.

ಈ ಎರಡು ಪಕ್ಷಗಳಲ್ಲಿಯು ಪ್ರಥಮಪಕ್ಷದಲ್ಲಿ ಲಾಘವವಿರು
ದ್ವಿತೀಯ ಪಕ್ಷದಲ್ಲಿ ಗೌರವವಿರುವದು. ಈ ಕಾರಣದಿಂದ ಪ್ರಥಮ ಪ
ಶ್ರೇಷ್ಠವಾಗಿದೆ. ಎರಡೂ ರೀತಿಯಿಂದ ಮೋಕ್ಷವಿಷಯದಲ್ಲಿ ದ್ವೈತ
ತ್ತಿಯ ಶಂಕೆಯು ಇರುವದಿಲ್ಲ.

॥ ದೋಹಾ ॥

ಜೋಜನ ಪ್ರಥಮ ತರಂಗ ಯಹ। ಪಢೈತಾಹಿ ತತ್ಕಾಲ.॥
ಕರಹು ಮುಕ್ತ ಗುರುಮೂರ್ತಿಹ್ವೈ। ದಾದೂ ದೀನದಯಾ

ಅರ್ಥಃ—ಈ ಪ್ರಥಮ ತರಂಗವನ್ನು ಜಿಜ್ಞಾಸುಗಳಲ್ಲಿ ಯ
ನಿರಂತರ ಪ್ರಯತ್ನ ಪೂರ್ವಕವಾಗಿ ಪಠಣ ಮಾಡುವರೋ, ಅವರನ್ನು
ಕೃಪಾವಂತರಾದ ದಾದು ನಾಮಕ ಗುರುಗಳು, ಒಂದು ಕ್ಷಣಸಹ ವಿಳಂ
ಮಾಡದೆ ಮುಕ್ತರನ್ನಾಗಿ ಮಾಡುವರು.

ಇತಿ ಶ್ರೀ ವಿಚಾರಸಾಗರ ಗ್ರಂಥದಲ್ಲಿ ಸಾಧು ಶ್ರೀ ನಿಶ್ಚಲದಾಸಕೃ
ಅನುಬಂಧ ಚತುಷ್ಟಯ ಸಂಕ್ಷಿಪ್ತ ವರ್ಣನಕ್ಕೆ ಬ್ರಹ್ಮನಿಷ್ಠ
ಪಂಡಿತ ಶ್ರೀ ಪೀತಾಂಬರಜೀ ಕೃತ, ಟಿಪ್ಪಣಿ ಸಹಿತ
ಪ್ರಥಮ ತ್ತರಂಗ ಸಮಾಪ್ತ.



ಓಂ

ವಿಘ್ನೇಶಾಯನಮಃ.

# ಸಟೀಕಾ ತಾತ್ಪರ್ಯ ವಿವರಣ ಸಹಿತ

# ವಿಚಾರ ಸಾಗರ

## ದ್ವಿತೀಯಸ್ತರಂಗಃ

೧

॥ ಅಥ ಅನುಬಂಧ ವಿಶೇಷ ನಿರೂಪಣೆಯು ॥

ಟಿಪ್ಪಣೆ—೧. ಒಬ್ಬಾನೊಬ್ಬ ಪುರುಷನು ಗೃಹವನ್ನು ಕಟ್ಟಿಸುವದಕ್ಕೆ ಆರಂಭಿಸಿ
ದನು. ಅವನಿಗೆ ಆ ಕೆಲಸದಲ್ಲಿ ಒಬ್ಬ ಪ್ರತಿಪಕ್ಷಿಯು ಉತ್ಪನ್ನವಾಗಿ ಆತಂ
ಕವನ್ನುಂಟುಮಾಡಿದನು. ಆಗ ಮೊದಲನೆಯವನು ನ್ಯಾಯಾಧೀಶರ ಬಳಿ
ಯಲ್ಲಿ ಹೋಗಿ ತನ್ನ ವ್ಯಾಜ್ಯವನ್ನು ಅರುಹಿ, ಯೋಗ್ಯನಿರ್ಣಯ ಮಾಡಿಸಿ
ಕೊಂಡು ಪುನಃ ಗೃಹವನ್ನು ಕಟ್ಟಿಸಲಾರಂಭಿಸಿದನು. ಇದರಂತೆಯೇ ಗ್ರಂಥಕಾ
ರನು ಪ್ರಥಮ ತ್ತರಂಗದಲ್ಲಿ ನಾಲ್ಕು ಅನುಬಂಧಗಳ ಸಾಮಾನ್ಯ ನಿರೂಪಣೆಯ
ನ್ನು ಮಾಡಿದನು. ಅಂದರೆ ಈ ಗ್ರಂಥರೂಪ ಗೃಹವನ್ನು ರಚನೆ ಮಾಡುವದಕ್ಕಾ
ರಂಭಿಸಿದನು. ಅದಕ್ಕೆ ದ್ವಿತೀಯ ತ್ತರಂಗದ ಪೂರ್ವಾರ್ಧವೆಂಬ ಪ್ರತಿಪಕ್ಷಿಯು
ಆತಂಕಪಡಿಸಿದನು. ಆಗ ಗ್ರಂಥಕಾರರು ಶ್ರುತಿರೂಪ ರಾಜನ ಅನುಸಾರಿಯಾದ
ಯುಕ್ತಿರೂಪ ಮಂತ್ರಿಯ ಮುಂದೆ ತನ್ನ ವ್ಯಾಜ್ಯವನ್ನು ಇಟ್ಟನು. ಆ ಯುಕ್ತಿರೂಪ
ಮಂತ್ರಿಯು ಆ ವ್ಯಾಜ್ಯದ ಯೋಗ್ಯನಿರ್ಣಯವನ್ನು ಮಾಡಲು, ಗ್ರಂಥಕಾರನು
ಚತುರ್ಥಾನುಬಂಧ ನಿರೂಪಣವೆಂಬ ಗ್ರಂಥವನ್ನು ರಚಿಸಲು ಆರಂಭಮಾಡಿದನು
ಈ ರೀತಿಯಿಂದ ಈ ದ್ವಿತೀಯತರಂಗದಲ್ಲಿ ಚತುರ್ಥಾನುಬಂಧನಗಳನ್ನು ವಿಶೇಷ
ವಾಗಿ ನಿರೂಪಣಮಾಡಿದ್ದಾನೆ.

॥ ದೋಹಾ ॥

ಯಾಕೇಪ್ರಥಮ ತರಂಗಮ್ಯೆ। ಕಿಯ ಅನುಬಂಧ ವಿಚಾರ ॥
ಕಹು ವ ದ್ವಿತೀಯ ತರಂಗಮ್ಯೆ। ತಿನಹೀಕೋ ವಿಸ್ತಾರ ॥೧॥

ಅರ್ಥ—ಈ ಗ್ರಂಥದ ಪ್ರಥಮ ತರಂಗದಲ್ಲಿ ಅನುಬಂಧ ವಿ... ನ್ನು ಮಾಡಿದ್ದೇವೆ. ಅವುಗಳನ್ನೇ ಈ ದ್ವಿತೀಯ ತರಂಗದಲ್ಲಿ ಸ... ವಾಗಿ ನಿರೂಪಿಸುವೆವು. ॥೧॥

॥೩೩॥ ಕಾರಣ ಸಹಿತ ಜಗತ್ ನಿವೃತ್ತಿರೂಪ ಮೋ... ಪ್ರಥಮಾಂಶವನ್ನು ಯಾರೂ ಇಚ್ಛಿಸುವದಿಲ್ಲ. ॥೩...

ಟೀಕಾ॥ ಸಾಧನ ಚತುಷ್ಟಯ ಯುಕ್ತ ಅಧಿಕಾರಿಯು ಹೇಳ... ಆ ಸಾಧನಗಳಲ್ಲಿ ಮುಮುಕ್ಷುತ್ವವು ವರ್ಣಿಸಲ್ಪಟ್ಟದೆ. ಮೋಕ್ಷೇ... ನಾಮವೇ ಮುಮುಕ್ಷುತಾ ಎಂದು ಅದೆ. ಕಾರಣಸಹಿತ ಜಗತ್ನಿ... ಮತ್ತು ಬ್ರಹ್ಮಪ್ರಾಪ್ತಿಗೆ ಮೋಕ್ಷವೆನ್ನುತ್ತಾರೆ. ಅವರಲ್ಲಿ ಕಾರ... ಜಗತ್ನಿವೃತ್ತಿರೂಪ ಮೋಕ್ಷದ ಅಂಶವನ್ನು ಯಾರೂ ಇಚ್ಛಿಸುವ...

॥ ೩೪ ॥ ಪೂರ್ವ ಪಕ್ಷಿಯು ಪ್ರತಿಪಾದನ ಮಾಡುತ್ತಾ...

॥ ಅಧಿಕಾರಿಖಂಡನ (೧) ॥೩೪—೩೮॥

॥ ದೋ ೯ ಹಾ ॥

ಮೂಲಸಹಿತ ಜಗಧ್ವಂಸಕೀ । ಕೋಉ ಕರತ ನಹಿ ಆಸ॥
ಕಿಂತು ವಿವೇಕಿ ಚಹತ ಹೈ । ತ್ರಿವಿಧ ದುಖನಕೊ ನಾಸ॥

ಟೀಕಾ॥ ಮೂಲಸಹಿತ ಅಂದರೆ ಅವಿದ್ಯೆಸಹಿತ ಜಗತ್ ನಿವೃ...
೧
ಇಚ್ಛೆಯನ್ನು ಯಾವ ಪುರುಷನೂ ಮಾಡುವದಿಲ್ಲ.ಆದರೆ ತ್ರಿವಿಧ ದುಃ... ಶವನ್ನು ವಿವೇಕಿಪುರುಷನು ಇಚ್ಛಿಸುವನು. ಎಂಬ ಅಭಿಪ್ರಾಯವನ್ನು... ವೆನು. ದುಃಖಗಳು ಮೂರುಪ್ರಕಾರವಾಗಿರುವವು, ಅವು ಯಾವವು...

(೧) ಅಧ್ಯಾತ್ಮದುಃಖ, (೨) ಅಧಿಭೂತದುಃಖ, (೩) ಅಧಿದೈವದು...

(೧) ರೋಗ, ಕ್ಷುಧಾ ಮೊದಲಾದವುಗಳಿಂದ ಹುಟ್ಟದ ಯಾವ...
೨
ವಿರುವವೋ, ಅವು ಅಧ್ಯಾತ್ಮ ದುಃಖವೆಂದು ಹೇಳಿದ್ದಾರೆ.

(೨) ಚೋರ, ಸರ್ಪ, ವ್ಯಾಘ್ರಾದಿಗಳಿಂದ ಯಾವ ದುಃಖವು...
೩
ಗುವವೋ ಅವು ಅಧಿಭೂತ ದುಃಖವೆಂದು ಹೇಳಿದ್ದಾರೆ.

(೩) ಯಕ್ಷ, ರಾಕ್ಷಸ, ಪ್ರೇತ, ಗ್ರಹ, ಶೀತ, ವಾತ, ಉಷ್ಣ...



೪
ಲಾದವುಗಳಿಂದ ಹುಟ್ಟಿದ ದುಃಖಗಳಿಗೆ ಅಧಿದೈವ ದುಃಖವೆಂದು ಹೇಳಿದ್ದಾರೆ. ಈ ತ್ರಿವಿಧ ದುಃಖನಾಶನದ ಇಚ್ಛೆಯು ಸರ್ವಪುರುಷರಿಗೂ ಇರುತ್ತದೆ. ದುಃಖದಿಂದ ಭಿನ್ನವಾದ ಯಾವ ವಸ್ತುಗಳಿರುವವೋ, ಅವುಗಳ ನಾಶನನ್ನು ವಿವೇಕಿಪುರುಷನು ಇಚ್ಛಿಸುವದಿಲ್ಲ. ಈ ಕಾರಣದಿಂದ ಅಜ್ಞಾನಸಹಿತ ಸಕಲ ಜಗತ್ನಿವೃತ್ತಿಯ ಇಚ್ಛೆಯು ಯಾರಿಗೂ ವುಂಟಾಗುವದಿಲ್ಲ.

॥ ೩೫ ॥ ಸಿದ್ಧಾಂತಿಯು ಹೀಗೆ ಅನ್ನುತ್ತಿರುವನು. "ಯದ್ಯಪಿ, ಸರ್ವಪುರುಷರೂ ದುಃಖನಿವೃತ್ತಿಯ ಇಚ್ಛೆಯನ್ನುಮಾಡುತ್ತಾರೆ.ತಥಾಪಿ ಅಜ್ಞಾನಸಹಿತ ಸರ್ವಜಗತ್ ನಿವೃತ್ತಿಯ ಹೊರ್ತು ದುಃಖಗಳ ನಿವೃತ್ತಿಯು ಆಗುವದಿಲ್ಲ. ಈ ಕಾರಣದಿಂದ ದುಃಖನಿವೃತ್ತಿಯ ನಿಮಿತ್ತ ಅಜ್ಞಾನಸಹಿತ ಸರ್ವ ಜಗತ್ ನಿವೃತ್ತಿಯನ್ನು ಅಪೇಕ್ಷಿಸುತ್ತಾರೆ."

॥ ೩೬ ॥ ಇದು ಸಂಭವಿಸುವದಿಲ್ಲ. ಯಾಕಂದರೆ:-ಆಯುರ್ವೇದೋಕ್ತವಾದ ಔಷಧಿಯನ್ನು ಮಾಡಲು ರೋಗಜನ್ಯ ದುಃಖನಿವೃತ್ತವಾಗುತ್ತದೆ. ಭೋಜನದಿಂದ ಕ್ಷುಧಾಜನ್ಯ ದುಃಖದನಿವೃತ್ತಿಯಾಗುತ್ತದೆ. ಈರೀತಿಯಿಂದ ಉಪಾಯಗಳನ್ನು ಮಾಡಲು, ಸರ್ವದುಃಖಗಳ ನಿವೃತ್ತಿಯಾಗುತ್ತದೆ. ...ನ ಕಾರಣ ಅಜ್ಞಾನಸಹಿತ ಜಗತ್ನಿವೃತ್ತಿಯ ಹೊರ್ತು ದುಃಖನಿವೃತ್ತಿಯಾಗುತ್ತದೆ, ದುಃಖನಿವೃತ್ತಿಯ ನಿಮಿತ್ತವಾಗಿ ಅಜ್ಞಾನಸಹಿತ ಜಗತ್ನಿವೃತ್ತಿಯ ಅಪೇಕ್ಷೆಯುಂಟಾಗುವದಿಲ್ಲ. "ಕಾರಣಸಹಿತ ಜಗತ್ನಿವೃತ್ತಿ ಮತ್ತು ಬ್ರಹ್ಮಪ್ರಾಪ್ತಿ" ಇವುಗಳಿಗೆ ಮೋಕ್ಷವೆಂದು ಹೇಳಿದ್ದಾರೆ. ಇವುಗಳಲ್ಲಿ ಪ್ರಥಮಾಂಶವಾದ ಕಾರಣಸಹಿತ ಜಗತ್ನಿವೃತ್ತಿರೂಪ ಮೋಕ್ಷವು ಯಾರಿಗೂ ಸಂಭವಿಸುವದಿಲ್ಲ; ಎಂಬ ವಿಷಯವನ್ನು ಪ್ರಥಮದೋಹಾದಲ್ಲಿ ಹೇಳಿದೆನು.

ಟಿಪ್ಪಣಿ—೧. ಹೇಗೆ ಪುರುಷನು ಭಿಕ್ಷುಕರ ಭಯದಿಂದ ಅನ್ನವನ್ನು ತ್ಯಾಗಮಾಡಲು ಇಚ್ಛಿಸುವದಿಲ್ಲವೋ, ವಾಯುವಿನ ಉಷ್ಣತೆಯ ಭಯದ ಸಲುವಾಗಿ ವಸ್ತ್ರವನ್ನು ತ್ಯಾಗಮಾಡಲು ಇಚ್ಛಿಸುವದಿಲ್ಲವೋ, ಪಶುಪಕ್ಷಿಗಳ ಭಯದ ಸಲುವಾಗಿ ಕ್ಷೇತ್ರ ಅಂದರೆ ಭೂಮಿಯನ್ನು ತ್ಯಾಗಮಾಡಲು ಇಚ್ಛಿಸುವದಿಲ್ಲವೋ, ಇವುಗಳಂತೆ ವಿವೇಕಿ ಪುರುಷನು ಸಹ ತ್ರಿವಿಧ ದುಃಖಗಳ ಭಯದಿಂದ ಕಾರಣಸಹಿತ ಜಗತ್ತಿನ ನಾಶವನ್ನು ಇಚ್ಛಿಸುವದಿಲ್ಲ. ಆದರೆ ತ್ರಿವಿಧ ದುಃಖಗಳ ನಾಶವನ್ನೇ ಇಚ್ಛಿಸುವನು. ಇದು ಸಾಂಖ್ಯಮತದ ಅನುಸಾರವಾದ ಶಂಕೆಯು.

೨. ಆತ್ಮನನ್ನು ಆಶ್ರಯಮಾಡಿ ವರ್ತಿಸತಕ್ಕ ಯಾವ ಸ್ಥೂಲ, ಸೂಕ್ಷ್ಮ ಶ
ರವು ಇರುವದೋ, ಅದಕ್ಕೆ ಅಧ್ಯಾತ್ಮವೆಂದು ಹೇಳಿದ್ದಾರೆ. ಇದರಿಂದ
ವಾದ ದುಃಖಕ್ಕೆ ಅಧ್ಯಾತ್ಮ ದುಃಖವೆಂದು ಹೇಳುತ್ತಾರೆ. ಇ
ಅಧ್ಯಾತ್ಮ ತಾಪವೆಂದೂ ಅನ್ನುತ್ತಾರೆ.

೩. ಸ್ವಸಂಘಾತದಿಂದ ಭಿನ್ನವಾಗಿರುವದೂ ಮತ್ತು ಚಕ್ಷುರಿಂದ್ರಿಯದ
ಯವಾಗಿರುವದೂ ಅಧಿಭೂತವೆನಿಸುವದು. ಇದರಿಂದ ಜನ್ಯವಾದ ದು
ಕ್ಕೆ ಅಧಿಭೂತ ದುಃಖವೆಂದು ಅನ್ನುತ್ತಾರೆ.

೪. ಸ್ವಸಂಘಾತದಿಂದ ಭಿನ್ನವಾಗಿ ಚಕ್ಷುರಿಂದ್ರಿಯಕ್ಕೆ ಅವಿಷಯವಾಗಿರು
ಅಧಿದೈವವು. ಇದರ ಪ್ರೇರಣೆಯಿಂದ ಜನಿತವಾದ ದುಃಖವು ಅಧಿ
ದುಃಖವು.

೫. ಪೂರ್ವದಲ್ಲಿ ಅನುಭವಿಸಿದ ವಸ್ತುವಿನ ಇಚ್ಛೆಯು ಈಗ ಉಂಟಾಗಿರು
ಬ್ರಹ್ಮರೂಪವಾದ ಅಧಿಷ್ಠಾನದಜ್ಞಾನದಿಂದ ಕಾರಣಸಹಿತ ಜಗತ್ತಿನ
ತ್ತಿಯ ಅನುಭವವು ಈ ಪೂರ್ವದಲ್ಲಿ ಎಂದೂ ಉಂಟಾಗಿರುವದಿಲ್ಲ
ಕಾರಣದಿಂದ ಕಾರಣಸಹಿತ ಜಗತ್ತಿನ ನಿವೃತ್ತಿಯ ಇಚ್ಛೆಯು ಯಾ
ಉಂಟಾಗುವದಿಲ್ಲ. ಇದು ಪೂರ್ವಪಕ್ಷೀಯ ಶಂಕೆಗೆ ಉತ್ತೇಜನವಾ
ವದು. ಇದರ ಸಮಾಧಾನವನ್ನು ಇದೇತರಂಗದ ೬೩ನೇ ವಾಕ್ಯದ
೨ ನೇ ಟಿಪ್ಪಣಿಯಲ್ಲಿ ಸವಿಸ್ತರವಾಗಿ ಹೇಳುವೆವು.

---

|| ೩೭ || ಬ್ರಹ್ಮಪ್ರಾಪ್ತಿರೂಪ ಮೋಕ್ಷದ ದ್ವಿತೀಯ ಅಂಶ
ಇಚ್ಛೆಯಾದರೂ ಯಾರಿಗೂ ಉಂಟಾಗಿರುವದಿಲ್ಲ. ಈ
ವಾರ್ತೆಯನ್ನು ಪೂರ್ವಪಕ್ಷಿಯು ಹೇಳುತ್ತಾನೆ.

|| ದೋಹಾ ||

ಕಿಯ ಅನುಭವ ಜಾ ವಸ್ತುಕೊ । ತಾಕೀ ಇಚ್ಛಾಹೊ ಇ ||
ಬ್ರಹ್ಮನಹೀ ಅನುಭೂತ ಇಮು । ಚಹೈನ ತಾಕೂ ಕೊ ಇ ||

ಟೀ || ಮಾನವನಿಗೆ ಯಾವ ವಸ್ತುವಿನ ಅನುಭವ,ಅಂದರೆ ಜ್ಞಾನವಾಗಿ
ದೋ ಆ ವಸ್ತುವಿನ ಪ್ರಾಪ್ತಿಯ ಇಚ್ಛೆಯು ಉಂಟಾಗುತ್ತದೆ;ಯಾವ
ಜ್ಞಾನವು ಉಂಟಾಗಿರುವದಿಲ್ಲವೋ, ಅದರ ಪ್ರಾಪ್ತಿಯ ಇಚ್ಛೆಯುಉ
ಗುವದಿಲ್ಲ. ಹೇಗೆಂದರೆ-ಅನ್ಯದೇಶದಲ್ಲಿ ಅಜ್ಞಾತಪದಾರ್ಥಗಳು ಅ
ವಾಗಿರುವವು. ಅವುಗಳ ಪ್ರಾಪ್ತೀಚ್ಛೆಯು ಯಾರಿಗೂ ಉಂಟಾಗು
ಅಧಿಕಾರಿ ಪುರುಷನಿಗೆ ಬ್ರಹ್ಮಸ್ವರೂಪದ ಜ್ಞಾನವಂತೂ ಇಲ್ಲ. ಯ
ಪುರುಷನಿಗೆ ಬ್ರಹ್ಮಜ್ಞಾನವಿರುವದೋ, ಅವನು ಅಧಿಕಾರಿಯಲ್ಲ. ಅ



ಮುಕ್ತನಿರುವನು. ಅವನಿಗೆ ಬ್ರಹ್ಮಪ್ರಾಪ್ತಿಯ ಇಚ್ಛೆಯು ಸಂಭವಿಸುವ
ದಿಲ್ಲ. ಈ ಕಾರಣದಿಂದ ವೇದಾಂತ ಶ್ರವಣವಾಗಿರುವ ಪೂರ್ವದಲ್ಲಿ ಅಜ್ಞಾ
ತವಾಗಿದ್ದ ಬ್ರಹ್ಮಪ್ರಾಪ್ತಿಯ ಇಚ್ಛೆಯು ಸಂಭವಿಸುವದಿಲ್ಲ. ಈ ಪ್ರಕಾರ
ವಾಗಿ ಅಜ್ಞಾನಸಹಿತ ಜಗತ್‌ನಿವೃತ್ತಿ ಮತ್ತು ಬ್ರಹ್ಮಪ್ರಾಪ್ತಿರೂಪವಮೋಕ್ಷ
ಇವುಗಳ ಇಚ್ಛೆಯು ಯಾರಿಗೂ ಉಂಟಾಗುವದಿಲ್ಲ. ಈ ಕಾರಣದಿಂದ
ಮುಮುಕ್ಷು ಅಂದರೆ ಮೋಕ್ಷೇಚ್ಛೆಯುಳ್ಳವರು ಯಾರೂ ಇಲ್ಲ.

---

||೩೮|| ಮುಮುಕ್ಷುತ್ವವೇ ಉಂಟಾಗಲಿಲ್ಲ, ಎಂದ ಬಳಿಕೆ
•ವೈರಾಗ್ಯಾದಿಗಳಾದರೂ ಉಂಟಾಗುವದಿಲ್ಲ.
ಅನ್ಯರೀತಿಯಿಂದಲೂ ಅಧಿಕಾರಿಗಳ ಅಭಾವವನ್ನು
ಪೂರ್ವಪಕ್ಷಿಯು ಪ್ರತಿಪಾದನ ಮಾಡಿದ್ದಾನೆ.

|| ದೋಹಾ ||

ಚಹತ ವಿಷಯ ಸುಖ ಸಕಲಜನ । ನಹೀ ಮೋಛಕೊ ಪಂಥ||
ಅಧಿಕಾರೀ ಯಾತೈ ನಹಿ । ಪಢೈ ಸುನೈ ಜೋ ಗ್ರಂಥ ||೪||

ಟೀಕಾ || ಸರ್ವಪುರುಷರು ವಿಷಯಸುಖವನ್ನು ಅಪೇಕ್ಷಿಸುತ್ತಾರೆ.
ಯಾರು ಸಕಲ ವಿಷಯಗಳ ತ್ಯಾಗಮಾಡಿ ತಪದಲ್ಲಿಯೇ ಪ್ರವೃತ್ತರಾಗಿ
ರುವರೋ, ಅವರು ಪರಲೋಕದ ಉತ್ತಮ ಭೋಗಗಳಲ್ಲಿ ಇಚ್ಛೆಯು
ಳ್ಳವರಾಗಿ; ಅನೇಕ ವಿಧದ ಕ್ಲೇಶದಿಂದ ಸಹನಮಾಡುತ್ತಾರೆ. ಇದರ
ಮೇಲಿಂದ ಸರ್ವರು ಇಹಲೋಕದ ಅಥವಾ ಪರಲೋಕದ ವಿಷಯಸುಖ
ವನ್ನೇ ಅಪೇಕ್ಷಿಸುತ್ತಾರೆ, ಎಂದಂತಾಯಿತು. ಆ ವಿಷಯ ಸುಖವು,
ಮೋಕ್ಷವಲ್ಲಿ ಇಲ್ಲ. ಈ ಕಾರಣದ ದೆಸೆಯಿಂದ ಮೋಕ್ಷಪಂಥ ಅಂದರೆ
ಮೋಕ್ಷ ಸಾಧನವನ್ನು ಯಾವ ಪುರುಷನೂ ಇಚ್ಛಿಸುವದಿಲ್ಲ. ಈಪ್ರಕಾರ
ವಾಗಿ ಮೋಕ್ಷೇಚ್ಛಾರೂಪ ಮುಮುಕ್ಷುತ್ವವೇ ಉಂಟಾಗುವದಿಲ್ಲ. ಮತ್ತು
ಸಕಲ ಪುರುಷರಿಗೆ ವಿಷಯ ಸುಖಾಪೇಕ್ಷೆಯೇ ಇರುವದು. ಅದರಿಂದ
ವೈರಾಗ್ಯ, ಶಮ, ದಮ, ಉಪರತಿಗಳು ಯಾರಲ್ಲಿಯೂ ಸಂಭವಿಸುವದಿಲ್ಲ.
ಈ ಪ್ರಕಾರ ಸಾಧನಚತುಷ್ಟಯ ಸಹಿತವಿದ್ದ ಅಧಿಕಾರಿಗಳ ಅಭಾವವಿದ್ದ
ದರಿಂದ ಗ್ರಂಥಾರಂಭವು ನಿಷ್ಫಲವದೆ. || ೪ ||

---

ಅಥ ವಿಷಯ ಖಂಡನ (೨) ||೩೯—೪೪||

|| ಪೂರ್ವಪಕ್ಷ ||

||೩೯|| ಜೀವಬ್ರಹ್ಮರ ಐಕ್ಯತ್ವವು ಉಂಟಾಗುವದಿಲ್ಲ.||೩೯-೪೪||

||ದೋಹಾ||

ಜೀವ ಬ್ರಹ್ಮಕೀ ಏಕತಾ । ಕಹ್ಯೋ ವಿಷಯ ಸೊ ಕೂರ
ಕ್ಲೇಸರಹಿತ ವಿಭು ಬ್ರಹ್ಮ ಇಕ । ಜೀವಕ್ಲೇಸಕೊಮೂರ

ಟೀಕಾ॥ ಈ ಪೂರ್ವದಲ್ಲಿ ಹೇಳಿದ "ಜೀವಬ್ರಹ್ಮರ ಐಕ್ಯತ್ವವು ಗ್ರಂಥದ ವಿಷಯವಾಗಿದೆ." ಎಂಬ ಪ್ರತಿಪಾದನವು ಸಂಭವಿಸುವದಿಲ್ಲ. ಯಾಕಂದರೆ

೧ ೨ ೩

೧—(೧) ಬ್ರಹ್ಮನು-(೧)ಅವಿದ್ಯಾ, (೨) ಅಸ್ಮಿತಾ, (೩) ರಾಗ, (೪) ದ್ವೇಷ, (೫) ಅಭಿನಿವೇಶ, ಎಂಬ ಪಂಚಕ್ಲೇಶಗಳಿಂದ ರಹಿತನಾಗಿರು ಮತ್ತು (೨) ವಿಭು, ಅಂದರೆ ವ್ಯಾಪಕನಿರುವನು. (೩) ಅದ್ವಿತೀಯ ನು; ಈ ವಿಶೇಷಣದಿಂದ ಸಜಾತೀಯ ಮೊದಲಾದಭೇದರಹಿತನಾಗಿ ಕಾರಣವೇನೆಂದರೆ-ಬ್ರಹ್ಮನೊಡನೆ ಸಜಾತೀಯನಾದ ಬೇರೆಬ್ರಹ್ಮನು

೨. ಜೀವನು-(೧) ಸರ್ವಕ್ಲೇಶವುಳ್ಳವನು. (೨) ಪರಿಚ್ಛಿನ್ನನು, ಅನೇಕ ಪ್ರಕಾರವುಳ್ಳವನು, ಕಾರಣವೇನೆಂದರೆ, ಎಷ್ಟುಶರೀರಗಳಿರುವ ಅಷ್ಟು ಜೀವಗಳಿರುವವು. ಒಂದುವೇಳೆ ಸರ್ವಶರೀರಗಳಲ್ಲಿಯ ಜೀವಗ ಐಕ್ಯತ್ವವು ಇದ್ದರೆ ಒಂದು ಶರೀರಕ್ಕೆ ಉಂಟಾದ ಸುಖದುಃಖಗಳು ಶರೀರಗಳಲ್ಲಿಯೂ ದೃಗ್ಗೋಚರವಾಗ ಬೇಕಾಗುತ್ತಿತ್ತು.

॥೪೦॥ ವೇದಾಂತಿಗಳು ಹೇಳುವದೇನಂದರೆ,-"ಸುಖದುಃಖಾದಿ ಅಂತಃಕರಣದ ಧರ್ಮಗಳಾಗಿರುವವು. ಆ ಅಂತಃಕರಣಗಳು ಅನೇಕ ವಾಗಿರುವವು. ಇದರಿಂದ ಒಂದುಜೀವನಿಗೆ ಉಂಟಾದ ಸುಖದುಃಖ ಎರಡನೇ ಜೀವನಲ್ಲಿ ಕಂಡುಬರುವದಿಲ್ಲ. ಮತ್ತು ಸಾಕ್ಷೀ, ಸುಖದ ರಹಿತನಾಗಿದ್ದಾನೆ. ಜೀವನಿಗೂ ಬ್ರಹ್ಮನಿಗೂ ಏಕತ್ವವು ಉಂಟಾಗುತ್ತ ಎಂಬ ಪ್ರತಿಪಾದನವೂ ಸಂಭವಿಸುವದಿಲ್ಲ. ಯಾಕಂದರೆ—

॥೪೧॥ ಸಾಕ್ಷಿಗಳ ಅನೇಕತ್ವವು. ॥ ೪೧—೪೪ ॥

ಯಾವ ಕರ್ತೃವೂ ಭೋಕ್ತೃವೂ ಆದ ಜೀವನಿರುವನಲ್ಲಾ, ಅವ ಭಿನ್ನವಾದ ಸಾಕ್ಷಿಯು ಪ್ರತ್ಯೇಕಪ್ರತ್ಯೇಕ ಸಮಾನವು. ಒಂದು ಸಮುದಾ



ಆ ಸಾಕ್ಷಿಯ ಅಂಗೀಕಾರವನ್ನು ಮಾಡಿದರೂ ಸಹ, ಆ ಸಾಕ್ಷಿಯು ಒಂದೇ ರೀತಿಯಾಗಿರುವದಿಲ್ಲ;ಅನೇಕ ವಿಧವಾಗಿರುವನೆಂದು ಒಪ್ಪಿಕೊಳ್ಳಬೇಕಾಗಿದೆ. ಯಾಕಂದರೆ- "ಅಂತಃಕರಣ, ಮತ್ತು ಅಂತಃಕರಣದ ಸುಖದುಃಖಾದಿ ಧರ್ಮ ಇವು ಇಂದ್ರಿಯಗಳ, ಅಥವಾ ಅಂತಃಕರಣದ ವಿಷಯಗಳಲ್ಲ; ಆದರೆ ಸಾಕ್ಷಿಯ ವಿಷಯಗಳಾಗಿರುವವು. ಕಾರಣ ವೇನೆಂದರೆ, ಇಂದ್ರಿಯಗಳೇ ಪಂಚೀ ಕೃತ ಭೂತಗಳನ್ನು ವಿಷಯಗಳನ್ನಾಗಿ ಮಾಡಿರುವವು. ಇವುಗಳಲ್ಲಿ ಇಷ್ಟು ಭೇದಗಳು ಇರುವವು.

೩

೧. ನೇತ್ರೇಂದ್ರಿಯವಂತೂ ರೂಪಯುಕ್ತವಾದ ಪದಾರ್ಥವನ್ನೂ, ಆರೂಪದ ಆಶ್ರಯವನ್ನೂ ವಿಷಯವನ್ನಾಗಿಮಾಡಿದೆ. ಹ್ಯಾಗಂದರೆ ನೀಲ, ಪಳದಿ ಮೊದಲಾದ ಘಟಗಳರೂಪ, ಮತ್ತು ಆ ರೂಪಕ್ಕೆ ಆಶ್ರಯವಾದ ಘಟ ಇವುಗಳನ್ನೇ ನೇತ್ರೇಂದ್ರಿಯವು ವಿಷಯವನ್ನಾಗಿ ಮಾಡಿದೆ.

೭

೨. ತ್ವಗಿಂದ್ರಿಯವು ಸ್ಪರ್ಶವನ್ನೂ, ಮತ್ತು ಅದರ ಆಶ್ರಯವನ್ನೂ ವಿಷಯವಾಗಿ ಮಾಡಿದೆ.

೮

೩-೪-೫ ರಸನಾ, ಘ್ರಾಣ, ಶ್ರವಣ ಎಂಬ ಈ ಮೂರು ಇಂದ್ರಿಯಗಳು ರಸ, ಗಂಧ, ಶಬ್ದ, ಎಂಬವುಗಳನ್ನು ವಿಷಯಗಳನ್ನಾಗಿ ಮಾಡಿಕೊಂಡಿವೆ. ಆದರೆಅವುಗಳ ಆಶ್ರಯವಸ್ತುಗಳನ್ನು ವಿಷಯಗಳನ್ನಾಗಿ ಮಾಡಿಕೊಂಡಿರುವದಿಲ್ಲ; ಆದರಿಂದ ಈ ಮೂರು ಇಂದ್ರಿಯಗಳಿಂದ ಅಂತಃಕರಣದ ಜ್ಞಾನವು ಸಂಭವಿಸುವದಿಲ್ಲ.

ನೇತ್ರೇಂದ್ರಿಯದಿಂದಅಥವಾ ತ್ವಚೆ ಯಿಂದ ಅಂತಃಕರಣ ಜ್ಞಾನವು ಸಂಭವಿಸುವದಿಲ್ಲ. ಕಾರಣವೇನಂದರೆ ಪಂಚೀಕೃತ ಭೂತಗಳು, ಅಥವ ಪಂಚೀಕೃತ ಭೂತಗಳ ಕಾರ್ಯಗಳಾದ ರೂಪವಂತ ಅಥವಾ ಸ್ಪರ್ಶವಂತವಾದ ಯಾವ ಪದಾರ್ಥಗಳಿರುವವೋ,ಅವೇ ನೇತ್ರ, ಮತ್ತು ತ್ವಚೆ ಇವುಗಳ ವಿಷಯವಾಗಿದೆ. ಅಂತಃಕರಣವಂತೂ ಅಪಂಚೀಕೃತ ಭೂತದ ಕಾರ್ಯವಾಗಿದೆ. ಈ ಕಾರಣದಿಂದ ನೇತ್ರ ಮತ್ತು ತ್ವಚೆಯ ವಿಷಯವಲ್ಲ. ಈ ಕಾರಣದಿಂದ ಅಪಂಚೀಕೃತ ಭೂತಗಳ ಕಾರ್ಯವಾದ ನೇತ್ರಾದೀಂದ್ರಿಯಗಳಾದರೂ ನೇತ್ರದ ವಿಷಯವಾಗಿರುವದಿಲ್ಲ. ಮತ್ತು ಬಾಹ್ಯವಸ್ತು ಇಂದ್ರಿಯಗಳಿಗೆ ವಿಷಯವಾಗುತ್ತವೆ; ಮತ್ತು ಅಂತಃಕರಣವು ಇಂದ್ರಿಯಗಳ ಅಪೇಕ್ಷೆ

ಯಿಂದ ಅಂತರವಾಗಿದೆ. ಈ ಕಾರಣದಿಂದ ಸಹಾ ಇಂದ್ರಿಯಗ
ಯುವಲ್ಲ.

||೪೨|| ಅಂತಃಕರಣವೃತ್ತಿಗಾದರೂ ಅಂತಃಕರಣ ವಿಷಯನ
ಕೆಂದರೆ-ಅಂತಃಕರಣವಂತೂ ವೃತ್ತಿಯಆಶ್ರಯುವಾಗಿದೆ. ಈಕಾರ
ಅಂತಃಕರಣವು ತನ್ನ ವೃತ್ತಿಯ ವಿಷಯುವಾಗುವದಿಲ್ಲ. ಅಗ್ನಿಯು
ಕತೆಯು ಆಶ್ರಯುವಾಗಿದೆ, ಆದರೆ ಅಗ್ನಿಯು ದಾಹಕತೆಗೆ ವಿಷ
ವದಿಲ್ಲ. ಅಗ್ನಿಯಿಂದ ಭಿನ್ನವಾದ ಕಾಷ್ಟ ಮೊದಲಾದ ವಸ್ತು
ವವಲ್ಲಾ ! ಅವು ದಾಹಕತೆಯ ವಿಷಯುಗಳಾಗಿರುವವು ಎಂದ
ಅಂತಃಕರಣದಿಂದ ಭಿನ್ನವಾದ ಯಾವ ವಸ್ತುಗಳಿರುವವೋ, ಅವು
ಕರಣ ಜನ್ಯವೃತ್ತಿಯ ವಿಷಯುವಾಗಿವೆ. ಆದರೆ ಅಂತಃಕರಣ
ವಲ್ಲ; ಇದರಂತೆ:-

||೪೩|| ಅಂತಃಕರಣದ ಧರ್ಮವಾದರೂ, ಅಂತಃಕರಣದ ವೃ
ವಿಷಯುವಲ್ಲ. ಯಾಕೆಂದರೆ- ಅಂತಃಕರಣವನ್ನು ವಿಷಯುವನ್ನಾಗಿ ಮಾ
ಯಾವ ಅಂತಃಕರಣದ ವೃತ್ತಿಯು ಉಂಟಾಗುವದೋ,ಆದು ಅಂತಃ
ಧರ್ಮಗಳಾದ ಸುಖಾದಿಗಳನ್ನು ಸಹಾ ವಿಷಯುಗಳನ್ನಾಗಿ ಮಾಡ
ಆ ಅಂತಃಕರಣವನ್ನು ವಿಷಯುವನ್ನಾಗಿ ಮಾಡುವ ವೃತ್ತಿಯು, ಅಂ
ರಣದ ಸನ್ಮುಖಕ್ಕೆ ಆಗಲಾರದು. ಈ ಕಾರಣದಿಂದ ಅಂತಃಕರಣ
ವಾದರೂ ಅಂತಃಕರಣವೃತ್ತಿಯ ವಿಷಯುವಲ್ಲ.

ಈ ನಿಯಮ ವಿರುವದು:—ಯಾವ ವಸ್ತುವು ವೃತ್ತಿಯ
ದಿಂದ ಕಿಂಚಿತ್ ದೂರವಾಗಿರುವದೋ, ಅದೇ ವೃತ್ತಿಯ ವಿಷಯ
ವದು.ಯಾವ ವಸ್ತುವು ವೃತ್ತಿಯ ಆಶ್ರಯುವನ್ನು ಮಾಡಿಕೊಂಡು
ಸಮಿಾಪವಾಗಿರುವದೋ, ಅದು ವೃತ್ತಿಯ ವಿಷಯುವಾಗುವುದಿಲ್ಲ.
ನೇತ್ರದ ವೃತ್ತಿಯ ಆಶ್ರಯುವಾದ ನೇತ್ರವು, ಇದಕ್ಕೆ ಸಮಿಾಪ
ಅಂಜನವು ನೇತ್ರವೃತ್ತಿಯ ವಿಷಯುವಾಗುವುದಿಲ್ಲವೋ; ಹಾಗೆ ಅಂ
ವೃತ್ತಿಯ ಆಶ್ರಯುದಲ್ಲಿದ್ದ ಯಾವ ಅಂತಃಕರಣವು, ಇದಕ್ಕೆ
ಸಮಿಾಪವಾಗಿಪ್ಪ ಸುಖಾದಿ ಧರ್ಮಗಳು, ಇವು ಅಂತಃಕರಣದ
ವಿಯುಯುವಾಗುವುದಿಲ್ಲ. ಈ ರೀತಿಯಿಂದಧರ್ಮಸಹಿತ ಅಂತಃ





ಇಂದ್ರಿಯುಗಳಿಂದ ಅಥವಾ ವೃತ್ತಿಯಿಂದ ಭಾನವು ಉಂಟಾಗುವದಿಲ್ಲ
ಆದರೆ ಸಾಕ್ಷಿವಿಷಯುಕವಾಗಿವೆ.

||೪೪|| ಆ ಸಾಕ್ಷಿಯೊಂದನ್ನು ಅಂಗೀಕರಿಸಲು, ಹ್ಯಾಗೆ ಒಂದು ಅಂ
ತಃಕರಣದ ಸುಖದುಃಖಭಾನವು ಸಾಕ್ಷಿಯಿಂದ ಆಗುವದೋ,ಹಾಗೆ ಸರ್ವರ
ಸುಖದುಃಖಗಳ ಭಾನವು ಉಂಟಾಗಲಿಕ್ಕೇಬೇಕು. ಇದರಿಂದ ಸಾಕ್ಷಿಗಳು
ಅನೇಕವಾಗಿರುವವು.ಯಾವಾಗ ಅನೇಕ ಸಾಕ್ಷಿಗಳನ್ನು ಅಂಗೀಕರಿಸುವೆವೋ
ಆಗ ದೋಷವಿಲ್ಲ ; ಯಾಕೆಂದರೆ ಸಾಕ್ಷಿಯ ಉಪಾಧಿಯು ಅಂತಃಕರಣವು.
ಈ ಸಾಕ್ಷಿಯಮೇಲಿಂದ ತನ್ನ ಉಪಾಧಿ ಧರ್ಮದ ಜಾಗ್ರತೆಯು ಉಂಟಾ
ಗುವದು. ಅಂತೆಯೇ ಸರ್ವರ ಸುಖದುಃಖಗಳ ಜಾಗ್ರತೆಯು ಉಂಟಾ
ಗುವದಿಲ್ಲ.

ಈ ರೀತಿಯಾಗಿ ಅನೇಕ ಸಾಕ್ಷಿಗಳಿಗೂ, ಅದ್ವಿತೀಯ ಬ್ರಹ್ಮನಿಗೂ,
ಐಕ್ಯತ್ವವುಂಟಾಗುವದಿಲ್ಲ. ||೫||

ಟಿಪ್ಪಣೆ—೧ ಯಾವದು ವಿಚಾರದಿಂದ ಸಿದ್ಧಮಾಡಲು ಬರುವದಿಲ್ಲವೋ ಅದು ಅವಿ
ದ್ಯೆ ಎನ್ನಿಸಿಕೊಳ್ಳುವದು. ಈ ಅವಿದ್ಯೆಯು ೧ ಮೂಲಾ, ೨ ತೂಲಾ, ಎಂದು
ಎರಡು ಭೇದವಾಗಿದೆ.
. ಯಾವದು ಶುದ್ಧಚೈತನ್ಯವನ್ನು ಆವರಿಸಿರುವದೋ ಅದು " ಮೂಲಾ " ಅವಿ
ದ್ಯೆಯು
ಯಾವದು ಘಟ ಮೊದಲಾದ ಉಪಾಧಿಯುಳ್ಳ ಚೈತನ್ಯವನ್ನು ಆವರಿಸಿರುವದೊ
ಅದು,, ತೂಲಾ" ಅವಿದ್ಯೆಯು.
ಇವುಗಳಲ್ಲಿ ಮೂಲಾ ಅವಿದ್ಯೆಯು ೧ ಕಾರ್ಯ,೨ ಕಾರಣಭೇದ ಎಂದು ದ್ವಿವಿಧವಾ
ಗಿರುವದು.(೧) ಅನ್ಯವಿಷಯದಲ್ಲಿ ಅನ್ಯಬುದ್ಧಿರೂಪ ಪ್ರತೀತಿಯು ಇರುವದಲ್ಲಾ
ಅದು ಕಾರ್ಯರೂಪ ಅವಿದ್ಯೆಯು [೨] ಆವರಣ ವಿಕ್ಷೇಪಶಕ್ತಿಯುಳ್ಳ ಅನಾದಿ
ಭಾವರೂಪವೆಂಬದು ಇರುವದಲ್ಲಾ. ಅದು ಕಾರಣರೂಪ ಅವಿದ್ಯೆಯು.

ಇದರಲ್ಲಿ ಕಾರ್ಯರೂಪ ಅವಿದ್ಯೆಯು ಸಹ.

. ಅನಾತ್ಮಾ ದೇಹಾದಿಗಳಲ್ಲಿ ಆತ್ಮಬುದ್ಧಿ.
. ಅನಿತ್ಯ ಆಕಾಶಾದಿಗಳಲ್ಲಿ ನಿತ್ಯಬುದ್ಧಿ.
ದುಃಖರೂಪ ಧನಾದಿಗಳಲ್ಲಿ ಸುಖಬುದ್ಧಿ.
. ಅಶುಚಿಯುಳ್ಳ ಸ್ತ್ರೀ ಪುತ್ರರ ಮುಖಚುಂಬನಾದಿಗಳಲ್ಲಿ ಶುಚಿಬುದ್ಧಿ.

ಎಂದು ನಾಲ್ಕುವಿಧ ಭ್ರಾಂತಿಗಳಿರುವವು. ಇಲ್ಲಿ ಪಂಚಕ್ಲೇಶಗಳ ಪ್ರಸಂಗ
ದಲ್ಲಿ ಹೇಳಿದ ನಾಲ್ಕು ಪ್ರಕಾರದ ಕಾರ್ಯಗಳು ಅವಿದ್ಯೆಗಾದರೂ ಗ್ರಹಣವಾಗಿವೆ.
(೨) ಬುದ್ಧಿ ಮತ್ತು ಆತ್ಮನಐಕ್ಯತೆಯ ಪ್ರತೀತಿಗೆ,ಅಸ್ಮಿತಾ, ಎನ್ನುವರು,ಇದಕ್ಕೇ
ಸಾಮಾನ್ಯ ಅಹಂಕಾರ, ವೆಂದೂ ಅನ್ನುವರು.
[೩] ಅನುಕೂಲತೆಯ ಜ್ಞಾನದಿಂದ ಹುಟ್ಟಿದ ಬುದ್ಧಿವೃತ್ತಿಗೆ 'ಪ್ರೀತಿ, ಎನ್ನುವರು.
(೪)ಪ್ರತಿಕೂಲವಸ್ತುವಿನಜ್ಞಾನದಿಂದ ಹುಟ್ಟಿದ ಬುದ್ಧಿವೃತ್ತಿಗೆ'ದ್ವೇಷ,ವೆನ್ನುವರು.

೫ ಮರಣದ ಭಯದಿಂದ ಶರೀರದ ರಕ್ಷಣೆಯ ವಿಷಯದಲ್ಲಿ ಹುಟ್ಟಿದ
ಹಕ್ಕೆ 'ಅಭಿನಿವೇಶ,ವನ್ನು ತ್ರಾರೆ.

೬ ಇಲ್ಲಿ'ರೂಪ,ಎಂಬ ಶಬ್ದದಿಂದರೂಪತ್ವಜಾತಿಯು, ಮತ್ತುರೂಪತ್ವದ
ಅಂದರೆ ಅಂತರ್ಗತವಾದ ಶುಕ್ಲತ್ವ, ನೀಲತ್ವ ಮೊದಲಾದ ಸಪ್ತ
ಳನ್ನೂ ಗ್ರಹಣ ಮಾಡಬೇಕು.

೭ ಇಲ್ಲಿ ಸ್ಪರ್ಶ,ಎಂಬ ಶಬ್ದದಿಂದ ಸ್ಪರ್ಶದ ಆಶ್ರಯವಾದ ಸ್ಪರ್ಶತ್ವ
ಮತ್ತು ಸ್ಪರ್ಶತ್ವದ ವ್ಯಾಪ್ಯ, ಕಠಿಣತ್ವ,ಕೋಮಲತ್ವ,ಮೊದಲಾದ
ಜಾತಿಗಳನ್ನೂ ಗ್ರಹಣ ಮಾಡಬೇಕು.

೮ ಇಲ್ಲಿ ರಸ, ಗಂಧ,ಮತ್ತು ಶಬ್ದ ಎಂಬ ಈ ಮೂರರ ಗುಣಗಳು ಕ್ರಮ
ರಸತ್ವ, ಗಂಧತ್ವ,ಮತ್ತು ಶಬ್ದತ್ವ ಈ ಮೂರು ಜಾತಿಗಳ ಮತ್ತು ರಸ
ವ್ಯಾಪ್ಯ,ಮಧುರತ್ವ ಮೊದಲಾದ ಆರುಜಾತಿಗಳಮತ್ತು ಗಂಧತ್ವದ
ಸುಗಂಧ,ಮತ್ತು ದುರ್ಗಂಧ ಎಂಬಎರಡುಜಾತಿಗಳ,ಮತ್ತು ಶಬ್ದತ್ವ
ವ್ಯಾಪಕ ಅಂದರೆ ಅಧಿಕದೇಶವರ್ತಿ ಜಾತಿಯ ವ್ಯಾಪ್ಯ ಅಂದರೆ ನ್ಯೂನ
ವರ್ತಿ ಇವುಗಳ ತಾರತಮ್ಯ ಅಧಿಕತ್ವ,ಮತ್ತು ಮಂದತ್ವ, ರೂಪ
ಎರಡು ಜಾತಿಗಳನ್ನೂ ಗ್ರಹಣಮಾಡಬೇಕು. ಹಾಗೆಯೇ ಯಥಾಯೋ
ತಿಳಿದುಕೊಳ್ಳಬೇಕು

೯ ಯದ್ಯಪಿ ಗೃಹದಮಧ್ಯದಲ್ಲಿ ಹೇಗೆ ಅಂಧಕಾರದಆಶ್ರಯವಿರುವದೋ,
ವಿಷಯವೂ ಇರುವದೊ,ಚೇತನವು ಅಜ್ಞಾನದ ಆಶ್ರಯವಾಗಿರುವದೊ,
ವಿಷಯವೂ ಆಗಿರುವದೊ,ಹಾಗೆಅಂತಃಕರಣವೃತ್ತಿಯ ಆಶ್ರಯವಾಗಿದ್ದ
ಅದಾದರೂ ವೃತ್ತಿಯ ವಿಷಯವಾದೀತು ! ತಥಾಪಿ ಇದರಲ್ಲಿ ಈ ರಹಸ್ಯ
ವದು;ಗೃಹದ ಮಧ್ಯ ಮತ್ತು ಅಂಧಕಾರಾದಿವತ್ ಯಾವಾಗ ಆಶ್ರಯ
ಆಶ್ರಿತ ಇವುಗಳ ಭೇದವಿರುವದೋ, ಆಗ ಒಂದೇವಸ್ತುವು ಆಶ್ರಯ ಮ
ವಿಷಯವಾಗುವವು. ಮತ್ತು ಯಾವಾಗ ಅಗ್ನಿ ಮತ್ತು ದಾಹಕತ್ವ
ಆಶ್ರಯ ಮತ್ತು ಆಶ್ರಿತ ಇವುಗಳಲ್ಲಿ ಭೇದವಿಲ್ಲವೋ, ಆಗ ಆಶ್ರಯ ಮ
ವಿಷಯಗಳು ಒಂದೇಯಾಗಲಿಲ್ಲ. ಯಾವಕಾರಣದಿಂದಅಂತಃಕರಣದಿಂದ
ಯ ಭೇದವಿಲ್ಲವೋ, ಆಕಾರಣದಿಂದ ಅಂತಃಕರಣವು ವೃತ್ತಿಯ ಉಪಾದಾ
ರೂಪ ಆಶ್ರಯವಾಗಿರುವದು, ಆದರೆ ವಿಷಯವಾಗಲಿಲ್ಲ.

(೧೦) ನೇತ್ರೇಂದ್ರಿಯವು ತನ್ನಿಂದ ದೂರದಲ್ಲಿ ಇದ್ದ ಅನ್ಯಸರ್ವರೂಪ
ವಸ್ತುಗಳನ್ನು ಪ್ರಕಾಶಿಸುತ್ತದೆ. ಆದರೆ ಅಂಧತ್ವ, ಮಂದತ್ವ ಪಟುತ್ವರೂಪ
ಸಹಿತ ತನ್ನನ್ನು ಪ್ರಕಾಶಿಸುವದಿಲ್ಲ,ಆದರೆ ನೇತ್ರದೇಶದಲ್ಲಿ ಇದ್ದ ಅಂತಃಕ
ಮೇಲೆ ಹೇಳಿದ ಧರ್ಮಸಹಿತವಾಗಿ ನೇತ್ರವನ್ನು ಪ್ರಕಾಶಿಸುತ್ತದೆ,

ಹೀಗೆಯೇ ಅಂತಃಕರಣವಾದರೂ ತನ್ನಿಂದ ಭಿನ್ನವಾಗಿದ್ದ ಸರ್ವ ಜಡವಸ್ತು



ಳನ್ನು ಪ್ರಕಾಶಿಸುತ್ತದೆ. ಆದರೆ ಸುಖವೇ ಮೊದಲಾದ ಧರ್ಮಸಹಿತವಾಗಿದ್ದ ತನ್ನನ್ನು ತಾನೇ ಪ್ರಕಾಶಿಸುವದಿಲ್ಲ. ಆದರೆ ಸಾಭಾಸ ಅಂತಃಕರಣದಲ್ಲಿ ಆರೂಢವಾಗಿದ್ದ ಯಾವ ಸಾಕ್ಷಿಯು ಅದುಧರ್ಮಸಹಿತವಾಗಿದ್ದಅಂತಃಕರಣವನ್ನು ಪ್ರಕಾಶಿಸುತ್ತದೆ. ಈ ಕಾರಣದಿಂದ ಸಾಭಾಸ ಅಂತಃಕರಣವು ಅಪೇಕ್ಷಿಕ ಸ್ವಯಂಪ್ರಕಾಶವಾಗಿರುವದು. ನಿರಪೇಕ್ಷ ಸ್ವಯಂಪ್ರಕಾಶವಲ್ಲ. ಸಾಕ್ಷಿಯು ತನ್ನ ಪ್ರಕಾಶ ವಿಷಯದಲ್ಲಿ ಅನ್ಯಪ್ರಕಾಶಗಳ ಅಪೇಕ್ಷೆಯನ್ನು ಮಾಡುವದಿಲ್ಲವಲ್ಲದೆ ಸರ್ವ ವಸ್ತುಗಳ ಪ್ರಕಾಶವಾಗಿದೆ. ಇದರಿಂದ ನಿರಪೇಕ್ಷ ಸ್ವಯಂಪ್ರಕಾಶವಾಗಿಯೂ ಇರುವದು.

ಈ ಮೂಲ ಗ್ರಂಥೋಕ್ತ ಶಂಕೆಯ ಸಮಾಧಾನವನ್ನು ಇದೇ ಅಭಿಪ್ರಾಯದಿಂದ ಮುಂದೆ ವಿಷಯ ಮಂಡನದ ಪ್ರಸಂಗದಲ್ಲಿ ಹೇಳಲ್ಪಡುವದು. ಈ ಕಾರಣದಿಂದ ಗ್ರಂಥದ ವಿಷಯದಲ್ಲಿ ಭ್ರಮೆಯನ್ನು ಮಾಡಿಕೊಳ್ಳುವದು ಯೋಗ್ಯವಲ್ಲ.

---

## ಅಥ ಪ್ರಯೋಜನ ಖಂಡನ (೩) ‖೪೫—೫೯‖

## ‖ ಪೂರ್ವ ಪಕ್ಷ ‖

‖೪೫‖ ಮಿಥ್ಯಾಬಂಧದ ಸಾಮಗ್ರಿಗಳು ಇರುವದಿಲ್ಲವಾದಕಾರಣ ಅದರ ನಿವೃತ್ತಿಯು ಉಂಟಾಗಲಿಲ್ಲ.

‖ದೋಹಾ‖ಬಂಧನಿವೃತ್ತಿ ಜ್ಞಾನತೈ। ಬನ್ಯೆನ ಬಿನ ಅಧ್ಯಾಸ ‖
ಸಾಮಗ್ರೀ ತಾಕೀ ನಹೀ। ತಜೋ ಜ್ಞಾನಕೀ ಆಸ ‖ ೬ ‖

ಟೀಕಾ ‖ ಅಹಂಕಾರ ಮೊದಲಾದ ಅನಾತ್ಮ ವಸ್ತುಗಳಿಗೆ ಬಂಧವೆನ್ನಬೇಕು. ಆ ಬಂಧಗಳು ಅಧ್ಯಾಸರೂಪಗಳಾಗಿದ್ದರೆ, ಜ್ಞಾನದಿಂದ ನಿವೃತ್ತವಾಗುವವು.ಆದರೆ ಅಧ್ಯಾಸರೂಪಗಳಾಗಿಲ್ಲದಿದ್ದರೆ ಜ್ಞಾನದಿಂದನಿವೃತ್ತವಾಗುವದಿಲ್ಲ. ಯಾಕೆಂದರೆ ಜ್ಞಾನದಸ್ವಭಾವವು ಈಪ್ರಕಾರವಿರುವದು. ಯಾವ ವಸ್ತುವಿನ ಜ್ಞಾನವಾಗುವದೋ, ಆ ಜ್ಞಾನವು ಆವಸ್ತುವಿನಲ್ಲಿದ್ದ ಅಧ್ಯಾಸ ಮತ್ತು ಅಜ್ಞಾನವನ್ನು ನಿವೃತ್ತಿಮಾಡುವದು. ರಜ್ಜುವಿನ ಜ್ಞಾನವು ರಜ್ಜುವಿನಲ್ಲಿದ್ದ ಸರ್ಪದ ಅಧ್ಯಾಸವನ್ನೂ ಮತ್ತು ರಜ್ಜುವಿನ ಅಜ್ಞಾನವನ್ನೂ ಹೇಗೆ ದೂರಮಾಡುವದೋ ಹಾಗೆ ಎಂದು ತಿಳಿಯಬೇಕು.

ಅಧ್ಯಾಸವೆಂದರೆ, ಭ್ರಾಂತಿಜ್ಞಾನ[೧]ದ ವಿಷಯವಾದ ಮಿಥ್ಯಾವಸ್ತು.

ಯಾವದರಲ್ಲಿ ಮಿಥ್ಯಾವಸ್ತುವಿಲ್ಲದೆ, ಸತ್ಯವಸ್ತುವಿರುವದೋ, ಅದು ಜ್ಞಾನದಿಂದ ನಿವೃತ್ತವಾಗುವದಿಲ್ಲ.

ಇವರಂತೆ ಆತ್ಮನಲ್ಲಿ ಅಹಂಕಾರ ಮೊದಲಾದ ಬಂಧವ ಅಧ್ಯಾ ಮಿಥ್ಯಾವಸ್ತುಗಳಿದ್ದರೆ ಜ್ಞಾನದಿಂದ ನಿವೃತ್ತವಾಗುವವು. ಅವ್ಯ ನಲ್ಲಿ ಮಿಥ್ಯಾಬಂಧದ ಸಾಮಗ್ರಿಯಾಗಿಲ್ಲ. ಮತ್ತು ಬಂಧವು ಪ್ರತೀ ಗುತ್ತದೆ. ಈ ಕಾರಣದಿಂದ ಬಂಧವು ಸತ್ಯವಾಗಿದೆ. ಆ ಬಂಧ ದಿಂದ ನಿವೃತ್ತಿಯ ಆಶೆಯು ನಿಷ್ಫಲವದೆ. ‖ ೬ ‖

ಟಿಪ್ಪಣಿ—೧. ಸ್ವ ಅಭಾವದ ಅಧಿಕರಣದಲ್ಲಿ ಅವಭಾಸ ನಾಮ ವಿಷಯ ಜ್ಞಾನ ಇವುಗಳಿಗೆ ಅಧ್ಯಾಸವೆನ್ನುವರು. ಹೇಗೆ ಕಲ್ಪಿತಸರ್ಪ ಹಾರಿಕ ಮತ್ತು ಪಾರಮಾರ್ಥಿಕ ಅಭಾವದ ಅಧಿಕರಣ ಅಂದರೆ ರಜ್ಜುವಿನ ವಿಷಯದಲ್ಲಿ ಪ್ರಾತಿಭಾಸಿಕ ಸರ್ಪದಅವಭಾಸ ಅಂದ ಮತ್ತು ಅದರ ಜ್ಞಾನವು, ಇದೇ ಅಧ್ಯಾಸವೆನಿಸುವದು,

ಅಥವಾ ಅಧಿಷ್ಠಾನದಿಂದ ವಿಷಯಸತ್ತೆಯುಳ್ಳ ಯಾವಅವಭಾ ವದೊ, ಅದು ಅಧ್ಯಾಸವೆಂದೆನ್ನಿಸಿಕೊಳ್ಳುವದು. ಹೇಗೆ ವ್ಯಾ ಸತ್ತೆಯುಳ್ಳ ರಜ್ಜುರೂಪ ಅಧಿಷ್ಟಾನದಿಂದ ವಿಷಯ ಅಂದರೆ ಪ್ರಾತಿ ರೂಪ ವಿಪರೀತ ಸತ್ತೆಯುಳ್ಳ ಯಾವ ಅವಭಾಸ ಅಂದರೆ ಸರ್ಪ ಆದರ ಜ್ಞಾನವು ಇದು ಅಧ್ಯಾಸವಾಗಿದೆ.

ಈ ಅಧ್ಯಾಸವು ೧, ಅರ್ಥಾಧ್ಯಾಸ ಮತ್ತು ೨, ಜ್ಞಾನಾಧ್ಯಾಸ ಎರಡು ವಿಧವಾಗಿರುವದು.

೧, ಭ್ರಾಂತಿಜ್ಞಾನದ ವಿಷಯವು ಯಾವ ಸರ್ಪಾದಿ ಮಿಥ್ಯಾವಸ್ತುಗಳೋ ಅವು ಅರ್ಥಾಧ್ಯಾಸವಾಗಿವೆ.

೨, ಭ್ರಾಂತಿಜ್ಞಾನ, ಯಾವ ಮಿಥ್ಯಾ ವಸ್ತುವಿನ ಮಿಥ್ಯಾಜ್ಞಾನವೋ ಅದು ಜ್ಞಾನಾಧ್ಯಾವಾಗಿರುವದು.

ಇವುಗಳಲ್ಲಿ ಜ್ಞಾನಾಧ್ಯಾಸವು ಪರೋಕ್ಷ, ಅಪರೋಕ್ಷ ಎಂಬ ಎರಡು ವಿಧವಾಗಿರುವದು.

ಅರ್ಥಾಧ್ಯಾಸವು ೧ ಕೇವಲ ಸಂಬಂಧಾಧ್ಯಾಸ, ೨ ಸಂಬಂಧಸಹಿತ ಧಿಯ ಅಧ್ಯಾಸ, ೩ ಕೇವಲ ಧರ್ಮಾಧ್ಯಾಸ ೪ ಧರ್ಮಸಹಿತ ಧರ್ಮಿ ಸ, ೫ ಅನ್ಯೋನ್ಯಾಧ್ಯಾಸ, ೬ ಅನ್ಯತರಾಧ್ಯಾಸ ಎಂದು ಆರುವಿಧ ಅಥವಾ ಸಂಸರ್ಗಾಧ್ಯಾಸ, ಮತ್ತು ಸ್ವರೂಪಾಧ್ಯಾಸ ಎಂಬ ಎರ ವಾಗಿ ಅರ್ಥಾಧ್ಯಾಸವಿರುವದು.

ಇಲ್ಲಿ ಈ ನಿಷ್ಕರ್ಷರೂಪವಿರುವದು—ಕೇವಲ ಸಂಬಂಧಾಧ್ಯಾಸವು ಗರ್ಾಧ್ಯಾಸವಾಗಿದೆ. ಮತ್ತು ಸಂಬಂಧಸಹಿತ ಸಂಬಂಧೀಅಧ್ಯಾಸವು ಗರ್ಸಹಿತ ಸ್ವರೂಪಾಧ್ಯಾಸವಾಗಿದೆ. ಇದೇ ಅನ್ಯೋನ್ಯಾಧ್ಯಾಸವು ಸಂಸರ್ಗ, ಮತ್ತು ಸ್ವರೂಪ ಇವೆರಡರಲ್ಲಿ ಮಿಶ್ರಭಾವವಿರುವದು.



ಇವೆರಡರಲ್ಲಿ ಒಂದರ ಅಧ್ಯಾಸವು ಇನ್ನೊಂದರಅನ್ಯತರಾಧ್ಯಾಸವೆಂದು ಹೇಳಲ್ಪಟ್ಟದೆ.ಅದು ಮಿಥ್ಯಾವಸ್ತುವಿನ ಸ್ವರೂಪಾಧ್ಯಾಸರೂಪ ಎಂದು ಹೇಳಲ್ಪಟ್ಟದೆ. ಇಲ್ಲಿ ಅನ್ಯತರಾಧ್ಯಾಸದ ಅಥವಾ ಕೇವಲ ಸಂಬಂಧಾಧ್ಯಾಸದ ಪೃಥಕ್ ಭಾವವುಳ್ಳ ಕಥನವಿರುವದಲ್ಲ;ಅದು ಆತ್ಮಾ,ಮತ್ತು ಅನಾತ್ಮಾ ಅಧ್ಯಾಸದ ಭೇದಜ್ಞಾನದ ಅರ್ಥವದೆ. ಆದರೆ ಸರ್ವ ಅರ್ಥಾಧ್ಯಾಸವು ಅನ್ಯೋನ್ಯಾಧ್ಯಾಸವು ಕೇವಲ ಧರ್ಮದ್ದೂ ಆಗಿದೆ, ಮತ್ತು ಧರ್ಮಸಹಿತ ಧರ್ಮಿಯದೂ ಆಗಿದೆ. ಈ ಕಾರಣದಿಂದ ಮೇಲೆ ಹೇಳಿದ ಭೇದದಿಂದ ಅನ್ಯೋನ್ಯಾಧ್ಯಾಸವು ಎರಡು ವಿಧವಾಗಿರುವದು ಇದರ ಸಂಕ್ಷೇಪ ಉದಾಹರಣೆಯನ್ನು ವಿಚಾರ ಚಂದ್ರೋದಯದ ಆರನೇ ಕಲೆಯಲ್ಲಿ ಉಲ್ಲೇಖಿಸಿದೆ, ಮತ್ತು ಶ್ರೀವೃತ್ತಿಪ್ರಭಾಕರದಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟದೆ.

## ‖೪೬‖ ಅಥ ಅಧ್ಯಾಸ ಸಮಗ್ರಿ ನಿರೂಪಣೆಯು.

‖ ದೋಹಾ ‖

ಸತ್ಯವಸ್ತುಕೆ ಜ್ಞಾನತೈ । ಸಂಸಕಾರ ಇಕ ಜಾನ ‖
ತ್ರಿವಿಧದೋಷ ಅಜ್ಞಾನ ಪುನಿ । ಸಾಮಗ್ರೀಪಹಿಚಾನ ‖೭‖

ಟೀಕಾ‖ ೧ ಸತ್ಯವಸ್ತುವಿನ ಜ್ಞಾನಜನ್ಯ ಸಂಸ್ಕಾರ, ಮತ್ತು ಮೂರುಪ್ರಕಾರದ ದೋಷಗಳು. ೨ ಪ್ರಮೇಯದದೋಷ, ೩ ಪ್ರಮಾತಾದೋಷ ೪ ಪ್ರಮಾಣದೋಷ, ೫ ಅಧಿಷ್ಠಾನದ ವಿಶೇಷರೂಪ ಅಜ್ಞಾನ ಇಷ್ಟು ಅಧ್ಯಾಸದ ಸಾಮಗ್ರಿಗಳಿರುವವು. ಇವುಗಳ ಹೊರ್ತು ಅಧ್ಯಾಸ ವುಂಟಾಗಲಾರದು.

೧. ಸಿಂಪಿನಲ್ಲಿ ರೌಪ್ಯದ ಅಥವಾ ರಜ್ಜುವಿನಲ್ಲಿ ಸರ್ಪದ ಅಧ್ಯಾಸ ವುಂಟಾಗುತ್ತದೆ. ಅದು ಸತ್ಯರೌಪ್ಯವನ್ನಾಗಲಿ,ಸತ್ಯಸರ್ಪವನ್ನಾಗಲಿ ಯಾವನು ನೋಡಿರುವನೋ ಅವನಿಗೇ ಆಗುತ್ತದೆ. ಮತ್ತು ಯಾವನು ಸತ್ಯರೌಪ್ಯವನ್ನು ಅಥವಾ ಸತ್ಯಸರ್ಪವನ್ನು ನೋಡಿರುವದಿಲ್ಲವೋ, ಅಂಥವನಿಗೆ ಆಗುವದಿದಿಲ್ಲ. ಈ ಕಾರಣದಿಂದ ಸತ್ಯವಸ್ತು ಜ್ಞಾನಜನ್ಯ ಸಂಸ್ಕಾರವು ಅಧ್ಯಾಸಕ್ಕೆ ಹೇತುವಾಗಿದೆ.

೨. ಸಿಂಪಿನಲ್ಲಿ ಸರ್ಪದ, ರಜ್ಜುವಿನಲ್ಲಿ ರೌಪ್ಯದ ಅಧ್ಯಾಸವುಂಟಾಗುವದಿಲ್ಲ. ಈ ಕಾರಣದಿಂದ ಪ್ರಮೇಯ ವಿಷಯದಲ್ಲಿ ಸಾದೃಶ್ಯದೋಷವು ಅಧ್ಯಾಸಕ್ಕೆ ಹೇತುವಾಗಿರುವದು.

೩. ಈರೀತಿಯಿಂದ ಪ್ರಮಾತಾ ವಿಷಯದಲ್ಲಿ ಲೋಭ ಭಯ ಸ
ಲ್ಗೊಂಡು,

೪. ನೇತ್ರಾದಿಗಳ ಪ್ರಮಾಣ ವಿಷಯದಲ್ಲಿ ಪಿತ್ತ, ಮಲವೇ ಮೊದ
ಯಾವ ದೋಷಗಳಿರುವವೋ ಅವು ಅಧ್ಯಾಸಕ್ಕೆ ಹೇತುವಾಗಿರುವವು.

೫. ಸಿಂಪಿನ "ಇದಂ" ರೂಪದಿಂದ ಸಾಮಾನ್ಯ ಜ್ಞಾನವಿದ್ದ
ದು ಸಿಂಪು ಇರುವದು" ಎಂಬ ವಿಶೇಷಜ್ಞಾನವು ಉಂಟಾಗದಿದ್ದ
ಅಧ್ಯಾಸ ಉಂಟಾಗುವದು. "ಸಿಂಪು ಇರುವದು" ಎಂಬ ವಿಶೇಷರೂಪ
ಜ್ಞಾನವುಂಟಾದರೂ ಅಧ್ಯಾಸ ಉಂಟಾಗುವದಿಲ್ಲ. ಮತ್ತು ಸಾಮ
ರೂಪದಿಂದ ಜ್ಞಾನವುಂಟಾಗುವದಿಲ್ಲ. ಆಗ ಸಹ ಅಧ್ಯಾಸ ಉಂಟಾ
ದಿಲ್ಲ. ಈ ಕಾರಣದಿಂದ ಅಧಿಷ್ಠಾನದ ವಿಶೇಷರೂಪದಿಂದ ಅಜ್ಞಾನವು
ತ್ತು ಸಾಮಾನ್ಯರೂಪದಿಂದ ಜ್ಞಾನವೂ ಅಧ್ಯಾಸದ ಹೇತುವಾಗಿರುವ

ಇಷ್ಟು ಅಧ್ಯಾಸದ ಸಾಮಗ್ರಿಗಳು ಇರುವವು, ಅವುಗಳಲ್ಲಿ ಯಾ
ದರೂ ಒಂದು ಉಂಟಾಗದಿದ್ದರೆ, ಆಗ ಸಹ ಅಧ್ಯಾಸವುಂಟಾಗುವದಿಲ್ಲ.
ಕುಲಾಲ, (ಕುಂಬಾರ) ದಂಡೆ, (ಕೋಲು) ಚಕ್ರ, (ತಿಗರಿ) ಮೃತ್ತಿ
(ಮಣ್ಣು) ಮೊದಲಾದ ಘಟದ ಸಾಮಗ್ರಿಗಳಲ್ಲಿ ಯಾವದಾದರೂ
ಉಂಟಾಗದಿದ್ದರೆ ಘಟವು ಉಂಟಾಗಲಾರದು. ಹಾಗೆ ಅಧ್ಯಾಸವಾ
ಎಲ್ಲ ಸಾಮಗ್ರಿಗಳಿದ್ದರೇ ಉಂಟಾಗುವದು.

॥೪೭॥ ೧ ಬಂಧದ ಅಧ್ಯಾಸದಲ್ಲಿ ಸತ್ಯವಸ್ತುವಿನ ಜ್ಞಾನ
ದಿಂದ ಜನ್ಯವಾದ ಸಂಸ್ಕಾರದ ಅಸಿದ್ಧಿಯು.

ಬಂಧದ ಅಧ್ಯಾಸವಿಷಯದಲ್ಲಿ ಕಾರಣವೇನೂ ಕಂಡು ಬರುವ
ಏಕೆಂದರೆ ಬಂಧವು ಎಲ್ಲಿಯಾದರೂ ಸತ್ಯವಾಗಿದ್ದರೆ ಅದರ ಜ್ಞಾನ
ಸಂಸ್ಕಾರದಿಂದ ಆತ್ಮನಲ್ಲಿ ಮಿಥ್ಯಾಬಂಧವು ಪ್ರತೀತವಾಗಲಿಕ್ಕೆಬೇ
ಸಿದ್ಧಾಂತದಲ್ಲಿ ಆತ್ಮನಿಂದ ಭಿನ್ನವಾದ ಯಾವ ಸತ್ಯವಸ್ತುವೂ ಇಲ್ಲ.
ಯೇ, ಸತ್ಯಬಂಧನ ಜ್ಞಾನಜನ್ಯ ಸಂಸ್ಕಾರದ ಅಭಾವವು ಉಂಟಾಗು
ಕ್ಕೋಸುಗ ಆತ್ಮನಲ್ಲಿ ಬಂಧದ ಅಧ್ಯಾಸವು ಸಂಭವಿಸುವದಿಲ್ಲ.

॥೪೮॥ ೨ ಬಂಧದ ಅಧ್ಯಾಸದಲ್ಲಿ ಪ್ರಮೇಯದ
ದೋಷದ ಅಸಿದ್ಧಿಯು.

ಹಾಗೆಯೇ ಆತ್ಮನ ಮತ್ತು ಬಂಧದ ಸದೃಶತ್ವವೂ ಇಲ್ಲ.
ಪ್ರತಿಯಾಗಿ ತಮಪ್ರಕಾಶವತ್ ವಿಪರೀತ ಸ್ವಭಾವವಿರುವದು.



೧. ಆತ್ಮನು ಪ್ರತ್ಯಕ್ ಇರುವನು. ಬಂಧವು ಪರಾಕ್ ಆಗಿದೆ. ಪ್ರತ್ಯಕ್ ಅಂದರೆ ಅಂತರದ, ಮತ್ತು ಪರಾಕ್ ಅಂದರೆ-ಬಾಹ್ಯದ ಎಂಬ ನಾಮಧೇಯುವದೆ.

೨. ಆತ್ಮನು ವಿಷಯಿಯಾಗಿರುವನು. ಬಂಧವು ವಿಷಯವಾಗಿರುವದು. ಯಾವದು ಪ್ರಕಾಶವನ್ನುಂಟು ಮಾಡುವದೋ, ಅದು ವಿಷಯಿಯಾಗಿರುವದು. ಅದು ಯಾವದನ್ನು ಪ್ರಕಾಶಿಸುವದೋ ಅದು ವಿಷಯವಾಗಿರುವದು.

ಪ್ರತ್ಯಕ್‌ದಲ್ಲಿ ಪರಾಕ್‌ದ, ಹಾಗೆಯೇ ಪರಾಕ್‌ದಲ್ಲಿ ಪ್ರತ್ಯಕ್‌ದ ಅಧ್ಯಾಸವು ಉಂಟಾಗುವದಿಲ್ಲ. ಹೇಗೆ ಪುತ್ರಾದಿಗಳ ಅಪೇಕ್ಷೆಯಿಂದ ದೇಹವು ಪ್ರತ್ಯಕ್‌ಆದೆಯೋ, ಆದೇಹದಲ್ಲಿ ಪುತ್ರಾದಿಗಳ, ಮತ್ತು ಪುತ್ರಾದಿಗಳ ವಿಷಯದಲ್ಲಿ ದೇಹದ ಅಧ್ಯಾಸವು ಹೇಗೆ ಉಂಟಾಗುವುದಿಲ್ಲವೋ ಹಾಗೆ.

೨. ವಿಷಯದಲ್ಲಿ ವಿಷಯಿಯು, ಹಾಗೆಯೇ ವಿಷಯದಲ್ಲಿ ವಿಷಯದ, ಅಧ್ಯಾಸ ವುಂಟಾಗುವದಿಲ್ಲ. ಹಾಗೆಯೇ ಘಟಾದಿಗಳಲ್ಲಿ ದೀಪದ, ಮತ್ತು ದೀಪದಲ್ಲಿ ಘಟಾದಿಗಳ ಅಧ್ಯಾಸವುಂಟಾಗುವದಿಲ್ಲ.

ಇದರಂತೆ ಸಾದೃಶ್ಯದ ಅಭಾವ ಉಂಟಾಗುವದಕ್ಕೋಸುಗ ಪ್ರತ್ಯಕ್‌ವಿಷಯಿಯಾದ ಆತ್ಮನಲ್ಲಿ ಪರಾಕ್ ವಿಷಯರೂಪ ಬಂಧದ ಅಧ್ಯಾಸ ವುಂಟಾಗುವದಿಲ್ಲ.

ಪ್ರತ್ಯಕ್‌ಕ್ಕೂ ಮತ್ತು ಪರಾಕ್‌ಕ್ಕೂ ವಿರೋಧವಿರುವದು. ವಿಷಯಕ್ಕೂ ಮತ್ತು ವಿಷಯಿಗೂ ವಿರೋಧವಿರುವದು. ಸದೃಶತ್ವವು ಇರುವದಿಲ್ಲ. ಈ ಕಾರಣದಿಂದ ಬಂಧದ ಅಧ್ಯಾಸವು ಆತ್ಮನ ವಿಷಯದಲ್ಲಿ ಉಂಟಾಗಲಿಲ್ಲ.

॥೪೯॥ ೩—೪ ಬಂಧದ ಅಧ್ಯಾಸದಲ್ಲಿ ಪ್ರಮಾತಾ
ದೋಷಗಳ ಅಸಿದ್ಧಿಯು,

ಇದರಂತೆ ಪ್ರಮಾತಾ ದೋಷದ ಮತ್ತು ಪ್ರಮಾಣದೋಷದ ಅಭಾವವಿರುವದು. ಯಾಕಂದರೆ "ಪ್ರಮಾತಾ ಮೊದಲಾದ ಸರ್ವಪ್ರಪಂಚವು ಅಧ್ಯಾಸರೂಪವಿರುವದು. ಅದೇ ಬಂಧವಾಗಿದೆ" ಎಂದು ವೇದಾಂತ ಸಿದ್ಧಾಂತವಿರುವದು.

ಈ ಪ್ರಕಾರವಾಗಿ ಬಂಧದ ಅಧ್ಯಾಸಕ್ಕಿಂತ ಪೂರ್ವದಲ್ಲಿ ಪ್ರಮಾತಾ, ಮತ್ತು ಪ್ರಮಾಣಗಳ ಸ್ವರೂಪವು ಅಸಿದ್ಧವಾಗಿದೆ. ಮತ್ತು ಅದರದೋಷವೂ ಅಸಿದ್ಧವಾಗಿದೆಯಾದ ಕಾರಣ ಬಂಧದ ಅಧ್ಯಾಸವು ಸಂಭವಿಸುದಿಲ್ಲ.

॥೫೦॥ ಈ ಬಂಧದ ಅಧಿಷ್ಠಾನಕ್ಕೆ ಬ್ರಹ್ಮನ ವಿಶೇ...
ರೂಪದಿಂದ ಅಜ್ಞಾನ ಉಂಟಾಗುವದಿಲ್ಲ.

ಅಧಿಷ್ಠಾನದ ವಿಶೇಷರೂಪದಿಂದ ಅಜ್ಞಾನವೂ ಉಂಟಾ... ಯಾಕಂದರೆ ಬಂಧಕ್ಕೆ ಅಧಿಷ್ಠಾನವಾದ ಬ್ರಹ್ಮನು ಸ್ವ... ಜ್ಞಾನರೂಪನಾಗಿದ್ದಾನೆ. ಆ ಸ್ವಯಂಪ್ರಕಾಶ ಜ್ಞಾನರೂಪ... ಕತ್ತಲೆಯಂತೆ ಅಜ್ಞಾನವು ಸಂಭವಿಸುವದಿಲ್ಲ. ಪ್ರಕಾ... ಸೂರ್ಯನಿಗೂ, ಕತ್ತಲೆಗೂ, ಹ್ಯಾಗೆವಿರೋಧವಿರುವದೋ ಹಾ... ಪ್ರಕಾಶ, ಮತ್ತು ತಮೋರೂಪ ಅಜ್ಞಾನ, ಇವುಗಳಲ್ಲಿ ಪರಸ್ಪ... ವಿರುವದು.

ಅಧಿಷ್ಠಾನದ ಅಜ್ಞಾನವನ್ನು ಒಂದು ಪಕ್ಷದಲ್ಲಿ ಅಂಗೀ... ಅಧ್ಯಾಸವು ಸಂಭವಿಸುವದಿಲ್ಲ. ಯಾಕಂದರೆ ಅತ್ಯಂತ ಯಾವ... ಅಥವಾ ಅತ್ಯಂತ ಯಾವ ಜ್ಞಾತ; ಇವುಗಳಲ್ಲಿ ಅಧ್ಯಾಸವು ಉಂ... ದಿಲ್ಲ. ಆದರೆ ವಿಶೇಷರೂಪದಿಂದ ಅಜ್ಞಾತ, ಮತ್ತು ಸಾಮಾ... ದಿಂದ ಜ್ಞಾತ,ಇವುಗಳಲ್ಲಿ ಅಧ್ಯಾಸವು ಆಗುತ್ತದೆ. ಬ್ರಹ್ಮನಂತೂ... ಸ್ವವಿಶೇಷ ಭಾವಗಳಿಂದ ರಹಿತನಾಗಿರುವನು. ನಿರ್ವಿಶೇಷನು... ಎಂದು ಸಿದ್ಧಾಂತವದೆ. ಈ ಕಾರಣದಿಂದ ವಿಶೇಷರೂಪದಿಂ... ಮತ್ತು ಸಾಮಾನ್ಯರೂಪದಿಂದ ಜ್ಞಾತ ಬ್ರಹ್ಮನಿರುವನು. ಹೀಗೆ... ಸುವದಿಲ್ಲ.

ಅಧ್ಯಾಸದ ಲೋಭದಿಂದ ಬ್ರಹ್ಮನಲ್ಲಿ ಸಾಮಾನ್ಯ ವಿಶೇಷ... ಅಂಗೀಕರಿಸಿದರೆ ಸಿದ್ಧಾಂತವನ್ನು ತ್ಯಾಜ್ಯಮಾಡಿದಂತಾಗುತ್ತದೆ.

ಈಪ್ರಕಾರದಿಂದ ನಿರ್ವಿಶೇಷ ಯಾವಪ್ರಕಾಶರೂಪ ಬ್ರಹ್ಮ... ಷರೂಪದಿಂದ ಅಜ್ಞಾನ, ಮತ್ತು ಸಾಮಾನ್ಯರೂಪದಿಂದ ಜ್ಞಾನ... ಉಂಟಾಗುವದರಿಂದ, ಅವನಲ್ಲಿ ಅಧ್ಯಾಸವು ಸಂಭವಿಸುವದಿಲ್ಲ... ದಿಂದ ಬ್ರಹ್ಮನಲ್ಲಿ ಬಂಧವು ಅಧ್ಯಾಸ್ತರೂಪವಾಗಿದೆ. ಎಂದು ಹೇ... ಸಂಭವಿಸುವದಿಲ್ಲವಾದ್ದರಿಂದ ಬಂಧವು ಸತ್ಯವಾಗಿದೆ. ಆ ಸ... ಜ್ಞಾನದಿಂದ ನಿವೃತ್ತಿಯು ಅಸಂಭವವಿರುವದು. ಆವಕಾರಣ ಜ್ಞಾ... ಮೋಕ್ಷಪ್ರತಿಪಾದಕ ಯಾವಸಿದ್ಧಾಂತ ವಿರುವುದೋ ಅದು ಸ... ಚೀನವಾಗಿರುವದಿಲ್ಲ. ಆದರೆ ಕರ್ಮದಿಂದ ಮೋಕ್ಷವಾ... ಸಂಗತಿಯನ್ನುಏಕಭವೀವಾದಿಯರೀತಿಯಿಂದ ಪ್ರತಿಪಾದನ...



ಟಿಪ್ಪಣಿ—[೧] ಕಾರಣದ ಸಮುದಾಯಕ್ಕೆ ಸಾಮಗ್ರಿಯನ್ನುತ್ತಾರೆ. ಒಲೆ ಕಟ್ಟಿಗೆ, ಅಕ್ಕಿ, ಮೊದಲಾದ ಕಾರಣಗಳು ಕೂಡಿ ಪಾಕನಿಷ್ಪತ್ತಿಯಾಗುವದು. ಈ ಪಾಕನಿಷ್ಪತ್ತಿಗೆ ಬೇಕಾದ ಒಲೆ, ಕಟ್ಟಿಗೆ, ಅಕ್ಕಿ ಮೊದಲಾದ ದವ್ಯಗಳಿಗೆ ಹೇಗೆ ಸಾಮಗ್ರಿಎಂದೆನ್ನುತ್ತಾರೆ, ಹಾಗೆಯೇ ಅಧ್ಯಾಸದ ಕಾರಣಗಳ ಸಮುದಾಯರೂಪವಾದ ಯಾವ ಸಾಮಗ್ರಿಗಳಿರುವವೋ,ಅವುಗಳನ್ನೇ ಇಲ್ಲಿ ಹೇಳುವೆವು,

೨. ಪ್ರಮಾಜ್ಞಾನದ ವಿಷಯವೇ ಪ್ರಮೇಯವೆನ್ನುವರು, ಕಲ್ಪಿತಸರ್ಪರಜತ ಮೊದಲಾದವುಗಳ ಅಧಿಷ್ಠಾನ, ರಜ್ಜು,ಸಿಂಪು,ಮೊದಲಾದವುಗಳು ಪ್ರಮಾಜ್ಞಾನದ ವಿಷಯವಾಗಿರುವವು. ಈ ಕಾರಣದಿಂದ ಅವು ಪ್ರಮೇಯವಾಗಿರವವು. ಇವುಗಳ ವಿಷಯದಲ್ಲಿ ಯಾವ ಸರ್ಪಾದಿಗಳ ತುಲ್ಯತೆ ಇರುವದಲ್ಲಾ ಅದು ಸಾದೃಶ್ಯದೋಷವಾಗಿದೆ. ಇದಕ್ಕೇಪ್ರಮೇಯದೋಷವೆಂದೂ ಅನ್ನುವರು.ರಜ್ಜುವಿನಲ್ಲಿ ಭೂಮಿಸ್ಪೃಶಿತ್ವ, ದೀರ್ಘತ್ವ,ತ್ರಿವಲಯಾಕಾರರೂಪ ಇವು ಸರ್ಪದ ಸಾದೃಶ್ಯವಾಗಿರುವವು. ಮತ್ತು ಶುಕ್ತಿಯಲ್ಲಿ ಬೆಳ್ಳಗೆ ಹೊಳೆಯುವ ಗುಣವು ರಜತಕ್ಕೆ ಸಾಧ್ಯವಾಗಿರುವದು. ಇದೇರಿತಿಯಾಗಿ ಬೇರೆ ಬೇರೆಯಲ್ಲಿಯೂ ಅಧಿಷ್ಠಾನವಿಷಯದಲ್ಲಿ ಅಧ್ಯಸ್ತದ ಸಾದೃಶ್ಯವನ್ನು ತಿಳಿದುಕೊಳ್ಳಬೇಕು.

೩. ಬ್ರಹ್ಮಚೈತನ್ಯದಿಂದ ಭಿನ್ನ ಅಜ್ಞಾನ ಮತ್ತು ಅದರ ಕಾರ್ಯವಾದ ಸ್ಥೂಲ ಸೂಕ್ಷ್ಮ ಪ್ರಪಂಚ, ಇದು ಸರ್ವಜೀವನ ವಿಷಯದಲ್ಲಿ ಅಧ್ಯಸ್ತವಾಗಿರುವದು ಇದರಲ್ಲಂತರ್ಗತ, ಅಂತಃಕರಣರೂಪ, ಪ್ರಮಾತಾ ಮತ್ತು ಇಂದ್ರಿಯರೂಪ ಪ್ರಮಾಣಗಳಿರುವವು. ಆದರಿಂದ ಇವಾದರೂ ಅಧ್ಯಸ್ತನಾಗಿರುವವು. ಅವು ಪ್ರಪಂಚದ ಅಧ್ಯಾಸದಿಂದ ಪೂರ್ವದಲ್ಲಿ ಸಿದ್ಧವಾಗಿರುವದಿಲ್ಲ, ಇದು ಉಪನಿಷತ್ತಿನ ನಿರ್ಣೀತ ಅರ್ಥರೂಪ ಸಿದ್ಧಾಂತವದೆ.

॥೫೧॥ ಕೇವಲ ಕರ್ಮದಿಂದ ಮೋಕ್ಷದ ಸಿದ್ಧಿಯು.

(ಏಕಭಾವಿಕ ವಾದ) ॥೫೧—೫೮॥

॥ ದೋಹಾ ॥

ಸತ್ಯಬಂಧಕೀ ಜ್ಞಾನತೈ । ನಹಿ ನಿವೃತ್ತಿ ಸಯುಕ್ತ ॥
ನಿತ್ಯಕರ್ಮ ಸಂತತ ಕರೈ । ಭಯೊ ಚಹೈ ಜೊ ಮುಕ್ತ ॥೮॥

ಟೀಕಾ॥ ಸತ್ಯಬಂಧದ ನಿವೃತ್ತಿಯು ಜ್ಞಾನದಿಂದ ತಿಳಿಯುವದು. ಇದು ಸಯುಕ್ತಿ ಅಂದರೆ ಯುಕ್ತಿ ಸಹಿತವಾದದ್ದಲ್ಲ; ಅಯುಕ್ತವಾಗಿದೆ. ಈ ಕಾರಣದಿಂದ ಯಾವನು ಮುಕ್ತನಾಗಲು ಇಚ್ಛಿಸುವನೋ, ಅವನು ಸಂತತ ಅಂದರೆ ನಿರಂತರ ನಿತ್ಯಕರ್ಮವನ್ನು ಮಾಡಬೇಕು. ಇದರ ಅಭಿಪ್ರಾಯವೇನಂದರೆ :—

॥೫೨॥ ಕರ್ಮವು ಎರಡು ವಿಧವಾಗಿರುವದು.(೧) ವಿಹಿತ,(೨) ನಿಷಿದ್ಧ.

(೧) ಪುರುಷಪ್ರವೃತ್ತಿ ನಿಮಿತ್ತ ಯಾವದನ್ನು ವೇದವು ಬೋ
ರುವದಿಲ್ಲವೋ ಅದು ವಿಹಿತ ಕರ್ಮವು.

(೨) ಪುರುಷನ ನಿವೃತ್ತಿಯು ಯಾವದರಿಂದ ಬೋಧವಾಡು
ಅದು ನಿಷಿದ್ಧ ಕರ್ಮವು.

ಯಾವದು ಸ್ವಭಾವಸಿದ್ಧ ಕ್ರಿಯೆ ಇರುವದೋ, ಅದು ಕರ್ಮ
ಕಾರಣವೇನಂದರೆ ವೇದವು ಪ್ರವೃತ್ತಿ, ಅಥವಾ ನಿವೃತ್ತಿ ನಿಮಿತ್ತ
ಯಾವದನ್ನು ಬೋಧಿಸಿರುವದೋ, ಅದು ಕರ್ಮವೆನಿಸುವದು. ಉದ
ಕ್ರಿಯೆಯು ಕರ್ಮವಲ್ಲ; ಈ ಕಾರಣದಿಂದ ಕರ್ಮವು ಎರಡು ಪ್ರಕಾರ
ವದಲ್ಲದೆ ಮೂರು ಪ್ರಕಾರವಾಗಿರುವದಿಲ್ಲ.

॥೫೩॥ ವಿಹಿತ ಕರ್ಮವು ನಾಲ್ಕು ಪ್ರಕಾರವಾಗಿರುವದು. ಅವು
ವನೆಂದರೆ—(೧)ಪ್ರಾಯಶ್ಚಿತ್ತ,(೨) ಕಾಮ್ಯ, (೩) ನೈಮಿತ್ತಿಕ (೪)
(೧) ಪಾಪನಾಶದ ನಿಮಿತ್ತವಾಗಿ ವಿಧಾನಪೂರ್ವಕವಾಗಿ ಮಾಡಿದ ಕ
ಪ್ರಾಯಶ್ಚಿತ್ತ ಕರ್ಮವೆನ್ನುತ್ತಾರೆ. ಉದಾಹರಣೆ— "ಪ್ರಮಾದದ
ದ್ರವ್ಯಗ್ರಹಣವನ್ನು ಮಾಡುವದರಿಂದ ಯತಿಗೆ ಪಾಪವು ಘಟಿಸುತ್ತ
ಪಾಪ ಪರಿಹಾರಾರ್ಥವಾಗಿ ತೆಗೆದುಕೊಂಡ ದ್ರವ್ಯದ ತ್ಯಾಗವನ್ನೂ
ಮೂರುದಿವಸ ಉಪವಾಸವನ್ನೂ ಮಾಡಬೇಕು."

(೨) ಫಲನಿಮಿತ್ತವಾಗಿ ಮಾಡಿದ ಕರ್ಮವು ಕಾಮ್ಯವೆನಿಸು
ಉದಾಹರಣೆ—"ವೃಷ್ಟಿಯಾಗುವದರ ಸಲುವಾಗಿ ಕಾರೀರೀಯಾಗ
ಬೇಕೆಂದೂ, ಸ್ವರ್ಗಪ್ರಾಪ್ತವಾಗುವದರ ಸಲುವಾಗಿ ಅಗ್ನಿಹೋತ್ರ,ಸೋ
ಯಾಗಗಳನ್ನೂ ಮಾಡಬೇಕೆಂದೂ ಹೇಳಿದೆ.

(೩) ಯಾವಕರ್ಮವನ್ನು ಮಾಡದೆ ಇರುವದರಿಂದ ಪಾಪವು ಬ
ದೋ,ಅದನ್ನುಮಾಡುವದರಿಂದ ಪುಣ್ಯಪಾಪರೂಪ ಫಲವು ಬರುವದಿಲ್ಲ
ಮತ್ತು ಯಾವಕರ್ಮವು ನಿತ್ಯದಲ್ಲ ನಿಯಮದಿಂದ ಮಾಡತಕ್ಕದ್ದಿರುವ
ವೋ, ಮತ್ತು ಯಾವದೋ ಒಂದು ಕಾರಣದಿಂದ ಆ ಕರ್ಮವನ್ನು
ಡಲೇ ಬೇಕಾಗುವದೋ, ಇಂಥ ಕರ್ಮಕ್ಕೆ ನೈಮಿತ್ತಿಕ ಕರ್ಮವೆಂದು ಅ
ಕು. ಉದಾಹರಣೆ-ಗ್ರಹಣ,ಇಲ್ಲವೆ ಶ್ರಾದ್ಧ ಮೊದಲಾದವುಗಳು ಮತ್ತು
ನಸ್ಕೃದ್ಧ,ಇಲ್ಲವೆ ಜಾತಿವೃದ್ಧ,ಅಥವಾ ಆಶ್ರಮವೃದ್ಧ, ಇಲ್ಲವೆ ವಿದ್ಯಾ



ಎಂದರೆ ಶಾಸ್ತ್ರಜ್ಞಾನಿ, ಅಥವಾ ಜ್ಞಾನವೃದ್ಧ ಅಥವ ಅಪರೋಕ್ಷಜ್ಞಾನಿ
ವರ ಆಗಮನದಿಂದ ಮಾಡಬೇಕಾದ ಉತ್ಥಾನರೂಪ ಕರ್ಮವು. ಈ
ಐದು ಪ್ರಕಾರದ ವೃದ್ಧರಲ್ಲಿ ಕ್ರಮವಾಗಿ ಒಬ್ಬರಗಿಂತಲೂ ಮತ್ತೊಬ್ಬರು
ಉತ್ತಮರಾಗಿರುವರು.

(೪) ಯಾವ ಕರ್ಮವನ್ನು ಮಾಡದೆ ಇರುವದರಿಂದ, ಪಾಪವು ಬರು
ವದೋ, ಮಾಡಲು ಫಲಬರುವದಿಲ್ಲವೋ ಮತ್ತು ಯಾವ ಕರ್ಮವು ಸದಾತ
ಪ್ಪದೆ ಮಾಡಲಿಕ್ಕೇ ಬೇಕಾಗಿರುವದೋ, ಅಂಥ ಕರ್ಮಕ್ಕೆ ನಿತ್ಯಕರ್ಮವೆಂದು
ಅನ್ನಬೇಕು. ಉದಾಹರಣೆ-ಸ್ನಾನ ಸಂಧ್ಯಾದಿಗಳು.

ಈ ಪ್ರಕಾರವಾಗಿದ್ದ ನಿತ್ಯ-ನೈಮಿತ್ತಿಕ, ಕಾಮ್ಯ, ಪ್ರಾಯಶ್ಚಿತ್ತ
ಎಂಬ ನಾಲ್ಕು ವಿಹಿತಕರ್ಮಗಳೂ, ಮತ್ತು ನಿಷಿದ್ಧಕರ್ಮವೊಂದನ್ನು ಕೂಡಿ
ಐದು ಪ್ರಕಾರದ ಕರ್ಮಗಳಿರುವವು.

॥೫೪॥ ಈ ಐದುವಿಧ ಕರ್ಮಗಳಲ್ಲಿ ಕಾಮ್ಯ, ಮತ್ತು ನಿಷಿದ್ಧ ಕರ್ಮ
ಗಳನ್ನು ಮೋಕ್ಷೇಚ್ಛೆಯುಳ್ಳವನು ಮಾಡಬಾರದು. ಕಾರಣವೇನಂದರೆ-
ಕಾಮ್ಯ ಕರ್ಮವನ್ನು ಆಚರಿಸುವದರಿಂದ ಉತ್ತಮ ಲೋಕಪ್ರಾಪ್ತಿಯೂ,
ನಿಷಿದ್ಧಕರ್ಮಾಚರಣೆಯಿಂದ ನೀಚಲೋಕವೂ ಪ್ರಾಪ್ತವಾಗುತ್ತದೆ. ಈ
ಕಾರಣದಿಂದ ಈ ಎರಡೂ ಕರ್ಮಗಳನ್ನೂ ತ್ಯಾಗಮಾಡಿ ನಿತ್ಯಕರ್ಮವನ್ನು ಸರ್ವ
ದಾ ಮಾಡಬೇಕು. ಒಂದು ಸಮಯದಲ್ಲಿ ನೈಮಿತ್ತಿಕ ಕರ್ಮವು ನಿಮಿತ್ತ
ವಾಗಲು ಆ ನೈಮಿತ್ತಿಕ ಕರ್ಮವನ್ನೂ ಮಾಡಬೇಕು. ಯಾಕಂದರೆ ನಿತ್ಯನೈ
ಮಿತ್ತಿಕ ಕರ್ಮಗಳನ್ನು ಮಾಡದಿದ್ದರೆ ಪಾಪವು ಸಂಘಟಿಸುವದು. ಆ
ಪಾಪದಿಂದ ನೀಚಯೋನಿಯಲ್ಲಿ ಬೀಳಬೇಕಾಗುವದು. ಈ ಕಾರಣದಿಂದ
ಪಾಪದ ಪ್ರತಿಬಂಧದ ಸಲುವಾಗಿ ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡ
ಬೇಕು. ಇಷ್ಟರಹೊರ್ತು ನಿತ್ಯನೈಮಿತ್ತಿಕ ಕರ್ಮಗಳಿಂದ ಬೇರೆ ಫಲವಿಲ್ಲವು.
ಈ ಕರ್ಮಗಳಿಂದ ಫಲವೇನಂದರೆ-ಯಾವ ಕರ್ಮವನ್ನು ಮಾಡದೆ ಇರುವದ
ರಿಂದ ಪಾಪವು ಬರುವದೋ, ಆ ಪಾಪವು ಬರಬಾರದು ಎಂಬ ಉದ್ದೇಶ
ದಿಂದ ಆ ಕರ್ಮಗಳನ್ನು ಮಾಡಲೇಬೇಕು. ಈ ಕಾರಣದಿಂದ ಮುಮುಕ್ಷು
ಗಳು ನಿತ್ಯನೈಮಿತ್ತಿಕ ಕರ್ಮಗಳನ್ನು ಅವಶ್ಯವಾಗಿ ಮಾಡಬೇಕು.

॥೫೫॥ ಅಕಸ್ಮಾತ್ ಪ್ರಮಾದವಶದಿಂದ ನಿಷಿದ್ಧಕರ್ಮವು ಸಂಘಟಿಸಿದರೆ
ಅದರ ದೋಷಪರಿಹಾರಾರ್ಥವಾಗಿ ಪ್ರಾಯಶ್ಚಿತ್ತಕರ್ಮವನ್ನು ಮಾಡಬೇಕು.
ಇಹಜನ್ಮದಲ್ಲಿ ನಿಷಿದ್ಧಕರ್ಮವನ್ನು ಮಾಡದಿದ್ದರೂ, ಜನ್ಮಾಂತರೀಯಪಾಪದ

ನಾಶಾರ್ಥವಾಗಿಯಾದರೂ ಪ್ರಾಯಶ್ಚಿತ್ತ ಕರ್ಮವನ್ನು ಮಾಡಬೇ
ಇದರಲ್ಲಿ ಇಷ್ಟೇ ಭೇದವಿರುವದಲ್ಲಾ:-ಪ್ರಾಯಶ್ಚಿತ್ತವು ಎರಡು
ವಾಗಿರುವದು. ಒಂದು (೧) ಅಸಾಧಾರಣ, ಮತ್ತೊಂದು(೨)ಸಾ

(೧) ಯಾವದೋ ಒಂದು ಪಾಪವಿಶೇಷವನ್ನು ದೂರಮಾಡಿಕೊ
ದರಸಲುವಾಗಿ ಶಾಸ್ತ್ರದಲ್ಲಿ ಹೇಳಿದ ವಿಧಿಯು, ಅಸಾಧಾರಣ
ಶ್ಚಿತ್ತವೆಂದು ಎನ್ನಿಸಿಕೊಳ್ಳುತ್ತದೆ. ಉದಾಹರಣೆ-ಈ ಪೂರ್ವದಲ್ಲಿ
ಉಪವಾಸ ಮೊದಲಾದವುಗಳು.

(೨) ಸರ್ವಪಾಪಗಳ ನಾಶಾರ್ಥವಾಗಿ ಶಾಸ್ತ್ರದಲ್ಲಿ ಹೇಳಿದ
ಕರ್ಮವು ಸಾಧಾರಣ ಪ್ರಾಯಶ್ಚಿತ್ತವೆನಿಸಿಕೊಳ್ಳುತ್ತದೆ. ಉದಾ
ಗಂಗಾಸ್ನಾನ, ಅಥವಾ ಈಶ್ವರನಾಮೋಚ್ಚರಣ, ಇವುಗಳಂತೆಯೇ
ವುಗಳನ್ನೂ, ತಿಳಿದುಕೊಳ್ಳಬೇಕು. ಈ ರೀತಿಯಾಗಿ ಎರಡುಪ್ರಕಾ
ಯಶ್ಚಿತ್ತಗಳಿರುವವು.

(೧) ಯಾವದು ಜ್ಞಾತಪಾಪ ಅಂದರೆ ಇಹಜನ್ಮದಲ್ಲಿ
ಪಾಪವು, ಈ ಪಾಪದ ನಾಶಾರ್ಥವಾಗಿ ಶಾಸ್ತ್ರದಲ್ಲಿ ಹೇಳಿದ ಅಸಾ
ರಣ ಪ್ರಾಯಶ್ಚಿತ್ತವನ್ನು ಮಾಡಲೇಬೇಕು.

(೨) ಜನ್ಮಾಂತರದಲ್ಲಿ ಮಾಡಿದ ಅಜ್ಞಾತಪಾಪ, ಈ ಪಾಪನ
ಮಾಡಿಕೊಳ್ಳುವದರಸಲುವಾಗಿಸಾಧಾರಣ ಪ್ರಾಯಶ್ಚಿತ್ತವನ್ನು ಮಾ
ಳ್ಳಬೇಕು. ಕಾರಣವೇನೆಂದರೆ;-(೧) ಅಸಾಧಾರಣ ಪ್ರಾಯಶ್ಚಿತ್ತದ
ವವು ಈ ಪ್ರಕಾರವಿರುವದಲ್ಲಾ:-ಯಾವಪಾಪದ ನಾಶಾರ್ಥವಾಗಿ ಶಾ
ಯಾವ ಪ್ರಾಯಶ್ಚಿತ್ತವನ್ನು ವಿಧಿಸಿರುವದೋ, ಆ ಪ್ರಾಯಶ್ಚಿತ್ತವನ್ನು
ಡಿಕೊಳ್ಳುವದರಿಂದ ಆ ಪಾಪವು ದೂರವಾಗುತ್ತದೆ.

(೨) ಜನ್ಮಾಂತರದಲ್ಲಿ ಯಾವ ಪಾಪಗಳನ್ನು ಮಾಡಿರುವನೋ,
ಪಾಪಗಳು ಯಾವದರಿಂದ ನಿವಾರಣವಾಗುವವೋ, ಎಂಬ ಜ್ಞಾ
ಮನುಷ್ಯನಿಗಿರುವದು. ಆದ್ದರಿಂದ ಸಾಧಾರಣ ಪ್ರಾಯಶ್ಚಿತ್ತವನ್ನು
ಕೊಳ್ಳಬೇಕು.

||೫೬|| ಸಾಧಾರಣ ಪ್ರಾಯಶ್ಚಿತ್ತದಿಂದ ಸರ್ವಪಾಪಗಳೂ ನಿವೃತ್ತ
ತ್ತವೆಂದು ಹೇಳಿದ್ದರೂ, ಗಂಗಾಸ್ನಾನ ಮೊದಲಾದ ಯಾವ ಸಾಧಾ
ಪ್ರಾಯಶ್ಚಿತ್ತಗಳನ್ನು ಹೇಳಿರುವೆವಲ್ಲಾ, ಅವು ಕೇವಲ ಪ್ರಾಯಶ್ಚಿತ್ತ
ವಲ್ಲ, ಆದರೆ (೧) ಕಾಮ್ಯರೂಪ,ಮತ್ತು (೨) ಪ್ರಾಯಶ್ಚಿತ್ತರೂಪ
ಗಿರುವವು.

(೧) "ಗಂಗಾಸ್ನಾನದಿಂದ ಉತ್ತಮಲೋಕ ಪ್ರಾಪ್ತಿಯಾಗುವ



ಎಂದು ಶಾಸ್ತ್ರದಲ್ಲಿ ಹೇಳಿರುವದು. ಇದರಂತೆ "ಈಶ್ವರನ ನಾಮೋಚ್ಚಾರಣ
ದಿಂದ ಸಹ ಉತ್ತಮಲೋಕ ಪ್ರಾಪ್ತಿಯಾಗುವದೆಂದು" ಹೇಳಿರುವದು.
ಈ ಕಾರಣದಿಂದ ಕಾಮ್ಯರೂಪವಾಗಿದೆ.

(೨) ಪಾಪನಾಶಕವದೆ, ಇದರಿಂದ ಪ್ರಾಯಶ್ಚಿತ್ತರೂಪವಾಗಿದೆ.

ಅಶ್ವಮೇಧ ಯಜ್ಞವು ಹೇಗೆ ಬ್ರಹ್ಮಹತ್ಯಾದಿ ಪಾಪಗಳ ನಾಶಕವಾಗಿದ್ದು ಸ್ವರ್ಗದ ಪ್ರಾಪ್ತಿರೂಪ ಫಲದ ಹೇತುವಾಗಿರುವದೋ, ಹಾಗೆ ಗಂಗಾ ಸ್ನಾನಾದಿಗಳಿರುವವು. ಕೇವಲ ಪ್ರಾಯಶ್ಚಿತ್ತ ರೂಪವಲ್ಲ; ಅಂತೆಯೇ ಗಂಗಾ ಸ್ನಾನಾದಿಗಳಿಂದ ಉತ್ತಮಲೋಕಪ್ರಾಪ್ತಿಯು ಆಗುತ್ತದೆ. ಅದಂತೂ ಮುಮುಕ್ಷುಗಳಿಗೆ ವಾಂಛಿತವಲ್ಲ. ತಥಾಪಿ ಯಾರಿಗೆ ಉತ್ತಮಲೋಕ ಪ್ರಾಪ್ತಿಯ ಇಚ್ಛೆಯಿರುವದೋ, ಅವರಿಗೆ ಗಂಗಾಸ್ನಾನಾದಿಗಳು ಪಾಪನಾಶವನ್ನು ಮಾಡಿ ಉತ್ತಮ ಲೋಕಪ್ರಾಪ್ತಿಯನ್ನುಂಟುಮಾಡಿ ಕೊಡುತ್ತವೆ. ಯಾರಿಗೆ ಉತ್ತಮಲೋಕ ಪ್ರಾಪ್ತಿಯ ಬಯಕೆ ಇರುವದಿಲ್ಲವೋ, ಅವರಿಗೆ ಕೇವಲ ಪಾಪನಾಶಕ್ಕೆ ಕಾರಣವಾಗಿರುವವು. ಈಕಾರಣದಿಂದ ಕಾಮನಾಸಹಿತ ಅನುಷ್ಠಾನ ಮಾಡಿದರೆ ಕಾಮ್ಯರೂಪ ಪ್ರಾಯಶ್ಚಿತ್ತವಾಗಿದೆ; ಮತ್ತು ಉತ್ತಮಲೋಕ ಪ್ರಾಪ್ತಿ ಕಾಮನಾ ಇಲ್ಲದೆ ಅನುಷ್ಠಾನ ಮಾಡಿದರೆ ಕೇವಲ ಪ್ರಾಯಶ್ಚಿತ್ತರೂಪವಾಗಿಡೆ.

ಹೇಗೆ ವೇದಾಂತ ಮತದಲ್ಲಿ ಸಂಪೂರ್ಣಕರ್ಮವು ಸಕಾಮಪುರುಷನಿಗೆ ಸಂಸಾರ ಹೇತುವಾಗಿದೆಯೋ ನಿಷ್ಕಾಮ ಪುರುಷನಿಗೆ ಅಂತಃಕರಣ ಶುದ್ಧಿಯನ್ನು ಮಾಡಿ ಜ್ಞಾನದ್ವಾರಾ ಮೋಕ್ಷಕ್ಕೆ ಹೇಗೆ ಹೇತುವಾಗಿದೆಯೋ ಹಾಗೆಯೇ ಗಂಗಾಸ್ನಾನ, ಮತ್ತು ಈಶ್ವರ ನಾಮೋಚ್ಚಾರಣಗಳು ಸಕಾಮರಿಗೆ ಕಾಮ್ಯರೂಪ ಪ್ರಾಯಶ್ಚಿತ್ತವಾಗಿದೆ. ನಿಷ್ಕಾಮರಿಗೆ ಕೇವಲ ಪ್ರಾಯಶ್ಚಿತ್ತರೂಪವಾಗಿವೆ. ಈ ಕಾರಣದಿಂದ ಮುಮುಕ್ಷುಗಳು ಸಾಧಾರಣ ಪ್ರಾಯಶ್ಚಿತ್ತವನ್ನು ಮಾಡಬೇಕು.

ಈ ಪ್ರಕಾರದಿಂದ ಜನ್ಮಾಂತರದ ಸಂಪೂರ್ಣಪಾತಕಗಳ ನಾಶವು ಜ್ಞಾನವಾಗದೆಯೇ ಆಗುತ್ತದೆ.

||೫೭|| ಇದರಂತೆಯೇಮುಮುಕ್ಷುಗಳ ಜನ್ಮಾಂತರದ ಕಾಮ್ಯಕರ್ಮವಾದರೂ ವಂಧ್ಯಾಸಮಾನವಿರುವದು. ಫಲಕ್ಕೆ ಹೇತುವಿಲ್ಲ. ಯಾಕೆಂದರೆ:- ಹೇಗೆ ಕರ್ಮಾನುಷ್ಠಾನ ಕಾಲದಲ್ಲಿ ಪುರುಷನ ಇಚ್ಛೆಯು, ಫಲಕ್ಕೆ ಹೇತುವಾಗಿದೆಯೆಂದುವೇದಾಂತ ಮತದಲ್ಲಿ ಅಂಗೀಕಾರಮಾಡಲ್ಪಟ್ಟಿದೆಯೋ ಹಾಗೆಯೇ ಇಚ್ಛಾ ಸಹಿತ ಅನುಷ್ಠಾನಮಾಡಿದರೆ ಅದು ಸ್ವರ್ಗಾದಿ ಫಲಕ್ಕೆ ಹೇತು

ವಾಗಿದೆ; ನಿಷ್ಕಾಮ ಅನುಷ್ಠಾನಮಾಡಿದರೆ ಸ್ವರ್ಗಾದಿ ಫಲಗಳ
ವಾಗುವದಿಲ್ಲವೆಂದು ವೇದಾಂತದ ಸಿದ್ಧಾಂತವದೆ.

ಒ

ಇದರಂತೆ ಕರ್ಮದ ಸಿದ್ಧಿಯಾದ ಬಳಿಕ ಯಾ ಪುರುಷನ
ಫಲಕ್ಕೆ ಹೇತುವಾಗಿದೆ. ಆ ಪುರುಷನಇಚ್ಛೆಯು ಯಾವ ಕಾಲದಲ್ಲಿ
ಮುಮುಕ್ಷುವಾಗುವನೋ, ಆಗ ದೂರವಾಗುವದು. ಈ ಕಾರಣದಿ
ನ್ಮಾಂತರದ ಕಾಮ್ಯಕರ್ಮಗಳಾದರೂ ಫಲಕ್ಕೆ ಹೇತುವಾಗಿರುವದಿಲ್ಲ.
ಒಬ್ಬ ಪುರುಷನು ಧನಪ್ರಾಪ್ತಿಯುಸಲುವಾಗಿ ಒಬ್ಬ ಧನವಂ
ಆರಾಧಿಸುತ್ತಿದ್ದನು. ಆ ಧನಿಕನು ಅವನ ಆರಾಧನೆಯಿಂದ ಸಂತುಷ್ಟ
ಧನವನ್ನು ಕೊಡುವದರೊಳಗಾಗಿಯೇ ಆರಾಧಿಕನ ಇಚ್ಛೆಯು ನಿವೃತ್ತಿ
ಹೋದರೆ ಧನಪ್ರಾಪ್ತಿರೂಪ ಫಲವಾಗುವದಿಲ್ಲ; ಇದರಂತೇ ಜನ್ಮಾ
ಕ್ಯಾಮಕರ್ಮಗಳ ಫಲವು ಸಹ ಮುಮುಕ್ಷುವಿನ ಇಚ್ಛೆಯ ಅಭಾವ
ಫಲದಾಯಕವಾಗುವದಿಲ್ಲ.

ಈರೀತಿಯಿಂದ ಕೇವಲ ಕರ್ಮದಿಂದಲೇ ಮೋಕ್ಷವಾಗುತ್ತದೆ.

||ಶಲ|| ೧ "ವರ್ತಮಾನ ಜನ್ಮದಲ್ಲಿ ಕಾಮ್ಯ, ಮತ್ತು ನಿಷಿದ್ಧ
ವನ್ನು ಮಾಡಲಿಲ್ಲ; ಅಂದರೆ ಊರ್ಧ್ವಲೋಕ, ಅಧೋಲೋಕಗಳ
ಯು ಸಂಭವಿಸುವದಿಲ್ಲ. ಜನ್ಮಾಂತರದ ಪ್ರಾರಬ್ಧವು ನಿಷಿದ್ಧ ಮತ್ತು
ಮ್ಯ ಇವುಗಳ ಭೋಗದಿಂದನಾಶವಾಗುವವು. ನಿತ್ಯ ಮತ್ತು ನೈಮಿತ್ತಿ
ಳನ್ನು ಮಾಡದೆ ಇದ್ದರೆ ಯಾವ ಪಾಪವು ಬರುವದೋ, ಆ ಪಾಪವು
ನೈಮಿತ್ತಿಕಗಳನ್ನು ಮಾಡುವದರಿಂದ ಮುಮುಕ್ಷುಗಳಿಗೆ ಬರುವ
ಜನ್ಮಾಂತರದ ಸಂಚಿತವಾದ ಯಾವನಿಷಿದ್ಧಕರ್ಮಗಳು ಇರುವವೋ
ಸಾಧಾರಣ ಪ್ರಾಯಶ್ಚಿತ್ತದಿಂದ ನಾಶವಾಗುತ್ತವೆ.ಜನ್ಮಾಂತರದ
ಕಾಮ್ಯಕರ್ಮಗಳು ಮುಮುಕ್ಷುವಿಗೆ ಇಚ್ಛೆಯ ಅಭಾವದಿಂದ ಫಲವನ್ನು
ಡುವದಿಲ್ಲವಾದ ಈ ಕಾರಣದಿಂದ ಮುಮುಕ್ಷುಗಳು ನಿತ್ಯನೈಮಿತ್ತಿಕ
ತ್ತು ಸಾಧಾರಣ ಪ್ರಾಯಶ್ಚಿತ್ತರೂಪ ಕರ್ಮಗಳನ್ನು ಮಾಡಬೇಕು.
ವೇಳೆ ವರ್ತಮಾನ ಜನ್ಮದಲ್ಲಿ ಜ್ಞಾತವಾದ ನಿಷಿದ್ಧಕರ್ಮವಾಗಲು ಅಸಾ
ರಣ ಪ್ರಾಯಶ್ಚಿತ್ತ ಕರ್ಮವನ್ನು ಮಾಡಬೇಕು.

೬

೨. ಅಥವಾ ನಿತ್ಯನೈಮಿತ್ತಿಕಗಳನ್ನೇ ಮಾಡಬೇಕು; ಪ್ರಾಯಶ್ಚಿ
ನ್ನು ಮಾಡಬಾರದು. ಯಾಕಂದರೆ ಮುಮುಕ್ಷುವಿನ ಸಂಚಿತವಾದ
ನಿಷಿದ್ಧಕರ್ಮ ಮತ್ತು ಕಾಮ್ಯಕರ್ಮಗಳಂತೂ ನಾಶವಾಗಿವೆ. ತ್ಯಾಗ



ಯ ಸಂಚಿತಕರ್ಮಗಳ ನಾಶವು ವೇದಾಂತ ಮತದಲ್ಲಿ ಅಂಗೀಕರಿಸಿರುವದೊ,
ಅದರಂತೆ ನಿಷಿದ್ಧ, ಮತ್ತು ಕಾಮ್ಯದ ತ್ಯಾಗವನ್ನು ಮಾಡಿ ನಿತ್ಯನೈಮಿತ್ತಿಕ
ಕರ್ಮಗಳಲ್ಲಿ ಪ್ರವೃತ್ತನಾದ ಯಾವ ಮುಮುಕ್ಷುವಿರುವನೋ ಅವನ ಸಂಚಿತ
ಕರ್ಮಗಳ ನಾಶವಾಗುತ್ತದೆ.

೭

೩. ಅಥವಾ ಸಂಚಿತ, ಕಾಮ್ಯ, ಮತ್ತು ನಿಷಿದ್ಧಕರ್ಮಗಳು ಎಲ್ಲವೂ
ಕೂಡಿಕೊಂಡು ಒಂದು ಜನ್ಮದ ಆರಂಭವನ್ನು ಮಾಡುತ್ತವೆ. ಈ ಕಾರಣ
ದಿಂದ ಮುಮುಕ್ಷುವಿಗೆ ಮತ್ತೊಂದು ಜನ್ಮವುಂಟಾಗುತ್ತದೆ.

೮

೪. ಅಥವಾ ಯೋಗಿಗೆ ಕಾಯವ್ಯೂಹದಂತೆ ಒಂದೇಕಾಲದಲ್ಲಿ ಸರ್ವ
ಸಂಚಿತಗಳು ಅನಂತಶರೀರಗಳ ಆರಂಭವನ್ನು ಮಾಡುತ್ತವೆ. ಇದರಿಂದ
ಮುಮುಕ್ಷುವು ಉತ್ತರ ಜನ್ಮದಲ್ಲಿ ಸರ್ವ ಫಲಭೋಗವನ್ನು ಅನುಭವಿಸು
ತ್ತಾನೆ.

೯

೫. ಅಥವಾ ನಿತ್ಯನೈಮಿತ್ತಿಕ ಕರ್ಮಗಳ ಅನುಷ್ಠಾನದಿಂದ ಯಾವ
ಕ್ಲೇಶವುಂಟಾಗುವದೋ, ಆದು ಜನ್ಮಾಂತರದ ಸಂಚಿತ ನಿಷಿದ್ಧ ಕರ್ಮಗಳ
ಫಲವಾಗಿದೆ. ಇದರಿಂದ ಜನ್ಮಾಂತರದ ಸಂಚಿತ, ನಿಷಿದ್ಧ ಕರ್ಮಗಳು ಬೇರೆ
ಜನ್ಮದ ಆರಂಭವನ್ನುಮಾಡುವದಿಲ್ಲ.ಮತ್ತು ಸಂಚಿತವಾದ ಯಾವ ಕಾಮ್ಯ
ಕರ್ಮಗಳಿರುವವೋ, ಅವು ಏಕಜನ್ಮ ಅಥವಾ ಏಕಕಾಲದಲ್ಲಿ ಅನಂತ ಶರೀರ
ಗಳ ಆರಂಭವನ್ನು ಮಾಡುತ್ತವೆ. ಇದರಿಂದ ಮುಮುಕ್ಷುವಿಗೆ ಉತ್ತರಜನ್ಮ
ದಲ್ಲಿ ದುಃಖದಲೇಶವಾದರೂಪ್ರಾಪ್ತವಾಗುವದಿಲ್ಲ.ಕೇವಲದುಃಖದಭೋಗ
ವಾಗುತ್ತದೆ. ಏಕೆಂದರೆ ಜನ್ಮಾಂತರದಲ್ಲಿಯ ವಿಹಿತ ಸಂಚಿತ ಕರ್ಮಗಳಿಂದ
ಶರೀರವಾಗಿರುವದು. ಮತ್ತು ಸಂಚಿತವಾದ ಯಾವ ನಿಷಿದ್ಧವಿರುವದೋ
ಅದನ್ನು ನಿತ್ಯನೈಮಿತ್ತಿಕ ಕರ್ಮಾನುಷ್ಠಾನದ ಕ್ಲೇಶದಿಂದ ಪೂರ್ವಜನ್ಮದಲ್ಲಿ
ಭೋಗಿಸಿರುವನು. ಈ ರೀತಿಯಾಗಿ ಪ್ರಾಯಶ್ಚಿತ್ತದ ಹೊರ್ತು ಕೇವಲನಿತ್ಯ
ಮತ್ತು ನೈಮಿತ್ತಿಕ ಕರ್ಮಗಳ ಅನುಷ್ಠಾನದಿಂದ ಮೋಕ್ಷವುಂಟಾಗುವದು.
ಈ ಕಾರಣದಿಂದ ನೈಮಿತ್ತಿಕ ಕರ್ಮಕಾಲದಲ್ಲಿ ನೈಮಿತ್ತಿಕರಅನುಷ್ಠಾನವನು.
ಮಾಡಬೇಕು. ಮತ್ತು ನಿತ್ಯಕರ್ಮದ ಅನುಷ್ಠಾನವನ್ನು ಸತತ ಮಾಡಬೇಕು

೧೦

ಈ ಮತಕ್ಕೇ ಶಾಸ್ತ್ರದಲ್ಲಿ ಏಕಭಾವಿಕ ವಾದವೆಂದು ಅನ್ನುತ್ತಾರೆ.

ಬಂಧನಿವೃತ್ತಿ ಜ್ಞಾನದ್ವಾರ ಗ್ರಂಥದ ಪ್ರಯೋಜನವಿಲ್ಲ.

ಈ ಕಾರಣದಿಂದಲೇ ಬಂಧವನಿವೃತ್ತಿ ಜ್ಞಾನದ್ವಾರಾ ಗ್ರಂ
ಯೋಜನವಿಲ್ಲ, ಕಾರಣವೇನೆಂದರೆ, ಯಾವ ವಸ್ತುವು ಅನ್ಯಸಾಧ
ಉಂಟಾಗುವದಿಲ್ಲವೋ, ಅದು ಅದರ ಮುಖ್ಯಪ್ರಯೋಜನವೆಂದು
ಶು. ರೂಪಜ್ಞಾನವು ನೇತ್ರೇಂದ್ರಿಯದ ಹೊರತು ಅನ್ಯೇಂದ್ರಿಯ
ಆಗುವದಿಲ್ಲ. ಆ ರೂಪಜ್ಞಾನವು ನೇತ್ರದ ಪ್ರಯೋಜನವಾಗಿದೆ.
ನಿವೃತ್ತಿಯು ಗ್ರಂಥದ ಹೊರತು ಕರ್ಮದಿಂದಲೇ ಆಗುವದು. ಈ
ದಿಂದ ಬಂಧನಿವೃತ್ತಿಯು ಗ್ರಂಥದ ಪ್ರಯೋಜನವಲ್ಲ. ಈ ರೀ
ಗ್ರಂಥದ ಅಧಿಕಾರೀ ವಿಷಯವು ಪ್ರಯೋಜನವಾಗಲಿಲ್ಲ.

॥೬೦॥ ಸಂಬಂಧ ಖಂಡನ (೪)

॥ ಪೂರ್ವ ಪಕ್ಷ ॥

ಅಧಿಕಾರಿ ಮೊದಲಾದವರ ಅಭಾವದಿಂದ ಸಂಬಂಧವೂ ಉ
ವದಿಲ್ಲ, ಯಾಕೆಂದರೆ:—

೧. ವಿಷಯದ ಅಭಾವದಿಂದ ಗ್ರಂಥದ ಮತ್ತು ವಿಷಯ
ಪಾದ್ಯ, ಮತ್ತು ಪ್ರತಿಪಾದಕಭಾವ ಭಾವಸಂಬಂಧವುಂಟಾಗುವ

೨. ಅಧಿಕಾರೀ, ಮತ್ತು ಫಲದ ಅಭಾವದಿಂದ ಅದಸ್ತ
ಪ್ರಾಪಕ ಭಾವ ಸಂಬಂಧವೂ ಉಂಟಾಗುವದಿಲ್ಲ.

೩. ಅಧಿಕಾರಿಯ ಅಭಾವದಿಂದ ಅಧಿಕಾರಿಯು ಮತ್ತು
ರದ ಕರ್ತೃ ಕರ್ತವ್ಯಭಾವ ಸಂಬಂಧವೂ ಉಂಟಾಗುವದಿಲ್ಲ.

೪. ಜ್ಞಾನದ ನಿಷ್ಫಲತೆಯಾಗುವದರಿಂದ ಗ್ರಂಥದ ಮತ್ತು
ಜನ್ಯಜನಕಭಾವ ಸಂಬಂಧವೂ, ಉಂಟಾಗುವದಿಲ್ಲ. ಸಫಲವಸ್ತು
ವಾಗುತ್ತದೆ. ಪೂರ್ವದಲ್ಲಿ ಹೇಳಿದ ರೀತಿಯಿಂದ ಜ್ಞಾನವು ಸಫಲವಿ

೫. ಜ್ಞಾನದ ಸ್ವರೂಪವೂ, ಸಹ ಅಭಾವವಿರುವದು. ಈ
ದಿಂದ ಜ್ಞಾನದ ಮತ್ತು ಗ್ರಂಥದ ಸಂಬಂಧವುಂಟಾಗುವದಿಲ್ಲ
ವೇನೆಂದರೆ- ಜೀವಬ್ರಹ್ಮರ ಅಭೇದ ನಿಶ್ಚಯದ ನಾಮವು ಸಿದ್ಧಾ
ಜ್ಞಾನವದೆ. ಆ ಅಭೇದ ನಿಶ್ಚಯವು ಸಿದ್ಧವಾಗುವದಿಲ್ಲ. ಯಾ
ಜೀವಬ್ರಹ್ಮರಲ್ಲಿ ಅಭೇದವಿಲ್ಲ, ಎಂಬುದನ್ನು ವಿಷಯದ ನಿರಾಕ
ಈ ಪೂರ್ವದಲ್ಲಿ ಪ್ರತಿಪಾದನಮಾಡಿದೆ. ಇದರಿಂದ ಅಭೇದ ನಿಶ್ಚ
ಜ್ಞಾನವು ಸಿದ್ಧವಾಗುವದಿಲ್ಲ. ಈ ರೀತಿಯಿಂದ ಅಧಿಕಾರೀ ಮೊ
ಅನುಬಂಧನಗಳ ಅಭಾವದಿಂದ ಗ್ರಂಥದ ಆರಂಭವುಂಟಾಗುವದಿ



ಅಥ ಪೂರ್ವಪಕ್ಷಿಯ ಕ್ರಮದಿಂದ ಉತ್ತರ. ॥೧೬-೯೩॥
॥೬೧॥ ಅಧಿಕಾರೀಮಂಡನ (೧) ॥೬೧-೭೧॥
ಅಂಕಿ ೩೪-೩೬ ರಲ್ಲಿ ಪೂರ್ವಪಕ್ಷದ ಉತ್ತರ. ॥೬೧-೬೩॥
(ಮೋಕ್ಷದ ಪ್ರಥಮ ಅಂಶದ ಇಚ್ಛೆಯುಂಟಾಗಿದೆ.)

ಪೂರ್ವಪಕ್ಷಿಯು ಪ್ರಥಮದಲ್ಲಿ ಹೇಳಿದ್ದೇನೆಂದರೆ, "ಆ ಮೋಕ್ಷದ ಇಚ್ಛೆಯು ಯಾರಿಗೂ ಉಂಟಾಗುವದಿಲ್ಲ. ಯಾಕೆಂದರೆ,—ಮೋಕ್ಷ ವಿಷಯದಲ್ಲಿ ಎರಡು ಅಂಶಗಳಿರುವವು.

(೧) ಒಂದು ಕಾರಣಸಹಿತ ಜಗತ್ತಿನ ನಿವೃತ್ತಿಯು ಮೋಕ್ಷದ ಅಂಶವಾಗಿರುವದು.

(೨) ಎರಡನೇ ಅಂಶವು ಬ್ರಹ್ಮನ ಪ್ರಾಪ್ತಿರೂಪವಾಗಿರುವದು.

ಇವುಗಳಲ್ಲಿ ಕಾರಣಸಹಿತ ಜಗತ್ತಿನ ನಿವೃತ್ತಿರೂಪ ಮೋಕ್ಷದ ಪ್ರಥಮಾಂಶದ ಇಚ್ಛೆಯು ಯಾರಿಗಾದರೂ ಇರುವದೋ ಇಲ್ಲವೋ ! ಅಂದರೆ ಮೂರು ಪ್ರಕಾರದ ದುಃಖಗಳ ನಿವೃತ್ತಿಯ ಇಚ್ಛೆಯು ಸರ್ವಪುರುಷರಿಗೂ ಇರುವದು. ಆ ದುಃಖಗಳ ನಿವೃತ್ತಿಯು ತಮ್ಮತಮ್ಮ ಉಪಾಯಗಳಿಂದಲೇ ಉಂಟಾಗುವದು. ಈ ಕಾರಣದಿಂದ ಮೂಲಸಹಿತ ಜಗತ್ತಿನ ನಿವೃತ್ತಿಯ ಇಚ್ಛೆಯುಳ್ಳ ಮುಮುಕ್ಷುವು ಅಧಿಕಾರಿಯಾಗಲಿಲ್ಲ:

ಟಿಪ್ಪಣಿ—೧ ಯಾವದರ ವಿಧಾನವನ್ನೂ, ಅಥವಾ ನಿಷಿದ್ಧವನ್ನೂ ವೇದದಲ್ಲಿ ಹೇಳಿರುವದಿಲ್ಲವೋ ಅಂಥ ಯಾವ ರಾಗದ್ವೇಷದಿಂದ ರಹಿತವಾದ ಸ್ವಭಾವಿಕ ಗಮನ, ಶೌಚ, ಮೊದಲಾದ ಕ್ರಿಯೆಗಳೇ ಉದಾಸೀನ ಕ್ರಿಯೆಗಳು.

[೨] ಅವಶ್ಯಕವಾಗಿ ಮಾಡಬೇಕಾಗಿದ್ದ ಯೋಗ್ಯ ಕಾರ್ಯಗಳ ವಿಸ್ಮರಣೆಗೆ ಪ್ರಮಾದವೆನ್ನುವರು. ಅಥವಾ ಶಾಸ್ತ್ರದಿಂದ ಮಾಡಲಿಕ್ಕೆ ಯೋಗ್ಯವಾಗಿದ್ದ ಮತ್ತು ಯಾವದನ್ನು ಮಾಡಲಿಕ್ಕೆ ಇಚ್ಛೆಯುಂಟಾಗಿದ್ದ ಯಾವ ಕಾರ್ಯವುಂಟೋ ಅದನ್ನು ಮಾಡದೆ ಇರುವದೇ, ಪ್ರಮಾದವೆನ್ನಿಸಿಕೊಳ್ಳುವದು. ಸನ್ಯಾಸಿಗಳು ದ್ರವ್ಯವನ್ನು ತೆಗೆದುಕೊಳ್ಳಬಾರದೆಂದು ಶಾಸ್ತ್ರಾಜ್ಞೆಯಿರುವದು. ಆ ದ್ರವ್ಯವನ್ನು ತೆಗೆದುಕೊಳ್ಳಬಾರದೆಂಬ ಇಚ್ಛೆಯಾದರೂ ಇರುವದು, ಹೀಗಿದ್ದು ದ್ರವ್ಯವನ್ನು ಗ್ರಹಣಮಾಡುವ ಪ್ರಸಂಗ ಬಂದರೆ ಅದು ಪ್ರಮಾದವೆನ್ನಿಸಿಕೊಳ್ಳುವದು.

[೩) ಸ್ವದೇಶದಲ್ಲಿ ವೃಷ್ಟಿಯಾಗಬೇಕೆಂಬ ಇಚ್ಛೆಯುಳ್ಳ ರಾಜನು ತನ್ನ ಪ್ರಜೆಗಳಿಂದ ಧನದ ವಿಭಾಗ ರೂಪಕವನ್ನು ತೆಗೆದುಕೊಂಡು, ಯಾವ ಯಾಗವನ್ನು ಮಾಡುವನೋ ಅದುಅಥವಾವಂಶವೃಕ್ಷದ ಅಂಕುರಕ್ಕೆ ಶರೀರವೆನ್ನುತ್ತಾರೆ. ಅದರ ಹೋಮವನ್ನು ಮಾಡತಕ್ಕ ಯಾವಯಾಗವು ಇರುವದೋ, ಅದಕ್ಕೆ ಕಾರೀರೀ ಯಾಗವೆಂದೆನ್ನುವರು.

ಸುಷುಪ್ತಿಯಲ್ಲಿ ಅಜ್ಞಾನದ ಪ್ರತೀತಿಯು ಆಗಬಾರದು.ಈ
ಆತ್ಮನು ಪ್ರಕಾಶರೂಪನಾಗಿದ್ದಾನೆ. ಆದರೆ ಆತ್ಮನ ಸ್ವರೂಪ
ಅಜ್ಞಾನಕ್ಕೆ ವಿರೋಧಿಯಲ್ಲ. ಪುನರಪಿ ಆತ್ಮನ ಸ್ವರೂಪ
ಅಜ್ಞಾನದ ಸಾಧಕವಾಗಿರುವದು.

ಈ ಅಭಿಪ್ರಾಯದಿಂದಲೇ ವೇದಾಂತಶಾಸ್ತ್ರದಲ್ಲಿ ಹೇ
ನೆಂದರೆ—"ಸಾಮಾನ್ಯ ಚೈತನ್ಯವು ಅಜ್ಞಾನಕ್ಕೆ ವಿರೋಧಿ
ವಿಶೇಷಚೈತನ್ಯವೇ ಅಜ್ಞಾನಕ್ಕೆ ವಿರೋಧಿಯಾಗಿದೆ.
ಯಾವ ಚೈತನ್ಯವಿರುವದೋ, ಅದು ಸಾಮಾನ್ಯ ಚೈತನ್ಯವು.
ಸ್ಥಿತವಾದ ಚೈತನ್ಯವು ವಿಶೇಷ ಚೈತನ್ಯವು. ಕಟ್ಟಿಗೆಯಲ್ಲಿ
ಹೇಗೆ ಅಂಧಕಾರಕ್ಕೆ ವಿರೋಧಿಯಾಗಿರುವದಿಲ್ಲವೋ, ಮತ್ತು
ಪ್ರಕಟವಾದ ಅಗ್ನಿಯು ಬತ್ತಿಯಲ್ಲಿ ಸ್ಥಿತವಾಗಿ ಅಂಧಕಾ
ವಿರೋಧಿಯಾಗುವದೋ, ಹಾಗೆ ವ್ಯಾಪಕ ಚೈತನ್ಯವು ಅಜ್ಞಾ
ಧಿಯಲ್ಲ. ಆದರೆ ವೇದಾಂತವಿಚಾರದಿಂದ ಯಾವ ಬ್ರಹ್ಮಾ
ಯುಂಟಾಗುವದೋ, ಅದರಲ್ಲಿ ಸ್ಥಿತವಾದ ಯಾವ ಚೈತನ್ಯ
ಅದು ಅಜ್ಞಾನಕ್ಕೆ ವಿರೋಧಿಯಾಗಿರುವದು. ಈ ರೀತಿಯಿಂ

ಚೈತನ್ಯವು ಅಜ್ಞಾನಕ್ಕೆ ವಿರೋಧಿಯಾಗಿರುವದಿಲ್ಲ. ಆದರೆ (೧)
ಸಹಿತ ಚೈತನ್ಯವು ಅಜ್ಞಾನಕ್ಕೆ ವಿರೋಧಿಯಾಗಿದೆ. (೨) ಅ
ನ್ಯಸಹಿತ ವೃತ್ತಿಯು ಅಜ್ಞಾನಕ್ಕೆ ವಿರೋಧಿಯಾಗಿದೆ. (೧)
ಪಕ್ಷದಲ್ಲಿ ಯಂತೂ ಅಜ್ಞಾನನಾಶದ ಸಾಧನವೇ ಚೈತನ್ಯವು
ಸಹಾಯವು. (೨) ಎರಡನೇ ಪಕ್ಷದಲ್ಲಿ ಅಜ್ಞಾನನಾಶದ
ವೃತ್ತಿಯು ; ಚೈತನ್ಯವೇ ಸಹಾಯಕವು. ಇದು ಅವಚ್ಛೇ
ರೀತಿಯಾಗಿರುವದು. ಆಭಾಸವಾದದಲ್ಲಿ ಸಾಮಾನ್ಯಚೈತನ್ಯ
ಷಚೈತನ್ಯವು ಸಹ ಅಜ್ಞಾನಕ್ಕೆ ವಿರೋಧಿಯಲ್ಲ. ಆದರೆ
ಆಭಾಸವು ಅಥವಾ ಆಭಾಸ ಸಹಿತ ವೃತ್ತಿಯು ಅಜ್ಞಾನಕ್ಕೆ
ಯಾಗಿದೆ ಈ ರೀತಿಯಿಂದ ಪ್ರಕಾಶರೂಪ ಚೈತನ್ಯವು ಅಜ್ಞಾನ
ಧಿಯಲ್ಲ. ಆದಕಾರಣ ಅಜ್ಞಾನವು ವಿರುವದು. ಆ ಅಜ್ಞಾ
ವೃತನಾದ ಆತ್ಮನು ಇವನ ವಿಷಯದಲ್ಲಿ ಬಂಧದ ಅಧ್ಯಾಸ

॥೮೬॥ ಈ ಪೂರ್ವದಲ್ಲಿ ಹೇಳಿದ—"ಸಾಮಾನ್ಯರೂಪದಿಂದ
ಮತ್ತು ವಿಶೇಷರೂಪದಿಂದ ಅಜ್ಞಾತ, ವಸ್ತುವಿನಲ್ಲಿ ಅಧ್ಯಾಸ



ದೆ. ಆತ್ಮನಲ್ಲಿ ಸಾಮಾನ್ಯ ವಿಶೇಷಭಾವವಿರುವದಿಲ್ಲ; ಈ ಕಾರಣ
ದ ನಿರ್ವಿಶೇಷ ಆತ್ಮನು, ಜ್ಞಾತ ಮತ್ತು ಅಜ್ಞಾತನೆಂಬದು ಸಂಭವಿಸು
ಲ್ಲ. ಅವನ ವಿಷಯದಲ್ಲಿ ಅಧ್ಯಾಸವು ಅಸಂಭವವು." ಎಂಬ ಈ
ೇಪವು ಸಂಭವಿಸುವದಿಲ್ಲ. ಯಾಕಂದರೆ :— "ಆತ್ಮ ನಿರುವನು"
ಬದು ಸರ್ವರಿಗೂ ಪ್ರತೀತವಾಗಿದೆ. ಆತ್ಮಾನಾದವು ತಮ್ಮ ಸ್ವರೂ
ೇ ಆಗಿರುವುದು. "ನಾನು ಇರುವದಿಲ್ಲ" ಎಂಬದು ಯಾರ ಪ್ರತೀ
ೂ, ಬರುವದಿಲ್ಲ ಆದರೆ "ನಾನು ಇರುವೆನು" ಎಂಬದು ಸರ್ವರಿಗೂ
ೀತವಾಗಿದೆ. ಈ ಕಾರಣದಿಂದ ಸತ್‌ರೂಪದಿಂದ ಸರ್ವರಿಗೂ ಆತ್ಮನೆ
ನ (ಎಚ್ಚರಿಕೆ) ವದೆ. "ಚೈತನ್ಯ, ಆನಂದ ವ್ಯಾಪಕ ; ನಿತ್ಯ ಶುದ್ಧ,
ಮುಕ್ತರೂಪ, ಆತ್ಮನಿರುವನು" ಎಂಬದು ಸರ್ವರಿಗೂ ಪ್ರತೀತವಾ
ದಿಲ್ಲ. ಈ ಕಾರಣದಿಂದ ಚೈತನ್ಯ, ಆನಂದ, ವ್ಯಾಪಕ, ನಿತ್ಯಮುಕ್ತ
ಪದಿಂದ ಆತ್ಮನು ಅಜ್ಞಾತ ನಿರುವನು ; ಮತ್ತು ಸತ್‌ರೂಪದಿಂದ
ತನೂ ಇರುವನು. ಈ ಸಂಗತಿಯು ಅನುಭವಸಿದ್ಧವಾಗಿದೆ. ಈ ಅನು
ಸಿದ್ಧವಾರ್ತೆಯು ಯುಕ್ತಿಯಿಂದ ದೂರವಾಗುವದಿಲ್ಲ.

೧. ಸರ್ವರಿಗೂ ಪ್ರತೀತವಾದ ಯಾವ ಆತ್ಮನ ಸತ್‌ರೂಪವಿರುವು
ೇ ಅದು ಸಾಮಾನ್ಯರೂಪವಾಗಿರುವದು.

೨. ಕೇವಲ ಜ್ಞಾನಿಗಳಿಗೆ ಪ್ರತೀತವಾದ ಚೇತನ, ಆನಂದಾದಿ ಸ್ವ
ಪಗಳು ವಿಶೇಷರೂಪವು.

೧. ಯಾವದು ಅಧಿಕಕಾಲದಲ್ಲಿ ಅಧಿಕದೇಶದಲ್ಲಿ ಇರುವದೋ, ಆ
ಸಾಮಾನ್ಯರೂಪವೆಂದು ಅನ್ನುತ್ತಾರೆ.

೨. ಕಿಂಚಿತ್ ದೇಶದಲ್ಲಿ, ಕಿಂಚಿತ್ ಕಾಲದಲ್ಲಿ ಯಾವುದು ಇರು
ದೋ ಅದು ವಿಶೇಷರೂಪವೆನ್ನುತ್ತಾರೆ.

ಯದ್ಯಪಿ ಚೈತನ್ಯಾದಿಕ ಆತ್ಮನಸ್ವರೂಪಗಳಿರುವದರಿಂದ ಸತ್ ಅಂಶ
ತೆ ಚೈತನ್ಯಾದಿಗಳು ಸರ್ವತ್ರವ್ಯಾಪಕನಾಗಿರುವವು ಸತ್ ಅಂಶದ ಅಪೇ
ಯಿಂದ ಚೇತನ ಆನಂದಾದಿಗಳಿಗೆ ಕಿಂಚಿತ್ ದೇಶದಲ್ಲಿ, ಮತ್ತು ಚೇತನ
ನಂದಾದಿಗಳ ಅಪೇಕ್ಷೆಯಿಂದ ಸತ್ ಅಂಶಕ್ಕೆ ಅಧಿಕದೇಶದಲ್ಲಿ ಎಂಬನಾ
ಸಂಭವವಾಗುವದಿಲ್ಲ. ಈ ಕಾರಣದಿಂದ ಸತ್ ಅಂಶವು ಆತ್ಮನಸಾಮಾ
ಅಂಶವು ಮತ್ತು ಚೇತನ, ಆನಂದಾದಿಗಳು ವಿಶೇಷ ಅಂಶವಾಗಿರುವವು
ಬದೂ ಸಂಭವಿಸುವದಿಲ್ಲ. ತಥಾಪಿ ಸತ್ ಅಂಶದ ಪ್ರತೀತಿಯು ಸರ್ವರಿ
ಅವಿದ್ಯಾಕಾಲದಲ್ಲಿ ಸಹ, ಆಗುತ್ತದೆ. "ಚೇತನ, ಆನಂದರೂಪ ಆತ್ಮ

ನಿರುವನು." ಎಂಬ ಪ್ರತೀತಿಯು ಸರ್ವರಿಗೆ ಅವಿದ್ಯಾಕಾಲದಲ್ಲಿ
ದಿಲ್ಲ. ಕೇವಲ ಜ್ಞಾನಿಗಳಿಗೇ ಆಗುತ್ತದೆ. ಅವಿದ್ಯಾಕಾಲದ
ನ್ಯಾದಿಗಳು ಇರುವವು, ಆದರೆ ಪ್ರತೀತವಾಗುವದಿಲ್ಲ, ಎನ್ನು
ಆಗದೆ ಇದ್ದಂತೆಯೇ ಆಯಿತು. ಈ ಅಭಿಪ್ರಾಯದಿಂದ, ೧.
ಆನಂದಾದಿಗಳಿಗೆ ನ್ಯೂನಕಾಲ ವೃತ್ತಿಯೆಂದು ಹೇಳಿದರು.
ರೂಪಕ್ಕೆ ಅಧಿಕಕಾಲ ವೃತ್ತಿಯೆಂದು ಹೇಳಿದರು. ಈ ರೀತಿಯಿ
ರೂಪಕ್ಕೂ ಮತ್ತು ಚೇತನ ಆನಂದಾದಿಗಳಿಗೂ ಸಾಮಾನ್ಯ
ಭಾವವು ಸಹ ಇರುವದಿಲ್ಲ. ಆದರೆ ಅಲ್ಪಕಾಲ ಮತ್ತು ಅಧಿಕ
ಪ್ರತೀತವಾಗುವದರಿಂದ ಸಾಮಾನ್ಯ ವಿಶೇಷ ಭಾವದಂತೆ ಇರುವ
ಕಾರಣದಿಂದ. ೧. ಆತ್ಮನ ಸತ್‌ರೂಪವು ಸಾಮಾನ್ಯ ಅಂಶವೆಂದು
ದರು. ೨. ಚೇತನ ಆನಂದಾದಿಗಳು ವಿಶೇಷವೆಂಶವೆಂದು ಹೇ
ಆತ್ಮನು ನಿರ್ವಿಶೇಷನಿರುವನು ಎಂಬ ಸಿದ್ಧಾಂತಕ್ಕೂ ಹಾನಿಯು
ವದಿಲ್ಲ. ಒಂದು ಸಮಯ, ಆತ್ಮನಲ್ಲಿ ಸಾಮಾನ್ಯ ವಿಶೇಷಭಾ
ಅಂಗೀಕರಿಸಿದರೆ, "ನಿರ್ವಿಶೇಷ ಆತ್ಮನಿರುವನು" ಎಂಬ ಸಿದ್ಧಾ
ಹಾನಿಯು ಬರುವದು. ಆದರಿಂದ ಸಾಮಾನ್ಯ ವಿಶೇಷಭಾವವನ್ನು
ಕರಿಸಲಿಲ್ಲ. ಆದರೆ ಅವಿದ್ಯೆಯಿಂದ ಸಾಮಾನ್ಯ ವಿಶೇಷವತ್
ಯಾಗುವದು. ಈ ಕಾರಣದಿಂದ ಸಾಮಾನ್ಯ ವಿಶೇಷಭಾವವನ್ನು
ದರು. ಈ ರೀತಿ ಸತ್ಯರೂಪದಿಂದ ಜ್ಞಾತ, ಮತ್ತು ಚೇತನ
ನಿತ್ಯಮುಕ್ತ, ಬ್ರಹ್ಮರೂಪದಿಂದ ಅಜ್ಞಾತನಾದ ಆತನ್ಮನಲ್ಲಿ
ಅಧ್ಯಾಸವು ಉಂಟಾಗುತ್ತದೆ. ಈ ಅಧ್ಯಾಸರೂಪ ಬಂಧವು ಜ್ಞಾ
ನಿವೃತ್ತವೂ ಆಗುತ್ತದೆ. ಈ ಕಾರಣದಿಂದ ಗ್ರಂಥದ ಪ್ರಯೋ
ಉಂಟಾಗುತ್ತದೆ.

||೮೭|| ವಿಷಯು ೫೧-೫೪ ರಲ್ಲಿಯ ಪೂರ್ವಪಕ್ಷದ ಉತ್ತರವು ||

(ಪೂರ್ವಪಕ್ಷಿ) ಈ ಪೂರ್ವದಲ್ಲಿ ಹೇಳಿದ "ನಿಷಿದ್ಧಕಾಮ್ಯ
ಗಳನ್ನು ತ್ಯಾಗಮಾಡಿ, ನಿತ್ಯ ನೈಮಿತ್ತಿಕ, ಪ್ರಾಯಶ್ಚಿತ್ತ ಕರ್ಮ
ಮಾಡಲು, ನಿಷಿದ್ಧ ಕರ್ಮಗಳ ಅಭಾವದಿಂದ ನೀಚಲೋಕಗಳು
ವಾಗುವದಿಲ್ಲ. ಕಾಮ್ಯಕರ್ಮಗಳ ಅಭಾವದಿಂದ ಉತ್ತಮಲೋ
ಪ್ರಾಪ್ತವಾಗುವದಿಲ್ಲ ; ನಿತ್ಯ ನೈಮಿತ್ತಿಕ ಕರ್ಮಗಳನ್ನು
ಇರುವದರಿಂದ ಯಾವ ಪಾಪಗಳು ಪ್ರಾಪ್ತವಾಗುವವೋ, ಅವು



ನ್ನು ಮಾಡುವದರಿಂದ ಪ್ರಾಪ್ತವಾಗುವದಿಲ್ಲ. ಇಹಜನ್ಮದಲ್ಲಿ ಅಥವಾ
ನ್ಯಜನ್ಮದ ಪೂರ್ವದಲ್ಲಿ ಮಾಡಿದಂಥ ಯಾವ ಪಾಪಗಳಿರುವವೋ, ಅವು
ಧಾರಣ ಮತ್ತು ಅಸಾಧಾರಣ ಪ್ರಾಯಶ್ಚಿತ್ತದಿಂದ ನಾಶವಾಗುವದ
ದೆ ಪೂರ್ವದಲ್ಲಿ ಮಾಡಿದಂಥ ಯಾವ ಕಾಮ್ಯ ಕರ್ಮಗಳಿರುವವೋ, ಅವು
ಫಲಾಪೇಕ್ಷೆಯ ಅಭಾವದಿಂದ ಮುಮುಕ್ಷುಗಳಿಗೆ ಅವುಗಳ ಫಲವು
ಪ್ರಾಪ್ತವಾಗುವದಿಲ್ಲ. ಆದ್ದರಿಂದ ಮುಮುಕ್ಷುಗಳಿಗೆ ಜ್ಞಾನದ ಹೊರ್ತು
ನ್ಮದ ಅಭಾವರೂಪ ಮೋಕ್ಷವಾಗುವದು.

(ಸಿದ್ಧಾಂತಿ) ಇದು ಅಸಂಭವವು. ಯಾಕಂದರೆ, ನಿತ್ಯನೈಮಿತ್ತಿಕ
ಗಳಿಂದಲೂ, ಸ್ವರ್ಗರೂಪ ಫಲವು ದೊರಕುವುದು, ಎಂಬ ಸಂಗತಿ
ನ್ನು ಭಾಷ್ಯಕಾರನು ಯುಕ್ತಿ ಮತ್ತು ಪ್ರಮಾಣಗಳಿಂದ ಪ್ರತಿಪಾದನ
ಮಾಡಿರುವನಾದ ಕಾರಣ ನಿತ್ಯನೈಮಿತ್ತಿಕ ಕರ್ಮಗಳಿಂದ ಉತ್ತಮಲೋಕವು
ಪ್ರಾಪ್ತವಾಗುವದು. ಜನ್ಮದ ಅಭಾವವು ಸಂಭವಿಸುವದಿಲ್ಲ. ಮತ್ತು
ನೈಮಿತ್ತಿಕ ಕರ್ಮಗಳ ಬೋಧವನ್ನು ಮಾಡತಕ್ಕ ವೇದಗಳು ನಿಷ್ಫಲವಾ
ವವು. ಕಾರಣವೇನೆಂದರೆ-ನಿತ್ಯನೈಮಿತ್ತಿಕ ಕರ್ಮಗಳನ್ನುಮಾಡದೆ ಇರು
ವದರಿಂದ ಪಾಪವು ಉಂಟಾಗುವದಿಲ್ಲ. ಕಾರಣವೇನಂದರೆ-ನಿತ್ಯನೈಮಿತ್ತಿಕ
ಕರ್ಮಗಳನ್ನು ಮಾಡದೇ ಇರುವದೇ ಅಭಾವರೂಪವಾಗಿದೆ. ಪಾಪವು ಭಾವ
ರೂಪವಾಗಿದೆ. ಅಭಾವದಿಂದ ಭಾವದ ಉತ್ಪತ್ತಿಯುಂಟಾಗುವದಿಲ್ಲ.
ಈ ಕಾರಣದಿಂದ "ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡದೆ ಇರುವದರಿಂದ
ಪಾಪವುಂಟಾಗುತ್ತದೆ." ಎನ್ನುವದು ಸಂಭವಿಸುವದಿಲ್ಲ. ನಿತ್ಯನೈಮಿತ್ತಿಕ
ಕರ್ಮಗಳನ್ನು ಮಾಡದೆ ಇರುವದರಿಂದ ಪಾಪೋತ್ಪತ್ತಿಯೆಂದು ಅಂಗೀಕರಿ
ಸಿದರೆ "ಅಭಾವದಿಂದ ಭಾವದ ಉತ್ಪತ್ತಿಯು ಉಂಟಾಗುವದಿಲ್ಲ.''
ಎಂದು ದ್ವಿತೀಯ ಅಧ್ಯಾಯದಲ್ಲಿ ಹೇಳಿದ ಭಗವದುಕ್ತಿಗೆ ವಿರೋಧ ಬರು
ವದು. ಆದಕಾರಣ ನಿತ್ಯನೈಮಿತ್ತಿಕ ಕಾರ್ಯಗಳ ಅಭಾವದಿಂದ ಭಾವ
ರೂಪ ಪಾಪದ ಉತ್ಪತ್ತಿಯು ಸಂಭವಿಸುವದಿಲ್ಲ. ಈ ರೀತಿಯಿಂದ ನಿತ್ಯ
ನೈಮಿತ್ತಿಕ ಕರ್ಮಗಳ ಪಾಪದ ಅನುತ್ಪತ್ತಿ ಫಲವಿಲ್ಲ. ಆದರೆ ನಿತ್ಯನೈಮಿ
ತ್ತಿಕ ಕರ್ಮಗಳ ಹೊರ್ತು ಪಾಪದ ಅನುತ್ಪತ್ತಿಯು ಸಿದ್ಧವಾಗುವದು.
ಆದ್ದರಿಂದ ನಿತ್ಯನೈಮಿತ್ತಿಕ ಕರ್ಮಗಳ ಸ್ವರ್ಗರೂಪ ಫಲವನ್ನು ಅಂಗೀಕರಿಸ
ದಿದ್ದರೆ ಕರ್ಮವು ನಿಷ್ಫಲವಾಗುವದು. ಅಲ್ಲದೆ ನಿಷ್ಫಲವಾದ ನಿತ್ಯನೈಮಿ
ತ್ತಿಕ ಕರ್ಮಗಳ ಬೋಧಕವಾದ ವೇದವು ಸಹನಿಷ್ಫಲವಾಗುವುದು. ಈ
ಕಾರಣದಿಂದ ನಿತ್ಯನೈಮಿತ್ತಿಕ ಕರ್ಮಗಳಿಂದ ಸಹ ಸ್ವರ್ಗಫಲವು ಪ್ರಾಪ್ತವಾ
ಗುವದು.

॥೮೮॥ ಈ ಪೂರ್ವದಲ್ಲಿ ಹೇಳಿದ ಜನ್ಮಾಂತರದ ಕಾಮ್ಯ ಇಚ್ಛೆಯ ಅಭಾವದಿಂದ ಫಲವುಂಟಾಗುವದಿಲ್ಲ." ಎಂಬ ಈ ದವೂ ಸಹ ಸರಿಯಾದದ್ದಲ್ಲ. ಯಾಕಂದರೆ ಕರ್ಮರೂಪೀ ಬೀಜದಿ ಡು ಅಂಕುರಗಳು ಉತ್ಪನ್ನವಾಗುವವು. ಒಂದು ವಾಸನಾ ಎರಡನೇದು ಅದೃಷ್ಟವೆಂಬುದು, ಧರ್ಮ ಅಧರ್ಮಗಳ ನಾಮನೇ ಶುಭಕರ್ಮದಿಂದ ಶುಭವಾಸನೆ, ಮತ್ತು ಧರ್ಮರೂಪ ಅಂಕುರವು ವಾಗುತ್ತದೆ. ಅಶುಭಕರ್ಮದಿಂದ ಅಶುಭವಾಸನಾ, ಮತ್ತು ರೂಪ ಅಂಕುರವು ಉತ್ಪನ್ನವಾಗುತ್ತದೆ. ಶುಭವಾಸನೆಯಿಂದ ಶುಭಕರ್ಮದಲ್ಲಿ ಪ್ರವೃತ್ತಿಯೂ ಮತ್ತು ಧರ್ಮದಿಂದ ಸುಖ ಉಂಟಾಗುವವು. ಇದರಂತೆಯೇ ಅಶುಭವಾಸನೆಯಿಂದ ಅ ದಲ್ಲಿ ಪ್ರವೃತ್ತಿಯೂ ಅಧರ್ಮದಿಂದ ದುಃಖಭೋಗವೂ ಉಂಟಾ ಈ ರೀತಿಯಿಂದ ವಾಸನಾರೂಪ ಮತ್ತು ಅದೃಷ್ಟರೂಪ ಅಂ ಕರ್ಮರೂಪೀ ಬೀಜದಿಂದ ಉಂಟಾಗುತ್ತವೆ, ಇವುಗಳಲ್ಲಿ-೧. ರೂಪ ಅಂಕುರವು ಉಪಾಯದಿಂದ ನಾಶವಾಗುವದು. ೨. ರೂಪ ಅಂಕುರವು ಫಲದ ಉತ್ಪತ್ತಿಯ ಹೊರ್ತು ಯಾವ ಪ್ರ ದಲೂ ನಾಶವಾಗುವದಿಲ್ಲ, ಎಂದು ಶಾಸ್ತ್ರದ ನಿರ್ಣಯವಿರುವ ಅಶುಭಕರ್ಮದಿಂದ ಉತ್ಪನ್ನವಾದ ಅಶುಭವಾಸನಾರೂಪ ಅಂಕುರವು ಗ ಮೊದಲಾದ ಉಪಾಯಗಳಿಂದ ನಾಶವಾಗುವದು. ೨. ದಿಂದ ಉತ್ಪನ್ನವಾದ ಶುಭವಾಸನಾ ಅಂಕುರವು ಕುಸಂಗ ಮೊದ ಗಳಿಂದ ನಾಶವಾಗುವದು.

ಶಾಸ್ತ್ರದಲ್ಲಿ ಎಷ್ಟು ಪುರುಷಾರ್ಥಗಳನ್ನು ಹೇಳಿರುವವೋ ಅ ಪ್ರವೃತ್ತಿಯ ಹೇತುವಾದ ಯಾವ ವಾಸನೆಯುಂಟೋ ಅದೂ ಸಹ ಗುತ್ತದೆ. ಈ ಕಾರಣದಿಂದ ಪುರುಷಾರ್ಥವೂ ಸಹ ಸಫಲವಾಗಿದೆ. ಭೋಗದ ಹೇತುವಾದ ಅದೃಷ್ಟವು, ಇದು ನಾಶವಾಗುವದಿಲ್ಲ. ಫಲವನ್ನು ಕೊಡದ ಹೊರ್ತು ಕರ್ಮದ ನಿವೃತ್ತಿಯಾಗುವದಿಲ್ಲ." ಸಂಗತಿಯನ್ನು ಶಾಸ್ತ್ರದಲ್ಲಿ ಹೇಳಿದೆ. ಇದಕ್ಕೆ ಸಹ ವಿರೋಧ ಗುವದಿಲ್ಲ. ಈ ಪ್ರಕಾರವಾಗಿ ಅಜ್ಞಾನಿಗಳಿಗೆ ಫಲಭೋಗದ ಕರ್ಮದ ನಿವೃತ್ತಿಯು ಸಂಭವಿಸುವದಿಲ್ಲ.



ಜ್ಞಾನಿಗಳಿಗೆ ಭೋಗದ ಹೊರ್ತು ಕರ್ಮನಿವೃತ್ತಿಯು ಸಂಭವಿಸುತ್ತದೆ. ರಣವೇನೆಂದರೆ-ಕರ್ಮ, ಮತ್ತು ಕರ್ತಾ, ಹಾಗೆಯೇ ಫಲ, ಇವು ಸತ್ಯ ಲ್ಲ. ಇವು ಅವಿದ್ಯೆಯಿಂದ ಕಲ್ಪಿತವಾದವುಗಳು. ಈ ಅವಿದ್ಯೆಗೆ ಜ್ಞಾನವು ರೋಧಿಯಾಗಿದೆ. ಆದಕಾರಣ ಅವಿದ್ಯಾಕಲ್ಪಿತ ಕರ್ಮಾದಿಗಳು ಯಾವವು ರುವವೋ ಅವು ಜ್ಞಾನದಿಂದ ನಾಶವಾಗುವವು. ಹೇಗೆ ಸ್ವಪ್ನದಲ್ಲಿ ದ್ರೆಯಿಂದ ಯಾವ ಪದಾರ್ಥಗಳು ಪ್ರತೀತವಾಗುವವೋ, ಅವು ಜಾಗ್ರತೆ ಲ್ಲಿ ನಿದ್ರೆಯ ನಿವೃತ್ತಿಯಿಂದ ಅಭಾವವಾಗುವದು. ಹಾಗೆ ಅವಿದ್ಯಾ ಪ ನಿದ್ರೆಯಿಂದ ಪ್ರತೀತವಾದ ಕರ್ಮ, ಕರ್ತಾ, ಫಲ, ಇವುಗಳು ನದಶಾರೂಪ ಜಾಗ್ರತೆಯಲ್ಲಿ ಅವಿದ್ಯೆಯ ನಿವೃತ್ತಿಯಿಂದ ಅಭಾವವಾ ವವು.

೧. ಇಚ್ಛೆಯ ಅಭಾವದಿಂದ ಕರ್ಮದ ಫಲಭೋಗವು ಉಂಟಾಗದಿ ರೆ ಈಶ್ವರನ ಸಂಕಲ್ಪವು ಅಸತ್ಯವಾಗುವದು. ಯಾಕಂದರೆ-"ಫಲಭೋ ದ ಹೊರ್ತು ಅಜ್ಞಾನಿಯ ಕರ್ಮಗಳ ನಿವೃತ್ತಿಯು ಆಗುವದಿಲ್ಲ'' ಎಂದು ಶಸಂಕಲ್ಪವಿರುವದು. ಇಚ್ಛೆಯ ಅಭಾವದಿಂದ ಕೃತಕರ್ಮಗಳ ಫಲವು ಂಟಾಗದಿದ್ದರೆ ಈಶಸಂಕಲ್ಪವು ಅಸತ್ಯವಾದೀತು ? "ಈಶ್ವರನು ಸತ್ಯ ಂಕಲ್ಪನಾಗಿರುವನು." ಎಂಬ ವಾಕ್ಯವು ಶಾಸ್ತ್ರದಲ್ಲಿ ಪ್ರಸಿದ್ಧವದೆ. ಈ ರಣದಿಂದ "ಇಚ್ಛೆಯ ಅಭಾವದಿಂದ ಪೂರ್ವಕೃತ ಕಾಮ್ಯಕರ್ಮಗಳ ಫಲ ಆಗುವದಿಲ್ಲ" ಎಂಬ ವಾಕ್ಯವು ವಿರುದ್ಧವಾದದ್ದು.

೨. ಇಚ್ಛೆಯ ಅಭಾವದಿಂದಲೇ ಕಾಮ್ಯಕರ್ಮಫಲವು ಉಂಟಾಗದಿದ್ದರೆ ಶುಭಕರ್ಮಗಳ ಫಲವು ಯಾರಿಗೂ ಆಗಬಾರದಿತ್ತು ! ಯಾಕಂದರೆ ಅಶುಭ ರ್ಮದ ಫಲವು ದುಃಖವು. ಇದನ್ನು ಯಾರೂ ಇಚ್ಛಿಸುವದಿಲ್ಲ. ಈಕಾರಣ ದ ಜ್ಞಾನದ ಹೊರ್ತು ಕರ್ಮದ ಫಲದ ಅಭಾವವು ಆಗುವದಿಲ್ಲ.

॥೮೯॥ ಈ ಪೂರ್ವದಲ್ಲಿ ಹೇಳಿದ "ಹೇಗೆ ಕರ್ಮದ ಅನುಷ್ಠಾನಕಾಲ ಲ್ಲಿ ಇಚ್ಛಾರಹಿತನಾದ ಪುರುಷನು ಯಾವನು ಇರುವನೋ, ಅವನಿಗೆ ರ್ಮದ ಫಲವನ್ನು ವೇದಾಂತ ಮತದಲ್ಲಿ ಅಂಗೀಕರಿಸಿರುವದಿಲ್ಲ, ಹಾಗೆಯೇ ರ್ಮದ ಅನುಷ್ಠಾನಾನಂತರ ಸಹ ಯಾವ ಪುರುಷನ ಇಚ್ಛೆಯು ನಿವೃತ್ತ ವಾಗಿರುವದೋ ಅವನಿಗೆ ಸಹಾ ಕರ್ಮಫಲವು ಆಗುವದಿಲ್ಲ." ಈ ಆಕ್ಷೇಪ ವನ್ನು ವೇದಾಂತಮತವು ತಿಳಿಯದೇ ಇರುವದು. ಯಾಕಂದರೆ-ಫಲೇ ಚ್ಛಾಸಹಿತ ಕರ್ಮಮಾಡಿದರೂ ಅಥವಾ ಫಲೇಚ್ಛಾರಹಿತ ಕರ್ಮ ಮಾಡಿ

ದರೂ ಸಹ ಅವನಿಗೆ ಕರ್ಮದ ಫಲಭೋಗವು ನಿಶ್ಚಯವಾಗಿ
ಆದರೆ ಇಚ್ಛಾರಹಿತ ಕರ್ಮದಿಂದ ಅಂತಃಕರಣವು ಶುದ್ಧವಾಗು
ತ್ತು ಇಚ್ಛಾಸಹಿತ ಕರ್ಮಮಾಡಿದವನಿಗೆ ಕೇವಲಭೋಗವು ಮಾ
ಗುವದು, ಅಂತಃಕರಣವು ಶುದ್ಧವಾಗುವದಿಲ್ಲ.

೧. "ಇಚ್ಛಾರಹಿತ ಕರ್ಮದಿಂದ ಶುದ್ಧಾಂತಃಕರಣನಾಗಿ ಶ
ಜ್ಞಾನವುಂಟಾಗುವದು, ಆವನಿಗೆ ಕರ್ಮಫಲವಾಗುವದಿಲ್ಲ."

೨. "ಯಾವದು ಕರ್ಮವನ್ನು ಫಲೇಚ್ಛಾರಹಿತನಾಗಿ ಮಾಡಿ
ಹಾಗೆ ಮಾಡಿದರೂ ಸಹ ಶ್ರವಣಾಭಾವದಿಂದ ಅಥವಾ ಅನ್ಯನಿ
ಜ್ಞಾನವಾಗದಿದ್ದರೆ ಇಚ್ಛಾರಹಿತ ಕರ್ಮದ ಫಲಭೋಗವು ನಿವೃತ್ತ
ದಿಲ್ಲ" ಇದು ವೇದಾಂತ ಸಿದ್ಧಾಂತವು. ಈ ಕಾರಣದಿಂದ

ಹೊರ್ತು ಕರ್ಮದ ಫಲಭೋಗ ನಿವೃತ್ತವಾಗುವದಿಲ್ಲ.

॥೯೦॥ "ಪ್ರಾಯಶ್ಚಿತ್ತದಿಂದ ಸಂಪೂರ್ಣ ಅಶುಭಕರ್ಮಗಳ
ಗುವದು" ಎಂದು ಈ ಪೂರ್ವದಲ್ಲಿ ಹೇಳಿದೆ, ಇದೂ ಸಿದ್ಧವಾ
ಯಾಕಂದರೆ-ಅನಂತ ಕಲ್ಪಗಳಲ್ಲಿ ಮಾಡಿದ ಅಶುಭಕರ್ಮಗಳಿಗೆ ಒಂ
ದಲ್ಲಿ ಪ್ರಾಯಶ್ಚಿತ್ತವು ಸಂಭವಿಸುವದಿಲ್ಲ. ಮತ್ತು ಗಂಗಾಸ್ನಾ
ಈಶ್ವರ ನಾಮೋಚ್ಚಾರಣ ಮೊದಲಾದ ಸರ್ವವೂ ಪಾಪನಾಶಕ ಸ
ಪ್ರಾಯಶ್ಚಿತ್ತಗಳಾಗಿರುವವು, ಇವು ಸಹ ಜ್ಞಾನದ ಸಾಧನಗಳಾ
ಈ ಕಾರಣದಿಂದ ಸರ್ವಪಾಪಗಳ ನಾಶವೆಂದು ಹೇಳಿದೆ. ಇದರಿಂದ
ದಿಂದಲೂ ಸರ್ವಪಾಪಗಳ ನಾಶವು ಆಗುವದು.

॥೯೧॥ "ನಿತ್ಯನೈಮಿತ್ತಿಕ ಕರ್ಮವನ್ನು ಮಾಡುವದರಿಂದ
ಕ್ಲೇಶವು ಆಗುವದೋ, ಅದು ಪೂರ್ವಸಂಚಿತ ನಿಷಿದ್ಧಕರ್ಮಗಳ ಫಲ
ಇದರಿಂದ ಸಂಚಿತ ನಿಷಿದ್ಧ ಕರ್ಮಗಳ ಫಲವು ಬೇರೆ ಉಂಟಾಗು
ಇದೂ ಸಿದ್ಧವಾಗುವದಿಲ್ಲ. ಏಕೆಂದರೆ, ಅನಂತಪ್ರಕಾರದ ಸಂಚಿ
ಕರ್ಮಗಳ ಫಲವು ಸಹಾ ಅನಂತಪ್ರಕಾರದ ದುಃಖಗಳಾಗಿರುವವು
ಕರ್ಮದ ಅನುಷ್ಠಾನದ ಕ್ಲೇಶದಿಂದಲೇ ಅವುಗಳ ಫಲವು ಉಂಟಾ
॥೯೨॥ "ಸಂಪೂರ್ಣ ಸಂಚಿತ ಕಾಮ್ಯಕರ್ಮಗಳಿಂದ ಒಂದೇ



ಉಂಟಾಗುತ್ತದೆ "ಎಂದು ಈ ಪೂರ್ವದಲ್ಲಿ ಹೇಳಲ್ಪಟ್ಟದೆ. ಇದು ಸಹ ಸಿದ್ಧವಾಗುವದಿಲ್ಲ. ಯಾಕಂದರೆ—ಸಂಚಿತ ಕಾಮ್ಯಕರ್ಮಗಳು ಅನಂತಾನಂತವಿರುವವು. ಅವುಗಳ ಭೋಗವು ಒಂದೇ ಜನ್ಮದಲ್ಲಿ ಆಗುವದಿಲ್ಲ. ಒಬ್ಬ ಪುರುಷನಿಗೆ ಒಂದೇ ಕಾಲದಲ್ಲಿ ಅನೇಕ ಶರೀರಗಳಿಂದ ಯಾವ ಭೋಗಗಳನ್ನು ಹೇಳಿರುವದೋ, ಅದು ಸಿದ್ಧಯೋಗಿಯ ಹೊರ್ತು ಬೇರೆಯವರಿಗೆ ಸಂಭವಿಸುವದಿಲ್ಲ. ಮತ್ತು "ಸಿದ್ಧಯೋಗಿಗಂತೂ ಬೇರೆ ಸಂಪೂರ್ಣ ಸಾಮರ್ಥ್ಯವಿರುವದು. ಆದರೆ ಜ್ಞಾನದ ಹೊರ್ತು ಮೋಕ್ಷವು ಉಂಟಾಗುವದಿಲ್ಲ" ಎಂದು ವೇದದ ಸಿದ್ಧಾಂತವಿರುವದು. ಈ ಪ್ರಕಾರ ಕಾಮ್ಯಕರ್ಮ ಮತ್ತು ನಿಷಿದ್ಧಕರ್ಮಗಳನ್ನು ತ್ಯಾಗಮಾಡಿ ಕೇವಲ ನಿತ್ಯನೈಮಿತ್ತಿಕ ಕರ್ಮಗಳನ್ನು ಅಜ್ಞಾನಿಯು ಮಾಡಿದರೂ ಸದ ಅವನಿಗೆ ನಿತ್ಯನೈಮಿತ್ತಿಕ ಕರ್ಮಗಳ ಫಲಗಳನ್ನು ಅನುಭೋಗಿಸುವದರಸಲುವಾಗಿಯೂ, ಮತ್ತು ಪೂರ್ವಕೃತ ಶುಭಾಶುಭ ಕರ್ಮಗಳ ಫಲವನ್ನು ಅನುಭೋಗಿಸುವದರ ಸಲುವಾಗಿಯೂ, ಅನಂತಶರೀರಗಳು ಪ್ರಾಪ್ತವಾಗುವವು. ಮೋಕ್ಷವು ಪ್ರಾಪ್ತವಾಗುವದಿಲ್ಲ. ಈ ಕಾರಣದಿಂದ ಜ್ಞಾನದ್ವಾರಾ ಬಂಧದ ನಿವೃತ್ತಿಯು ಗ್ರಂಥದ ಪ್ರಯೋಜನವಾಗಿದೆ. ಹೇಗೆ ಸ್ವಪ್ನದಲ್ಲಿ ಯಾವ ಮಿಥ್ಯಾಪದಾರ್ಥಗಳು ಪ್ರತೀತವಾಗುವವೋ, ಅವು ಜಾಗ್ರತಿಯ ಹೊರ್ತು ನಿವೃತ್ತವಾಗುವದಿಲ್ಲ. ಇದರಂತೆ ಬಂಧವು ಸಹ ಮಿಥ್ಯಾಪ್ರತೀತವಾಗುತ್ತದೆ. ಇದು ಜ್ಞಾನರೂಪ ಜಾಗ್ರತಿಯ ಹೊರ್ತು ನಿವೃತ್ತವಾಗುವದಿಲ್ಲ.

॥೯೩॥ ಸಂಬಂಧ ಮಂಡನ (೪)

॥ ಗ್ರಂಥಾರಂಭವು ಉಂಟಾಗಿದೆ. ॥

ಈ ರೀತಿಯಿಂದ ಅಧಿಕಾರಿ,ಮತ್ತು ವಿಷಯ,ಪ್ರಯೋಜನದ ಸಂಭವದ ಸಲುವಾಗಿ ಸಂಬಂಧದ ಸಿದ್ಧಿಯುಂಟಾಗುತ್ತದೆ. ಮತ್ತು ಅಧಿಕಾರಿ ಮೊದಲಾದವರ ಸಂಬಂಧದ ಸಲುವಾಗಿ ಗ್ರಂಥದ ಆರಂಭವು ಸಫಲವಾಗಿದೆ.

ಟಿಪ್ಪಣಿ—(೧) ಪ್ರಪಂಚದ ಕಾರಣವಾದ ಅಧಿಷ್ಠಾನದ ವಿಶೇಷರೂಪದ ಯಾವ ಅಜ್ಞಾನವಿರುವದೋ, ಆದರ ಅಧ್ಯಾಸವೇ ಕಾರಣ ಅಧ್ಯಾಸವೆಂದು ಹೇಳುತ್ತಾರೆ. ಯದ್ಯಪಿ ಪ್ರಪಂಚದ ಅಧ್ಯಾಸದ ಕಾರಣವು ಅಜ್ಞಾನವಾಗಿದ್ದರೂ ಅಜ್ಞಾನದ ಅಧ್ಯಾಸದ ಕಾರಣವು ಬೇರೆ ಯಾವದೂ ಇಲ್ಲ. ಇದರಿಂದ ಅಜ್ಞಾನದ ಅಧ್ಯಾಸವು ಉಂಟಾಗಲಿಲ್ಲ. ತಥಾಪಿ ಜ್ಯೋತಿಯಂತೆ, ಮತ್ತು ಸಾಂಖ್ಯಾಭಿಮತ ಸ್ವಪ್ರಕಾಶಿತ ಆತ್ಮನಂತೆ, ಮತ್ತು ನೈಯಾಯಿಕ ಅಭಿಮತಭೇದದಂತೆ, ಅಜ್ಞಾನವು ಸ್ವಪರದ ನಿರ್ವಾಹಕವಾಗಿದೆ. ಈ ಕಾರಣದಿಂದ ಅದರ ಅಧ್ಯಾಸವು ಉಂಟಾಗಿದೆ.

೨. ಹೇಗೆ ಅಂಧಕಾರವು ಆಕಾಶ ಮೊದಲಾದ ನಾಲ್ಕು ಭೂತಗಳ ಗು
ಶಬ್ದ, ಸ್ಪರ್ಶ, ರಸ, ಮತ್ತು ಗಂಧಗಳನ್ನು ಆವರಣ ಮಾಡ
ಗುಣ ರೂಪಗಳನ್ನು ಆವರಣ ಮಾಡುವದೋ, ಈ ಕಾರಣದಿಂ
ರವು ತೇಜದ ಸಾಮಾನ್ಯಸ್ವರೂಪದ ಆಶ್ರಿತವಾಗಿ ಹೇಗೆ ಇ
ಮತ್ತು ಅದನ್ನೇ ವಿಷಯುವನ್ನಾಗಿ ಹೇಗೆ ಮಾಡಿದೆಯೋ (ಆವರಿ
ಈ ಕಾರಣದಿಂದ ಸಾಮಾನ್ಯತೇಜವು ಅಂಧಕಾರದ ವಿರೋಧಿಯು
ಲ್ಲವೊ, ಹಾಗೆ ಅಜ್ಞಾನವು ಸಹಾ ಚೇತನದ ಸಾಮಾನ್ಯ ಪ್ರಕಾಶ
ವಾಗಿ ಇರುವದು. ಮತ್ತು ಅದನ್ನೇ ವಿಷಯುವನ್ನಾಗಿ ಮಾ
ಕಾರಣದಿಂದ ಸಾಮಾನ್ಯ ಚೇತನವು ಅಜ್ಞಾನದ ವಿರೋಧಿಯಲ್ಲ.

೩. ಅವಚ್ಛೇದ ವಾದದಲ್ಲಿ ವೃತ್ತಿಸಹಿತ ಚೈತನ್ಯ, ಅಥವಾ ಚೈತನ್ಯ
ತ್ತಿಯು, ವಿಶೇಷ ಚೈತನ್ಯ [ಕಲ್ಪಿತ ವಿಶೇಷ ಚೈತನ್ಯ]ವೆಂದು ಕ
ಅದು ಅಜ್ಞಾನಕ್ಕೆ ವಿರೋಧಿಯಾಗಿರುವದು. ಇವೆರಡರಲ್ಲಿ ಉತ್ತ
ಶ್ರೇಷ್ಠವಾದದ್ದು. ಯಾಕಂದರೆ ವೃತ್ತಿಗೆ ಸಹಾ ಆವರಣಭಂಗ
ನವು ಉಂಟಾಗುವದರಿಂದ.

೪. ಈ ಪೂರ್ವದಲ್ಲಿ ಹೇಳಿದ್ದೇನಂದರೆ-ಸೂರ್ಯನಲ್ಲಿಯು ಅಂಧಕಾರ
ಕಾಶರೂಪ ಆತ್ಮನಲ್ಲಿ ಅಜ್ಞಾನವು ಸಂಭವಿಸುವದಿಲ್ಲ ಯಾಕಂದರೆ
ಜ್ಯೋತಿಗಳು. ಸಹಾ ತೇಜದ ವಿಶೇಷರೂಪವಾಗಿರುವವು.
ರೂಪವಲ್ಲ. ಮತ್ತು ಆತ್ಮನ ಸ್ವರೂಪವು ಸಾಮಾನ್ಯ ಪ್ರಕಾ
ಈ ಕಾರಣದಿಂದ ಅದು ಅಜ್ಞಾನದ ವಿರೋಧಿಯಲ್ಲ. ಆದರಿಂದ
(ಸೂರ್ಯ] ಮತ್ತು ಸಿದ್ಧಾಂತ ಚೇತನ)ದ ವಿಷಮತ್ವದಿಂದ ಮೇ
ರಿಸಿದ ಆಕ್ಷೇಪಕ್ಕೆ ಅವಕಾಶವಿಲ್ಲ.

೫. ಭೋಗ, ಪ್ರಾಯಶ್ಚಿತ್ತ ಮತ್ತು ಜ್ಞಾನ, ಈ ಮೂರರಿಂದ ಕರ್ಮ
ತ್ತಿಯು ಆಗುತ್ತದೆ, ಇದಕ್ಕೆ ನಾಲ್ಕನೇ ಕಾರಣವು ಇಲ್ಲ.

೧. ಇವುಗಳಲ್ಲಿ ಪ್ರಾರಬ್ಧ ಕರ್ಮವು ಭೋಗದಿಂದ ನಿವೃತ್ತವಾಗುವದು

೨. ಕ್ರಿಯಮಾಣ ಕರ್ಮವು ಪ್ರಾಯಶ್ಚಿತ್ತದಿಂದ ಮತ್ತು ಜ್ಞಾನದಿಂದ
ನಿವೃತ್ತವಾಗುವದು,

೩ ಸಂಚಿತ ಕರ್ಮದ ಕಿಂಚಿತ್ ನಿವೃತ್ತಿಯು ಸಾಧಾರಣ ಪ್ರಾಯಶ್ಚಿ
ಆಗುವದು, ಸಂಪೂರ್ಣ ನಿವೃತ್ತಿಯು ಜ್ಞಾನದಿಂದ ಆಗುವದು,

ದೋಹಾ॥ ದಾದೂ ದೀನದಯಾಲಜೂ।ಸತಸುಖ ಪರಮ
ಜಾನ್ಯೈ ಮತಿಕೀ ಗತಿನಹೀ । ಸೋ ಈ ನಿಶ್ಚಲದಾಸ ॥

ಅನುಬಂಧ ವಿಶೇಷನಿರೂಪಣ ನಾಮ ದ್ವಿತೀಯಸ್ತರಂಗ ಸಮಾ

---



ಓಂ

ವಿಘ್ನೇಶಾಯನಮಃ.

# ಸಟೀಕಾ ತಾತ್ಪರ್ಯ ವಿವರಣ ಸಹಿತ

# ವಿಚಾರ ಸಾಗರ

## ತೃತೀಯಸ್ತರಂಗಃ

ಅಥ ಶ್ರೀಗುರು ಶಿಷ್ಯಲಕ್ಷಣ ॥೯೪-೯೬॥ ಮತ್ತು
॥ಗುರು ಭಕ್ತಿ ಫಲಪ್ರಕಾರ ನಿರೂಪಣಂ ॥೯೭-೧೦೮॥
॥೯೪॥ ಗ್ರಂಥಾರಂಭದ ಪ್ರತಿಜ್ಞೆ ॥

॥ ದೋಹಾ ॥

ಪೇಖಚ್ಯಾರಿ ಅನುಬಂಧಯುತ । ಪಢೈ ಸುನೈಯಹ ಗ್ರಂಥ॥
ಜ್ಞಾನ ಸಹಿತ ಗುರುಸೈ ಜುನರ। ಲಹೈ ಮೋಖಕೊ ಪಂಥ॥೧॥

ಟೀಕಾ॥ ನಾಲ್ಕು ಅನುಬಂಧಗಳನ್ನು ಯಥಾರ್ಥವಾಗಿ ತಿಳಿದುಕೊಂಡು ಶ್ರೋತ್ರೀಯ ಬ್ರಹ್ಮನಿಷ್ಠ ಸದ್ಗುರು ಮುಖದಿಂದ,ಯಾವನು ಈ ಗ್ರಂಥದ ಶ್ರವಣ, ಪಠನ ಮಾಡುವನೋ, ಅವನಿಗೆ ಮೋಕ್ಷಪಂಥ ಅಂದರೆ ಮೋಕ್ಷ ಸಾಧನವಾದ ಜ್ಞಾನವು, ಪ್ರಾಪ್ತವಾಗುವದು. ॥೧॥

॥ ದೋಹಾ ॥

ಅನಯಾಸಹಿ ಮತಿ ಭೂಮಿಮೈ । ಜ್ಞಾನ ಚಿಮನ ಆಬಾದ॥
ಹೈ ಇಹಿ ಕಾರನ ಕಹತಹೂ । ಗುರೂ ಶಿಷ್ಯ ಸಂವಾದ ॥೨॥

ಟೀಕಾ॥ ಗುರು ಶಿಷ್ಯಸಂವಾದದಿಂದ ಅರ್ಥನಿರೂಪಣೆಯನ್ನು ಮಾಡುವದರಿಂದ ಶ್ರೋತೃಗಳಿಗೆ ಸುಲಭವಾಗಿ ಬೋಧವಾಗುವದು. ಈ ಕಾರ

ಣದ ಸಲುವಾಗಿ ಗುರುಶಿಷ್ಯ ಸಂವಾದದಿಂದ ಗ್ರಂಥದ ಆರಂಭವನ್ನು ಮಾಡಿರುವರು. || ೨ ||

ಟಿಪ್ಪಣಿ—[೧]ಜ್ಞಾನರೂಪ ಚಿಮನ ಅಂದರೆ, ಉಪವನವು ಆಬಾದ ಹೃ... ರು ಪ್ರಫುಲ್ಲಿತ ವಾಗುವದು.

---

||೯೫|| ಅಥ ಶ್ರೀಗುರು ಲಕ್ಷಣ ||

|| ಚೌಪಾಈ ||

ವೇದ ಅರ್ಥಕೂ ಭಲ್ಯೆ ಪಿಛಾನ್ಯೆ ।
ಆತಮ ಬ್ರಹ್ಮರೂಪ ಇಕಜಾನ್ಯೆ ||
ಭೇದ ಪಂಚಕೀ ಬುದ್ಧಿ ನಸಾವ್ಯೆ ।
ಅದ್ವಯ ಅಮಲ ಬ್ರಹ್ಮದರಸಾವ್ಯೆ ||೩||
ಭವಮಿಥ್ಯಾ ಮೃಗತೃಷಾ ಸಮಾನಾ ।
ಅನುಲವ ಇಮ ಭಾಖತನಹಿ ಆನಾ ||
ಸೊಗುರುದೆ ಅದ್ಭುತ ಉಪದೇಸಾ ।
ಭೇವಕ ಸಿಖಾನ ಲುಂಭಿತ ಕೇಸಾ ||೪||

ಟೀಕಾ!! "ವೇದದ ಅರ್ಥವನ್ನು ಉತ್ತಮರೀತಿಯಿಂದ ತಿಳಿದಿ... ಎಂಬ ವಾಕ್ಯದಿಂದ ಅಧೀತವೇದ ಆಚಾರ್ಯನಿರಬೇಕು. ಎಂದು ... ತಾಯಿತು. ಅಂತಹನು ಜೀವ ಬ್ರಹ್ಮರ ಏಕತ್ವವನ್ನು ನಿಶ್ಚಯದಿಂದ ... ಯುವನು. ಈ ಕಾರಣದಿಂದ ಆತ್ಮಜ್ಞಾನದಲ್ಲಿ ಯಾವನ ನಿಷ್ಠೆಯು ... ವದೋ, ಅವನು ಆಚಾರ್ಯನಾಗುವನು. ಎಂಬದನ್ನು ಹೇಳಿದಂತಾ... ಯಾವನು ವೇದಪಠನವನ್ನು ಮಾಡಿಯೂ ಸಹ ಜ್ಞಾನವಿಷಯದಲ್ಲಿ ... ನಿಗೆ ನಿಷ್ಠೆಯು ಇಲ್ಲದಿರುವದೋ ಆವನು ಆಚಾರ್ಯನಲ್ಲ. ಯಾ... ಜ್ಞಾನವಿಷಯದಲ್ಲಿ ನಿಷ್ಠೆಯಿದ್ದೂ, ಸಹ ವೇದಪಠನವನ್ನು ಮಾಡ... ದಿದ್ದರೂ ಅವನು ಸ್ವತಃಮುಕ್ತನಿರುವನು. ಆದರೆ ಅವನು ಉಪದೇಶವ... ಯೋಗ್ಯ ಆಚಾರ್ಯನಲ್ಲ. ಯಾಕಂದರೆ ಜಿಜ್ಞಾಸುವಿನ ಆಕ್ಷೇ... ನಿವೃತ್ತಿ ಮಾಡುವಷ್ಟು ಶಕ್ತಿಯು ಅವನಲ್ಲಿ ಇರುವದಿಲ್ಲ. ಯಾವನ... ದಲ್ಲಿ ಆಕ್ಷೇಪವು ಹುಟ್ಟುವದಿಲ್ಲವೋ, ಅಂಥ ಉತ್ತಮಾಧಿಕಾರಿಗೆ ಉ... ಕೊಡಲು, ಯೋಗ್ಯನಿರುವನು. ಆದರೆ ಸರ್ವರಿಗೂ ಉಪದೇಶಮಾಡ... ಗ್ಯನಲ್ಲ. ಈ ಕಾರಣದಿಂದ ಆಚಾರ್ಯನಲ್ಲ ಆದರೆ (೧) ಅಧೀತ ವೇದ...



ಬೇಕು, (೨) ಜ್ಞಾನದಲ್ಲಿ ಅವನಿಗೆ ನಿಷ್ಠೆಯಿರಬೇಕು. ಇಂಥವನಿಗೆ ಆಚಾರ್ಯನೆಂದು ಹೇಳಿದ್ದಾರೆ. (೩) ಶಿಷ್ಯನ ಬುದ್ಧಿಯಲ್ಲಿ ಯಾವ ಐದು ಪ್ರಕಾರದ ಭೇದಭಾನ ವಿರುವವೋ, ಅವುಗಳನ್ನು ಅನೇಕ ಬಗೆಯ ಯುಕ್ತಿಗಳಿಂದ ನಿರಾಕರಣ ಮಾಡುವ ವಿಷಯದಲ್ಲಿ ಯಾವನು ಸಮರ್ಥ ನಿರುವನೋ, ಅವನನ್ನು ಆಚಾರ್ಯನೆನ್ನಬೇಕು. ಆ ಐದು ಪ್ರಕಾರದ ಭೇದಗಳು ಯಾವವೆಂದರೆ. (೧) ಜೀವ ಈಶ್ವರಭೇದ (೨) ಜೀವಜೀವರಲ್ಲಿ, ಭೇಧ (೩) ಜೀವ ಜಡಗಳಲ್ಲಿ ಭೇದ (೪) ಈಶ್ವರ ಜಡಗಳಲ್ಲಿ ಭೇದ (೫) ಜಡಜಡಗಳಲ್ಲಿ ಭೇದ.

ಈ ಭೇದಗಳನ್ನು ಖಂಡನಮಾಡಬೇಕು. ಯಾಕೆಂದರೆ ಭೇದವು ಭಯಕ್ಕೆ ಕಾರಣವಾಗಿದೆ. ಈ ಕಾರಣದಿಂದ ಭೇದದ ನಿರಾಕರಣವನ್ನು ಮಾಡುವದು ಅವಶ್ಯಕರ್ತವ್ಯವು.

೪. ಭೇದದ ನಿರಾಕರಣವನ್ನು ಮಾಡಿ, ಅದ್ವಯ, ಅಮಲ ಅಂದರೆ-ಅವಿದ್ಯಾದಿ ಮಲರಹಿತನಾದ ಬ್ರಹ್ಮನನ್ನುಆತ್ಮಸ್ವರೂಪದಿಂದ ಸಾಕ್ಷಾತ್ಕಾರ ಮಾಡಿಸುವವನು. ೫. ಸರ್ವ ಸಂಸಾರವನ್ನು ಮಿಥ್ಯಾರೂಪದಿಂದ ಉಪದೇಶಮಾಡುವನು. ಇಂಥ ಅದ್ಭುತವಾದ ಉಪದೇಶವನ್ನು ಕೊಡತಕ್ಕವನಿಗೇ ಆಚಾರ್ಯನೆಂದು ಹೇಳಿದ್ದಾರೆ. ಕೇವಲ ತಾನು ಮುಂಡನ ಮಾಡಿಕೊಂಡು ಶಿಷ್ಯನ ಶಿಖಾಭೇದನ ಮಾತ್ರ ಮಾಡತಕ್ಕವನ್ನು ಅಥವಾ ಬೇರೆ ಯಾವದಾದರೊಂದು ಸಾಂಪ್ರದಾಯಾನುಸಾರವಾಗಿ ಚಿನ್ಹಮಾತ್ರದಿಂದ ಅಂಕಿತನನ್ನಾಗಿ ಮಾಡಿಕೊಳ್ಳುವವನು ಆಚಾರ್ಯನಲ್ಲ ಎಂದು ಹೇಳಿದ್ದಾರೆ. ||

ಟಿಪ್ಪಣಿ—೧ ಆ ಐದು ಭೇದಗಳನ್ನು ಖಂಡನ ಮಾಡತಕ್ಕ ಯುಕ್ತಿಗಳು ಯಾವವೆಂದರೆ;—

೧ ಜೀವ ಈಶ್ವರ ಭೇದವು ಕಲ್ಪಿತವಾಗಿದೆ. ಅವಿದ್ಯಾ ಮಾಯಾರೂಪವು ಉಪಾಧಿಕೃತ ವಾಗುವದರಿಂದ ಘಟಾಕಾಶ ಮಠಾಕಾಶಗಳ ಭೇದವಂತೆ.

೨ ಸಾಭಾಸ ಅಂತಃಕರಣರೂಪವು ಉಪಾಧಿಕೃತವಾಗುವದರಿಂದ ಅನೇಕ ಘಟಾಕಾಶಗಳ ಭೇದದಂತೆ ಜೀವ ಜೀವರಲ್ಲಿಯು ಪರಸ್ಪರ ಭೇದವು ಕಲ್ಪಿತ ವಾಗಿರುವದು.

೩ ಸಾಭಾಸ ಅಂತಃಕರಣವು, ನಿರಾಭಾಸ ನಾಮರೂಪಮಯ ಉಪಾಧಿಕೃತವಾಗಿರುವದರಿಂದ ಸ್ವಪ್ನದಲ್ಲಿಯ ಚರಾಚರಗಳಂತೆ ಜೀವಜಡಗಳಲ್ಲಿಯೇ ಭೇದವು ಕಲ್ಪಿತವದೆ.

೪ ಸಾಭಾಸ ಮಾಯೆಯು, ನಾಮರೂಪಮಯ ಉಪಾಧಿಕೃತವಾಗುವದರಿಂದ

ಸಾಕ್ಷೀ ಮತ್ತು ಸ್ವಪ್ನಪ್ರಪಂಚದ ಭೇದದಂತ ಈಶ್ವರ ಜಡಗಳಲ್ಲಿಯು ವು ಕಲ್ಪಿತವದೆ,

೫ ನಾಮರೂಪಮಯ ಉಪಾಧಿಕೃತವಾಗುವದರಿಂದ ರಜ್ಜುವಿನಲ್ಲಿ ಸರ್ಪದಂಡಾದಿಗಳ ಭೇದದಂತೆ ಜಡಜಡಗಳಲ್ಲಿಯ ಭೇದವು ಕಲ್ಪಿತವು

ಈ ಐದು ಪ್ರಕಾರದ ಅನುಮಾನಗಳು ಐದು ಭೇದಗಳ ಖಂಡನಗಳಲ್ಲಿ ಯುಕ್ತ ಗಿರುವದು.

॥ ದೋಹಾ ॥

ಕರತವೋಛ ಭವಗ್ರಾಹತೈ । ದೇ ಅಸಿ ನಿಜ ಉಪದೇಶ
ಸೋದೈಸಿಕ ಬುಧಜನ ಕಹತ । ನಹಿಕೃತ ಗೈರಿಕವೇಸ॥

ಟೀಕಾ॥ ಸಂಸಾರವೆಂಬ ಮೊಸಳೆಯಿಂದ ಖಡ್ಗಸಮಾನವಾ ಉಪದೇಶದಿಂದ ಶಿಷ್ಯನನ್ನು ಮುಕ್ತನನ್ನಾಗಿ ಯಾವನು ಮಾಡುವ ಅವನಿಗೆ ಪಂಡಿತರು ದೇಶಿಕ, ಅಂದರೆ-ಗುರು ಎನ್ನುತ್ತಾರೆ. ವೇಷದಿಂ ಕೃತಿಯಮೇಲಿಂದಲೂ ಗುರುವೆಂದು ಸಂಬೋಧಿಸುವದಿಲ್ಲ. ॥ ೫ ॥

॥೯೭॥ ಶಿಷ್ಯಲಕ್ಷಣ ॥

॥ ದೋಹಾ ॥

ದೈಸಿಕಕೆ ಲಚ್ಛನ ಕಹೆ । ಶೃತಿ ಮುನಿವಚ ಅನುಸಾರ॥
ಸೋ ಲಚ್ಛನ ಹೈ ಸಿಸ್ಯಕೆ । ಹ್ವೈ ಜಿಪತೈ ಅಧಿಕಾರ ॥೬॥

ಟೀಕಾ॥ ಶಾಸ್ತ್ರಾನುಸಾರ ದೈಶಿಕ ಅಂದರೆ ಗುರುವಿನ ಲಕ್ಷಣ ವರ್ಣಿಸಿದಂತಾಯಿತು. ಇನ್ನು ಯಾವಸಾಧನೆಯಿಂದ ಗ್ರಂಥದಲ್ಲಿ ಅ ಉಂಟಾಗುವದೋ, ಅವೇ ಸಾಧನಗಳು ಶಿಷ್ಯನ ಲಕ್ಷಣವಾಗಿರುವವು ೧ ರಿಂದ ಈ ಪೂರ್ವದಲ್ಲಿ ಅಧಿಕಾರಿಯ ಲಕ್ಷಣವನ್ನು ಹೇಳಿದ್ದೇವೆ. ಅವೇ ಣಗಳು ಶಿಷ್ಯನಿಗಾದರೂ ಸಂಬಂಧಿಸುತ್ತವೆ. ॥೬॥

ಟಿಪ್ಪಣಿ—೧ ವಿವೇಕಾದಿ ಸಾಧನರೂಪಗಳು ಅಧಿಕಾರಿಯ ಲಕ್ಷಣಗಳೆಂದು ಮತರಂಗದಲ್ಲಿ ವಿವರಿಸಿದೆ.

॥೯೭॥ ಅಥ ಗುರುಭಕ್ತಿಯ ಫಲವರ್ಣನ ॥

॥ ದೋಹಾ ॥

ಈಶ್ವರತೈ ಗುರುಮೈ ಅಧಿಕ । ಧಾರೈ ಭಕ್ತಿಸುಜಾನ ॥
ವಿನ ಗುರುಭಕ್ತಿ ಪ್ರವೀನಹೂ । ಲಹೈ ನ ಆತಮಜ್ಞಾನ



ಟೀಕಾ ॥ (ಜ್ಞಾನೀ ಪುರುಷನು) ಈಶ್ವರನಗಿಂತಲೂ ಗುರುವಿನಲ್ಲಿ ಅಧಿಕ ಭಕ್ತಿಯನ್ನಿಡುವನು. ಕಾರಣವೇನಂದರೆ-ಸರ್ವಶಾಸ್ತ್ರಗಳಲ್ಲಿ ಪ್ರವೀಣನಾದ ಪುರುಷನು ಇದ್ದಾಗ್ಯೂ ಗುರೂಪದೇಶವಿಲ್ಲದೇ ಆತ್ಮಜ್ಞಾನವು ಪ್ರಾಪ್ತವಾಗುವದಿಲ್ಲ. ॥ ೭ ॥ ಇದನ್ನೇ ಈಗ ದೃಷ್ಟಾಂತದಿಂದ ಪ್ರತಿಪಾದನ ಮಾಡಿದೆ.

॥ ದೋಹಾ ॥

ವೇದ ಉದಧಿ ಬಿನ ಗುರು ಲಹೈ । ಲಾಗೈ ಲೌನ ಸಮಾನ॥
ಬಾದರ ಗುರುಮುಖ ದ್ವಾರಹೈ । ಅಮೃತಸೈ ಅಧಿಕಾನ ॥೮॥

ಟೀಕಾ॥ ವೇದರೂಪೀ ಉದಧಿ, ಅಂದರೆ ಯಾವ ಸಮುದ್ರವು ಇರುವದಲ್ಲಾ ? ಅದು ಗುರುವಿನ ಹೊರತು ಲವಣದಂತೆ ಕ್ಷಾರವಿರುವದು. ಹೇಗೆ ತೃಷಾ ಶಮನಾರ್ಥವಾಗಿ ಕ್ಷಾರಸಮುದ್ರದ ಜಲವನ್ನು ಪಾನಮಾಡಿದರೆ ಕೇವಲ ಕ್ಷಾರತೆಯ ಅನುಭವವನ್ನುಂಟುಮಾಡಿ ಕ್ಲೇಶವನ್ನುಂಟುಮಾಡುತ್ತದೆಯೋ ಹಾಗೆ ಗುರುವಿಲ್ಲದೆ ಯಾವನು ವೇದಾರ್ಥದ ವಿಚಾರವನ್ನು ಮಾಡುವನೋ, ಅವನಿಗೆ ಭೇದರೂಪೀ ಕ್ಷಾರತೆಯ ಅನುಭವವುಂಟಾಗಿ ಜನನಮರಣ ರೂಪೀ ದುಃಖವನ್ನು ಹೊಂದುತ್ತಾನೆ. ಈ ಕಾರಣದಿಂದಲೇ ರಾಮಾನುಜ ಮತ್ತು ಮಧ್ವಾಚಾರ್ಯ ಮೊದಲಾದವರು ಗುರುವಿಲ್ಲದೇ ಶಾಸ್ತ್ರಗಳ ಅರ್ಥವನ್ನು ವಿಚಾರಮಾಡಿದ್ದರಿಂದ ಅವರಿಗೆ ಭೇದಜ್ಞಾನವುಂಟಾಗಿ ಜನನ ಮರಣರೂಪೀ ಖೇದವನ್ನು ಹೊಂದಿದರು. ಮುಕ್ತಿರೂಪ ಆನಂದವು ಅವರಿಗೆ ಪ್ರಾಪ್ತವಾಗಲಿಲ್ಲ.

ಯದ್ಯಪಿ ರಾಮಾನುಜ ಮೊದಲಾದವರು ತಮ್ಮ ತಮ್ಮ ಗುರುದ್ವಾರವಾಗಿ ವೇದಪಠನವನ್ನು ಮಾಡಿ ವಿಚಾರಮಾಡಿರುವರು, ಮತ್ತು ವಿಚಾರದಿಂದ ವ್ಯಾಖ್ಯಾನವನ್ನು ಸಹಾ ಮಾಡಿರುವರು. ತಥಾಪಿ ಅವರು ಯಾವ ಬಳಿಯಲ್ಲಿ ವೇದಪಠನವನ್ನು ಮಾಡಿದರೋ ಅವರು ಗುರುಗಳಲ್ಲ. ಕಾರಣವೇನಂದರೆ;-"ಯಾವನು ಜೀವ ಬ್ರಹ್ಮರ ಐಕ್ಯತ್ವವನ್ನು ಉಪದೇಶಮಾಡುವನೋ ಅವನಿಗೆ ಗುರುವೆನ್ನಬೇಕು" ಎಂಬದನ್ನು ಗುರುಲಕ್ಷಣದಲ್ಲಿ ಹಿಂದೆಯೇ, ಕಥನಮಾಡಲ್ಪಟ್ಟದೆ. ಅವರ ಪಾಠಕನಾದ ಯಾವಗುರುವು ಇರುವನೋ, ಅವನು ಜೀವ ಬ್ರಹ್ಮರ ಭೇದವನ್ನು ಉಪದೇಶಮಾಡಿದಂಥವನು. ಈ ಕಾರಣದಿಂದ ಅವನ ವಿಷಯದಲ್ಲಿ "ಗುರು" ಎಂಬ ಶಬ್ದವನ್ನು ಪ್ರಯೋಗಮಾಡಿರುವದೋ ಅದು ಅರ್ಹಂತಾ ಸಮಾನವಾಗಿದೆ. ಅರ್ಹಂತನ ಶಿಷ್ಯ

ರು ಅರ್ಪಂತನಿಗೆ ಗುರುವೆಂದು ಅನ್ನುತ್ತಾರೆ; ಅವರಿ ಅರ್ಪ
ರುಪದವ [೧]ವಿಷಯುವಲ್ಲ. ಹಾಗೆ ಭೇದವಾದೀ ಪುರುಷನ ಯಾವ
ವನೋ, ಅವನು ತನಗೆ ವೇದಪಠನವನ್ನು ಮಾಡಿಸುವವನಿಗೇ ಗು
ತ್ತಾನೆ, ಆದರೆ ಅವನು ಗುರುವಲ್ಲ. ಈ ಕಾರಣದಿಂದ ಯಾ ದಾ
ಮೊದಲಾದವರು ಭೇದವಾದಿಗಳಾಗಿರುವರೋ, ಅವರು ಗುರುದ್ವಾ
ವಿಚಾರವನ್ನು ಮಾಡಲಿಲ್ಲ. ಈ ಕಾರಣದಿಂದ ಭೇದದಲ್ಲಿ ಅ
ಮಾಡಿ ಜನನ ಮರಣರೂಪ ಕ್ಲೇಶಕ್ಕೆ ಪ್ರಾಪ್ತರಾದರು. ಇದ
ಈ ಪೂರ್ವದಲ್ಲಿ ಹೇಳಿದ ಲಕ್ಷಣಗಳು ಇಲ್ಲದ ಗುರುವಿನ ಹೊ
ವೇದಾರ್ಥದ ವಿಚಾರವನ್ನು ಯಾರು ಮಾಡುವರೋ ಅಥವಾ
ದಿಗಳ ಬಳಿಯಲ್ಲಿ ಪಠನಮಾಡಿ, ಮನಸ್ಸಿನಲ್ಲಿಯೇ ಯಾರು ವಿಚಾ
ಮಾಡುವರೋ ಅವರು ಭೇದರೂಪೀ ಕ್ಷಾರವನ್ನು ಅನುಭವಿಸಿ,
ಮರಣರೂಪೀ ಕ್ಲೇಶವನ್ನು ಸಹಾ ಅನುಭವಿಸುತ್ತಾರೆ. ಇದು
ಬರೆದ ದೋಹಾದ ಪೂರ್ವಾರ್ಧದ ಅರ್ಥವಿರುವದು. ಯಾವನು
ರೂಪೀ ಬ್ರಹ್ಮವೇತ್ತನಾದ ಗುರುಮುಖದಿಂದ ವೇದಶ್ರವಣವನ್ನು
ಅರ್ಥದ ವಿಚಾರವನ್ನು ಮಾಡುವನೋ, ಅವನಿಗೆ ಅಮೃತಕ್ಕಿಂತ
ವು ಅಧಿಕ ಆನಂದಕ್ಕೆ ಸಾಧನವಾಗುವದು. ಸಮುದ್ರೋದಕವು
ದಲ್ಲಿ ಹೇಗೆ ಕ್ಷಾರವಾಗಿದ್ದು, ಮೇಘದ್ವಾರದಿಂದ ಮಧುರವಾಗು
ಹಾಗೆ ವೇದದ ಅರ್ಥವು ಬ್ರಹ್ಮಜ್ಞಾನಿಯಾದ ಗುರುವಿನ ಮುಖದಿಂ
ದಕ್ಕೆ ಸಾಧನವಾಗಿರುವದು. ||೮||

||೯೮|| ಜ್ಞಾನಿಯಾದ ಗುರುವಿನಿಂದ ವೇದಾರ್ಥವನ್ನು
ಮತ್ತು ಶ್ರವಣಮಾಡಿದರೆ ಅದರ ಯೋಗ್ಯತೆಯು

ಪೂರ್ವದೋಹಾದಲ್ಲಿ "ಗುರುಮುಖದಿಂದ ಪಠನ ಮತ್ತು
ಮಾಡಿದ ವೇದಾರ್ಥದ ವಿಚಾರದಿಂದ ಮುಕ್ತಿರೂಪೀ ಫಲವು ಪ್ರಾ
ಗುವದು. ಆ ಗುರುವು ಜ್ಞಾನಿಯಾಗಿರಬೇಕೋ ಅಥವಾ ಅಜ್ಞಾ
ಬೇಕೋ ಎಂಬದನ್ನು ಸ್ಪಷ್ಟವಾಗಿ ಹೇಳಲಿಲ್ಲ. ಅದನ್ನು ಈಗ ಹೇ
"ಗುರುವು ಜ್ಞಾನಹೀನನಿರುವದಿಲ್ಲ" ಎಂದು ಈ ಪೂರ್ವದಲ್ಲಿ ಹೇ
ಇದನ್ನೇ ದೃಷ್ಟಾಂತದಿಂದ ಪ್ರತಿಪಾದನ ಮಾಡಲ್ಪಟ್ಟದೆ.

ಟಿಪ್ಪಣಿ—೧ ವಿಷಯುನೆಂದರೆ ಅರ್ಥವಿಲ್ಲದ್ದು.



|| ದೋ ಹಾ ||

ದೃತಿ ಪುಟ ಘಟ ಸಮ ಅಜ್ಞ ಜನ । ಮೇಘ ಸಮಾನ ಸುಜಾನ॥
ಪಢೈ ವೇದ ಇಹಿ ಹೇತುತೈ । ಜ್ಞಾನೀಪೈ ತಜಿ ಆನ ॥ ೯ ॥

ಟೀಕಾ॥ ೧. ಅಜ್ಞ, ಅಂದರೆ ಅಜ್ಞಾನಿಯು, ಅವನು ದೃತಿಪುಟ ಅಂದರೆ ಮಸಕ, ಮತ್ತು ಚರಸ ಮೊದಲಾದ ಚರ್ಮಪಾತ್ರೆಗಳ ಸಮಾನವುಎನ್ನಬೇಕು. ಅಥವಾ ಘಟದ್ವಾರದಿಂದ ಗ್ರಹಣಮಾಡಿದ ಸಮುದ್ರದಜಲವು ಅದು ವಿಲಕ್ಷಣ ಸ್ವಾದಕ್ಕೆ ಸಾಧನವಲ್ಲ. ಇದರಂತೆ ಅಜ್ಞಾನೀ ಪುರುಷನ ಮುಖದಿಂದ ಗ್ರಹಣಮಾಡಿದ ವೇದರೂಪೀ ಸಮುದ್ರದ, ಅರ್ಥರೂಪೀಜಲವು ವಿಲಕ್ಷಣ ಆನಂದಕ್ಕೆ ಸಾಧನವಲ್ಲ. ಈ ಕಾರಣದಿಂದ ಅಜ್ಞಾನೀ ಪಾಠಕನು, ಚರ್ಮಪಾತ್ರ ಅಥವಾ ಘಟದ ಸಮಾನನಾಗಿರುವನು.

೨. ಸುಜ್ಞಾನ ಅಂದರೆ ಜ್ಞಾನಿಯು ಮೇಘಸದೃಶನಾಗಿರುವನು. ಎಂಬ ವಿಷಯವನ್ನು ಈ ಪೂರ್ವದಲ್ಲಿ ಪ್ರತಿಪಾದನ ಮಾಡಿದೆ. ಈ ಕಾರಣದಿಂದ ಚರ್ಮಪಾತ್ರೆ, ಅಥವಾ ಘಟಸಮಾನವಾಗಿದ್ದ ಅಜ್ಞಾನಿಗಳಾದ ಪಾಠಕರನ್ನು ತ್ಯಾಗಮಾಡಿ, ಮೇಘಸದೃಶನಾಗಿದ್ದ ಜ್ಞಾನಿಯ ಮುಖದಿಂದ ವೇದಾರ್ಥವನ್ನು ಕೇಳಬೇಕು; ಅಥವಾ ಪಠನಮಾಡಬೇಕು.

||೯|| ಭಾಷಾಗ್ರಂಥದಿಂದಲೂ ಸಹ ಜ್ಞಾನವಾಗುವದು.

ಜ್ಞಾನಿಯಾದ ಗುರುವಿನ ಮುಖದಿಂದಲೇ ವೇದ ಪಠನವನ್ನುಮಾಡಬೇಕು. ಎಂಬ ಪ್ರತಿಪಾದನದಿಂದ ಈ ಆಕ್ಷೇಪವು ಉದ್ಭವಿಸುವದು. ಏನೆಂದರೆ;-ಶ್ರುತಿಗಳ ದ್ವಾರ ಜೀವಬ್ರಹ್ಮರ ಸ್ವರೂಪವನ್ನು ವಿಚಾರಮಾಡುವದರಿಂದ ಜ್ಞಾನವಾಗುತ್ತದೆ. ಅನ್ಯಸಂಸ್ಕೃತ ಗ್ರಂಥಗಳಿಂದಾಗಲೀ ಅಥವಾ ಪ್ರಾಕೃತ ಗ್ರಂಥಗಳಿಂದಾಗಲೀ ಜ್ಞಾನವಾಗುವದಿಲ್ಲ. ಈ ಕಾರಣದಿಂದ ಪ್ರಾಕೃತ ಗ್ರಂಥಗಳ ಆರಂಭವು ನಿಷ್ಫಲವು, ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುವ:—

||ದೋಹಾ|| ಬ್ರಹ್ಮರೂಪ ಅಹಿ ಬ್ರಹ್ಮವಿತ।ತಾಕೀ ಬಾನೀ ವೇದ॥
ಭಾಷಾ ಅಥವಾ ಸಂಸಕೃತ । ಕರತಭೇದ ಭ್ರಮ ಛೇದ ||೧೦||

ಟೀಕಾ—"ಬ್ರಹ್ಮವೇತ್ತನಾದ ಯಾವ ಪುರುಷನಿರುವನೋ,ಅವನು ಬ್ರಹ್ಮರೂಪನಾಗಿದ್ದಾನೆ." ಎಂದು ಶ್ರುತಿಯಲ್ಲಿ ಪ್ರಸಿದ್ಧವದೆ. ಈಕಾರಣದಿಂದ ಅವನ ವಾಣಿಯು ವೇದರೂಪವಾಗಿದೆ. ಆ ವಾಣಿಯು ಪ್ರಾಕೃತ

ದಲ್ಲಿರಲಿ; ಅಥವಾ ಸಂಸ್ಕೃತದಲ್ಲಿರಲಿ, ಭೇದ ಪ್ರಮೆಯನ್ನು ಮಾಡುವದು. ಹಲವರು ಹೀಗೆ ಅನ್ನುತ್ತಿರುವರಲ್ಲಾ, "ವೇದ ಹೊರ್ತು ಜ್ಞಾನವುಂಟಾಗುವದಿಲ್ಲ" ಎಂದು ಇದು ಸಮಂಜಸವಾದ ದರೆ;-ಆಯುರ್ವೇದದಲ್ಲಿ ಹೇಳಿದ ರೋಗಾದಿಗಳ ಪರೀಕ್ಷೆಯು ಔಷಧಾದಿಗಳು, ಮೊದಲಾದವೆಲ್ಲವು ಸಂಸ್ಕೃತ ಗ್ರಂಥಗಳಿಂದಲ ಫಾರಸೀ ಮೊದಲಾದ ಭಾಷೆಯಲ್ಲಿಯ ಗ್ರಂಥಗಳಿಂದಲೂ ಜ್ಞಾ ತ್ತದೆ. ಇದರಂತೆ ಸರ್ವರ ಆತ್ಮನಾದ ಯಾವ ಬ್ರಹ್ಮನು ಅವನ ಪ್ರಾಕೃತ ಗ್ರಂಥಗಳಿಂದಲೇ ಆಗುವದು. ಈ ಕಾರಣದಿಂದಲೇ ಜ್ಞ ರಾದ ರುಷಿಗಳು ಸ್ಮೃತಿ, ಪುರಾಣ, ಇತಿಹಾಸ ಮೊದಲಾದವುಗಳಲ್ಲಿ ವಿದ್ಯೆಯ ಪ್ರಕರಣವನ್ನು ವರ್ಣಿಸಿದ್ದಾರೆ. ವೇದದ ಹೊರ್ತು ಜ್ಞಾ ಟಾಗುವಂತೆ ಇಲ್ಲದಿದ್ದರೆ, ಅಂಥ ಗ್ರಂಥಗಳಲ್ಲಿದ್ದ ಬ್ರಹ್ಮವಿದ್ಯಾ ಗಳೆಲ್ಲ ನಿಷ್ಫಲವಾಗಬಹುದು, ಹೀಗೆ ಆಗುವದಿಲ್ಲ, ಯಾಕಂದರೆ ಸ್ವರೂಪ ಪ್ರತಿಪಾದಕವಾದ ಯಾವ ವಾಕ್ಯಗಳಿರುವವೋ, ಇವು ಆತ್ಮಜ್ಞಾನವಾಗುತ್ತದೆ. ಅವು ವೇದ ವಾಕ್ಯಗಳಿರಲಿ, ಅಥವಾ ಭಾಷೆಯ ವಾಕ್ಯಗಳಿರಲಿ, ಈ ಕಾರಣದಿಂದಲೇ ಪ್ರಾಕೃತ ಗ್ರಂ ಸಹ ಜ್ಞಾನವಾಗುತ್ತದೆ, ಎಂಬ ಸಂಗತಿಯು ಸಿದ್ಧವಾಯಿತು.

**ಟಿಪ್ಪಣಿ**—(೧) ಭಾಷಾಗ್ರಂಥದಿಂದ ಜ್ಞಾನವಾಗುವದಿಲ್ಲ, ಎಂದು ಆಗ್ರ ವವರಿಗೆ ಪ್ರಶ್ನೆಯೇನಂದರೆ—"[೧] ಪ್ರಾಕೃತಗ್ರಂಥಗಳು ವೇದ ವಾಗಿ ಇರುವದಿಲ್ಲವೇ! ಅದರಿಂದ ಜ್ಞಾನವಾಗುವದಿಲ್ಲವೇ [೨] ಅವು ಪ್ರಾಕೃತಭಾಷೆಯಲ್ಲಿರುವದರಿಂದ, ಅವುಗಳಿಂದ ಜ್ಞಾನ ಲ್ಲವೇ! (೩) ಅಥವಾ ಅವು ಅವತಾರೀ ಶರೀರಗಳಿಂದ ರಚಿತವಾ ರುವದರಿಂದ ಜ್ಞಾನವಾಗುವದಿಲ್ಲವೇ, [೪] ಇಲ್ಲವೇ ಅಶುದ್ಧವಾ ರಿಂದ ಜ್ಞಾನವಾಗುವದಿಲ್ಲವೇ! ಎಂಬ ಈ ನಾಲ್ಕು ಪ್ರಶ್ನೆಗಳಿರುವವು

[೧] ಪ್ರಾಕೃತ ಗ್ರಂಥಗಳು ವೇದಾನುಸಾರವಾಗಿ ಇರುವದಿಲ್ಲವೇ ಪ್ರಥಮ ಪಕ್ಷವು, ಇದರಲ್ಲಿ [೧] ವೇದಪಾಠದ ಅನುಸಾರಿಯ ಲ್ಲವೋ! [೨] ಅಥವಾ ವೇದದ ಅರ್ಥದ ಅನುಸಾರಿಯಾಗಿರುವ ಎಂಬ ಎರಡು ಪ್ರಶ್ನೆಗಳುಂಟು, ಇವುಗಳಲ್ಲಿಯ ಪ್ರಥಮ "ವೇದ ಪಾಠದ ಅನುಸಾರಿಯಾಗಿರುವದಿಲ್ಲವೇ" ಎಂಬದಕ್ಕೆ ಉ ದರೆ-ಇದರಂತೆಯೇ ಅನ್ಯಸಂಸ್ಕೃತ ಗ್ರಂಥಗಳು ಸಹ ವೇದಪಾ ಸಾರಿಯಾಗಿರುವದಿಲ್ಲ. ಈ ಕಾರಣದಿಂದ ಅವುಗಳಿಂದ ಸಹ



ಟಾಗಬಾರದು, [೨] ದ್ವಿತೀಯ ಪ್ರಶ್ನೆಯಾದ "ವೇದಾರ್ಥದ ಅನುಸಾರವಾಗಿ ಪ್ರಾಕೃತ ಗ್ರಂಥಗಳಿರುವದಿಲ್ಲ! ಎಂಬದಕ್ಕೆ ಉತ್ತರ, ಇದು ಸರಿಯಾದ ಪ್ರಶ್ನೆಯಲ್ಲ, ಯಾಕಂದರೆ, ಎಷ್ಟೋ ಪ್ರಾಕೃತ ಗ್ರಂಥಗಳೂ ಸಂಸ್ಕೃತ ಗ್ರಂಥಗಳೂ ವೇದದ ಅರ್ಥದ ಅನುಸಾರವಾಗಿಯೇ ಇರುವವು, ಇವುಗಳಿಂದ ಔಷಧ ಮೊದಲಾದವುಗಳ ಜ್ಞಾನವಾಗುವದು, ಇದರಂತೆಯೆ ವೇದಾರ್ಥದ ಅನುಸಾರವಾದ ಸಂಸ್ಕೃತ ಮತ್ತು ಪ್ರಾಕೃತ ಗ್ರಂಥಗಳಿಂದ ಜ್ಞಾನವಾಗುವದು.

ಪ್ರಾಕೃತ ಗ್ರಂಥಗಳು ಪ್ರಾಕೃತ ಭಾಷೆಯಲ್ಲಿರುವದರಿಂದ ಜ್ಞಾನವಾಗುವದಿಲ್ಲ, ಎಂಬ ಆಕ್ಷೇಪಕ್ಕೆ ಉತ್ತರ ಸಂಸ್ಕೃತ ಗ್ರಂಥಗಳು ದೇವಭಾಷೆಯಲ್ಲಿ ಇರುವವು, ಅದರಂತೆ ಪ್ರಾಕೃತಗ್ರಂಥಗಳು ನರಭಾಷೆಯಲ್ಲಿರುವವು, ಭಾಷೆಯೆಂಬದು ಎರಡರಲ್ಲಿಯೂ ಸಮನಾಗಿದೆ.

"ಪ್ರಾಕೃತ ಗ್ರಂಥಗಳು ಅವತಾರೀ ಶರೀರಗಳಿಂದ ರಚಿತವಾದವುಗಳಲ್ಲ" ಎಂಬದಕ್ಕೆ ಉತ್ತರ. ಎಷ್ಟೋ ಸಂಸ್ಕೃತ ಗ್ರಂಥಗಳು ಸಹ ಅವತಾರೀ ಶರೀರಗಳಿಂದ ರಚಿತವಾಗಿರುವದಿಲ್ಲ. ಅವುಗಳಿಂದ ಸಹಾ ಜ್ಞಾನವುಂಟಾಗಬಾರದು, ಹೀಗೆ ಆಗುವದಿಲ್ಲ, ಜ್ಞಾನೋದಯವಾಗುತ್ತದೆ.

ಪ್ರಾಕೃತ ಗ್ರಂಥಗಳು ಅಶುದ್ಧವಾಗಿರುವವು. ಎಂಬದಕ್ಕೆ ಉತ್ತರ ಪ್ರಾಕೃತ ಭಾಷಾನಿಯಮದಿಂದ ಸಂಸ್ಕೃತ ಗ್ರಂಥಗಳು ಅಶುದ್ಧವಾಗಿವೆ. ಇದರಂತೆ ಸಂಸ್ಕೃತ ಭಾಷೆಯ ನಿಯಮದಿಂದ ಭಾಷಾಗ್ರಂಥಗಳು ಅಶುದ್ಧವಾಗಿರುವವು, ಅಶುದ್ಧತೆಯೆಂಬದು ಎರಡರಲ್ಲಿಯೂ ಸಮನಾಗಿದೆ.

ಈ ರೀತಿಯಿಂದ ಪ್ರಾಕೃತ ಭಾಷಾಗ್ರಂಥಗಳಿಂದ ಜ್ಞಾನವಾಗುವುದಿಲ್ಲ, ಎಂಬ ತಿಳುವಳಿಕೆಯು ಕೇವಲಹಠವು. ಸಂಸ್ಕೃತವನ್ನರಿಯದ ಪಾಮರರಿಗೆ ಜ್ಞಾನೋದಯವಾಗಬೇಕೆಂಬ ಸದುದ್ದೇಶದಿಂದ, ನಾನಕ, ದಾದೂ, ರಾಮದಾಸಸ್ವಾಮಿ, ಏಕನಾಥಸ್ವಾಮಿ, ಜ್ಞಾನೋಬಾ ಮೊದಲಾದ ಮಹಾತ್ಮಾ ಪುರುಷರು ಪ್ರಾಕೃತ ಭಾಷೆಯಲ್ಲಿಯೇ ರಚಿಸಿದ್ದಾರೆ, ಅವುಗಳ ದ್ವಾರದಿಂದಲೇ ಎಷ್ಟೋ ಜನ ಪಾಮರರು ಉದ್ಧೃತರಾಗಿದ್ದಾರೆ. ಆ ಗ್ರಂಥಗಳು ಹೇಗೆ ಕಲ್ಯಾಣದಾಯಕವಾಗಿರುವವೋ, ಹಾಗೆ ಆಧುನಿಕ ಬ್ರಹ್ಮವೇತ್ತರಾದ ಪುರುಷರಿಂದ ಯಾವ ಪ್ರಾಕೃತ ಗ್ರಂಥಗಳು ರಚಿತವಾಗಿರುವವೋ ರಚಿತವಾಗುತ್ತಲಿರುವವೋ, ರಚಿತವಾಗುವವೋ, ಅವೆಲ್ಲವು ಸಂಸ್ಕೃತ ಭಾಷಾರಹಿತ ಅಧಿಕಾರೀ ಪುರುಷರಿಗೆ ಜ್ಞಾನದ್ವಾರಾ ಕಲ್ಯಾಣದ ಸಾಧನವಾಗಿರುವವು.

ಅಪ್ಪಯ್ಯ ದೀಕ್ಷಿತರೆಂಬ ಪಂಡಿತರು "ಸಿದ್ಧಾಂತಲೇಶ"ನಾಮಕ ಗ್ರಂಥದಲ್ಲಿ "ಅಪಭ್ರಂಶ ಶಬ್ದಗಳ ಉಚ್ಚಾರಣೆಯ ನಿಷೇಧವು" ಎಂಬ ಶ್ರುತಿಯ ಪ್ರಮಾಣವನ್ನು ಕೊಟ್ಟು, ಪ್ರಾಕೃತ ಭಾಷಾ ಗ್ರಂಥಗಳನ್ನು ನಿಷೇಧ ಮಾಡಿದ್ದಾರೆ, ಇವರು ತಮ್ಮ ಪಾಂಡಿತ್ಯದ ಪ್ರಬಲತೆಯಿಂದ ಹೀಗೆ ಹೇಳಿ

ದ್ದಾರೆ. ಯಾಕಂದರೆ, ಶ್ರೀವ್ಯಾಸರಚಿತ ಸೂತ ಸಂಹಿತೆಯಲ್ಲಿ "... ಪ್ರಾಕೃತ ಭಾಷೆಗಳಿಂದ ಗದ್ಯಪದ್ಯಗಳಿಂದ ಅಥವಾ ದೇಶಭಾಷೆ... ಳಿಂದ ಯಾವನು ಬೋಧವಾಡುವನೋ, ಅವನು ಗುರುವು"... ದ್ದಾರೆ. ಈ ಆಧಾರದಿಂದ ಪ್ರಾಕೃತ ಭಾಷೆಯಿಂದ ಸಹ ಬೋ... ವದು, ಎಂದು ಸೂಚಿಸಿದಂತಾಯಿತು, ಹೀಗೆ ಇಲ್ಲದೆ ಇದ್ದ ಪಕ್ಷ... ಪ್ರಾಕೃತ ಭಾಷೆಗಳು ಅನುಚ್ಚರಣೀಯವಾಗಿ ಹೋಗುತ್ತಿದ್ದ... ಲೌಕಿಕ ವ್ಯವಹಾರಗಳು, ಮತ್ತು ಶಾಸ್ತ್ರ ವ್ಯಾಖ್ಯಾನ ಮೊದಲಾದ... ವ್ಯವಹಾರಗಳು, ಲೋಪವಾಗಿ ಹೋಗುತ್ತಿದ್ದವು. ಹೀಗೆ... ದೆಂದು ತಿಳಿದು ಶ್ರೀವ್ಯಾಸ ಮಹರ್ಷಿಗಳು ಮೇಲೆ ಬರೆದ ಪ್ರಕಾ... ಮಾಡಿದ್ದಾರೆ. ಅನಾದಿ ಕಾಲದಿಂದ ಸಾಗಿಬಂದ ಭಾಷಾ... ಸರ್ವಥಾ ನಿಷೇಧವಲ್ಲ ಆದರೆ ಶ್ರೀವ್ಯಾಸರು ಯಜ್ಞ ಸಂಬಂ... ಹಾರದಲ್ಲಿ ಮಾತ್ರ ಅಪಭ್ರಂಶ ಶಬ್ದಗಳ ಉಚ್ಚಾರಣೆಯು ನಿಷೇ... ಹೇಳಿದ್ದಾರೆ. ಶ್ರೀ ವ್ಯಾಸರ ಅಭಿಪ್ರಾಯದಂತೆಯೇ ಶಿಷ್ಟರು... ಪ್ರಾಯುವಿರುವದು.

||೧೦೦|| ಜಿಜ್ಞಾಸುಗಳಿಗೆ ಬ್ರಹ್ಮವೇತ್ತನಾದ ಆಚಾ... ಸೇವೆಯು ಕರ್ತವ್ಯತೆಯು.

|| ದೋಹಾ ||

ಬಾನೀ ಜಾಕೀ ವೇದ ಸಮ । ಕಿಜ್ಜೈ ತಾಕೀ ಸೇವ ॥
ಹ್ವೈ ಪ್ರಸನ್ನ ಜಬ ಸೇವತ್ಯೈ । ತಬಜಾನ್ಯೈ ನಿಜಭೇವ ॥

ಟೀಕಾ|| ಬ್ರಹ್ಮವೇತ್ತನಾದವನ ವಾಣೀ ಅಂದರೆ ವಚನವು ... ನವಾಗಿರುವದು. ಅಂಥ ಬ್ರಹ್ಮವೇತ್ತನಾದ ಆಚಾರ್ಯನ ಸೇ... ಜಿಜ್ಞಾಸುವು ಮಾಡಬೇಕು. ಕಾರಣವೇನೆಂದರೆ-ಸೇವೆಯಿಂದ ... ಯಾವಾಗ ಪ್ರಸನ್ನನಾಗುವನೋ, ಆಗ ಜಿಜ್ಞಾಸುವಿಗೆ ತನ್ನ ... ತಿಳಿಯುವದು. ಈ ವಚನದಿಂದ ಸಿದ್ಧವಾದದ್ದೇನೆಂದರೆ, ... ಸೇವೆಯು ಈಶ್ವರನ ಸೇವೆಗಿಂತಲೂ ಅಧಿಕವು, ಯಾಕಂದರೆ;—

೧. ಈಶ್ವರಸೇವೆಯು ಅದೃಷ್ಟಫಲದ ಸಾಧನವಾಗಿರುವದು.

೨. ಆಚಾರ್ಯ ಸೇವೆಯು ಅದೃಷ್ಟಫಲದ ಮತ್ತು ದೃ... ಸಾಧನವಾಗಿರುವದು.

(೧) ಯಾವ ವಸ್ತುವು ಧರ್ಮಾಧರ್ಮಗಳ ಉತ್ಪತ್ತಿ ದ್ವಾರಾ ಸಾಧನವಾಗಿರುವದೋ, ಅದು ಅದೃಷ್ಟಫಲದ ಸಾಧನವು.

(೨) ಯಾವ ವಸ್ತುವು ಧರ್ಮಾಧರ್ಮಗಳ ಉತ್ಪತ್ತಿಯ...



...ಕ್ಷಾತ್ ಫಲದ ಸಾಧನವಾಗಿರುವದೋ, ಅದು ದೃಷ್ಟಫಲದ ಹೇತುವಾಗಿದೆ.

೧. ಈಶ್ವರನ ಸೇವೆಯು ಧರ್ಮೋತ್ಪತ್ತಿ ದ್ವಾರಾ ಅಂತಃಕರಣ ಶುದ್ಧಿ ...ಪ ಫಲದ ಸಾಧನವಾಗಿರುವದು. ಈ ಕಾರಣದಿಂದ ಈಶ್ವರ ಸೇವೆಯು ...ದೃಷ್ಟ ಫಲದ ಸಾಧನವಾಗಿರುವದು.

೨. ಆಚಾರ್ಯರ ಸೇವೆಯು ಧರ್ಮದ ಅಪೇಕ್ಷೆಯ ಹೊರತು ಆಚಾ...ರ್ಯರ ಪ್ರಸನ್ನತೆಯಿಂದ ಉಪದೇಶ ರೂಪ ಫಲದ ಸಾಧನವಾಗಿರುವದು. ...ಕಾರಣತ್ತಿಂದ ಅದು ದೃಷ್ಟಫಲದ ಸಾಧನವಾಗಿರುವದು. ಧರ್ಮದ ಉ...ತ್ಪತ್ತಿ ದ್ವಾರಾ ಆಚಾರ್ಯರ ಸೇವೆಯು ಅಂತಃಕರಣದ ಶುದ್ಧಿ ರೂಪ ಫಲದ ...ಸಾಧನವಾಗಿರುವದು. ಈ ಕಾರಣದಿಂದ ಅದೃಷ್ಟಫಲದ ಸಾಧನವು ಸಹಾ ...ಗಿರುವದು.

ಈ ರೀತಿಯಿಂದ ಆಚಾರ್ಯ ಸೇವೆಯು ಈಶ್ವರನ ಸೇವೆಗಿಂತಲೂ ...ಹ, ಉತ್ತಮವಾದದ್ದು. ಆದ್ದರಿಂದ ಸರ್ವಪ್ರಕಾರದಿಂದಲೂ ಜಿಜ್ಞಾಸು ...ಳು ಬ್ರಹ್ಮವೇತ್ತರಾದ ಆಚಾರ್ಯರ ಸೇವೆಯನ್ನು ಮಾಡಬೇಕು.

||೧೦೧|| ಆಚಾರ್ಯರ ಸೇವಾ ಪ್ರಕಾರವು.

...ವ್ಯ ಜಬಹೀ ಗುರುಸಂಗ । ಕರೈದಂಡೆ ಜಿಮು ದಂಡವತ ॥
...ರೈ ಉತ್ತಮು ಅಂಗ । ಪಾವನ ಪಾದಸರೋಜ ರಜ ॥೧೨॥

ಟೀಕಾ—ಗುರುಗಳು ಯಾವ ಕಾಲದಲ್ಲಿ ಪ್ರಾಪ್ತರಾಗುವರೋ, ಆಗ ...ಡವತ್ ಸಾಷ್ಟಾಂಗ ಪ್ರಣಾಮವನ್ನು ಮಾಡಿ, ಪವಿತ್ರವಾದ ಅವರ ಪಾದ ...ಮಲಗಳ ರಜವನ್ನು, ತನ್ನ ಶಿರಸ್ಸಿನಲ್ಲಿ ಧಾರಣ ಮಾಡಿಕೊಳ್ಳಬೇಕು.

...ಪ್ಪಣಿ—(೧) ಎರಡು ಪಾದಗಳು, ಎರಡು ತೊಡೆಗಳು, ಎರಡು ಹಸ್ತಗಳು ಹೃದಯ ಮತ್ತು ಶಿರ, ಎಂಬ ಈ ಎಂಟು ಅವಯವಗಳನ್ನು ಭೂಮಿಗೆ ಹೊಂದಿಸಿ ದಂಡ ಅಂದರೆ ಕೋಲಿನಂತೆ ದೀರ್ಘಸಮಸ್ಕಾರವನ್ನು ಮಾಡುವದಕ್ಕೆ ಸಾಷ್ಟಾಂಗ ಪ್ರಣಾಮವನ್ನುತ್ತಾರೆ.

|| ಚೌಪಾಈ ||

ಗುರು ಸಮೀಪ ಪುನಿ ಕರಿಯೆ ವಾಸಾ ।
ಜೋ ಅತಿ ಉತ್ಕಟ ಹ್ವೈ ಜಿಜ್ಞಾಸಾ ।
ತನ ಮನ ವಚ ಅರ್ಪೀ ದೇವೈ ।
ಜೊ ಚಾಹೈ ಹಿಯ ಬಂಧನ ಛೇವೈ ॥೧೩॥

ಟೀಕಾ—ಯಾವ ಜಿಜ್ಞಾಸುವು ಸರ್ವದಾ ಗುರುಗಳ ಸನ್ನಿಧಿ ವಾಸಮಾಡಿಕೊಂಡು, ಅತಿಉತ್ಕಂಠತೆಯಿಂದ ತನ್ನ ಮನಸಿನ ಜಿಜ್ಞಾ ನ್ನು ಕಳೆದುಕೊಂಡು ತನು, ಮನ, ಧನ, ವಾಣಿ ಮೊದಲಾದವುಗ ಗುರುಚರಣದಲ್ಲಿ ಸಮರ್ಪಿಸುವನೋ ಅಂಥ ಶಿಷ್ಯನ ಮನೋವಾಂ ಪೂರ್ಣವಾಗಿ ಇಹಲೋಕ ಬಂಧನಗಳು ನಾಶಹೊಂದುತ್ತವೆ ಎಲ್ಲದೆ ದಲ್ಲಿ ಮೋಕ್ಷವಾಗುತ್ತದೆ. ||೧೩||

||೧೦೨|| ತನು ಅರ್ಪಣ ಪ್ರಕಾರ. (೧)

ತನಕರಿ ಬಹು ಸೇವಾ ವಿಸ್ತಾರೈ ।
ಆಜ್ಞಾ ಗುರುಕೀ ಕಬಹೂ ನ ಟಾರೈ ||

ಟೀಕಾ|| ಶಿಷ್ಯನು ತನ್ನ ಶರೀರದಿಂದ ಪ್ರಯತ್ನಪೂರ್ವಕವಾಗಿ ಸೇವೆಯನ್ನು ಮಾಡಿ ಗುರ್ವಾಜ್ಞೆಯನ್ನು ಕಾಲತ್ರಯದಲ್ಲಿ ಸಹಾ ಪಾ ಬೇಕು, ಇದೇ ತನು ಅರ್ಪಣ ಪ್ರಕಾರವು.

||೧೦೩|| ಮನ ಅರ್ಪಣ ಪ್ರಕಾರವು (೨)

೧
ಮನಮೈ ಪ್ರೇಮ ರಾಮಸಮ ರಾಖೈ ।
ಹ್ವೈಪ್ರಸನ್ನ ಗುರು ಇಮ ಅಭಿಲಾಖೈ ||೧
ದೋಷದೃಷ್ಟಿ ಸ್ವಪನ್ಯೈನಹಿ ಆನೈ ।
೨
ಹರಿ ಹರ ಬ್ರಹ್ಮಗಂಗ ರವಿ ಜಾನೈ ||
ಗುರು ಮೂರತಿಕೊ ಹಿಯಮೈ ಧ್ಯಾನಾ ।
ಧಾರೈ ಜೊ ಚಾಹೈ ಕಲ್ಯಾನಾ ||೧೫||

ಟೀಕಾ|| ಶಿಷ್ಯನು ತನ್ನ ಮನಸ್ಸಿನಲ್ಲಿ ಗುರುವಿನ ಮೇಲೆ, ಮೇಲೆ ಮಾಡುವ ಭಕ್ತಿಯಂತೆ ಪೂರ್ಣಪ್ರೇಮವನ್ನಿಟ್ಟು ಅವ ಮಾಡಲು, ಗುರುವು ಪ್ರಸನ್ನನಾಗುವನು. ಸ್ವಪ್ನದಲ್ಲಿ ಸಹಾ ಗು ವಿಷಯದಲ್ಲಿ ದೋಷದೃಷ್ಟಿಯುಳ್ಳವನಾಗದೆ ಹರಿ, ಹರ, ಬ್ರಹ್ಮ ಸೂರ್ಯರಂತೆಯೇ ಭಾವಿಸಿ ಗುರುಮೂರ್ತಿಯ ಧ್ಯಾನವನ್ನು ಹೃದ ಸರ್ವದಾ ಮಾಡುವದರಿಂದ ಸಂಪೂರ್ಣ ಕಲ್ಯಾಣವಾಗುವದು. ಇ ಅರ್ಪಣ ಪ್ರಕಾರವು.



ಟಿಪ್ಪಣಿ—೧. ಪ್ರೇಮ ಅಂದರೆ ಭಕ್ತಿ. ಅದು, ರಾಮ ಅಂದರೆ ಪರಮೇಶ್ವರನ ಸಮನಾಗಿ ಇಡಬೇಕು. ಅಂದರೆ ಗುರುವನ್ನು ಪರಮೇಶ್ವರ ರೂಪವೆಂದು ಭಾವಿಸಿ, ಅವನಲ್ಲಿ ಭಕ್ತಿಯನ್ನಿಡಬೇಕು. ಇದರ ವಿಷಯದಲ್ಲಿ ಈ ಶ್ರುತಿಪ್ರಮಾಣವು ಇರುವದು. "ಯಾವನಿಗೆ ದೇವರ ವಿಷಯದಲ್ಲಿ ಭಕ್ತಿಯಿರುವದೋ, ಅವನು ದೇವರ ವಿಷಯದಲ್ಲಿ ಭಕ್ತಿಯನ್ನಿಟ್ಟಂತೆ ಗುರುವಿನಲ್ಲಿ ಸಹಾ ಭಕ್ತಿಯನ್ನಿಡಬೇಕು. ಅಂದರೆ ಅಂಥ ಮಹಾತ್ಮರ ಏಕತಾರೂಪ ವೇದಾ ರ್ಥವು ತನ್ನಷ್ಟಕ್ಕೆ ತಾನೇ ಪ್ರಕಾಶಿಸುವದು.

(೨) ಇಲ್ಲಿ ಇದ್ದ ರಹಸ್ಯವೇನೆಂದರೆ;—

೧. ಗುರುವು ಯಾವಾಗ ಶಿಷ್ಯನ ಮೇಲೆ ಪ್ರೀತಿಯನ್ನು ಮಾಡಹತ್ತುವನೋ ಆಗ ಅವರನ್ನು ಹರಿರೂಪ ಅಂದರೆ ಶಿವರೂಪವೆಂದು ತಿಳಿಯಬೇಕು.
೨. ಗುರುವು ಯಾವಾಗ ಕ್ರೋಧವನ್ನು ಮಾಡುವನೋ, ಆಗ ಹರರೂಪ ಅಂದರೆ ಶಿವರೂಪವೆಂದು ತಿಳಿಯಬೇಕು.
೩. ಗುರುವು ಯಾವಾಗ ರಾಜಸೀ ವ್ಯವಹಾರದಲ್ಲಿ ತತ್ಪರನಾಗಿರುವನೋ, ಆಗ ಅವನನ್ನು ಬ್ರಹ್ಮರೂಪನೆಂದು ಭಾವಿಸಬೇಕು.
೪. ಗುರುವು ಯಾವಾಗ ಶಾಂತಚಿತ್ತನಾಗಿರುವನೋ, ಆಗ ಅವನನ್ನು ಗಂಗೆ ರೂಪ ಅಂದರೆ ಗಂಗಾದೇವಿಯ ರೂಪನೆಂದು ಭಾವಿಸಬೇಕು.
೫. ಗುರುವು ಯಾವಾಗ ತನ್ನ ವಚನರೂಪ ಕಿರಣಗಳಿಂದ ಭ್ರಮಸಂದೇಹ ಸಹಿತವಾದ ಅಜ್ಞಾನವನ್ನು ದೂರಮಾಡುವನೋ, ಆಗ ಅವನನ್ನು ರವಿರೂಪ ಅಂದರೆ ಸೂರ್ಯರೂಪನೆಂದು ಭಾವಿಸಬೇಕು.

ಈ ರೀತಿಯಾಗಿ ಬ್ರಹ್ಮವೇತ್ತನಾದ ಗುರುವಿನ ವಿಷಯದಲ್ಲಿ ಶಿಷ್ಯನು ಸರ್ವದಾ ಈಶ್ವರಭಾವವನ್ನು ಇಡಬೇಕು. ಸ್ವಪ್ನದಲ್ಲಿ ಸಹ ದೋಷದೃಷ್ಟಿಯನ್ನು ತರಕೂಡದು.

||೧೦೪|| ಧನ ಅರ್ಪಣ ಪ್ರಕಾರವು. (೩)

ಪತ್ನೀಪುತ್ರ ಭೂಮಿ ಪಸುದಾಸೀ । ದಾಸ ದ್ರವ್ಯ ಗ್ರಹ ವ್ರೀಹಿ ವಿನಾಸೀ || ಧನಪದ ಇನ ಸಬಹಿನಕೊ ಭಾಖೈ । ಹ್ವೈಗುರುಸರನ ದೂರಿ ತಿಹಿ ನಾಖೈ ||೧೬||

|| ಸೋರಠಾ ||

ಧನ ಅರ್ಪಣಕೊ ಭೇವ । ಎಕ ಕಹ್ಯೋಸುನ ದೂಸರೋ ||
ಹ್ವೈಗ್ರಹಸ್ಥ ಗುರುದೇವ । ಯಾಜ್ಞವಲ್ಕ್ಯಸಮ ದೇಹತಿಹ ||

ಟೀಕಾ|| ಪತ್ನಿ, ಪುತ್ರ, ಭೂಮಿ, ಪಶು, ದಾಸಿ, ದಾಸ, ದ್ರವ್ಯ, ಗೃಹ ಧಾನ್ಯ ಮೊದಲಾದವೆಲ್ಲಗಳಿಗೂ ಧನವೆನ್ನುತ್ತಾರೆ. ಇವೆಲ್ಲವನ್ನು ತ್ಯಾಗ

ಮಾಡಿ, ತ್ಯಾಗಿಯಾದ ಗುರುವಿನಲ್ಲಿ ಶರಣಾಗತನಾಗಬೇಕು. ಇದೇ ... ರ್ಪಣವು. ಕಾರಣವೇನಂದರೆ, ಗುರುವು ತ್ಯಾಗಿಯಾಗಿರುವನು. ... ಸ್ವತಃ ಸ್ವೀಕಾರಮಾಡುವದಿಲ್ಲ; ಅದ್ದರಿಂದ ಗುರುಪ್ರಾಪ್ತಿಯು ಸ... ಧನುವನ್ನು ತ್ಯಾಗಮಾಡಬೇಕು. ಇಂಥ ತ್ಯಾಗವನ್ನಾದರೂ ಗು... ಸಮರ್ಪಣವೆಂದು ಹೇಳಬೇಕು.

(೨) ಒಂದು ವೇಳೆ ಗೃಹಸ್ಥನಾದ ಗುರುವಿದ್ದರೆ ಅವನಿಗೆ ಸ್ವ... ಸಮರ್ಪಿಸಬೇಕು. ಇದು ಎರಡನೇ ಪ್ರಕಾರದ ಧನಾರ್ಪಣವು.

ಈ ವಿಷಯದಲ್ಲಿ ಕೆಲವರು "ಯಾವನು ಬ್ರಹ್ಮವಿದ್ಯೆಯ ಗು... ವನೋ ಅವನು ಗೃಹಸ್ಥನಾಗುವದಿಲ್ಲ" ಎಂದು ಆಕ್ಷೇಪತೆಗೆದುಕೋ... ಇದು ಸರಿಯಾದದ್ದಲ್ಲ. ಯಾಕಂದರೆ ಯಾಜ್ಞವಲ್ಕ್ಯ, ಮತ್ತು ... ಕಾದಿ ಬ್ರಹ್ಮವಿದ್ಯೆಯನ್ನು ಬಲ್ಲಂಥ ಗುರುಗಳು ಸಹ ಗೃಹಸ್ಥರಾಗಿ... ವೇದದಲ್ಲಿ ಬಹಳವಾಗಿ ಕೇಳಿರುವೆವು. ಈ ಕಾರಣದಿಂದ ಗೃಹಸ್ಥರು... ಆಚಾರ್ಯರಾಗಿರುವರು.

||೧೦೫|| ವಾಣೀ ಅರ್ಪಣ ವಿಷಯದಲ್ಲಿ ಛಂದವು

ಭಾಖತ ಗುನಗನ ಗುರುಕೆ ಬಾನೀ ಸುದ್ಧ ।
ದೋಷ ನ ಕಬಹು ಅರ್ಪನ ಕರಿ ಇಮಬುದ್ಧ...

ಟೀಕಾ|| ಶಿಷ್ಯನು ಸರ್ವದಾ ತನ್ನ ಪವಿತ್ರವಾಣಿಯಿಂದ ಗ... ಶ್ರೇಷ್ಠಗುಣಗಳನ್ನೇ ವರ್ಣಿಸುತ್ತ ಒಂದಕ್ಷರವನ್ನಾದರೂ ದೋ... ಯಿಂದ ನುಡಿಯದೆ ಇರುವದೇ ವಾಣೀ ಅರ್ಪಣವು. ||೧೮||

||೧೦೬|| ಗುರುವಿನ ಸಂಬಂಧವಾಗಿ ಶಿಷ್ಯನ ವ್ಯವಹಾರವು ||೧೦೬-೧೦೮||

|| ಸೋ ರ ಠಾ ||

ಜೋಚಾಹೈ ಕಲ್ಯಾನ । ತನ ಮನ ಧನ ವಚ ಅರಪಿ ...
ಬಸ್ಸೈಬಹುತ ಗುರುಸಾನ । ಭಿಚ್ಛಾವೃತ್ತೈ ಜೀವನಕರೈ ...

ಟೀಕಾ|| ಯಾವ ಪುರುಷನು ತನ್ನ ಕಲ್ಯಾಣವಾಗಬೇಕೆಂ... ಸುವನೋ, ಅವನು ಈ ಪೂರ್ವದಲ್ಲಿ ಹೇಳಿದ ರೀತಿಯಂತೆ ತನು... ದವುಗಳನ್ನು ಅರ್ಪಣಮಾಡಿ, ತಾನು ಬಹುಕಾಲ ಗುರುವು ಎಲ್ಲಿ...



ಅಲ್ಲಿ, ಅಥವ ಸಮೀಪದಲ್ಲಿ ವಾಸವಾಗಿದ್ದುಕೊಂಡು ಭಿಕ್ಷಾವೃತ್ತಿಯಿಂದ[1] ತನ್ನ ಜೀವನವನ್ನು ರಕ್ಷಣಮಾಡಿಕೊಳ್ಳಬೇಕು. ||೧೯||

ಟಿಪ್ಪಣಿ—೧. ಭಿಕ್ಷಾವೃತ್ತಿಯು ಬ್ರಹ್ಮಚಾರಿ, ಅಥವಾ ತ್ಯಾಗೀ ಶಿಷ್ಯನ ಸಲುವಾಗಿ ಇರುತ್ತದೆ. ಗೃಹಸ್ಥನಾದವನ ಸಲುವಾಗಿ ಅಲ್ಲ.

|| ೧೦೭ || || ಚೌಪಾಈ ||

ಸೊ ಭಿಚ್ಛಾ ಧರಿ ದೈಸಿಕ ಆಗೈ ।
ನಿಜ ಭೋಜನಕೂ ನಹಿವುನಿ ಮಾಗೈ ||
ಜೊ ಗುರುದೇಇ ತು ಜಾಠರ ಡಾರೈ ।
ನಹಿ ದೂಜೆದಿನವೃತ್ತಿ ಸಂಭಾರೈ ||೨೦||

ಟೀಕಾ|| ಶಿಷ್ಯನು ಯಾವ ಭಿಕ್ಷಾನ್ನವನ್ನು ತರುವನೋ, ಅದನ್ನು ಅವನೇ ಭೋಜನಮಾಡುವದಿಲ್ಲ; ಆದರೆ ದೇಶಿಕನಾದ ಗುರುವಿನಮುಂದೆ ಇಡುತ್ತಾನೆ, ಮತ್ತು ಆ ಭಿಕ್ಷಾನ್ನವನ್ನು ತನ್ನ ಭೋಜನದಸಲುವಾಗಿ ಗುರುವಿನ ಬಳಿಯಲ್ಲಿ ಬೇಡುವದೂ ಇಲ್ಲ; ಮತ್ತು ಒಂದು ದಿವಸದಲ್ಲಿ ಎರಡನೆಸಾರೆ ಭಿಕ್ಷೆಯಸಲುವಾಗಿ ಹೋಗುವದಿಲ್ಲ; ಆದರೆ ಗುರುವು ಕೃಪಾವಂತನಾಗಿ ಕೊಟ್ಟರೇ ಭೋಜನಮಾಡುವನು. ಆದರೆ ಗುರುವು ಶಿಷ್ಯನ ಶ್ರದ್ಧೆಯನ್ನು ಪರೀಕ್ಷಿಸುವ ನಿಮಿತ್ಯ ಕೊಡದೆ ಇದ್ದರೂ ಸಹ ಮರುದಿವಸ ಮಾಡತಕ್ಕ ಭಿಕ್ಷಾವೃತ್ತಿಯನ್ನು ಸಂಭಾಳಿಸುವನು. || ೨೦ ||

|| ದೋಹಾ ||

ಪುನಿ ಗುರುಕೆ ಆಗೆ ಧರೈ । ಭಿಚ್ಛಾ ಸಿಷ್ಯ ಸುಜಾನ ।
ನಿರ್ವೇದ ನ ಜಯಮ್ಮೈ ಕರೈ । ಜೊ ನಿಜಚಹೈ ಕಲ್ಯಾನ||೨೧||

ಟೀಕಾ|| ಈ ಪ್ರಕಾರ ಸೂಜ್ಞನಾದ ಶಿಷ್ಯನು ಭಿಕ್ಷಾನ್ನವನ್ನು ತಂದು ಗುರುವಿನಮುಂದೆ ಇಟ್ಟರೂ, ಅವನು ಕೃಪಾಳುವಾಗಿ ಅನ್ನವನ್ನು ಕೊಡದೆ ಇದ್ದ ಪಕ್ಷದಲ್ಲಿ ಯಾವನು ಮನಸ್ಸಿನಲ್ಲಿ ನಿರ್ವೇದ ಅಂದರೆ ಗ್ಲಾನಿಯನ್ನು ಹೊಂದದಿರುವನೋ ಅಂಥ ಶಿಷ್ಯನು ನಿಶ್ಚಯವಾಗಿಯೂ ಕಲ್ಯಾಣವನ್ನು ಹೊಂದುವನು. || ೨೧ ||

||೧೦೮|| || ಚೌಪಾಈ ||

ಇಮ 'ವ್ಯವಹೃತ ಅವಸರ ಜಬಪೇಖೈ ।

ಮುಖ ಪ್ರಸನ್ನ ಗುರು ಸನ್ಮುಖ ಲೇಖ್ಯೆ ॥
ವಿನತೀ ಕರ್ಯೆ ದೊ ಉಕರ ಜೋರೀ ।
ಗುರು ಅಜ್ಞಾತ್ಯೆ ಪ್ರಸನ್ನ ಬಹೋರೀ ॥೨೨॥

ಟೀಕಾ॥ ಈ ರೀತಿಯಾಗಿ ಇದ್ದುಕೊಂಡು ಗುರುವಿನ ಅವಕಾ[illegible] ನೋಡಿಕೊಂಡು, ಮತ್ತು ಗುರುವು ಯಾವಾಗ ಪ್ರಸನ್ನ ಮುಖ[illegible] ತನ್ನ ಕಡೆಗೆ ನೋಡುವನೋ, ಆಗ ಬದ್ಧಾಂಜಲಿಯಾಗಿ ಗುರುವಿನ[illegible] ಯನ್ನು ಮಾಡಿ "ಭಗವನ್ ತಮ್ಮಲ್ಲಿ ಪ್ರಶ್ನೆಯನ್ನು ಮಾಡಬೇಕೆಂದು[illegible] ಸುತ್ತೇನೆ;" ಎಂದು ಬಿನ್ನಹಮಾಡಿಕೊಳ್ಳುವನು. ಅದಕ್ಕೆ ಗುರುವ[illegible] ಣೆಕೊಟ್ಟರೇ ಪ್ರಶ್ನೆಮಾಡುವನು. ಒಂದು ಸಮಯದಲ್ಲಿ ಕದಾಚಿತ್ [illegible] ತರದ ಉತ್ತಮ ಕರ್ಮದಿಂದ ಗುರುವು ಶಿಷ್ಯನು ತನು ಅರ್ಪಣಾದಿ ಯನ್ನು ಸ್ವೀಕರಿಸದೆ, ಸಹಜ ಉಪದೇಶವನ್ನು ಮಾಡಿ ಬಿಡುವನು. ರೂ ಸಹ ವಿಶುದ್ಧ ಅಧಿಕಾರಿಯು ಕಲ್ಯಾಣವಾಗಿ ಹೋಗುವದು. [illegible] ವೇನಂದರೆ, ಗುರುಸೇವೆಯಿಂದ ಎರಡು ಫಲಗಳಿರುವವು, ಅವುಗಳ[illegible] ದಲನೆಯದು ಗುರುಪ್ರಸನ್ನತೆಯು, ಎರಡನೆಯದು ಅಂತಃಕರಣ ಶು[illegible] ಈ ಎರಡೂ ಫಲಗಳು ಶಿಷ್ಯನಿಗೆ ಪ್ರಾಪ್ತವಾಗುವವು. ॥೨೨॥

॥ ದೋಹಾ ॥

ತನ ಮನಧನ ಭಾನೀ ಅರಬಿ । ಜಿಹಿ ಸೇವತ ಚಿತಲ[illegible]
ಸಕಲರೂಪ ಸೋ ಆಪಹ್ಯೆ। ದಾದೂ ಸದಾ ಸಹಾಯ॥

ಇತಿ ಶ್ರೀ ವಿಚಾರಸಾಗರ ಗ್ರಂಥದಲ್ಲಿ ಗುರು ಶಿಷ್ಯ ಲಕ್ಷಣ
ಗುರುಭಕ್ತಿಫಲ ಪ್ರಕಾರ ನಿರೂಪಣನ್ನಾಮ
ತೃತೀಯ ತರಂಗ ಸಮಾಪ್ತ.

---



ಓಂ

ವಿಘ್ನೇಶಾಯನಮಃ.

# ಸಟೀಕಾ ತಾತ್ಪರ್ಯ ವಿವರಣ ಸಹಿತ

# ವಿಚಾರ ಸಾಗರ

## ಚತುರ್ಥಸ್ತರಂಗಃ

॥ಅಥ ಉತ್ತಮಾಧಿಕಾರೀ ಉಪದೇಶ ನಿರೂಪಣಂ ॥

॥ ದೋಹಾ ॥

೧

ಗುರುಸಿಷ್ಯಕೆ ಸಂವಾದಕೀ । ಕಹೂ ವ ಗಾಥ ನವೀನ ॥
ಪೇಖಿ ಜಾಹಿ ಜಿಜ್ಞಾಸು ಜನ।ಹೋತ ವಿಚಾರ ಪ್ರವೀನ॥೧॥

ಅರ್ಥ—ಇನ್ನು ಗುರುಶಿಷ್ಯರ ಸಂವಾದ ರೂಪದಿಂದ ಒಂದು ನೂತನ [illegible]ವಾದ ಕಥೆಯನ್ನು ಹೇಳುವೆನು. ಅದರ ಅರ್ಥವನ್ನು ಜಿಜ್ಞಾಸುಗಳು [illegible]ಳಿದು ನೋಡಲು ವಿಚಾರ ಪ್ರವೀಣರಾಗುವರು. ॥೧॥

[illegible]ಪ್ಪಣಿ—೧. ನವೀನ ಅಂದರೆ ಅನಾದಿ ವೇದೋಕ್ತ ಜನಕ ಯಾಜ್ಞವಲ್ಕ್ಯರ ಕಥೆ ಯಂತೆ, ಇಲ್ಲಿ ಗುರು ಶಿಷ್ಯರ ಸಂವಾದ ರೂಪವಾದ ಕಥೆಯು ಸ್ವಬುದ್ಧಿ ಯಿಂದ ಕಲ್ಪಿತವಾದದ್ದು. ಪ್ರಾಚೀನ ಪುರಾಣಾದಿ ಗ್ರಂಥಗಳಲ್ಲಿ ಇದ್ದ ದ್ದಲ್ಲ. ಅದನ್ನು ಈಗ ವಿವರಿಸುವೆನು.

---

॥೧೯॥ ಶುಭ ಸಂತತಿ ರಾಜಾ ಮತ್ತು ಅವನ ತತ್ವದೃಷ್ಟಿ,
ಅದೃಷ್ಟಿ, ಮತ್ತು ತರ್ಕದೃಷ್ಟಿ ಎಂಬ ಮೂವರು
ಪುತ್ರರ ಕಥೆಯು ॥೧೯—೧೧೧॥

[illegible]ತೀನಿ ಸಹೋದರ ಬಾಲಸುಭ । ಚಕ್ರವರ್ತೀ ಸಂತಾನ ॥

ಸುಭ ಸಂತತಿ ಪಿತು ತಿಹಿ ನಮ್ಯೈ । ಸ್ವರ್ಗಪತಾಲ ಜಹಾ

ಅರ್ಥ—ಶುಭಸಂತತಿ ಎಂಬ ಒಬ್ಬ ಭೂಧವನು ತನ್ನ ತತ್ ಅದೃಷ್ಟಿ, ಮತ್ತು ತರ್ಕದೃಷ್ಟಿ ಎಂಬ ಮೂವರು ಪುತ್ರರೊಡನೆ ರಾ ಳುತ್ತಿದ್ದನು. ಅವನು ಬಹು ತೇಜಸ್ವಿಯಾಗಿ ಇದ್ದದರಿಂದ ಮರ್ತ್ಯ, ಪಾತಾಲ ಎಂಬ ಮೂರು ಲೋಕಗಳಲ್ಲಿಯ ಪ್ರಜೆಗಳು ಆವನನ್ನು ಮನ್ನಿಸುತ್ತಿದ್ದರು ॥೨॥

ಟಿಪ್ಪಣಿ—೧. ಜಹಾನ ಅಂದರೆ ಮರ್ತ್ಯಲೋಕ.

॥ ಚೌ ಪಾ ಈ ॥

ಬಾಲಪನೋ ಸಬಖೇಲತ ಖೋಯೋ ।
ತರುನ ಪಾಯು ಪುನಿ ಮದನವಿಗೋಯೋ
ಧಾರಿ ನಾರಿ ಗೃಹ ಮಾರ ಪ್ರಕಾಸೀ ।
ಭೋಗ ಲಹ್ಯೈತಿಹು ಸಬ ಸುಖರಾಸೀ ॥

ಅರ್ಥ—ಅಶುಭ ಸಂತತಿ ರಾಜನು ಬಾಲ್ಯಾವಸ್ಥೆಯನ್ನು ಆ ಟಗಳಲ್ಲಿ ಕಳೆದನು.ತಾರುಣ್ಯಾವಸ್ಥೆಯಲ್ಲಿ ಮದನ ವ್ಯಾಪಾರದಲ್ಲಿ ಕಾ ಕಳೆದನು. ಯಾವಸ್ತ್ರೀಯರ ನೇತ್ರಕಟಾಕ್ಷಗಳಿಂದ ಮದನೋ ಗುವದೋ, ಅಂಥ ಸುಂದರ ಸ್ತ್ರೀಯರ ಇರುವಿಕೆಯಿಂದ ಅವನ ಪ್ರಕಾಶ ಮಾನವಾಗಿತ್ತು. ಮತ್ತು ತ್ರಿಭುವನದಲ್ಲಿಯ ಯಾವತ್ ಗಳು ಅವನಿಗೆ ಅನುಕೂಲವಾಗಿದ್ದವು. ಅವುಗಳನ್ನು ಯಥಾ ಅನುಭವಿಸಿದನು ॥ ೩ ॥

ಟಿಪ್ಪಣಿ-೧. ಮಾರ ಅಂದರೆ ಕಾಮದೇವ.

॥೧೧೦॥ ॥ ದೋಹಾ ॥

ಸ್ವರ್ಗ ಭೂಮಿ ಪಾತಾಲಕೆ । ಭೋಗಹಿ ಸರ್ವ ಸಮ
ಸುಭ ಸಂತತಿ ನಿಜ ತೇಜಬಲ । ಕರತ ರಾಜಕೆ ಕಾ

ಅರ್ಥ—ಸ್ವರ್ಗ ಮರ್ತ್ಯ, ಪಾತಾಲ ಲೋಕಗಳ ಸಸ್ವ ಯಥಾಸ್ಥಿತವಾಗಿ ಅನುಭವಿಸಿ ತನ್ನ ನಿಜಬಲದಿಂದ ರಾಜ್ಯ ದ್ದನು.

ಟಿಪ್ಪಣಿ—ಸಮಾಜ ಅಂದರೆ ಭೋಗ ಸಾಮುಗ್ರಿಗಳು.



॥ ದೋಹಾ ॥ ೧

ಹಿ ಅವಸರ ಇಕ ತಿಹಿಪಿತಾ । ನಿಜಹಿಯ ರಚ್ಯೊವಿಚಾರ ॥
ಖ ಸ್ವರೂಪ ಅಜ ಆತಮಾ । ತಾಸೂ ಭಿನ್ನ ಅಸಾರ ॥೫॥

ಅರ್ಥ—ಹೀಗಿರುತ್ತಿರಲು ಒಂದಾನೊಂದು ಸಮಯದಲ್ಲಿ ಅವನ ಮನಸ್ಸಿನಲ್ಲಿ "ಆತ್ಮನೆ ಸುಖರೂಪವನ್ನು ನೋಡಬೇಕು ಅದರ ಹೊರ್ತು ಳಿದವುಗಳೆಲ್ಲವು ಅಸಾರವು" ಎಂಬ ಸಹಜವಾದೊಂದು ವಿಚಾರವು ಉದಯಿಸಿತು.

ಪ್ಪಣಿ—[೧] "ನಿಜಹಿಯೊ ರಚ್ಯೊವಿಚಾರ,, ಎಂಬ ಚರಣವನ್ನು ತೆಗದು ಹಾಕಿ ಕೆಲವು ಗ್ರಂಥಕಾರರು "ಉಪಜ್ಯೊಹಿಯೆ ವಿಚಾರ,, ಎಂಬ ಚರಣವನ್ನು ಹಾಕಿಕೊಂಡಿದ್ದಾರೆ. ಇದರ ಅರ್ಥವೇನಂದರೆ, ವಿಚಾರ ಅಂದರೆ ವಿವೇಕ ಹಿಯೆ ಅಂದರೆ ತನ್ನ ಅಂತಃಕರಣದಲ್ಲಿ ಉಪಜ್ಯೋ ಅಂದರೆ ಪೂರ್ವಕೃತ ಪುಣ್ಯಪುಂಜದ ಬಲದಿಂದ ಅಕಸ್ಮಾತ್ ಉತ್ಪನ್ನ ವಾಯಿತು.

॥ ದೋಹಾ ॥

ಹಿ ಕಾರನ ತಜಿ ರಾಜಯುಹ । ಜಾನೂ ಆತಮು ರೂಪ ।
ರ್ಗಭೂಮಿ ಪಾತಲಕೆ । ತಿಹು ಪುತ್ರಹ ಕರಿ ಭೂಪ ॥೬॥

ಅರ್ಥ—ಇಂತು ವಿಚಾರವು ಅವನಲ್ಲಿ ಉದಯಿಸಿದೊಡನೇ ಅವನು ಗೆಂದು ಕೊಂಡನು. ಈ ರಾಜವೈಭವವನ್ನು ತ್ಯಾಜ್ಯಮಾಡಿ, ಆತ್ಮಸ್ವ ರೂಪವನ್ನು ತಿಳಿದುಕೊಳ್ಳಬೇಕು. ನನ್ನ ಮೂವರು ಮಕ್ಕಳಿಗೆ ಸ್ವರ್ಗ ಮ ರ್ತ್ಯ ಪಾತಾಲ ಎಂಬ ತ್ರಿಲೋಕಗಳ ಆಧಿಪತ್ಯವನ್ನು ಕೊಟ್ಟು ಅರಸರನ್ನಾಗಿ ಮಾಡಿಬಿಟ್ಟರಾಯಿತು.

॥ ಚೌಪಾಈ ॥

ಅಸ ವಿಚಾರ ಸುಭ ಸಂತತಿ ಕೀನಾ ।
೧
ಮಂತ್ರಿ ಪೇಖಿ ತಿಹು ಪುತ್ರ ಪ್ರವೀನಾ ॥
ದೇಸ ಇಕಂತ ಸಮೀಪ ಬುಲಾಯೆ ।
ನಿಜ ವಿರಾಗಕೆ ವಚನ ಸುನಾಯೆ ॥೭॥

ಅರ್ಥ—ಹೀಗೆ ಮನಸ್ಸಿನಲ್ಲಿ ವಿಚಾರಮಾಡಿ, ಮಂತ್ರಿಯು ಕಡೆಯಿಂದ ಮಕ್ಕಳನ್ನು ಕರೆಯಿಸಿಕೊಂಡು, ಏಕಾಂತದಲ್ಲಿ ಕುಳ್ಳಿರಿಸಿಕೊಂಡು, ತನ್ನ ಮನಸ್ಸಿನ ನಿಜವೈರಾಗ್ಯವನ್ನು ಹೇಳತೊಡಗಿದನು ಎಂದರ್ಥವು.

ಪ್ಪಣಿ—೧. ಮಂತ್ರಿಪೇಖಿ ಅಂದರೆ ಮಂತ್ರಿಗೆ ನೇತ್ರ ಸಂಕೇತಮಾಡಿ.

|| ಚೌ ಪಾ ಈ ||

ಛಾಪ್ಯೋ ಪ್ರನಿ ಯುಹ ರಾಜ ಸಂಭಾರಹು|
ಇಕ ಪತಾಲ ಇಕ ಸ್ವರ್ಗ ಸಿದಾರಹು ||
ಅಪರ ಬಸಹು ಕಾಸೀಭುವಿ ಸ್ವಾಮಿ|
ರಹತ ಜಹಾ ಸಿವ ಅಂತೇರ ಜಮಿ ||೮||

ಅರ್ಥ—ಇಂತು ಪೇಳಿದುದಲ್ಲದೆ ತನ್ನ ಪುತ್ರರನ್ನು ಕುರಿತು ಮಕ್ಕಳಿರಾ ನಿಮ್ಮಲ್ಲಿ ಒಬ್ಬನು ಪಾತಾಲ ಲೋಕದಲ್ಲಿಯೂ, ಇನ್ನು ಸ್ವರ್ಗಲೋಕದಲ್ಲಿಯೂ, ಮೂರನೆಯವನು ಪೃಥ್ವಿಯಲ್ಲಿಯೂ ರಾ ವನ್ನು ಮಾಡಿರಿ. ಪೃಥ್ವಿಯಲ್ಲಿ ರಾಜ್ಯಭಾರಮಾಡುವವನು ತ್ರಿಸ್ಥ ಸರ್ವಾಂತರ್ಯಾಮಿಯೂ ಆಗಿರುವ ಸ್ವಾಮಿಯ ವಾಸಸ್ಥಳ ಕಾಶೀಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಳ್ಳಬೇಕು. ನಾ ತ್ಯಕಾಲ ಪರಿಯಂತ ಅಲ್ಲಿಯೇ ವಾಸಿಸುವೆನು. ||೮||

|| ಚೌಪಾಈ || ಜಿಹಿ ಮರತಹಿಂ ಸುನಿ ಸಿವ ಉಪದೇಶ
ಅನಯಾಸಹಿ ತಿಹಿ[೧] ಲೋಕ ಪ್ರವೇಸಾ ||
ಗಂಗ ಅಂಗ ಮನು ಕೀರ್ತಿ ಪ್ರಕಾಸೈ|
ಉತ್ತರವಾಹನಿ ಅಧಿಕ ಉಜಾಸೈ ||೯||

ಅರ್ಥ—ಯಾವನು ಅಂತ್ಯಕಾಲದಲ್ಲಿ ಶಿವೋಪದೇಶವನ್ನು ಕೇ ನೋ, ಅವನು ಅನಾಯಾಸವಾಗಿ, ಮೋಕ್ಷವನ್ನು ಪೊಂದುವನು. ಅಮೋಘವಾಹಿನಿಯಾದ ಗಂಗಾನದಿಯ ಪ್ರವಾಹವು ಉತ್ತರವಾ ಗಿರುವದು. ||೯||

ಟಿಪ್ಪಣೀ—[೧] ತಿಹಿ ಲೋಕ ಪ್ರವೇಸಾ ಅಂದರೆ ಆ ಶಿವನ ಲೋಕವಾ ವನ್ನು ಕುರಿತು ಪ್ರವೇಶ ಮಾಡುವನು ‘ಕಾಶ್ಯಾಂತುಮರಣಾನ್ಮುಕ್ತಿ’ ದರೆ ಕಾಶಿಯಲ್ಲಿ ಮರಣವಾಗುವದರಿಂದ ಮುಕ್ತಿಯಾಗುವದು ಎಂಬ ಯ ಅಭಿಪ್ರಾಯವು.

|| ದೋಹಾ ||

ಕರಹು ರಾಜ ಇಮ ಭಿನ್ನತಿಹು | ಪಾಲಹು ನಿಜನಿಜ ದೇ
ಬಿನ ವಿಭಾಗ ಭ್ರಾತಾನಕೊ | ಭೂಮಿಕಾಜ ಹ್ವೈಕ್ಲೇಶ



ಅರ್ಥ|| ಎಲೈ ಮಕ್ಕಳಿರಾ ? ಈ ಪ್ರಕಾರ ನಾನು ಯಥಾರ್ಥವಾಗಿ ವಿಭಾಗಮಾಡಿ ಕೊಟ್ಟ ರಾಜ್ಯವನ್ನು ಸ್ವಧರ್ಮಾನುಸಾರವಾಗಿ ಪರಿಪಾಲನ ಮಾಡಿರಿ; ನಾನು ಹೀಗೆ ಮಾಡದಿದ್ದರೆ ನೀವು ನಿಮ್ಮನಿಮ್ಮೊಳಗೆ ಕಲಹ ಮಾಡುವ ಪ್ರಸಂಗವು ಬರುತ್ತಿತ್ತು. ಅದರಿಂದ ಬಹಳ ಕ್ಲೇಶವೇ ಆಗುತ್ತಿತ್ತು.

|| ಇಂದವ ಛಂದ ||

ರಾಜ ಸಮಾಜ ತಜೌ ಸಬಮೈ ಅಬ
ಜಾನಿ ಹಿಯೆ ದುಖ ತಾಹಿ ಅಸಾರಾ ||
ಔರತು ಲೋಕ ದುಖೀ ಅಪನೈ ದುಖ ||
ಮೈ ಭುಗತ್ಯೋ ಜಗ ಕ್ಲೇಸ ಅಪಾರಾ ||
[೧]ಜೆ ಭಗವಾನ ಪ್ರಧಾನ ಅಜಾನ ಸ |
ಮಾನ ದರಿದ್ರನ ಅಜಾನ ಸ ||
ಹೇತು ವಿಚಾರ[೧] ಹಿಯೆ ಜಗಕೆ ಭಗ |
ತ್ಯಾಗೀ ಲಖೂ ನಿಜರೂಪ ಸುಖಾರಾ ||೧೧||

ಅರ್ಥ || ಎಲೈ ಮಕ್ಕಳಿರಾ! ನಾನು ಈ ಸಂಸಾರವು ದುಃಖ ರೂಪವಾಗಿರುವದೆಂಬದನ್ನು ನನ್ನ ಮನಸ್ಸಿನಲ್ಲಿ ಚನ್ನಾಗಿ ತಿಳಿದುಕೊಂ ಡೆನು. ಆದ್ದರಿಂದ ರಾಜ್ಯವನ್ನು ಬಿಟ್ಟುಕೊಟ್ಟು ಆತ್ಮವಿಚಾರವನ್ನುಸೋಡಿ ಕೊಳ್ಳಬೇಕೆಂಬ ಇಚ್ಛೆಯು ನನಗೆ ಉಂಟಾಗಿದೆ. ಇದಲ್ಲದೆ ಈ ನನ್ನ ಪ್ರಜೆಗಳೆಲ್ಲರೂ ಅನಂತವಾದ ಸಂಸಾರಸಾಗರದಲ್ಲಿ ಬಿದ್ದು ಅನೇಕ ದುಃಖ ಗಳನ್ನು ಹೊಂದುತ್ತಿರುವದನ್ನು ಕಂಡು ನನಗೆ ಬಹಳ ದುಃಖವಾಗುತ್ತದೆ. ದರ ಹೊರ್ತು ಈ ಭೂಲೋಕದಲ್ಲಿಯ ಅನೇಕ ನಶ್ವರವಾದ ಐಶ್ವರ್ಯ ಗಳು ನನಗೆ ಇದ್ದದ್ದನ್ನು ಕಂಡು ಈ ಅಜ್ಞ ಜನರೆಲ್ಲರು ನನ್ನನ್ನು ಬಹು ಸುಖಿಯೆಂದು ತಿಳಿದುಕೊಳ್ಳುತ್ತಾರೆ. ನನಗಾದರೋ ಈ ಭೋಗಭಾಗ್ಯ ಗಳು ಅತಿಕನಿಷ್ಠವಾಗಿ ತೋರುತ್ತವೆ. ಆದ್ದರಿಂದ ಇವುಗಳನ್ನು ತ್ಯಾಜ್ಯ ಮಾಡಿ, ಸರ್ವಸಂಗ ಪರಿತ್ಯಾಗಮಾಡಿ, ವ್ಯಂಗರಹಿತ ಅಂದರೆ-ಎಂದೂ ಕಡಿ ಮೆಯಾಗದೆ ಇರುವಂಥ ನಿಜ ಸುಖವನ್ನು ಹೊಂದಬೇಕೆಂದು ಇಚ್ಛಿ ಸುತ್ತೇನೆ. || ೧೧ ||

ಟಿಪ್ಪಣಿ—೧ಈ ಛಂದದ ತೃತೀಯ ಚರಣದ ಅನ್ವಯಾರ್ಥವು ಹೀಗೆ ಇರುವದು. ಯಾರ ಪುರುಷನು ಭಗವಂತರು ಶ್ರೇಷ್ಠನು, ಅಂದರೆ-ಐಶ್ವರ್ಯವಂತರಲ್ಲಿ ಮು

ಬ್ಯಸನಾಗಿರುತನು. ಮತ್ತು ಅಜಾನ ಅಂದರೆ ಅಜ್ಞಾನಿಯಾಗಿರು ಸರ್ವ ಜನರು ದರಿದ್ರನ ಸಮಾನ ಅಂದರೆ ಈ ಸರ್ವಜನರುದರಿದ್ರ ಅಂತ ರಂಗದಲ್ಲಿ ದುಃಖಿಗಳಾಗಿರುವರು.

[೨] ಭಗ ಅಂದರೆ ಐಶ್ವರ್ಯವು.

॥೧೧॥ ವಾಕ್ಯ॥ ಅನಂತಕಹೆ ಇಮತಾತ ಸು।
ನ್ಯೆತಿಹು ಭ್ರಾತ ಸುಬುದ್ಧಿ ನಿಧಾನಾ ॥
ಬ್ಯೆಠಿ ಇಕಂತ ವಿಚಾರ ಅಪಾರ ಭ।
ಸ್ಯೆಪುನಿ ಆಪಸಮಾಹಿ ಸುಜಾನಾ ॥
ದೇ ದುಖ ಮೂಲ ಸಮಾಜ ಹಮ್ಯೆಯಹ।
ಆಪಭಯೊ ಚಹ ಬ್ರಹ್ಮ ಸಮಾನಾ ॥
ಸೋಜನ ನಾಗರ ಬುದ್ಧಿಕ ಸಾಗರ।
ಆಗರ ದುಃಖ ತಜ್ಯೆ ಜು ಜಹಾನಾ ॥

ಅರ್ಥ॥ ಈ ಪ್ರಕಾರ ತಮ್ಮ ಪಿತನು ನುಡಿದ ಅನೇಕ ವಾಕ್ಯ ಕೇಳಿ, ಆ ಸುಬುದ್ಧಿಗಳಾಗಿದ್ದ ಮೂವರೂ ಮಕ್ಕಳು, ಏಕಾಂತದಲ್ಲಿ ತುಕೊಂಡು ವಿಚಾರಮಾಡ ಹತ್ತಿದರು. ಅವರು ತಮ್ಮ ತಮ್ಮೊಳಗೆ ತಂದೆಯಾಡಿದ ವಾಕ್ಯಗಳನ್ನು ಕೇಳಿದಿರಾ ? ನಮ್ಮನ್ನು ಈ ದುಃಖ ಜದಲ್ಲಿ ಮುಳುಗಿಸಿ, ತಾನು ಬ್ರಹ್ಮಸಮಾನನಾಗಬೇಕೆಂದು ತ್ತಾನೆ. ಆದ್ದರಿಂದ ಬುದ್ಧಿಸಾಗರರೂ, ವಿಚಾರ ಪರಿಪೂರ್ಣತವಾ ತಂದೆಯು ಹೇಳಿದ ಬುದ್ಧಿಯ ವಾಕ್ಯಗಳನ್ನು ಕೇಳಿ, ತಿಳಿದುಕೊಂ ಸರ್ವರಾಜ್ಯವನ್ನೂ ಸರ್ವ ನಶ್ವರವಾದ ಸುಖಗಳನ್ನೂ ಬಿಟ್ಟುಕೊಡ

॥೧೨॥ ಆ ಮೂವರೂ ಮಕ್ಕಳು ಗೃಹವನ್ನು ಬಿಟ್ಟುಹೊ
ವಿಕೆಯೂ ಗುರುಗಳ ದರ್ಶನವಾಗುವಿಕೆಯೂ.

॥ ದೋಹಾ ॥

ಯಾತ್ಯೆತಜಿ ದುಖಮೂಲ ಯಹ। ರಾಜಕರೌ ನಿಜಕಾಜ
ಕರಿವಿಚಾರ ಇಮ ಗೇಹತ್ಯೆ। ನಿಕಸ್ಯೊ ಭ್ರಾತ ಸಮಾಜ

ಅರ್ಥ॥ ಹೀಗೆ ತಮ್ಮತಮ್ಮೊಳಗೆ ವಿಚಾರಮಾಡಿ ತಿಳಿದುಕೊಂ ಮೂವರೂ ಸಹೋದರರು ಗೃಹವನ್ನು ತ್ಯಾಗಮಾಡಿ, ದುಃಖಮೂ



ರಾಜ್ಯವನ್ನು ಬಿಟ್ಟುಕೊಟ್ಟು ಆತ್ಮಸ್ವರೂಪವನ್ನು ಕಂಡು ಹಿಡಿಯಬೇಕೆಂದು ಹೊರಟರು. ॥ ೧೩ ॥

॥ ದೋಹಾ ॥

ತಿಹು ಖೋಜತ ಸದ್ಗುರುಚಲೆ। ಧಾರಿ ಮೋಛ ಹಿಯ ಕಾಮ॥
ಅರ್ಥಸಹಿತ ಕಿಯ ತಾತಕೊ। ಸುಭಸಂತತಿ ಯಹ ನಾಮ॥

ಅರ್ಥ॥ ಈ ಪ್ರಕಾರ ಮೂವರೂ ಹೃದಯದಲ್ಲಿ ಮೋಕ್ಷೇಚಯುಳ್ಳವರಾಗಿ ಸದ್ಗುರುವನ್ನು ಶೋಧಿಸುತ್ತ ನಡೆದರಲ್ಲದೆ ತಮ್ಮ ಜನಕನ ಶುಭಸಂತತಿ ಎಂಬ ನಾಮವನ್ನು ಸಾರ್ಥಕಮಾಡಿದರು. ॥ ೧೪ ॥

॥ ದೋಹಾ ॥

ಖೋಜತ ಖೋಜಿತ ದೇಸಬಹು। ಸುರಸರಿ ತೀರ ಇಕಂತ ॥
ತರುಪಲ್ಲವ ಸಾಖಾ ಸಘನ[1]। ಬನ ತಾಮ್ಯೆ ಇಕ ಸಂತ ॥೧೫॥

ಅರ್ಥ॥ ಆ ಮೂವರೂ ಗೃಹತ್ಯಾಗ ಮಾಡಿ ಅನೇಕ ದೇಶಕೋಶಗಳನ್ನು ಶೋಧಿಸುತ್ತ ಭಾಗೀರಥೀತೀರಕ್ಕೆ ಬಂದರು. ಅದರ ತೀರದಲ್ಲಿ ನಿಬಿಡವಾಗಿದ್ದ ತರುಪಲ್ಲವ ರಾಶಿಗಳಿಂದ ನಿಬಿಡೀಕೃತವಾದಂಥ ವಿಸ್ತೃತವಾದಂಥ ಆಶ್ರಮದಲ್ಲಿ ಕುಳಿತುಕೊಂಡ ಒಬ್ಬ ಸಾಧುವರ್ಯನನ್ನು ನೋಡಿದರು.

ಟಿಪ್ಪಣಿ—೧ ವೃಕ್ಷಗಳ ದಟ್ಟಣೆಯು ವನದ ಶೋಭೆಯಾಗಿರುವದು.
೨. ಶಾಖೆಗಳ ದಟ್ಟಣೆಯು ವೃಕ್ಷಕ್ಕೆ ಶೋಭೆಯು.
೩. ಪರ್ಣಗಳ ದಟ್ಟಣೆಯು ಶಾಖೆಗಳಿಗೆ ಶೋಭೆಯು,

ಆ ಬಾಲಕರಿಗೆ ಕಂಡ ವನವು ಮೇಲೆ ವಿವರಿಸಿದ ಮೂರುಪ್ರಕಾರದ ದಟ್ಟಣೆಗಳಿಂದ ಯುಕ್ತವಾಗಿತ್ತು, ಈ ಕಾರಣದಿಂದ ಅತಿಶಯ ಸುಶೋಭಿತವಾಗಿತ್ತು.

॥ ದೋಹಾ ॥

ಬೈಠೋ ಬಟ ವಿಟಪಹಿ ತರ್ಯೆ। [1]ಭದ್ರಾಮುದ್ರಾ ಧಾರೀ ॥
ಜೀವ ಬ್ರಹ್ಮಕೀ ಏಕತಾ। ಉಪದೇಶತ ಗುನಟಾರೀ ॥೧೬॥

ಅರ್ಥ ॥ ಆ ಸಾಧುವರ್ಯನು ಆಶ್ರಮದಲ್ಲಿ ವಟವೃಕ್ಷದಡಿಯಲ್ಲಿ ಆಸನದಮೇಲೆ ಭದ್ರಮುದ್ರಾಧಾರಣ ಮಾಡಿಕೊಂಡು ಜೀವಬ್ರಹ್ಮರ ಏಕ

ತ್ವವನ್ನು ಉಪದೇಶಿಸುತ್ತ ಸಂಪೂರ್ಣ ತ್ರಿಗುಣರಹಿತನಾಗಿ ಕುಳಿ
ದ್ದನು.

ಟಿಪ್ಪಣಿ—(೧) ಹಸ್ತದಲ್ಲಿಯ ಅಂಗುಷ್ಠ ತರ್ಜನಿಗಳಸಂಯೋಗವು
ಮುದ್ರೆಯಾಗುವದು ಇದಕ್ಕೇ ಲೋಪಾಮುದ್ರಾ, ತ
ಮತ್ತು ಜ್ಞಾನಮುದ್ರಾ ಎಂದು ಸಹ ಹೇಳುತ್ತಾರೆ.

೧ ದೋ ೯ ಹಾ ||

ದೋಷರಹಿತ ಏಕಾಗ್ರಚಿತ । ಸಿಷ್ಯಸಂಘ ಪರಿವಾರ ||
ಲಖಿಧೈಸಿಕ ಉಪದೇಶಹಿಯ । ಚಹುಧಾ ಕರತವಿಚಾರ

ಅರ್ಥ|| ಆ ಸಾಧುವರ್ಯನ ಆಸಮಂತಾದ್ಭಾಗದಲ್ಲಿ ಶಿಷ್ಯ
ಏಕಾಗ್ರತೆಯಿಂದ ವಿಚಾರಮಾಡುತ್ತ ಕುಳಿತುಕೊಂಡಿದ್ದರು. ||

ಟಿಪ್ಪಣಿ—೧ ಕಳ್ಳತನ, ಪ್ರೀತಿ,ಮತ್ತು ಹಿಂಸಾ. ಈಮೂರು ಶರೀರದ
೨. ನಿಂದಾ, ಅಸತ್ಯತೆ, ಕಠೋರತ್ವ,ಮತ್ತು ವಾಚಾಲತ್ವ,
ವಾಣಿಯ ದೋಷಗಳು.

೩. ತೃಷ್ಣಾ, ಚಿಂತಾ, ಮತ್ತು ಬುದ್ಧಿಮಾಂದ್ಯ ಈ ಮೂರು
ದೋಷಗಳು.

ಇವು ನೃಸಿಂಹ ತಾಪನೀಯ ಉಪನಿಷದೋಕ್ತ ದಶದೋಷಗಳು
ಳಿಂದ ರಹಿತನಾಗಿದ್ದನು.

|| ದೋಹಾ ||

ಮನಹು ಸಂಭು ಕೈಲಾಸಮ್ಯೆ । ಉಪದೇಸತ ಸನಕಾ
ಪೇಖಿತಾಹಿ ತಿಹಿ ಲಹಿ ಸರನ । ಕೆರೀ ದಂಡವತ ಅ

ಅರ್ಥ|| ಆ ಸಾಧುವರ್ಯನನ್ನು ನೋಡಿದ ಕೂಡಲೆ,
ಮನಸ್ಸಿನಲ್ಲಿ ಸಾಕ್ಷಾತ್ ಜಟಾಜೂಟಧಾರಿಯಾದ ಚಂದ್ರಮೌ
ಕಾದಿಗಳಿಗೆ ಉಪದೇಶಮಾಡುತ್ತ ಕುಳಿತಿರುವನೋ ಏನೋ,
ಸವಾಗಿ, ದಂಡವತ್ ನಮಸ್ಕಾರಮಾಡಿದರು.

ಟಿಪ್ಪಣಿ—೧ ಕೈಲಾಸದಲ್ಲಿ ದಕ್ಷಿಣಾಮೂರ್ತಿ ಸ್ವರೂಪಧಾರಿಯಾದ
ಕ, ಸನಂದನ ಸನಾತನ, ಸನತ್ಕುಮಾರ ಎಂಬವರಿಗೆ ಉಪದೇ
ರುವನು ಎಂಬ ಅರ್ಥವಿರುವದು.

|| ದೋಹಾ ||

ಕಿಯೊ ವಾಸ ಷಟಮಾಸ ಪುನಿ । ಸಿಷ್ಯರೀತಿ ಅನುಸಾರ



ಲೀ ಅಧಿಕ ಗುರುಸೇವ ತಿಹು । ಮೋಕ್ಷಕಾಮ ಹಿಯಧಾರ ||

ಅರ್ಥ|| ಆಮೇಲೆ ಆ ಮೂವರೂ ಮೋಕ್ಷೇಚ್ಛೆಯುಳ್ಳವರಾಗಿ ಶಿಷ್ಯ
ರೀತಿಯನ್ನನುಸರಿಸಿ, ಗುರುಸೇವೆಯನ್ನು ಮಾಡುತ್ತ, ಅರ್ಧಸಂವತ್ಸರದ
ವರಿಯಂತ ಅಲ್ಲಿಯೇ ವಾಸಮಾಡಿದರು. || ೧೯ ||

|| ದೋ ೯ ಹಾ ||

ಪ್ರಸನ್ನ ಶ್ರೀಗುರು ತಬೈ । ತೇಪೋಬ್ಯೆ ಮೃದುಬಾನಿ
೧
ಹಿ ಕಾರನ ತುಮ ತಾತತಿಹು । ಬಸಹು ಕೌನಕಹ ಆನಿ ||

ಅರ್ಥ|| ಈ ಪ್ರಕಾರ ಅರ್ಧ ಸಂವತ್ಸರವು ಕಳೆದು ಹೋದಮೇಲೆ
ಸಾಧುವರ್ಯನು ಪ್ರಸನ್ನನಾಗಿ, ನೀವು ಯಾರು ? ಯಾವ ದೇಶದವರು
ಲ್ಲಿಗೆ ಏತಕ್ಕೋಸುಗ ಬಂದಿರುವಿರಿ ? ಎಂದು ಅಮೃತಸಮಸಾದ ವಾಣಿ
ಂದ ಪ್ರಶ್ನೆಮಾಡಿದನು. ||೨೦||

ಪ್ಪಣಿ—[೧] ನೀವು ಮೂವರು ಯಾವ ಕಾರಣದಿಂದ ಬಂದಿರುವರಿ. ಎಂಬದು
ಪ್ರಥಮ ಪ್ರಶ್ನೆಯು.

. ನೀವು ಯಾರು ! ಅಂದರೆ ಪರಸ್ಪರ ಸಂಬಂಧವೇನು ! ಎಂಬದು ದ್ವಿತೀಯ
ಪ್ರಶ್ನೆಯು.

. ಯಾರ ಮಕ್ಕಳು ? ಎಂಬದು ತೃತೀಯ ಪ್ರಶ್ನೆಯು.

ದೃಷ್ಟಿ ತಬಲಖಿ ಹಿಯೆ । ನಿಜ ಅನುಜನಕೀ ಸೈನ ||
ಹ್ಯೆ ಉಭಯಕರ ಜೋರಿ ನಿಜ । ಅಭಿಪ್ರಾಯಕೆ ಬೈನ ||

ಅರ್ಥ|| ಆಗ ತತ್ವದೃಷ್ಟಿಯನ್ನು ತನ್ನ ಕಿರಿಯ ಸಹೋದರರ ಮು
ಸ ಕಡೆಗೆ ನೋಡಿ, ಅವರ ಇಂಗಿತವನ್ನು ತಿಳಿದುಕೊಂಡು ಎದ್ದು ನಿಂತು,
ಪ್ರಾಂಜಲಿಪುಟನಾಗಿ ನಿಂತುಕೊಂಡು ತನ್ನ ಅಭಿಪ್ರಾಯವನ್ನು ಹೇಳಲಾ
ಭಿಸಿದನು.

||೧೧೩|| ತತ್ವದೃಷ್ಟಿಯು ಪ್ರಶ್ನೆಯನ್ನು ಮಾಡುವದಕ್ಕೆ
ಗುರುವಿನ ಆಜ್ಞೆಯನ್ನು ಕೇಳುವದು,ಮತ್ತು ಗುರುವು
ಆಜ್ಞೆಯನ್ನು ಕೊಡುವದು.

|| ತ ತ್ವ ದೃ ಷ್ಟಿ ರು ವಾ ಚ ||

ಭೋ ಭಗವನ ಹಮು ಭ್ರಾತ ತಿಹು । ಸುಭ ಸಂತತಿಸು
ಲಖ್ಯೋ ಚಹ್ಯೆ ಬಹು ಭೇವ ಹಿಯು।ದೀನ ನವೀನ ಅಜಾ

ಅರ್ಥ॥ ಭೋ ಭಗವನ್ ? ನಾವು ಮೂವರೂ ಸಹೋದರು
ಸಂತತಿ ಎಂಬ ಮಹಾರಾಜನ ಮಕ್ಕಳು, ಬಹಳ ಹೀನರು, ವಿ
ಅಜ್ಞರು ನವೀನರೂ ಆಗಿರುವೆವು. ॥ ೨೨ ॥

|| ದೋ ೯ ಹಾ ||

ಜೋ ಆಜ್ಞಾ ಹ್ವೈರಾವರೀ । ತೋ ಹ್ವೈ ಪೂಛೀ ಪ್ರವಿ
ಆಪದಯಾನಿಧಿ ಕಲ್ಪತರು । ಹಮು ಅತಿ ದುಃಖಿತ ಅಧೀ

ಅರ್ಥ ॥ ಭಗವನ್! ತಾವು ದಯಾನಿಧಿಗಳೂ ಕಲ್ಪತರುವೂ
ವಿರಿ. ನಾವು ಅತಿದುಃಖಾಧೀನರಾಗಿರುವೆವು. ತಮ್ಮ ಆಜ್ಞೆ
ತಾವು ಕೇಳಿದ ಪ್ರಶ್ನೆಗೆ ಪ್ರತಿವಚನವನ್ನು ಹೇಳುವೆನು. ॥ ೨೩ ॥

|| ಸೊರಠಾ ||

|| ಶ್ರೀ ೯ ಗು ರು ರು ವಾ ಚ ||

ಸುನಹು ಸಿಷ್ಯಮಮು ಬಾತ।ಜೋ ಪೂಛಹು ತುಮಸೋ
ಲಹೊ ಹಿಯೆ ಕುಸಲಾತ । ಸಂಶಯಕೋ ಉನಾರಹ್ವೈ ॥

ಅರ್ಥ॥ ಎಂದು ನುಡಿದ ತತ್ತ್ವದೃಷ್ಟಿಯ ನುಡಿಗಳನ್ನು ಕೇ
ಸಾಧುವು ಅವನನ್ನು ಕುರಿತು, ಎಲೌ ಸಚ್ಛಿಷ್ಯನೇ ? ನಾನು
ವಾಕ್ಯವನ್ನು ಲಾಲಿಸು. ನೀನು ಯಾವದನ್ನು ಕೇಳುವಿಯೋ,
ನಾನು ಹೇಳುತ್ತೇನೆ, ಅದರಿಂದ ಮನಸ್ಸಿನ ಸಂಶಯವು ನಿವಾ
ಪರಮಾನಂದವನ್ನು ಹೊಂದುವಿ ?" ಎಂದನು.

॥೧೧॥ ತತ್ವದೃಷ್ಟಿಯ ಮೋಕ್ಷೇಚ್ಛಾಸೂಚಕ ವಿನಂ

|| ದೋ ೯ ಹಾ ||

ಗುರುಕಿ ಲಖೀದಯಾಲುತಾ । ಸಿಷ್ಯಹಿಯೆ ಭೌ ಚೈನ ॥
ಕಾಜ ಸಿದ್ಧ ನಿಜ ಮಾನಿಹಿಯ । ಬಾಖಿಸಬಿನಯ ಬೈನ



ಅರ್ಥ—ಗುರುವಿನ ದಯಾಲುತ್ವವನ್ನು ಕಂಡು, ಶಿಷ್ಯನ ಹೃದಯದಲ್ಲಿ ಪರಮಾನಂದವಾಗಿ ತನ್ನ ಕಾರ್ಯವು ಸಫಲವಾಯಿತೆಂದು ನಿಶ್ಚಯಿಸಿ ನಮ್ರತೆಯಿಂದ ಈ ಕೆಳಗೆ ಬರೆದ ಪ್ರಶ್ನೆಯನ್ನು ಮಾಡಿದನು. ॥೨೫॥

|| ಚೌಪಾಈ ||

|| ತತ್ವದೃಷ್ಟಿರುವಾಚ ||

ಭೋ ಬಗವನ ತುಮ ಕೃಪಾ ನಿಧಾನಾ ।
ಹೌ ಸರ್ವಜ್ಞ ಮಹೇಸ ಸಮಾನಾ ॥
ಹಮು ಅಜಾನ ಮತಿ ಕಛೂನ ಜಾನ್ಯೈ ।
ಜನ್ಮಾದಿಕ ಸಂಸೃತಿ ಭಯ ಮಾನ್ಯೈ ॥೨೬॥

ಅರ್ಥ—ಭಗವನ್! ತಾವು ಕೃಪಾನಿಧಾನರು; ಮಹೇಶನಂತೆ ಸರ್ವಜ್ಞರು; ನಾವು ಅಜ್ಞಾನಿಗಳು; ಅಲ್ಪ ಮತಿಗಳು; ಜನನ ಮರಣ ಭಯವುಳ್ಳವರು, ಸಂಸಾರಭಯವುಳ್ಳವರೂ ಆಗಿದ್ದೇವೆ.

|| ಚೌಪಾಈ ||

೧

ಕರ್ಮ ಉಪಾಸನ ಕೀನೆ ಭಾರೀ ।
ಔರ ಅಧಿಕ ಜಗಪಾಸೀ ಡಾರೀ ॥
ಅಪ ಉಪಾಯ ಕಹೌ ಗುರುದೇವಾ ।
ಹ್ವೈ ಜಾತ್ಯೈ ಭವದುಖಕೊ ಛೇವಾ ॥೨೭॥

ಅರ್ಥ—ಸ್ವಾಮಿಯೇ! ನಾವು ಕರ್ಮೋಪಾಸನೆಗಳನ್ನು ಅನೇಕ ವಿಧವಾಗಿ ಮಾಡಿದೆವು;ಅದರಿಂದ ಅಧಿಕ ಬಂಧನವೇ ಉಂಟಾಗಹತ್ತಿತು ಆಭವದುಃಖದಿಂದ ಪಾರಾಗುವಂಥ ತ್ವರಿತ ಉಪಾಯವನ್ನು ತಾವು ಹೇಳಬೇಕು.

ಟಿಪ್ಪಣಿ—ಈಪೂರ್ವದಲ್ಲಿ ನಾವು ಸಕಾಮುಕರ್ಮ ಮತ್ತು ಉಪಾಸನೆಯನ್ನು ಬಹಳ ಮಾಡಿದೆವು ; ಅದರಿಂದ ಮೋಕ್ಷರೂಪ ವಾಂಛಿತ ಫಲವು ಪ್ರಾಪ್ತವಾಗಲಿಲ್ಲ. ಮರಳಿ ಸಂಸಾರವೇ ಹೆಚ್ಚಿತು ಎಂಬ ಅಭಿಪ್ರಾಯವಿರುವದು.

|| ಚೌಪಾ ಈ ||

ಪುನಿ ಚಾಹತ ಹಮು ಪರಮಾನಂದಾ ।
ತಾಕೊ ಕಹೊ ಉಪಾಯ ಸುಛಂದಾ ॥

ಜಬ ಕೃಪಾ ಕರಿ ಕಹಿ ಹೌ ತಾತಾ |
ತಬ ಹ್ವೈ ಹೈ ಹಮರೆ ಕುಸಲಾತಾ ||೨೮||

ಟೀಕಾ—ಭಗವನ್! ತಾವು ಕೃಪಾನಿಧಾನರಾಗಿರುವಿರಿ, ಮತ್ತು ದಾ ಶಿವನಂತೆ ಸರ್ವಜ್ಞರಾಗಿರುವಿರಿ. ನಾವು ಜನನ ಮರಣ ಮೊದ ದುಃಖರೂಪೀ ಸಂಸಾರದಿಂದ ಭೀತರಾಗಿರುವೆವು. ಅದು ನಿವೃತ್ತಿ ಉಪಾಯವನ್ನು ತಾವು ಹೇಳಬೇಕು. ಮತ್ತು ಪರಮಾನಂದ ಪ್ರಾ ಉಪಾಯವನ್ನೂ ಹೇಳಬೇಕು.

ಪರಮಗುರುವೇ! ನಾವು ಕರ್ಮ ಮತ್ತು ಉಪಾಸನಾ, ಆ ನಗಳನ್ನು ಬಹಳಮಾಡಿದ್ದೆವೆ. ಅವುಗಳಿಂದ ನಮಗೆ ವಾಂಛಿತ ಫಲ ಪ್ತವಾಗಲಿಲ್ಲ, ಸಂಸಾರಬಂಧನವೇ ಅಧಿಕವಾಗ ಹತ್ತಿತು. ನಾವು ರೀತಿಯಿಂದ ಕೃತಾರ್ಥರಾಗುವೆವೋ, ಅಂಥ ಉಪಾಯವನ್ನು ತಾವು ರಿಸಬೇಕು. ||೨೮||

||೧೧೫|| ಗುರುವಿನ ಉತ್ತರ (ಮೋಕ್ಷೇಚ್ಛೆಯ ಭ್ರಾಂ ತಾಪೂರ್ವಕ ಮಹಾವಾಕ್ಯದ ಉಪದೇಶವು.

ದೋಹಾ||ಮೊಛಕಾಮ ಗುರುಸಿಸ್ಯಲಖಿ| ತಾಕೊಸಾಧನ
ವೇದ ಉಕ್ತ ಭಾಷನ ಲಗೆ| ಜೀವಬ್ರಹ್ಮ ಭಿದ ಭಾನ||

ಟೀಕಾ—ದುಃಖ ನಿವೃತಿ ಮತ್ತು, ಪರಮಾನಂದ ಪ್ರಾಪ್ತಿ ದಕ್ಕೆ ಮೋಕ್ಷವೆನ್ನುತ್ತಾರೆ. ಅಮೋಕ್ಷರೂಪವಾದ ಕಾಮವು ಶಿಷ್ಯ ಯದಲ್ಲಿ ಜನಿಸಿರುವದನ್ನು ನೋಡಿ, ಆದರ ಸಾಧನವಾದ ವೇದೋಕ್ತ ನವನ್ನು, ಆ ಗುರುವು ಹೇಳಲಾರಂಭಿಸಿದನು.

ಯದ್ಯಪಿ ಜ್ಞಾನದ ಸ್ವರೂಪವನ್ನು ಅನೇಕ ಶಾಸ್ತ್ರಗಳಲ್ಲಿ ಭಿ ವಾಗಿ ಮಾಡಿದ್ದಾರೆ. ತಥಾಪಿ ಜೀವ ಬ್ರಹ್ಮರ ಭೇದವನ್ನು ನಿವೃತ್ತಿ ವಂಥಾ ಯಾವ ಜ್ಞಾನವಿರುವದೋ, ಅದಕ್ಕೇ ವೇದದಲ್ಲಿ ಮೋಕ್ಷ ನ ಎಂದು ಹೇಳಿದ್ದಾರೆ. ಅಂತೆಯೇ ಅದನ್ನು ಹೇಳಲಾರಂಭಿಸಿದನು

|| ಶ್ರೀಗುರು ರುವಾಚ ||

|| ದೋಹಾ ||

ಪರಮಾನಂದ ಮಿಲಾಪ ತೂ| ಜೋ ಸಿಸ್ಯ ಚಹೈ ಸುಜ



ಜನ್ಮಾದಿಕ ದುಖ ನಾಸಪುನಿ | ಭ್ರಾಂತಿ ಜನ್ಯ ತಿಹಿ ಮಾನ ||೩೦||
ಪರಮಾನಂದ ಸ್ವರೂಪ ತೂ | ನಹಿ ತೊಮ್ಮೈ ದುಖ ಲೇಸ ||
ಅಜ ಅವಿನಾ ಸೀ ಬ್ರಹ್ಮಚಿತ್ | ಜಿನ ಆನ್ಯೆ ಹಿಯ ಕ್ಲೇಸ||೩೧||

ಟೀಕಾ|| ಎಲೈ ಶಿಷ್ಯನೇ ! ಪರಮಾನಂದ ಪ್ರಾಪ್ತಿಯ ವಿಷಯದಲ್ಲಿ ಮತ್ತು ಜನನಮರಣಾದಿ ದುಃಖರೂಪ ಸಂಸಾರನಿವೃತ್ತಿವಿಷಯವಾಗಿಯೂ ನಿನ್ನಲ್ಲಿ ಇಚ್ಛೆಯು ಹುಟ್ಟಿರುವದಲ್ಲಾ ? ಆ ಇಚ್ಛೆಯು ಭ್ರಾಂತಿಯಿಂದ ಉತ್ಪನ್ನವಾಗಿರುವದೆಂದು ನೀನು ತಿಳಿ ! ಕಾರಣವೇನಂದರೆ;—

೧. ನೀನು ಸ್ವತಃ ಪರಮಾನಂದ ಸ್ವರೂಪನಾಗಿರುವಿ, ಇದರಿಂದ ಅದರ ಪ್ರಾಪ್ತಿಯ ಇಚ್ಛೆಯು ಸಂಭವಿಸುವದಿಲ್ಲ. ಯಾವ ವಸ್ತುವು ಅಪ್ರಾಪ್ತವಾಗಿರುವದೋ, ಆ ವಸ್ತುವಿನ ಪ್ರಾಪ್ತಿಯ ಇಚ್ಛೆಯು ಸಂಭವಿಸುತ್ತದೆ. ಮತ್ತು ಯಾವ ನಿನ್ನ ಸ್ವರೂಪವಿರುವದಲ್ಲಾ ! ಅದು ಸರ್ವದಾ ಪ್ರಾಪ್ತವಾಗಿಯೇ ಇರುತ್ತದೆ. ಅದರ ಪ್ರಾಪ್ತಿಯು ವಿಷಯದ ಇಚ್ಛೆಯು ಭ್ರಾಂತಿಯ ಹೊರ್ತು ಸಂಭವಿಸುವದಿಲ್ಲ.

೨. ಜನ್ಮಾದಿ ಯಾವ ಯಾವ ಸಂಸಾರವಿರುವದಲ್ಲಾ ? ಅದು ಕದಾಚಿತ್ ಇರಬಹುದು. ಅದರ ನಿವೃತ್ತಿಯ ವಿಷಯದಲ್ಲಿ ಇಚ್ಛೆಯು ಉಂಟಾಗಬೇಕು ? ಆ ಜನ್ಮಾದಿ ಸಂಸಾರದ ಲೇಶವಾದರೂ ನಿನ್ನಲ್ಲಿ ಇರುವದಿಲ್ಲ. ಈ ಕಾರಣದಿಂದ ಇಲ್ಲದೆಯಿದ್ದ ದುಃಖರೂಪ ನಿವೃತ್ತಿಯ ವಿಷಯದಲ್ಲಿ ಇಚ್ಛೆಯು ಭ್ರಾಂತಿಯ ಹೊರ್ತು ಸಂಭವಿಸುವದಿಲ್ಲ.

ಎಲೈ ಶಿಷ್ಯನೇ ! ಜನ್ಮ ಮತ್ತು ನಾಶರಹಿತನಾದ ಯಾವ ಬ್ರಹ್ಮನಿರುವನಲ್ಲಾ? ಅವನೇ ನೀನಾಗಿರುವಿ; ಈಕಾರಣದಿಂದ ನೀನು ನಿನ್ನಹೃದಯದಲ್ಲಿ ಜನ್ಮಾದಿ ಖೇದಗಳನ್ನು ಸ್ವಲ್ಪಾದರೂ ತಂದುಕೊಳ್ಳಬೇಡ. ||೩೧||

||೧೧೬|| ಪ್ರಶ್ನೆ-ನನ್ನ ಆತ್ಮನು ಆನಂದರೂಪನಾಗಿದ್ದರೆ ವಿಷಯ ಸಂಬಂಧದಿಂದ ಆನಂದದ ಭಾನವು ಆತ್ಮನಲ್ಲಿ ಉಂಟಾಗಬಾರದಿತ್ತು !

|| ತತ್ತ್ವದೃಷ್ಟಿರುವಾಚ ||

|| ದೋಹಾ ||

ವಿಷಯ ಸಂಗಕ್ಯೂ ಭಾನಹ್ವೈ | ಜೋ ಮೈ ಆನಂದರೂಪ ||
ಅಬ ಉತ್ತರ ಯಾಕೊ ಕಹೌ | ಶ್ರೀಗುರು ಮುನಿವರ ಭೂಪ||

ಟೀಕಾ॥ ಭಗವನ್ ! ಯಾವ ನನ್ನ ಆತ್ಮನು ಆನಂದರೂಪನಾ ದ್ದಲ್ಲಿ, ಅವನಲ್ಲಿ ವಿಷಯದ ಸಂಬಂಧದಿಂದ ಆನಂದವು, ಆತ್ಮನ ವಿ ದಲ್ಲಿ ಭಾನವೂ ಉಂಟಾಗಬಾರದಿತ್ತು. ಈ ಕಾರಣದಿಂದ ಆತ್ಮ ಆನಂದರೂಪನಲ್ಲ; ಆದರೆ ವಿಷಯಗಳ ಸಂಬಂಧದಿಂದ ಆತ್ಮನಲ್ಲಿ ಆ ವು ಉಂಟಾಗುವದು. ॥ ೩೨ ॥

॥೧೧೭॥ ಉತ್ತರ—ಆತ್ಮವಿಮುಖನಿಗೆ ಅಂತರ್ಮುಖ ವೃತ್ತಿ ಆನಂದದ ಭಾನವು, ವಿಷಯದಲ್ಲಿ ಆನಂದವಿಲ್ಲ.

॥ ಶ್ರೀ ಗುರುರುವಾಚ ॥

॥ ಚೌಪಾಈ ॥

ಆತಮ ವಿಮುಖ ಬುದ್ಧಿ ಜನ ಜೋಈ ।
ಇಚ್ಛಾ ತಾಹೀ ವಿಷಯಕೀ ಹೋಈ ॥
ತಾಸೂ ಚಂಚಲ ಬುದ್ಧಿ ಬಖಾನೀ ।
ಸುಖ ಆಭಾಸ ಹೋ ಇತಹ ಹಾನೀ ॥ ೩೩ ॥
ಜಬ ಅಭಿಲಷಿತ ಪದಾರಥ ಪಾವೈ ।
ತಬ ಮತಿ ಥನ ವಿಕ್ಷೇಪ ನ ಸಾವೈ ॥
ತಾವ್ಯೈ ಹ್ವೈ ಆನಂದ ಪ್ರತಿಬಿಂಬಾ ।
ಪುನಿ ಥನವ್ಯೈ ಬಹು ಚಾಹ ವಿಡಂಬಾ ॥೩೪॥
ತಾತೈ ಹ್ವೈ ಥಿರತಾಕೀ ಹಾನೀ ।
ಸೋ ಆನಂದ ಪ್ರತಿಬಿಂಬ ನಸಾನೀ ॥
ವಿಷಯ ಸಂಗ ಆನಂದ ಜು ಹೋಈ ।
ಬಿನಸತ ಗುರು ಯಹ ಲಖ್ಯೈ ನ ಕೋಈ ॥೩೫॥

ಟೀಕಾ॥ ಎಲೌ ಶಿಷ್ಯನೇ ! ಆತ್ಮವಿಮುಖ ಬುದ್ಧಿಯು ಯಾವ ಪು ಷನಲ್ಲಿರುವದೋ, ಅವನಿಗೆ ವಿಷಯಸುಖೇಚ್ಛೆಯುಂಟಾಗುತ್ತದೆ. ಯ ಸ್ಥಾನದಲ್ಲಿ ಯಾವ ಭೋಗದ ಸಾಧನವಾಗುವದೋ, ಅದು ವಿಷಯ ತ್ತದೆ. ಈ ಕಾರಣದಿಂದ ಧನ ಪುತ್ರಾದಿಗಳನ್ನು ಸಹ ಗ್ರಹಣಮಾಡ

೧. ಆ ವಿಷಯದ ಇಚ್ಛೆಯಿಂದ ಬುದ್ಧಿಯು ಚಂಚಲವಾಗಿರು



ಚಂಚಲಬುದ್ಧಿಯಲ್ಲಿ ಆತ್ಮಸ್ವರೂಪದ ಆಭಾಸ, ಅಂದರೆ ಪ್ರತಿಬಿಂಬವು ಉಂಟಾಗುವದಿಲ್ಲ.

೨. ಯಾವ ವಿಷಯದ ಇಚ್ಛೆಯು ಉಂಟಾಗಿರುವದೋ, ಆ ವಿಷಯವು ಅವನಿಗೆ ಪ್ರಾಪ್ತವಾದ ಮೇಲೆ ಆ ಪುರುಷನ ಬುದ್ಧಿಯು ಕ್ಷಣಮಾತ್ರ ಸ್ಥಿತವಾಗಿ ಅಂತರ್ಮುಖ ಬುದ್ಧಿಯ ವೃತ್ತಿಯು ಉಂಟಾಗುವದು, ಅಂತರ್ಮುಖ ವೃತ್ತಿಯಲ್ಲಿ ಆತ್ಮನ ಸ್ವರೂಪವಾದ ಯಾವ ಆನಂದವುಂಟೋ ಅದು ಅದರ ಪ್ರತಿಬಿಂಬವಾಗುವದು. ಆ ಆತ್ಮಸ್ವರೂಪ ಆನಂದದ ಪ್ರತಿಬಿಂಬವನ್ನು ಅನುಭವಮಾಡಿದ ಪುರುಷನಿಗೆ ಭ್ರಾಂತಿಯು ಉಂಟಾಗುವದು. ಆಗ ಆ ಪುರುಷನು "ನನಗೆ ವಿಷಯದಿಂದ ಆನಂದದ ಲಾಭವಾಗಿದೆ." ಎಂದು ಅನ್ನುವನು. ಆದರೆ ವಿಷಯದಲ್ಲಿ ಆನಂದವಿರುವದೋ ಇಲ್ಲವೋ ಎಂಬುದು ಅವನಿಗೆ ತಿಳಿದಿರುವದಿಲ್ಲ.

೧. ಕದಾಚಿತ್ ವಿಷಯದಲ್ಲಿ ಆನಂದವಿದ್ದರೆ ಒಂದುವಿಷಯದಿಂದ ತೃಪ್ತನಾದ ಪುರುಷನಿಗೆ ಯಾವಾಗ ಎರಡನೇ ವಿಷಯದ ಇಚ್ಛೆಯುಂಟಾಗುವದೋ, ಆಗ ಸಹ ಪ್ರಥಮ ವಿಷಯದಿಂದ ಆನಂದವುಂಟಾಗಲಿಕ್ಕೇಬೇಕು. ಹೀಗೆ ಆಗುವದಿಲ್ಲ. ಮತ್ತು ನಮ್ಮ ರೀತಿಯಿಂದ ಅವನಿಗೆ ಸ್ವರೂಪಾನಂದದ ಭಾನವು ಸಂಭವಿಸುವದಿಲ್ಲ. ಕಾರಣವೇನಂದರೆ ಯಾವ ಎರಡನೇ ವಿಷಯದ ಇಚ್ಛೆಯಿಂದ ಬುದ್ಧಿಯು ಚಂಚಲವಾಗಿರಲು ಅದರ ವಿಷಯದಲ್ಲಿ ಪ್ರತಿಬಿಂಬವು ಸಂಭವಿಸುವದಿಲ್ಲ.

೨. ಅಥವಾ ಆ ವಿಷಯದಲ್ಲಿಯೇ ಆನಂದವಿದ್ದರೆ ಯಾವಾಗ ಆ ಪುರುಷನ ಪ್ರಿಯಪುತ್ರ, ಅಥವಾ ಬೇರೆ ಯಾರಾದರೂ ಅತ್ಯಂತ ಪ್ರೀತಿಪಾತ್ರರು, ಅಕಸ್ಮಾತ್ ಬಹುದಿವಸಗಳಾದ ಬಳಿಕ ದರ್ಶನಕೊಟ್ಟರೆ ಆ ಕಾಲದ ಅವರನ್ನು ನೋಡಿದಕೂಡಲೇ ಉಂಟಾದಪ್ರಥಮಾನಂದವು, ಸರ್ವದಾ ಉಂಟಾಗುವದಿಲ್ಲ; ಅದು ಸರ್ವಕಾಲದಲ್ಲಿಯೂ ಆಗಲಿಕ್ಕೇಬೇಕು. ಕಾರಣವೇನಂದರೆ-ಆನಂದಕ್ಕೆ ಕಾರಣನಾದ ಯಾವ ಪುರುಷನು, ಅವನಸಮೀಪದಲ್ಲಿಯೇ ಇರುತ್ತಾನೆ, ಮತ್ತು ನಮ್ಮ ರೀತಿಯಿಂದಂತೂ ಪ್ರಥಮ ದರ್ಶನಮಾತ್ರ ಆನಂದವು ಉಂಟಾಗುತ್ತದೆ; ಸರ್ವದಾ ಉಂಟಾಗುವದಿಲ್ಲ. ಕಾರಣವೇನಂದರೆ; ಒಂದುವೇಳೆ ಪ್ರಿಯ ವಿಷಯವನ್ನು ಕಂಡು, ವೃತ್ತಿಯು ಸ್ಥಿರವಾಗಿ ಹೋಗುವದು. ಪುನಃ ವೃತ್ತಿಯು ಅನ್ಯಪದಾರ್ಥಗಳ ಕಡೆಗೆ ಹೋಗುತ್ತದೆ; ಈ ಕಾರಣದಿಂದ ಚಂಚಲವದೆ. ಈ ಪ್ರಕಾರವಾಗಿ ವಿಷಯದಲ್ಲಿ ಆನಂದವಿಲ್ಲ.

೩. ಅಥವಾ, ಒಂದುವೇಳೆ ವಿಷಯದಲ್ಲಿಯೇ ಆನಂ
ಸಮಾಧಿಕಾಲದಲ್ಲಿ ಯಾವ ಯೋಗಾನಂದದ ಭಾನ ವುಂಟಾಗ
ಅದು ಉಂಟಾಗಲಿಕ್ಕೆ ಬಾರದು. ಕಾರಣವೇನೆಂದರೆ ಸಮಾಧಿ
ಯಾವ ವಿಷಯದ ಸಂಬಂಧವೂ ಇರುವದಿಲ್ಲ.

೪. ಅಥವಾ, ಒಂದುವೇಳೆ ವಿಷಯದಲ್ಲಿಯೇ ಆನಂ
ಸುಷುಪ್ತ್ಯವಸ್ಥೆಯಲ್ಲಿ ಆನಂದದ ಭಾನವು ಉಂಟಾಗಲಿಕ್ಕೆ ಬ
ಕಾರಣವೇನೆಂದರೆ ಸುಷುಪ್ತ್ಯವಸ್ಥೆಯಲ್ಲಿ ಯಾವ ವಿಷಯದ ಸ
ವೂ ಇರುವದಿಲ್ಲ.

ಈ ಕಾರಣಗಳಿಂದ ವಿಷಯದಲ್ಲಿ ಆನಂದವಿಲ್ಲ. ಆದರೆ
ರೂಪಾನಂದವು ಸರ್ವರಿಗೂ ಭಾನವಾಗುತ್ತದೆ. ಈ ಕಾರಣ
ವೇದದಲ್ಲಿ ವರ್ಣಿಸಿದ್ದೇನೆಂದರೆ, "ಆತ್ಮಸ್ವರೂಪಾನಂದವನ್ನು
ಸರ್ವತ್ರ ಆನಂದವುಳ್ಳವರು ಆಗುತ್ತಾರೆ" ||೩೫||

ಟಿಪ್ಪಣಿ—೧ ಏಡುಂಜ ಅಂದರೆ ಆನಂದದ ಪ್ರತಿಬಿಂಬವನ್ನು ಮೋಸಗೊ
ಳಾದ್ದು. ಆತ್ಮಸ್ವರೂಪ ಆನಂದದ ಪ್ರತಿಬಿಂಬವನ್ನು ಅನ-ಭ್ಯವ
ಷನಿಗೆ ವಿಷಯದಲ್ಲಿ ಆನಂದದ ಭ್ರಾಂತಿಯೆಂದು ಹೇಳಿದೆ.
ಅಸ್ಥಿಯನ್ನು ಕಡಿದು ಕಡಿದು ತನ್ನ ದವಡಿಯೊಳಗಿಂದ ಬಿದ್ದ
ಆಸ್ವಾದನ ಮಾಡಿದ ಶುನಕನಿಗೆ ಅಸ್ಥಿಯಲ್ಲಿಯೇ ರುಧಿರ ಭ್ರಾಂ
ಟಾಗುವದು. ಈ ನ್ಯಾಯದಂತೆಯೇ ಇರುವದು.

|| ದೋಹಾ ||

ವಿಷಯ ಸಂಗತೈ ಹ್ವೈ ಪ್ರಗಟ। ಆತಮ ಆನಂದ
ಸಿಷ್ಯ ಸುನಾಯೊ ತೋಹಿಂ ಮೈ। ಯಹ ಸಿದ್ಧಾಂತ

|| ಸೋರಠಾ ||

ಸೋತೂ ಮೋಹಿ ಪ ಬಾಖ। ಜೊ ಯಾಮೈ ಸಂ
ನಿಜ ಮತಿಮೈ ಮತಿ ರಾಖ। ಮೈತಾಕೋ ಉತ್ತರ

ಅರ್ಥ-ಎಲೈ ಶಿಷ್ಯನೇ ! ಆನಂದ ಸ್ವರೂಪವೇ ಆತ್ಮನ
ಸ್ವರೂಪವು ವಿಷಯ ಸಂಗದಿಂದಲೇ ಪ್ರಕಟವಾಗುವದು,
ತವು ಅನುಪಮ್ಯವಾದವು. ನೀನು ಕೇಳಿದ ಪ್ರಶ್ನೆಗೆ ನಾನು
ಹೇಳಿದನು. ಇನ್ನು ನಿನ್ನ ಮನಸ್ಸಿನಲ್ಲಿ ಯಾವ ಆಕ್ಷೇಪವು



ನ್ನು ಮನಸ್ಸಿನಲ್ಲಿ ಗುಪ್ತವಾಗಿಟ್ಟುಕೊಳ್ಳಬೇಡ. ನನ್ನ ಮುಂದೆ ಯಥಾ
ರ್ಥವಾಗಿ ತಿಳಿಸು. ನಾನು ಅದನ್ನು ತ್ವರಿತವಾಗಿ ಖಂಡಿಸುವೆನು. ||೩೦||

||೧೧೮|| ಪ್ರಶ್ನೆ. ಜ್ಞಾನಿಗಳಿಗೆ ವಿಷಯೇಚ್ಛೆಯು ಮತ್ತು,
ಅದರ ಸಂಬಂಧದಿಂದ ಪೂರ್ವ ರೀತಿಯಿಂದ ಸುಖದ
ಭಾನವು ಉಂಟಾಗುವದೋ ಅಥವಾ ಇಲ್ಲವೋ?

|| ತತ್ವದೃಷ್ಟಿರುವಾಚ ||

|| ಚೌಪಾಈ ||

ಭೋ ಭಗವನ ತುಮ ದೀನ ದಯಾಲಾ ।
ಮೇಟ್ಯೋ ಮಮ ಸಂಸಯ ತತಕಾಲಾ ||
ಯಾಮೈ ಕಛುಕ ನಹೀ ಅಸಂಕಾ ।
ಸೋ ಭಾಖೂ ಅಬ ಹ್ವೈ ನಿರ್ಬಂಕಾ ||೩೮||
ಆತಮ ವಿಮುಖ ಬುದ್ಧಿ ಅಜ್ಞಾನೀ ।
ತಾಕೀ ಯಹ ಸಬ ರೀತಿ ಬಖಾನೀ ||
ಜ್ಞಾನೀ ಜನಕೊ ಕಹೌ ವಿಚಾರಾ ।
ಕೋಊ ನ ತುಮ ಸಮ ಔರ ಉದಾರಾ ||೩೯||

ಟೀ|| ಭಗವನ್ ! ತಮ್ಮಿಂದ ಪೂರ್ವವಿಷಯದ ಸಂಬಂಧದಿಂದ ಆತ್ಮಾ
ನಂದದ ಭಾನದ ಯಾವ ರೀತಿಯನ್ನು ಹೇಳಲ್ಪಟ್ಟತೋ, ಅದು ಅಜ್ಞಾ
ನಿ ಪುರುಷನ ವಿಷಯದಲ್ಲಿ ಹೇಳಿದಂತಾಯಿತು. ಜ್ಞಾನಿಗಳ ವಿಷಯ
ದಲ್ಲಿ ಹೇಳಿದಂತಾಗಲಿಲ್ಲ. ಕಾರಣವೇನಂದರೆ, ಯಾವನ ಬುದ್ಧಿಯು
ಆತ್ಮನಿಂದ ವಿಮುಖವಾಗಿರುವದೋ, ಅವನ ವಿಷಯವಾಗಿ ನಿರ್ದೇಶಮಾ
ಡಿದಿರಿ. ಈ ಆತ್ಮ ವಿಮುಖ ಬುದ್ಧಿಯು ಅಜ್ಞಾನಿಗಳಿಗೆ ಇರುತ್ತದೆ, ಜ್ಞಾನಿ
ಗಳಿಗೆ ಇರುವದಿಲ್ಲ. ಆದ್ದರಿಂದ ಈಗ ತಾವು ಜ್ಞಾನಿಗಳ ವಿಚಾರವನ್ನು
ಹೇಳಬೇಕು. ಜ್ಞಾನಿಗೆ ವಿಷಯೇಚ್ಛೆಯು ಮತ್ತು ವಿಷಯಸಂಬಂಧದಿಂದ
ಪೂರ್ವಪ್ರಕಾರವಾಗಿ ಸುಖದ ಭಾನವುಂಟಾಗುವದೋ, ಅಥವಾ ಇಲ್ಲವೋ
ಎಂಬುದನ್ನು ಕೃಪೆಮಾಡಿ ಹೇಳಬೇಕು. || ೩೯ ||

||೧೧೯|| ಉತ್ತರ. ಆತ್ಮನು ದ್ವಿಮುಖನಿರುವನು. ವಿಷಯಾ
ನಂದವು ಸ್ವರೂಪಾನಂದದಿಂದ ಬೇರೆಯಾಗಿ ಇರುವದಿಲ್ಲ.

॥ ಶ್ರೀ ಗುರುರುವಾಚ ॥

॥ ದೋಹಾ ॥

ಸುನಹು ಸಿಷ್ಯ ಇಕ ಬಾತ ಮಮ । ಸಾವಧಾನ ಮನ
ಹೈ ದ್ವೈವಿಧ ಚಿತನು ವಿಮುಖ । ಅಜ್ಞಾನೀ ರು ಸುಜ್ಞ
ಹೈ ವಿಸ್ಮೃತ ವ್ಯವಹಾರ ಮೈ । ಕಬಹು ಕ ಜ್ಞಾನೀ ಸ
ಅಜ್ಞಾನೀ ವಿಮುಖಹಿ ರಹೈ । ಯಹತೂ ಜಾನ ಸಿದ್ಧಾಂ

ಟೀಕಾ॥ ಎಲೈ ಶಿಷ್ಯನೇ ! ನೀನು ಚಿತ್ತವನ್ನೂ ಮತ್ತು ಬು
ದ್ಧಿಯನ್ನೂ ಸಾವಧಾನವಾಗಿ ಇಟ್ಟುಕೊಂಡು ಕೇಳು. ಈ
ವಲ್ಲಿ ಸಮ್ಮಿಂದ ಆತ್ಮವಿಮುಖತ್ವವು ಹೇಳಲ್ಪಟ್ಟಿತು. ಆ ಆತ್ಮವಿ
ತ್ವವು ಕೇವಲ ಅಜ್ಞಾನಿಗೇ ಆಗುವದೆಂಬ ನಿಯಮವಿಲ್ಲ. ಜ್ಞಾ
ವಂತನ ಬುದ್ಧಿಯು ಸಹ ಯಾವ ಕಾಲಕ್ಕೆ ವ್ಯವಹಾರದಲ್ಲಿ [೧]
ದೋ, ಆಗ ಜ್ಞಾನವಂತನೂ ಸಹ ತತ್ವವನ್ನು ಮರೆತು ಬಿಡುವನು.
ಲದಲ್ಲಿ ಜ್ಞಾನವಂತನು ಸಹ ಆತ್ಮವಿಮುಖನಾಗುವನು. ಮತ್ತು
ವೇಳೆ ಜ್ಞಾನಿಯ ಬುದ್ಧಿಯು ಸರ್ವದಾ ಆತ್ಮಾಕಾರವೇ ಆಗಿದ್ದರೆ
ಜನಾದಿ ವ್ಯವಹಾರಗಳು ಆಗಲಿಕ್ಕಿಲ್ಲ. ಈ ಕಾರಣದಿಂದ ಆತ್ಮ
ಬುದ್ಧಿಯು ಉಭಯತ್ರರಿಗೂ ಉಂಟಾಗುವದು.

ಈ ಉಭಯತ್ರರಲ್ಲಿ ಅಜ್ಞಾನಿಯ ಬುದ್ಧಿಯು ಸರ್ವದಾ
ಮುಖವಾಗಿರುವದು. ಜ್ಞಾನಿಯ ಬುದ್ಧಿಯು ಆತ್ಮವಿಮುಖವಾ
ಆ ಕಾಲದಲ್ಲಿ ಜ್ಞಾನಿಯ ಇಚ್ಛೆಯು ವಿಷಯ ಸಂಬಂಧದಿಂದ ಆತ್ಮ
ಪಾನಂದದ ಭಾನವೂ ಅಜ್ಞಾನಿಯ ಸಮಾನವಾಗಿರುವದು. ಆದ
ರಲ್ಲಿ ಇಷ್ಟೇ ಭೇದವು.

೧. ವಿಷಯದ ಸಂಬಂಧದಿಂದ ಯಾವ ಆನಂದದ ಭಾನವು ಆ
ಗುವದೋ, ಅದನ್ನು ಜ್ಞಾನಿಯು "ಇದು ಆನಂದವಿರುವದು; ಇ
ಸ್ವರೂಪದಿಂದ ಭಿನ್ನವಾಗಿರುವದಿಲ್ಲ. ಆದರೆ ಅದರ ಆಭಾಸವೇ ಇ
ಎಂದು ತಿಳಿದುಕೊಳ್ಳುವನು, ಇದರಿಂದ ಜ್ಞಾನಿಗೆ ವಿಷಯಭೋಗ
[೨] ಸಮಾಧಿಯು ಇರುವದು. ಮತ್ತು

೨. ಅಜ್ಞಾನಿಯು ಇದು ನನ್ನ ಸ್ವರೂಪಾನಂದ ವಿರುವದು,



ತಿಳಿದುಕೊಳ್ಳುವದಿಲ್ಲ.

೩. ವಿಚಾರಸಾಗರದಿಂದ ನೋಡಲು ಉಭಯತ್ರರ ಸ್ವರೂಪವು ಆನಂದವೇ ಆಗಿದೆ. ಅಜ್ಞಾನಿಗೆ ವಿಷಯದಿಂದ ಕೇವಲ ಭ್ರಾಂತಿಯು ಆಗಿರುತ್ತದೆ. ॥೪೮॥

ಟಿಪ್ಪಣಿ—(೧) ಹೇಗೆ ಯಾವಾಗ ಜಾಗ್ರತಾಕಾರ ವೃತ್ತಿಯು ಇರುವದೋ ಆಗ ಹಾಗೆ ಸ್ವಪ್ನಾಕಾರ ವೃತ್ತಿಯು ಇರುವದಿಲ್ಲ. ಯಾವಾಗ ಸ್ವಪ್ನಾಕಾರ ವೃತ್ತಿಯು ಇರುವದೋ, ಆಗ ಜಾಗ್ರದಾಕಾರ ವೃತ್ತಿಯು ಇರುವದಿಲ್ಲ. ಹಾಗೆ ಜ್ಞಾನಿಯ ಬುದ್ಧಿಯು ಸಹ ಯಾವಾಗ ಆತ್ಮಾಕಾರವಿರುವದೋ, ಆಗ ಆ ಅನಾತ್ಮಾಕಾರವಿರುವದಿಲ್ಲ. ಅಲ್ಲದೆ ಯಾವಾಗ ಅನಾತ್ಮಾಕಾರ ವಿರುವದೋ, ಆಗ ಆತ್ಮಾಕಾರವಿರುವದಿಲ್ಲ. ಹೀಗೆ ಇದ್ದರೂ ಒಂದೇ ಅಂತಃಕರಣದಲ್ಲಿ ಒಂದೇ ಕಾಲದಲ್ಲಿ ಭಿನ್ನ ವಿಷಯಾಕಾರ ಸಾಮಾನ್ಯ ವಿಶೇಷರೂಪ ಉಭಯವೃತ್ತಿಯೂ ಇರುವದು. ಆದರೆ ಆ ಎರಡೂ ವೃತ್ತಿಗಳು ವಿಶೇಷ ವೃತ್ತಿಗಳಾಗಿರುವದಿಲ್ಲ. ಈ ಕಾರಣದಿಂದ ಅನ್ಯ ವ್ಯವಹಾರದಲ್ಲಿ ಮಗ್ನನಾದ ಪುರುಷನಿಗೆ, ಪೆಟ್ಟಿಗೆಯಲ್ಲಿ ತಾನು ತನ್ನ ಸ್ವಹಸ್ತದಿಂದಲೇ ಇಟ್ಟ ಧನದ ವಿಸ್ಮೃತಿಯಾಗುವದೋ ಪುನಃ ಆ ವ್ಯವಹಾರವು ಸಮಾಪ್ತಿಯಾದ ನಂತರ ತಾನು ಇಟ್ಟ ಧನದ ಸ್ಮರಣೆಯು ಹೇಗಾಗುವದೋ, ಹಾಗೆ ಜ್ಞಾನಿಯ ಬುದ್ಧಿಯು, ಸಹ ವ್ಯವಹಾರದಲ್ಲಿ ವಿಶೇಷವಾಗಿ ಮಗ್ನವಾಗಿದ್ದ ಕಾಲದಲ್ಲಿ ಅವನಿಗೆ ತತ್ವದ ವಿಸ್ಮರಣೆಯುಂಟಾಗುವದು. ಪುನಃ ಯಾವಾಗ ಆ ವ್ಯವಹಾರದಿಂದ ಮುಕ್ತನಾಗುವನೋ, ಆಗ ಮೊದಲಿನಂತೆಯೇ ಸ್ಮರಣೆಯುಂಟಾಗುವದು. ಹೀಗೆ ಇದ್ದುದರಿಂದಲೇ ಭಗವಾನ್ ಭಾಷ್ಯಕಾರರು ಶಾರೀರಕ ಭಾಷ್ಯದ ಪ್ರಥಮ ಅಧ್ಯಾಯದಲ್ಲಿಯ ಪ್ರಥಮ ಪಾದದಲ್ಲಿ ಹೀಗೆ ಹೇಳಿರುವುದು,—"ವ್ಯವಹಾರದಲ್ಲಿ ಜ್ಞಾನವಂತನು ಸಹ „ಪಶು' ಅಂದರೆ ಅವಿವೇಕೀ ಜನಗಳಂತೆ ವ್ಯವಹಾರ ಮಾಡುವನು, ಇದರಿಂದಲೇ ಮೇಲೆ ಬರೆದ ಅರ್ಥವು ಸಂಭವನೀಯವಾಗಿ ತೋರುವದು.

(೨) ಇಲ್ಲಿ ಯಾವ ಸಮಾಧಿಯನ್ನು ಹೇಳಿರುವದೋ ಅದು ಜ್ಞಾನಿಯ ಸಂಗತಿಯನ್ನು ಮಾಡಿದ ಕಳ್ಳನಂತೆ ವಿಷಯದಲ್ಲಿ ದೃಷ್ಟಿರೂಪ ಪಾಪಕದ ಜಾಗರಣದಂತೆಯೂ, ಮಿಥ್ಯಾತ್ವ ಬುದ್ಧಿರೂಪ ದೃಢ ವೈರಾಗ್ಯದ ವಿದ್ಯಮಾನದಂತೆಯೂ, ಬದ್ಧಮುಕ್ತ ಮಹಿಪಾಲನಂತೆಯೂ ಕಿಂಚಿತ್ ಭೋಗದಿಂದ ಸಂತೋಷವುಳ್ಳವನಾಗುವ ಸಭ್ಯಪುರುಷನ ಭೋಗದಂತೆಯೂ, ಪರಿಣಾಮದಲ್ಲಿ ಭೋಗದ ದುಃಖಸಾಧನದ ಜ್ಞಾನದಯಾ ಉಂಟಾಗುವಿಕೆಯಂತೆ ದೃಢರಾಗದ ಅಭಾವದಿಂದ, ಅಂದರೆ ಆತ್ಮಾನಂದದ ಪ್ರತಿಬಿಂಬದಿಂದ, ಅತಿರಿಕ್ತ ವಿಷಯದಲ್ಲಿ ಸರ್ವದಾ ಆನಂದದ ಅಭಾವದ ಜ್ಞಾನದಿಂದ, ಸ್ವರೂಪದ ಅನುಸಂಧಾನರೂಪ ಸಮಾಧಿಯ ಗುಣಗಳ ಸಮತ್ವದಿಂದ "ಇಲ್ಲಿ ಪುರುಷಸಿಂಹನಿರುವನು" ಎಂಬಂತೆ ಗೌಣ (ಉಪಚಾರ ಮಾತ್ರ) ವಿರುವದು.

ಅಥವಾ—ಬಾಲಕನು ಹೇಗೆ ತನ್ನ ಪಾದಾಂಗುಷ್ಠವನ್ನು ಬಾ.. ಹಿಡಿದು ಕೊಳ್ಳುವನೋ, ದಂತ ರಹಿತನಾದ ವೃದ್ಧ ಪುರುಷನು ತ.. ರೋಷ್ಠವನ್ನು ಹೇಗೆ ಚರ್ವಣ ಮಾಡುತ್ತಿರುವನೋ (ಇದು ಅನ್ಯವಿಷ.. ಗಗಳ ಇಚ್ಛೆಯಿಂದಲ್ಲ) ಹಾಗೆ ಜ್ಞಾನಿಯು ಸಹ ಶಾಸ್ತ್ರಗಳ ವಿ.. ಗಿದ್ದ ವಿಷಯಭೋಗಗಳನ್ನು ಮಾಡುತ್ತಿದ್ದರೂ ಸ್ವರೂಪದ ಅನು.. ನದಿಂದ ರಾಗದ ಅಭಾವದಿಂದ ಅವನಿಗೆ ವಿಷಯ ಭೋಗದಲ್ಲಿ .. ಎಂದು ಹೇಳಲ್ಪಟ್ಟಿತು ಅದು ವಿಕ್ಷೇಪಯುಕ್ತ ವಾಗುವದರಿಂದ .. ವಿಷಯ ಸಮಾಧಿ ಯಾಗಿರುವದು. ಈ ಕಾರಣದಿಂದ ಬಿಸಿಕಟ .. ತ್ರಿಯಲ್ಲಿ ಹಾಕಿದ ಹಾಲಿನ ಹಾಗೆ ಅಜ್ಞಾನಿಯು ವಿಷಯವು .. ಡುವದಕ್ಕೆ ಯೋಗ್ಯವಲ್ಲ ಆದರೆ ಜ್ಞಾನಿಗೆ ಆ ವಿಷಯಪ್ರ.. ರುವದು ಕ್ಷಣಿಕ ವಿಷಯಾನಂದ ವುಂಟಾಗುವದರಿಂದಲೂ ಮತ್ತು .. ಭಿಮಾನರೂಪ ಆವರಣದ ಅಭಾವದಿಂದಲೂ ಶುದ್ಧ ಚಿನ್ಮಾತ್ರ .. ಯ ಸದ್ಭಾವದಿಂದಲೂ ಜ್ಞಾನಿಯ ಮನಸ್ಸು ಎಲ್ಲಿ ಹೋಗುವ.. ಪಾದ ರಕ್ಷೆಗಳನ್ನು ಹಾಕಿಕೊಂಡ ಪುರುಷನಿಗೆ ಚರ್ಮವೇಷ್ಟಿ.. ತು ಸಮಾಧಿಯಾಗಿರುವದು. ಇದೇ ವಿಷಯವನ್ನು ಪಂಡಿತ .. ಜಿಯವರ ಭಾಲಬೋಧ ವೆಂಬ ಗ್ರಂಥದ ಒಂಭತ್ತನೇ ಉಪ.. ಪ್ರಮಾಣ ಸಹಿತವಾಗಿ ಉಲ್ಲೇಖಿಸಿದ್ದಾರೆ. ಇಚ್ಛೆಯುಳ್ಳವರು .. ನೋಡಿಕೊಳ್ಳಬಹುದು.

||೧೨೦|| ಪ್ರಶ್ನೆ. ಜನ್ಮಾದಿ ದುಃಖಗಳು ಯಾ..
ವಿಷಯದಲ್ಲಿ ಇರುವವು?

|| ಶಿಷ್ಯ ಉವಾಚ ||

|| ಚೌಪಾಈ ||

ಹೇ ಪ್ರಭು ಪರಮಾನಂದ ಬಖಾನ್ಯೋ।
ಮೇರೋ ರೂಪ ಸು ಮೈ ಪಹಿಚಾನ್ಯೋ॥
ನಹಿ ತೋಮೈ ಭವ ಬಂಧನ ಲೇಸಾ।
ಕಹ್ಯೋ ಆಪ ಪುನಿ ಯಹ ಉಪದೇಸಾ ||೪೨||
ಯಾ ಮೈ ಸಂಕಾ ಮುಹಿ ಯಹ ಆವೈ ||
ಜಾತೈ ತವ ವಚ ಹಿಯ ನ ಸುಹಾವೈ ||
ನಹಿ ಮೋಮೈ ಯಹ ಬಂಧ ಪಸಾರೋ।
ಕಹಾ ಕೌನತಾ ಆಶ್ರಯ ನ್ಯಾರೋ ||೪೩||



ಟೀಕಾ|| ಭಗವನ್ ! ತಾವು "ನೀನು ಪರಮಾನಂದ ಸ್ವರೂಪನಾಗಿರುವಿ."[1] ಎಂದು ಹೇಳಿದಿರಲ್ಲಾ? ಇದನ್ನು ನಾನು ಯಥಾರ್ಥವಾಗಿ ತಿಳಿದುಕೊಂಡೆನು. ಆದರೆ ತಾವು "ಜನ್ಮ ಮರಣಾದಿ ಸಂಸಾರ ದುಃಖಗಳು ನಿನ್ನಲ್ಲಿ ಇರುವದಿಲ್ಲ" ಎಂದು ಹೇಳಿದಿರಿ, ಹಾಗೆ ಹೇಳಿದ್ದರೂ ಅವರ ನಿವೃತ್ತಿಯು ಸಂಭವಿಸಲೊಲ್ಲದು. ಈ ವಿಷಯದಲ್ಲಿ ನನಗೆ ಆಕ್ಷೇಪಣೆಯುಂಟಾಗಿರುವದೇನೆಂದರೆ, ಯಾವ ಜನ್ಮಾದಿ ದುಃಖಗಳೂ ನನ್ನ ವಿಷಯದಲ್ಲಿ ಇರುವದಿಲ್ಲವೆಂಬ ಮೇಲೆ ಯಾವದರಲ್ಲಿ ಈ ಸಂಸಾರವಿರುವದೋ, ಆ ಅನ್ಯ ಆಶ್ರಯವು ನನ್ನ ಹೊರ್ತು ಬೇರೆ ಯಾವದಿರುವದು ? ಅದನ್ನು ನನಗೆ ಕೃಪೆಮಾಡಿ ತೋರಿಸಬೇಕು. ಅಂದರೆ ಅದರಲ್ಲಿ ಸಂಸಾರ ದುಃಖವುಂಟೆಂದು ತಿಳಿದು ನನ್ನ ವಿಷಯದಲ್ಲಿ ಇಲ್ಲವೆಂದು ತಿಳಿಯುವೆನು. || ೪೨—೪೩ ||

ಟಿಪ್ಪಣಿ.—೧. ಆತ್ಮನು ಆನಂದರೂಪನಾಗಿರುವನು, ಎಂಬ ವಿಷಯವನ್ನು ಮುಂದೆ ಸಪ್ತತರಂಗದಲ್ಲಿ ೩೬೦-೩೬೩ನೇ ಅಂಕೆಯು ಇದ್ದ ವಾಕ್ಯಗಳಲ್ಲಿ ಹೇಳಲ್ಪಡುವದು.

||೧೨೧|| ಉತ್ತರ ಜನ್ಮಾದಿ ದುಃಖಗಳು ಯಾರಿಗೂ ಇರುವದಿಲ್ಲ

|| ಶ್ರೀಗುರುರುವಾಚ ||

|| ಸೋರಠಾ ||

ಸುನಹು ಸಿಷ್ಯ ಮಮ ಬಾನಿ। ಜಾತೈ ತವ ಸಂಕಾ ಮಿಟೈ ||
ಹೈ ಜಗಕೀ ಅತಿ ಹಾನಿ[1]। ತೊ ಮೋಮೈ ನಹಿ ಔರಮೈ ||೪೪||

ಅರ್ಥ|| ಎಲೈ ಶಿಷ್ಯನೇ ! ನನ್ನ ವಚನವನ್ನು ಲಾಲಿಸು। ಅದರಿಂದ ನಿನ್ನ ಸಂಶಯವು ದೂರವಾಗುವದು. ಈ ಜಗತ್ತೇ ಮೊದಲಾದವುಗಳು ಅತ್ಯಂತ ಅಭಾವರೂಪವಾಗಿರುವದೆಂದು ತಿಳಿದುಕೋ, ಅವುಗಳ ಸ್ಥಾನವನ್ನು ಏನು ಕೇಳುವಿ ? ಆ ದುಃಖಗಳು ನಿನ್ನಲ್ಲಿ ಇರುವದಿಲ್ಲ. ನನ್ನಲ್ಲಿ ಇರುವದಿಲ್ಲ. ಎಲ್ಲಿಯೂ ಇರುವದಿಲ್ಲ. ಹೀಗೆ ಇದ್ದಮೇಲೆ ನಾನು ಯಾವ ಸ್ಥಾನವನ್ನು ಹೇಳಲಿ. || ೪೪ ||

ಟಿಪ್ಪಣಿ. (೧) ರಜ್ಜುವಿನಲ್ಲಿ ಹೇಗೆ ಕಲ್ಪಿತ ಸರ್ಪದ ವ್ಯಾವಹಾರಿಕ ಸತ್ತೆಯಿಂದ ಅತ್ಯಂತ ಅಭಾವವಿರುವದೋ, ಹಾಗೆ ಬ್ರಹ್ಮನಲ್ಲಿ ಕಲ್ಪಿತ ಜಗತ್ತಿನ ಪರಮಾರ್ಥ ಸತ್ತೆಯಿಂದ ಅತ್ಯಂತ ಅಭಾವವಿರುವದು. ಇದೇ ಜಗತ್ತಿನ ಅತಿಹಾನಿ ಅಂದರೆ ನಿತ್ಯನಿವೃತ್ತಿ ಇರುವದು.

||೧೨೨|| ಪ್ರಶ್ನೆ. ದುಃಖವು ಯಾರಿಗೂ ಇಲ್ಲದಿದ್ದಮೇಲೆ
ಪ್ರತ್ಯಕ್ಷ ಪ್ರತೀತಿಯು ಯಾಕೆ ಆಗುವದು !

|| ತ ತ್ವ ದೃ ಷ್ಟಿ ರು ವಾ ಚ ||

|| ದೋ ೯ ಹಾ ||

ಜೋ ಭಗವನ ಕಹು ಹ್ವೈ ನಹೀ । ಜನ್ಮಮರನ ಜಗ ಜ

ಹ್ವೈ ಪ್ರತ್ಯಚ್ಛ ಪ್ರತೀತಿ ಕ್ಯೂ । ಕಹೋ ಆಪ ಯಹ ಜೀ

ಟೀಕಾ|| ಭಗವನ್ ? ಆ ಜನ್ಮಮರಣ ಮೊದಲಾದ ಸಂಸಾ ಗಳು ನನ್ನ ವಿಷಯದಲ್ಲಿ ಹಾಗೂ ಬೇರೆ ವಿಷಯಗಳಲ್ಲಿ ಯಾ ಇರುವದಿಲ್ಲವೆಂದಮೇಲೆ, ಅವು ಪ್ರತ್ಯಕ್ಷ ಪ್ರತೀತವಾಗುವವಲ್ಲ? ವಸ್ತುವು ಇರುವದಿಲ್ಲವೋ, ಅದು ಪ್ರತೀತವಾಗುವದಿಲ್ಲ. ಹೇ ಪುತ್ರನೂ, ಮತ್ತು ಆಕಾಶಪುಷ್ಪವೂ ಇರುದಿಲ್ಲವೋಅವುಹೇಗೆಪ್ರತೀತ ದಿಲ್ಲವೋ, ಹಾಗೆ ಸಂಸಾರವೂ ಇಲ್ಲದಿದ್ದಮೇಲೆ ಪ್ರತೀತವಾಗಲಿಕ್ಕೆ ಜನ್ಮವೇ ಮೊದಲಾದ ಸಂಸಾರವು ಪ್ರತೀತವಾಗಿರುವದು. ಈ ದಿಂದ "ಜನ್ಮಾದಿ ಸಂಸಾರರೂಪೀ ದುಃಖವು ಇರುವದಿಲ್ಲ." ಹೇಳುವದು ಸಮಂಜಸವಲ್ಲ.

---

||೧೨೩|| ಉತ್ತರ. ಆತ್ಮನ ಅಜ್ಞಾನದಿಂದ ಪ್ರತೀತಿಯ
ರಜ್ಜು ಸರ್ಪದ ದೃಷ್ಟಾಂತ.

|| ಶ್ರೀ ೯ ಗು ರು ರು ವಾ ಚ ||

|| ದೋ ೯ ಹಾ ||

ಆತ್ಮರೂಪ ಅಜ್ಞಾನ ತೈ । ಹ್ವೈ ಮಿಥ್ಯಾ ಪರತೀತಿ ||

ಜಗತ ಸ್ವಪ್ನ ನಬ ನೀಲತಾ । ರಜ್ಜು ಭುಜಗಕೀ ರೀತಿ ||

ಟೀಕಾ || ಜನ್ಮಾದಿ ಜಗತ್ತು ಸತ್ಯವಲ್ಲ. ಹಾಗಿಲ್ಲದಿದ್ದ ಬ್ರಹ್ಮರೂಪದ ಅಜ್ಞಾನದಿಂದ ಮಿಥ್ಯಾಪ್ರತೀತವಾಗುತ್ತದೆ. ಪ್ನದಲ್ಲಿಯ ಪದಾರ್ಥಗಳು ಆಕಾಶದಲ್ಲಿ ನೀಲವರ್ಣತ್ವವು, ಮತ್ತು ನಲ್ಲಿ ಸರ್ಪವು, ಸತ್ಯವಾಗಿ ಇರದೆ, ಮಿಥ್ಯವಾಗಿ ಪ್ರತೀತವಾ ಹಾಗೆ ಜನ್ಮಾದಿಜಗತ್ತು ಸತ್ಯವಾಗಿಲ್ಲ. ಮಿಥ್ಯವಾಗಿ ಪ್ರತೀತವಾ



||೧೨೪|| ಪ್ರಶ್ನೆ. ರಜ್ಜುವಿನಲ್ಲಿ ಸರ್ಪವು ಹೇಗೆ ಭಾಸವಾಯಿತು.

|| ತತ್ವದೃಷ್ಟಿರುವಾಚ ||

|| ಚೌ ಪಾ ಈ ||

ಮಿಥ್ಯಾ ಸರ್ಪ ರಜ್ಜು ಮೈ ಜೈಸೈ ।
ಭಾಖ್ಯೋ ಭವ ಆತಮಮೈ ತೈಸೈ ||
ಕೈಸೈ ಸರ್ಪ ರಜ್ಜುಮೈ ಭಾಸೈ ।
ಯಹ ಸಂಶಯ ಮನ ಬುಧ್ಧಿ ವಿನಾಸೈ ||೪೬||

ಟೀಕಾ|| ರಜ್ಜುವಿನಲ್ಲಿ ಸರ್ಪವು ಹೇಗೆ ಮಿಥ್ಯವಾಗಿರುವದೋ, ಹಾಗೆ ಆತ್ಮನಲ್ಲಿಭವದುಃಖವು ಮಿಥ್ಯವೆಂದು ಹೇಳಿದಿರಿ. ಹೀಗಿದ್ದಮೇಲೆ ದೃಷ್ಟಾಂತದ ಜ್ಞಾನವಾಗದ ಹೊರತು ದಾರ್ಷ್ಟಾಂತದ[೧] ಜ್ಞಾನವಾಗುವದಿಲ್ಲ. ಹೀಗಿರಲು "ರಜ್ಜುವಿನಲ್ಲಿ ಸರ್ಪವು ಹೇಗೆ ಭಾಸವಾಯಿತು?" ಇದು ದೃಷ್ಟಾಂತದಲ್ಲಿ ಪ್ರಶ್ನೆಯಿರುವದು. || ೪೬ ||

ಟಿಪ್ಪಣಿ [೧] ದಾರ್ಷ್ಟಾಂತ ಅಂದರೆ ಸಿದ್ಧಾಂತ ಎಂದರ್ಥ.

---

||೧೨೫|| ಅಥ ಪ್ರಶ್ನಾಭಿಪ್ರಾಯಃ. ||೧೨೫-೧೩೦||

|| ಚೌ ಪಾ ಈ ||

ಅ ಸತಖ್ಯಾತಿ ಪುನಿ ಆತಮ ಖ್ಯಾತೀ ।
ಖ್ಯಾತಿ ಅನ್ಯಥಾ ಅರು ಅಖ್ಯಾತೀ ||
ಸುನೆ ಚ್ಯಾರಿಮತ ಭ್ರಮಕೀ ಠೌರಾ ।
ಮಾನೂ ಕೌನ ಕಹೌ ಯಹ ಬ್ಯೌರಾ ||೪೭||

ಟೀಕಾ || ರಜ್ಜುವಿನಲ್ಲಿ ಸರ್ಪ, ಮತ್ತು ಸಿಂಪಿನಲ್ಲಿ ರಜತ, ಮೊದಲಾದ ಯಾವಭ್ರಮೆಗಳು ಇರುವವೋ,ಆವಿಷಯದಲ್ಲಿ ನಾಲ್ಕು ಮತಗಳಿರುವವು.

೧. ಶೂನ್ಯವಾದಿಗಳು ಅಸತ್‌ಖ್ಯಾತಿ, ಎಂದು ಹೇಳಿದ್ದಾರೆ.

೨. ಕ್ಷಣಿಕ ವಿಜ್ಞಾನವಾದಿಗಳು ಆತ್ಮಖ್ಯಾತಿ ಎಂದು ಹೇಳಿದ್ದಾರೆ.

೩. ನ್ಯಾಯ, ಮತ್ತು ವೈಶೇಷಿಕ, ಮತದಲ್ಲಿ ಅನ್ಯಥಾಖ್ಯಾತಿ ಎಂದು ಹೇಳಿದ್ದಾರೆ.

೪. ಸಾಂಖ್ಯ ಮತ್ತು ಪ್ರಭಾಕರರು ಅಖ್ಯಾತಿ ಎಂದುಹೇಳಿದ್ದಾರೆ.

## ॥ ೧೨೬ ॥ ೧. ಅಸತ್ ಖ್ಯಾತಿ.

ಇದರಲ್ಲಿ ಶೂನ್ಯವಾದಿಗಳ ಅಭಿಪ್ರಾಯವೇನಂದರೆ, ಹೇಗೆ ರಜ್ಜು
ಸರ್ಪವು ಅತ್ಯಂತ ಅಸತ್ ಇರುವದೋ, ಹಾಗೆ ಅನ್ಯಸ್ಥಾನದಲ್ಲಿ
ಅತ್ಯಂತ ಅಸತ್ ಇರುವದು. ಹೀಗೆ ಅತ್ಯಂತ ಅಸತ್‌ಸರ್ಪದ ಪ್ರತೀತಿ
ರಜ್ಜುವಿನಲ್ಲಿ ಉಂಟಾಗಲು, ಅದಕ್ಕೆ ಅಸತ್ ಖ್ಯಾತಿ ಎಂದು ಹೇಳು

ಅತ್ಯಂತ ಅಸತ್‌ಸರ್ಪದ ಖ್ಯಾತಿ ಅಂದರೆ ಭಾನ ಮತ್ತು ಕಥನವು[೧]

## ॥ ೧೨೭ ॥ ೨. ಆತ್ಮ ಖ್ಯಾತಿ,

ವಿಜ್ಞಾನವಾದಿಗಳ ಅಭಿಪ್ರಾಯವೇನಂದರೆ,- ಹೇಗೆ ರಜ್ಜು
ಹಾಗೆ ಅನ್ಯತ್ರಸ್ಥಾನದಲ್ಲಿ ಬುದ್ಧಿಯ ಹೊರ್ತು ಎಲ್ಲಿಯೂ ಸರ್ಪ
ಸರ್ವ ಪದಾರ್ಥಗಳು ಬುದ್ಧಿಯಿಂದ ಭಿನ್ನವಾಗಿರುವದಿಲ್ಲ. ಆದರೆ
ಪದಾರ್ಥಗಳ ಆಕಾರವನ್ನು ಬುದ್ಧಿಯು ಧಾರಣಮಾಡುತ್ತದೆ.
ದ್ಧಿಯು ಕ್ಷಣಿಕ ವಿಜ್ಞಾನರೂಪವಾಗಿದೆ. ಬುದ್ಧಿಯು ಕ್ಷಣಕ್ಷಣ
ವಾಗುತ್ತದೆ. ಕ್ಷಣದಲ್ಲಿ ಉತ್ಪನ್ನವಾಗುತ್ತದೆ, ಆ ವಿಜ್ಞಾನವು
ರೂಪದಿಂದ ಪ್ರತೀತವಾಗುತ್ತದೆ. ಇದಕ್ಕೇ ಆತ್ಮಖ್ಯಾತಿ ಅನ್ನು
ಆತ್ಮಾ ಅಂದರೆ ಕ್ಷಣಿಕ ವಿಜ್ಞಾನರೂಪ ಬುದ್ಧಿ, ಸರ್ಪರೂಪದಿಂದ

ಭಾನ, ಮತ್ತು ಕಥನವು.[೨]

## ॥೧೨೮॥ ೩. ಅನ್ಯಥಾಖ್ಯಾತಿ ॥೧೨೮—೧೨೯॥

ನೈಯಾಯಿಕ, ಮತ್ತು ವೈಶೇಷಿಕರ ಅಭಿಪ್ರಾಯವೇನೆಂದರೆ,
ಮೊದಲಾದ ಸ್ಥಳಗಳಲ್ಲಿ ಸತ್ಯಸರ್ಪ ದರ್ಶನ ಮತ್ತು ನೇತ್ರದೋಷ
ಎರಡು ಬಲದಿಂದ ಸನ್ಮುಖಸರ್ಪ ಪ್ರತೀತವಾಗುತ್ತದೆ. ಒಂದುವೇಳೆ
ಸರ್ಪ ಮತ್ತು ನೇತ್ರ ಇವುಗಳ ಮಧ್ಯದಲ್ಲಿ ಭೀತಿ ಮೊದಲಾದವುಗಳು
ವಿರುತ್ತದೆ. ಇದ್ದರೂ ದೋಷ ಸಹಿತ ನೇತ್ರದಿಂದ ಅನವಧಾನ
ಸರ್ಪ ದರ್ಶನವಾಗುತ್ತದೆ. ಈ ವಿಷಯದಲ್ಲಿ ಆಕ್ಷೇಪವೇನಂದರೆ,
ದಿಂದ ಸಾಮರ್ಥ್ಯವು ಕ್ಷೀಣವಾಗುತ್ತದೆ, ವೃದ್ಧಿಯಾಗುವದಿಲ್ಲ, ಜಠರ
ಪಚನ ಸಾಮರ್ಥ್ಯವು ಕಫ, ವಾತ,ಪಿತ್ತ, ಮೊದಲಾದದೋಷಗಳಿಂದ
ವಾಗುವಂತೆ, ನೇತ್ರದೋಷವುಸಹ ತಿಮಿರ,ಅಂದರೆ ಕತ್ತಲೆಮೊದಲಾದ
ಷಗಳಿಂದ ಸಾಮರ್ಥ್ಯವು ಕ್ಷೀಣವಾಗಲಿಕ್ಕೆಬೇಕು. ಮತ್ತು ಹುತ್ತ



ದ ಸ್ಥಾನದಗಳಲ್ಲಿ ಇದ್ದ ಸರ್ಪದ ಜ್ಞಾನವು ದೋಷಸಹಿತ ನೇತ್ರದಿಂ
ಲೀ ಆಗುತ್ತದೆ. ಎಂದ ಮೇಲೆ ಶುದ್ಧನೇತ್ರದಿಂದ ಪರದೇಶದಲ್ಲಿ ಇದ್ದ
ವಸ್ತುಗಳ ಪ್ರತ್ಯಕ್ಷ ಜ್ಞಾನವಾಗುವದಿಲ್ಲ. ಆದರೆ ದೋಷಸಹಿತವಾಗಿಯೇ
ಗುವದು. ಈ ಕಾರಣದಿಂದ "ದೋಷದಿಂದಲೇ ನೇತ್ರಸಾಮರ್ಥ್ಯವು
ಧಿಕವಾಗುವದು. ಹೀಗೆ ತಿಳಿಯುವದಕ್ಕೆ ಯಾವ ದೃಷ್ಟಾಂತವೂ ಇರುವ
ಲ್ಲ. ಈ ಆಕ್ಷೇಪವು ಸರಿಯಾದ್ದಲ್ಲ, ಯಾಕೆಂದರೆ, ಯಾವನಾದರೊಬ್ಬ
ಗೆಪಿತ್ತ ಮೊದಲಾದವುಗಳಿಂದ ಇಂಥರೋಗವು ಉತ್ಪನ್ನವಾಗುವುದಲ್ಲಾ?
ನನಿಗೆ ನಾಲ್ಕು ಪಟ್ಟು ಹೆಚ್ಚು ಭೋಜನ ಮಾಡಿದರೂ, ಸಹ ತೃಪ್ತಿಯಾ
ವದಿಲ್ಲ. ಹೇಗೆ ಪಿತ್ತಾದಿ ದೋಷಗಳಿಂದ ಜಠರಾಗ್ನಿಯಲ್ಲಿ ಪಚನ
ಸಾಮರ್ಥ್ಯವು ಅಧಿಕವಾಗುವದೋ, ಹಾಗೆ ನೇತ್ರಗಳಲ್ಲಿ ತಿಮಿರಾದಿ
ದೋಷಗಳಿಂದ ಅನ್ಯಸ್ಥಳಗಳಲ್ಲಿದ್ದ ಸರ್ಪವನ್ನು ಪ್ರತ್ಯಕ್ಷಮಾಡತಕ್ಕ ಸಾಮ
ರ್ಥ್ಯವು ವೃದ್ಧಿಂಗತವಾಗುತ್ತದೆ.

ಈ ರೀತಿಯಾಗಿ ಹುತ್ತ ಮೊದಲಾದ ಸ್ಥಾನಗಳಲ್ಲಿ ಸ್ಥಿತಿವಾಗಿದ್ದ
ರ್ಪದ ಅಂದರೆ ಅನ್ಯಥಾ ಅಂದರೆ, ಅನ್ಯಪ್ರಕಾರವಾಗಿ ಸನ್ಮುಖದಲ್ಲಿದ್ದ

ಖ್ಯಾತಿ ಅಂದರೆ ಭಾಸ ಮತ್ತು ಕಥನವು[೪] ಇದಕ್ಕೆ ಅನ್ಯಥಾಖ್ಯಾತಿ ಎಂದು
ಹೇಳುವರು.

[೫]

॥೧೨೯॥ ಚಿಂತಾಮಣಿಕಾರನ ಅಭಿಪ್ರಾಯವೇನಂದರೆ, ದೋಷಸಹಿತ
ನೇತ್ರದಿಂದಲೇ ಹುತ್ತದಲ್ಲಿದ್ದ ಸರ್ಪದ ಜ್ಞಾನವಾಗುತ್ತದೆ, ಅಂದಮೇಲೆ

ಮಧ್ಯದಲ್ಲಿ[೬] ಇದ್ದ ಅನ್ಯಪದಾರ್ಥಗಳ ಜ್ಞಾನವಾದರೂ ಆಗಲಿಕ್ಕೇಬೇಕು.
ಈ ಕಾರಣದಿಂದ ಅನ್ಯಸ್ಥಾನದಲ್ಲಿದ್ದ ವಸ್ತುವಿನ ಜ್ಞಾನವು ನೇತ್ರದಿಂದ
ಆಗುವದಿಲ್ಲ. ಆದರೆ ದೋಷಸಹಿತ ನೇತ್ರದಿಂದ ರಜ್ಜುವಿನ ಭಾನ
ವಾಗದೆ ಸರ್ಪರೂಪದಿಂದ ಭಾನವಾಗುವದು. ಅಂತೆಯೇ ರಜ್ಜುವೇ
ಅನ್ಯಥಾ ಅಂದರೆ ಸರ್ಪರೂಪದಿಂದ ಭಾಸ ಮತ್ತು ಕಥನ ಇದೇ ಅನ್ಯಥಾ.
ಖ್ಯಾತಿಯು, ಎಂದು ಹೇಳಿದ್ದಾರೆ.

## ॥೧೩೦॥ ೪. ಅಖ್ಯಾತಿ ಮತ್ತು ಮೇಲೆ ವಿವರಿಸಿದ ಮೂರೂ ಖ್ಯಾತಿಗಳ ಖಂಡನವು.

ಅಖ್ಯಾವಾದಿಗಳ ಅಭಿಪ್ರಾಯವೇನೆಂದರೆ, (೧) ಅಸತ್ ವಸ್ತುವಿನ
ಪ್ರತೀತಿಯುಂಟಾದರೆ, ವಂಧ್ಯಾಪುತ್ರ ಮತ್ತು ಶಶಶೃಂಗದ ಪ್ರತೀತಿಯು

ಸಹಾ ಆಗಲಿಕ್ಕೆಬೇಕು. ಈ ಕಾರಣದಿಂದ ಅಸತ್ ಖ್ಯಾತಿಯು ಅ ವಾಗಿರುವದು.

(೨) ಕ್ಷಣಿಕ ವಿಜ್ಞಾನದ ಸರ್ಪಾದಿ ಆಕಾರವಾದರೂ, ಕ್ಷಣಿ ವಾಗಿದೆ. ಅಧಿಕಕಾಲ ಸ್ಥಿರವಾಗಿರುವದಿಲ್ಲ. ಈ ಕಾರಣದಿಂ ಖ್ಯಾತಿಯು ಅಸಂಗತವಾಗಿರುವದು.

(೩) ಅನ್ಯಥಾ ಖ್ಯಾತಿಯು ಪ್ರಥಮ ರೀತಿಯಾದರೂ, ಚಿಂತಾ ಕಾರನ ಮತದಿಂದ ದೂಷಿತವೂ ಆಗಿದೆ. ಇದರಂತೆಯೇ ಚಿಂತಾ ರೀತಿಯಿಂದ ಸಹ ಅನ್ಯಥಾ ಖ್ಯಾತಿಮತವು ಅಸಂಗತವಿರುವದು. ವೇನೆಂದರೆ, ಜ್ಞೇಯಾನುಸಾರವಾಗಿ ಜ್ಞಾನವಾಗುವದು, "ಜ್ಞೆ ರಜ್ಜು ಮತ್ತು ಸರ್ಪದ ಜ್ಞಾನ, ಎಂದು ಹೇಳುವದು ಅತ್ಯಂತ ವಿ ಈ ಕಾರಣದಿಂದ ಈ ರೀತಿಯಾಗಿ ತಿಳಿಯುವದು ಯೋಗ್ಯವಾಗಿದೆ. ವಾಗ ರಜ್ಜುವಿನಲ್ಲಿ ಸರ್ಪಭ್ರಮೆ ಯಿರುವದೋ, ಆವಾಗ ರಜ್ಜು ತನ್ನ ವೃತ್ತಿದ್ವಾರಾ ನೇತ್ರದ ಸಂಬಂಧವಾಗಿ ರಜ್ಜುವಿನ ಇದಂ ಸಾಮಾನ್ಯ ಜ್ಞಾನವಾಗುತ್ತದೆ. ಅಲ್ಲದೆ ಸರ್ಪದ ಸ್ಮೃತಿಯು ತ್ತದೆ. "ಇದು ಸರ್ಪವದೆ" ಇದರಲ್ಲಿ ದ್ವಿವಿಧ ಜ್ಞಾನವಿರುವದು

೧. "ಇದು" ಎಂಬ ಅಂಶವು ರಜ್ಜುವಿನ ಸಾಮಾನ್ಯ ಪ್ರತ್ಯಕ್ಷ ವಾಗಿದೆ.

೨. "ಸರ್ಪವದೆ" ಎಂಬದು ಸರ್ಪದ ಸ್ಮೃತಿರೂಪ ಜ್ಞಾನ

ಈ ರೀತಿಯಿಂದ "ಇದು ಸರ್ಪವದೆ" ಎಂಬದರಲ್ಲಿ ದ್ವಿವಿಧ ವದೆ, ಆದರೆ ಭಯದೋಷ, ಪ್ರಮಾತಾದಲ್ಲಿ ಮತ್ತು ತಿಮಿರದೋ ಮಾಣದಲ್ಲಿ ಇರುವದು. ಇದರ ಬಲದಿಂದ ಪುರುಷನಿಗೆ "ನನಗೆ ಜ್ಞಾನವುಂಟಾಗಿದೆ" ಎಂಬ ವಿವೇಕವು ಉಂಟಾಗುವದಿಲ್ಲ. "ಇದು" ಎಂಬ ಅಂಶವು ರಜ್ಜುವಿನ ಸಾಮಾನ್ಯ ಜ್ಞಾನವು ಯಥಾ ವದು. ಈ ಕಾರಣದಿಂದಲೇ, ಇದು ದ್ವಿವಿಧ ಜ್ಞಾನವಾಗಿದೆ. ರಜ್ಜುವಿನ ಸಾಮಾನ್ಯ ಪ್ರತ್ಯಕ್ಷ ಜ್ಞಾನವೂ ಸರ್ಪದ ಸ್ಮೃತಿ ಇರುವದು. ಎಂಬ ವಿವೇಕ ಜ್ಞಾನವು ಉಂಟಾಗುವದಿಲ್ಲ. ವೇಕಕ್ಕೆ ಸಾಂಖ್ಯ ಪ್ರಭಾಕರ ಮತದಲ್ಲಿ "ಭ್ರಮ" ಎಂದು ಹೇಳ ರೀತಿಯಿಂದಲೇ ಸರ್ವ ಭ್ರಮಸ್ಥಳದಲ್ಲಿಯೂ ತಿಳಿಯಬೇಕು.

ಈ ಪ್ರಕಾರದಿಂದ ರಜ್ಜು ಮೊದಲಾದುವುಗಳಲ್ಲಿ ಯಾವಾಗ ಸ



ಲಾದವುಗಳ ಭ್ರಮೆಯುಂಟಾಗುವದೋ, ಆಗ ಆ ವಿಷಯದಲ್ಲಿ ನಾಲ್ಕು ಮತಗಳನ್ನು ಕೇಳಿರುವೆವು. ಇವುಗಳಲ್ಲಿ "ಯಾವದು ಉತ್ತಮವಾದ ಮತವಿರುವದೋ ಅದನ್ನು ಹೇಳಿರಿ ; ಅದನ್ನೇ ನಾನು ತಿಳಿದುಕೊಳ್ಳುತ್ತೇನೆ. ಎಂದು ಶಿಷ್ಯನ ಪ್ರಶ್ನೆಯಿರುವದು. ||೮೮||

ಟಿಪ್ಪಣಿ—೧. ಚ್ಯಾರಾ ಅಂದರೆ. ಶ್ರೇಷ್ಠ.

೨. ಅಸತ್ ಖ್ಯಾತಿಯ ವಿಶೇಷಕಥನವನ್ನೂ ಮತ್ತು ಖಂಡನೆಯನ್ನೂ ವೃತ್ತಿರತ್ನಾವಲಿಯ ದಶಮರತ್ನದಲ್ಲಿಯೂ, ಮತ್ತು ವೃತ್ತಿ ಪ್ರಭಾಕರವೆಂಬ ಗ್ರಂಥದ ಸಪ್ತಮ ಪ್ರಕಾಶದಲ್ಲಿಯೂ, ಪಂಡಿತ ಪೀತಾಂಬರಜಿಯವರು ವಿಶೇಷ ವಿಸ್ತಾರವಾಗಿ ನಿರೂಪಿಸಿದ್ದಾರೆ.

೩. ಆತ್ಮಖ್ಯಾತಿಯ ವಿಶೇಷ ಕಥನವನ್ನೂ, ಮತ್ತು ಖಂಡನೆಯನ್ನೂ ವೃತ್ತಿರತ್ನಾವಲಿ ಗ್ರಂಥದ ಏಕಾದಶ ರತ್ನದಲ್ಲಿಯೂ, ವೃತ್ತಿ ಪ್ರಭಾಕರದ ಸಪ್ತಮ ಪ್ರಕಾಶದಲ್ಲಿಯೂ ಸವಿಸ್ತರವಾಗಿ ಹೇಳಲ್ಪಟ್ಟಿದೆ.

೪. ಇದು ಪ್ರಾಚೀನ ಮತವಿರುವದು. ಈ ಮತದಲ್ಲಿ ಅನ್ಯಸ್ಥಳದಲ್ಲಿ ಇದ್ದ ವಸ್ತುವಿನ, ಅನ್ಯದೇಶದಲ್ಲಿಯ ಪ್ರತೀತಿಯು. ಇದಕ್ಕೇ ಭ್ರಾಂತಿ ಎಂದು ಹೇಳಿದ್ದಾರೆ. ಅರ್ಥಾಧ್ಯಾಸ ಅಥವಾ ಜ್ಞಾನಾಧ್ಯಾಸ ರೂಪವು ಭ್ರಾಂತಿಯಲ್ಲ.

೫. ಚಿಂತಾಮಣಿ ನಾಮಕ ಗ್ರಂಥ ಕರ್ತನು ನವೀನ ನೈಯಾಯಿಕ ಮತದವನಿರುವನು. ಇದರಲ್ಲಿ ಅನ್ಯವಸ್ತುವಿನ ಅನ್ಯರೂಪದಿಂದ ಪ್ರತೀತಿರೂಪ ಜ್ಞಾನಾಧ್ಯಾಸಕ್ಕೇ ಭ್ರಾಂತಿ ಎಂದು ಹೇಳಿರುವದು. ಈ ಅನ್ಯಥಾ ಖ್ಯಾತಿಯ ವಿಶೇಷಕಥನ ಮತ್ತು ಖಂಡನೆಯನ್ನು ವೃತ್ತಿರತ್ನಾವಲಿಯ ದ್ವಾದಶ ರತ್ನದಲ್ಲಿಯೂ ವೃತ್ತಿ ಪ್ರಭಾಕರದ ಸಪ್ತಮ ಪ್ರಕಾಶದಲ್ಲಿಯೂ ಹೇಳಲ್ಪಟ್ಟಿದೆ.

[೬] ಯಾವಾಗ ಸುವರ್ಣದ ಮುಸಿಯಲ್ಲಿದ್ದ ರಜತವು ಸಿಂಪಿನಲ್ಲಿ ಭಾಸವಾಗುವದೋ, ಆಗ ಮುಸಿ ಮತ್ತು ಅದರಲ್ಲಿದ್ದ ಸರ್ವ ಸಾಮಗ್ರೀಸಹಿತ ಸುವರ್ಣವೂ ಸಹ ದೋಷ ಬಲದಿಂದ ಪ್ರತೀತಿಯಾಗಲಿಕ್ಕೆಬೇಕು. ಹೀಗೆ ಆಗುವದಿಲ್ಲ.

---

ಅಂಕ ೧೨೪ರಿಂದ ೧೩೦ರಲ್ಲಿಯ ಪ್ರಶ್ನೆಗಳ ಉತ್ತರ. ||೧೩೧—೧೪೬||

|| ೧೩೧ || ಆ ಖ್ಯಾತಿ ಮತ ಖಂಡನ || ೧೩೧—೧೩೨ ||

|| ಶ್ರೀಗುರುರುವಾಚ ||

|| ದೋಹಾ ||

ಖ್ಯಾತಿ ಅನಿರ್ವಚನೀಯ ಲಖಿ | ಪಂಚಮ ತಿನತೈ ಔರ ||
ಯುಕ್ತಿ ಹೀನ ಮತ ಚ್ಯಾರಿಯೇ | ಮಾನಹುಭ್ರಮಕೀಠೌರ||

ಟೀಕಾ|| ಎಲೈ ಶಿಷ್ಯನೇ! ಆ ನಾಲ್ಕು ಕ್ಯಾತಿಗಳಿಗಿಂತಲೂ ಅನ್ಯಭ್ರಮಸ್ಥಾನೀಯ ಅನಿರ್ವಚನೀಯ ಕ್ಯಾತಿಯು ಐದನೆಯದಿರುವದೆಂದು ನೀನು ತಿಳಿ

ದುಕೋ; ಮತ್ತು ಅಸತ್‌ಖ್ಯಾತಿ, ಆತ್ಮಖ್ಯಾತಿ, ಅನ್ಯಥಾಖ್ಯಾತಿ, ಈ
ಈ ನಾಲ್ಕು ಯುಕ್ತಿಹೀನವಾಗಿರುವವು. ಹೇಗೆ ಉತ್ತರೋತ್ತರ
ರೂಪಣದಲ್ಲಿ ಮೂರು ಮತಗಳು ಅಸಂಗತವೆಂದು ಹೇಳಿತೋ, ಹಾಗೆ
ಅಖ್ಯಾತಿ ಮತವು ಸಹ ಅಸಂಗತವಾಗಿರುವದು. ಯಾಕಂದರೆ "ಇದು
ವಿರುವದು ಎಂಬ ಜ್ಞಾನದಲ್ಲಿ.

೧. ಪ್ರಥಮ "ಇದು" ಎಂಬ ಅಂಶವು ರಜ್ಜುವಿನ ಸಾಮಾನ್ಯ
ನವು ಪ್ರತ್ಯಕ್ಷವಿರುವದು.

೨. "ಸರ್ಪವಿರುವದು" ಎಂಬ ಅಂಶವು ಪೂರ್ವದಲ್ಲಿ ನೋಡಿದ
ದ ಸ್ಮರಣ ಜ್ಞಾನವಿರುವದು.

ಇದು ಅಖ್ಯಾತಿವಾದಿಯ ಮತವಿರುವದು. ಅದರಲ್ಲಿ, ಪೂರ್ವದಲ್ಲಿ
ಡಿದ ಸರ್ಪದ ಸ್ಮರಣವನ್ನು ತಿಳಿಯುತ್ತಾನೆ. ಮತ್ತು ಸನ್ಮುಖ ರಜ್ಜು
ಲ್ಲಿ ಸಹ ಸರ್ಪಜ್ಞಾನವನ್ನು ತಿಳಿಯುತ್ತಾನೆ. ಹೀಗೆ ಇದ್ದು ಸನ್ಮುಖ
ವನ್ನು ನೋಡಿ ಭಯವುಳ್ಳವನಾಗಿ ಪಲಾಯನಮಾಡುತ್ತಾನೆ. ಈ
ಮತ್ತು ಪಲಾಯನಗಳು ಉಂಟಾಗಬಾರದಿತ್ತು; ಈ ಕಾರಣದ ದೆ
ದ ಸನ್ಮುಖ ರಜ್ಜುವಿನಲ್ಲಿಯೇ ಸರ್ಪದ ಪ್ರತೀತಿಯುಂಟಾಗುತ್ತದೆ,
ರ್ವದಲ್ಲಿ ನೋಡಿದ ಸರ್ಪದ ಸ್ಮೃತಿಯು ಅಲ್ಲ.

||೧೩೨|| ಅಥವಾ (೧) ರಜ್ಜುವಿನ ವಿಶೇಷರೂಪದಿಂದ ಯಥಾರ್ಥ
ನವಾದಮೇಲೆಹೀಗೆ ಬೋಧವಾಗುವದಲ್ಲಾ;-"ನನಗೆ ರಜ್ಜುವಿನಲ್ಲಿ ಸ
ಪ್ರತೀತಿಯು ಮಿಥ್ಯವಾಗಿ ಆಗಿತ್ತು" ಈ ಬೋಧೆಯಿಂದಲೂ ರಜ್ಜು
ಸರ್ಪಪ್ರತೀತಿಯು ವುಂಟಾಗುವದು. ಪೂರ್ವದಲ್ಲಿ ನೋಡಿದ ಸರ್ಪದ ಸ್ಮೃ
ಯಲ್ಲ, (೨) ಇದು ಸರ್ಪವಿರುವದು, ಎಂಬ ಕಡೆಯಲ್ಲಿಯೂ ಒ
ಜ್ಞಾನವು ಪ್ರತೀತವಾಗುತ್ತದೆ, ಎರಡು ಜ್ಞಾನವಾಗುವುದಿಲ್ಲ, ಮತ್ತು
ಒಂದೇಕಾಲದಲ್ಲಿ ಅಂತಃಕರಣದಿಂದ ಸ್ಮೃತಿರೂಪ, ಮತ್ತು ಪ್ರತ್ಯಕ್ಷ
ಜ್ಞಾನವು ಸಂಭವಿಸುವದಿಲ್ಲ. ಆದ್ದರಿಂದ ಅಖ್ಯಾತಿಮತವು ಸಹಾ
ತ ಅಸಂಗತವಾಗಿರುವದು.

ಈ ನಾಲ್ಕು ಮತಗಳ ಪ್ರತಿಪಾದನ ಮತ್ತು ಖಂಡನವನ್ನು
ಮತ್ತು ಸ್ವರಾಜ್ಯಸಿದ್ಧಿ ಮೊದಲಾದ ಗ್ರಂಥಗಳಲ್ಲಿ ವಿಸ್ತಾರವಾಗಿಬ
ಸಿದ್ದಾರೆ. ಪ್ರತಿಪಾದನಮಾಡುವ ಮತ್ತು ಖಂಡನಮಾಡುವ ಯುಕ್ತಿ
ಕಠಿಣವಾಗಿರುವವು. ಈ ಕಾರಣದಿಂದ ಜಿಜ್ಞಾಸುಗಳಿಗೆ ಸಂಕ್ಷೇಪದಿ
ತಿಯು ತಿಳಿಯಬೇಕೆಂದು ನಾವು ವಿಸ್ತಾರವಾಗಿ ಬರೆದಿರುವದಿಲ್ಲ.



## ||೧೩೩|| ಸಿದ್ಧಾಂತದಲ್ಲಿ ಅನಿರ್ವಚನೀಯ ಖ್ಯಾತಿಯು ಇರುವದು, ಅದರ ರೀತಿಯು.

ಸಿದ್ಧಾಂತದಲ್ಲಿ ಅನಿರ್ವಚನೀಯ ಖ್ಯಾತಿಯು ಇರುವದು. ಅದು ಯಾವ ಪ್ರಕಾರವಿರುವದು? ಎಂಬದನ್ನು ವಿವರಿಸುವೆನು; ಅಂತಃಕರಣದ ವೃತ್ತಿಯು ಯಾವಾಗ ನೇತ್ರಾದಿದ್ವಾರಗಳಿಂದ ಹೊರಬಿದ್ದು ವಿಷಯಾಕಾರವನ್ನು ಹೊಂದುತ್ತದೆಯೋ, ಆಗ ವಿಷಯದ ಆವರಣಭಂಗವಾಗಿ ಅದರ ಪ್ರತೀತಿಯುಂಟಾಗುತ್ತದೆ. ಅದಕ್ಕೆ ಪ್ರಕಾಶವು ಸಹ ಸಹಾಯವಾಗುತ್ತದೆ. ಪ್ರಕಾಶದ ಹೊರ್ತು ಪದಾರ್ಥದ ಪ್ರತೀತಿಯು ಆಗುವದಿಲ್ಲ.

ಯಾವಾಗ ರಜ್ಜುವಿನಲ್ಲಿ ಸರ್ಪಭ್ರಮೆಯುಂಟಾಗುವದೋ, ಆಗ ಅಂತಃಕರಣದ ವೃತ್ತಿಯು ನೇತ್ರದ್ವಾರದಿಂದ ಹೊರಟು ರಜ್ಜುವಿನೊಡನೆ ಅದರ ಸಂಬಂಧವು ಆಗುತ್ತಿದ್ದರೂ ಸಹ, ತಿಮಿರಾದಿ ದೋಷಗಳು ಪ್ರತಿಬಂಧಕವಾಗಿರುವವು. ಇದರಿಂದ ರಜ್ಜುವಿನ ಸಮಾನಾಕಾರ ವೃತ್ತಿಯು ಸ್ವರೂಪವುಂಟಾಗುವದಿಲ್ಲ. ಈ ಕಾರಣದಿಂದ ರಜ್ಜುವಿನ ಆವರಣ ನಾಶವಾಗಲಿಲ್ಲ.

ಈ ರೀತಿಯಾಗಿ ಆವರಣಭಂಗ ನಿಮಿತ್ತ ವೃತ್ತಿಯಸಂಬಂಧವು ಆಗುವಂತೆ ಇದ್ದರೂ, ಯಾವಾಗ ರಜ್ಜುವಿನ ಆವರಣವು ಭಂಗವಾಗುವದಿಲ್ಲವೋ ಆಗ ರಜ್ಜು ಉಪಹಿತ ಚೈತನ್ಯಸ್ಥಿತ ಅವಿದ್ಯೆಯಲ್ಲಿ ಕ್ಷೋಭವುಂಟಾಗಿ ಆ ಅವಿದ್ಯೆಯು ಸರ್ಪಾಕಾರದಿಂದ ಪರಿಣಾಮವನ್ನು ಹೊಂದುತ್ತದೆ.

೧. ಆ ಅವಿದ್ಯೆಯ ಕಾರ್ಯವಾದ ಸರ್ಪವೇ ಸತ್ ಅಂದರೆ ರಜ್ಜುವಿನ ಜ್ಞಾನದಿಂದ ಅದರ ಬಾಧವುಂಟಾಗಬಾರದು. ಆದರೆ ಬಾಧ ವುಂಟಾಗುತ್ತದೆ, ಈ ಕಾರಣದಿಂದ ಸತ್ ಅಲ್ಲ.

೨. ಅಸತ್ ಆದರೆ ಅದು ವಂಧ್ಯಾಪುತ್ರನಂತೆ ಪ್ರತೀತವಾಗಬಾರದು ಆದರೆ ಪ್ರತೀತವಾಗುತ್ತದೆ. ಈ ಕಾರಣದಿಂದ ಅಸತ್ ಸಹ ಅಲ್ಲ.

ಆದರೆ ಅದು ಸತ್ ಅಸತ್‌ಗಳಿಗಿಂತ ವಿಲಕ್ಷಣ ಅನಿರ್ವಚನೀಯವಿರುವದು. ಶುಕ್ತಿ ಮೊದಲಾದವುಗಳಲ್ಲಿಯ ರೌಪ್ಯಾದಿಗಳು ಸಹ ಇದೇ ರೀತಿಯಿಂದ ಅನಿರ್ವಚನೀಯವಾಗಿ ಉತ್ಪನ್ನವಾಗುವವು. ಈ ಅನಿರ್ವಚನೀಯದ ಖ್ಯಾತಿ ಅಂದರೆ ಪ್ರತೀತಿಯು ಮತ್ತು ಕಥನವು, ಇದೇ ಅನಿರ್ವಚನೀಯ ಖ್ಯಾತಿಯೆಂದು ಎನ್ನಿಸಿಕೊಳ್ಳುವದು.

||೧೩೪|| ಭ್ರಮಸ್ಥಳದಲ್ಲಿ ಅಂತಃಕರಣದಿಂದ ಭಿನ್ನವಾದ ಅವಿ ಪರಿಣಾಮವಾದ ಸರ್ಪಾದಿ ವಿಷಯಗಳು, ಮತ್ತು ಅವುಗಳ ಜ್ಞಾ ಲೀನವಾಗುವವಲ್ಲದೆ ಸಾಕ್ಷೀ ಭಾಸ್ಯವಾಗಿಯೂ ಇರುವವು.

ಹೇಗೆ ಸರ್ಪವು ಅವಿದ್ಯೆಯ ಪರಿಣಾಮವಾಗಿರುವದೋ, ಹಾಗೆ ಜ್ಞಾನರೂಪ ವೃತ್ತಿಯು ಸಹ, ಅವಿದ್ಯೆಯ ಪರಿಣಾಮವಾಗಿ ಅಂತಃಕರಣದ್ದಲ್ಲ. ಯಾಕಂದರೆ, ಹೇಗೆ ರಜ್ಜು ಜ್ಞಾನದಿಂದ ಸ ಬಾಧವುಂಟಾಗುವದೋ, ಹಾಗೆ ಅದರ ಜ್ಞಾನವು ಸಹ ಬಾಧವುಂ ತ್ತದೆ. ಅಂತಃಕರಣದ ಜ್ಞಾನವುಂಟಾದರೆ, ಬಾಧವು ಉಂಟಾಗಬಾ ಈ ಕಾರಣದಿಂದ ಜ್ಞಾನವು ಸಹ ಸರ್ಪದಂತೆ ಅವಿದ್ಯೆಯ ಕಾರ್ಯ ಅಸತ್‌ಗಳಿಗಿಂತ ವಿಲಕ್ಷಣ ಅನಿರ್ವಚನೀಯವಿರುವದು. ಆದರೆ, (೧) ಉಪಹಿತಚೇತನದಲ್ಲಿ ಸ್ಥಿತವಾದ ತಮೋಗುಣಪ್ರಧಾನವಾದ ಅವಿ ಅಂಶದ ಪರಿಣಾಮವು ಸರ್ಪವಾಗಿದೆ. (೨) ಸಾಕ್ಷೀ ಚೇತನದಲ್ಲಿ ಸ್ಥಿತ ಅವಿದ್ಯೆಯ ಸತ್ವಗುಣದ ಪರಿಣಾಮವು ವೃತ್ತಿಜ್ಞಾನವಾಗಿದೆ.

ಯಾವ ಕಾಲದಲ್ಲಿ ರಜ್ಜು ಚೈತನ್ಯಾಶ್ರಿತ ಅವಿದ್ಯೆಯ ಸರ್ಪಾ ಪರಿಣಾಮವಾಗುವದೋ, ಆ ಕಾಲದಲ್ಲಿಯೇ ಸಾಕ್ಷೀ ಆಶ್ರಿತ ಅವಿ ಜ್ಞಾನಾಕಾರ ಪರಿಣಾಮವಾಗುತ್ತದೆ. ಯಾಕಂದರೆ ರಜ್ಜು ಚೈ ಶ್ರಿತ ಅವಿದ್ಯೆಯಲ್ಲಿ ಕ್ಷೋಭದ ಯಾವ ನಿಮಿತ್ತವಿರುವದೋ, ಆ ನಿ ದಿಂದಲೇ ಸಾಕ್ಷೀ ಆಶ್ರಿತ ವಿದ್ಯೆಯಲ್ಲಿ ಕ್ಷೋಭವುಂಟಾಗುತ್ತದೆ. ಕಾರಣದಿಂದ ಭ್ರಮಸ್ಥಳದಲ್ಲಿ ಸರ್ಪಾದಿಕ ವಿಷಯ, ಮತ್ತು ಅದರ ಇವು ಒಂದೇ ಸಮಯದಲ್ಲಿ ಉತ್ಪನ್ನವಾಗುತ್ತದೆ. ಮತ್ತು ರಜ್ಜು ಲಾದ ಅಧಿಷ್ಠಾನದ ಜ್ಞಾನದಿಂದ ಒಂದೇಸಮಯದಲ್ಲಿ ಲೀನವಾಗು ಈ ರೀತಿಯಿಂದ;—

೧. ಸರ್ಪಾದಿಕ ಭ್ರಮೆಯಲ್ಲಿ (೧) ಬಾಹ್ಯ ಅವಿದ್ಯಾ ಅಂಶವ ವಿಷಯದ ಉಪಾದಾನಕಾರಣವಾಗಿರುವದು. ಮತ್ತು (೨) ಸಾಕ್ಷೀ ಆಶ್ರಿತ ಅಂತರ ಅವಿದ್ಯಾ ಅಂಶವು, ಅದರ ಜ್ಞಾನರೂಪ ವೃತ್ತಿಯ ದಾನಕಾರಣವಿರುವದು.

೨. ಸ್ವಪ್ನದಲ್ಲಿ (೧) ಸಾಕ್ಷೀ ಆಶ್ರಿತ ಅವಿದ್ಯೆಯ ತಮೋಗುಣಾ ವಿಷಯರೂಪದಿಂದ ಪರಿಣಾಮವನ್ನು ಹೊಂದುತ್ತದೆ. (೨) ಆ ಅವಿ ಲ್ಲಿಯಸತ್ವಗುಣದಿಂದಅಂಶವೇಜ್ಞಾನರೂಪಪರಿಣಾಮವನ್ನು ಹೊಂದು

ಈ ಕಾರಣದಿಂದ ಸ್ವಪ್ನದಲ್ಲಿ ಅಂತರ ಅವಿದ್ಯೆಯು, ವಿಷಯ,



ಜ್ಞಾನ ಇವುಗಳಿಗೆ ಉಪಾದಾನಕಾರಣವಾಗಿದೆ.

ಈ ಕಾರಣದಿಂದಲೇ ಬಾಹ್ಯ ರಜ್ಜು ಸರ್ಪಾದಿಕ, ಮತ್ತು ಅಂತರ ಸ್ವಪ್ನಪದಾರ್ಥಗಳು ಸಾಕ್ಷೀಭಾಸ ಎಂದು ಅನ್ನಬೇಕು.

ಅವಿದ್ಯೆಯ ವೃತ್ತಿದ್ವಾರಾ ಯಾವದನ್ನು ಸಾಕ್ಷಿಯು ಭಾಸಿಸುವದೊ ಅಂದರೆ ಪ್ರಕಾಶಿಸುವದೋ, ಅದು ಸಾಕ್ಷೀಭಾಸ್ಯ ಎಂದು ಅನ್ನಬೇಕು.

||೧೩೫|| ರಜ್ಜುವಿನಲ್ಲಿ ಸರ್ಪ, ಮತ್ತು ಅದರ ಜ್ಞಾನವು ಅವಿದ್ಯೆಯ ಪರಿಣಾಮ ಮತ್ತು ಚೇತನದ ವಿವರ್ತವಿರುವದು.

ರಜ್ಜು ಮೊದಲಾದವುಗಳಲ್ಲಿ ಅನಿರ್ವಚನೀಯ ಸರ್ಪಾದಿಕ, ಮತ್ತು ಅವುಗಳ ಜ್ಞಾನ, ಇವುಗಳಿಗೆ ಭ್ರಮವೆನ್ನಬೇಕು. ಮತ್ತು ಅಧ್ಯಾಸವೆನ್ನಬೇಕು, ಆ ಭ್ರಮವು ಅವಿದ್ಯೆಯ ಪರಿಣಾಮವಾಗಿದೆ, ಮತ್ತು ಚೇತನದ ವಿವರ್ತವಾಗಿದೆ.

(೧) ಉಪಾದಾನಕಾರಣದ ಸಮಾನ ಸ್ವಭಾವವುಳ್ಳ ಅನ್ಯಥಾ ಸ್ವರೂಪಕ್ಕೆ ಪರಿಣಾಮವೆನ್ನಬೇಕು.

(೨) ಅಧಿಷ್ಠಾನದ ವಿಪರೀತ ಸ್ವಭಾವವುಳ್ಳ ಅನ್ಯಥಾ ಸ್ವರೂಪಕ್ಕೆ ವಿವರ್ತವೆನ್ನಬೇಕು.

(೧) ಉಪಾದಾನಕಾರಣದ ಅವಿದ್ಯೆಯು, ಅನಿರ್ವಚನೀಯವಾಗಿದೆ. ಅದರಂತೆ ರಜ್ಜುವಿನಲ್ಲಿ ಸರ್ಪ, ಮತ್ತು ಅದರ ಜ್ಞಾನಸಹಾ ಅನಿರ್ವಚನೀಯವಾಗಿದೆ. ಈ ಕಾರಣದಿಂದ ರಜ್ಜುಸರ್ಪ ಮತ್ತು ಅದರ ಜ್ಞಾನ, ಅವಿದ್ಯೆಯ ಸಮಾನ ಸ್ವಭಾವವುಳ್ಳ ಅನ್ಯಥಾ ಸ್ವರೂಪ ಅಂದರೆ ಅವಿದ್ಯೆಗಿಂತಲೂ, ಅನ್ಯಪ್ರಕಾರದ ಆಕಾರವಿರುವದು. ಅದು ಆ ವಿದ್ಯೆಯ ಪರಿಣಾಮವಾಗಿದೆ.

(೨) ಇದರಂತೆ ರಜ್ಜುವು ಅವಿಚ್ಛಿನ್ನ ಅಧಿಷ್ಠಾನಚೇತನ ಸತ್‌ರೂಪವದೆ. ಸರ್ಪ ಮತ್ತು ಅದರ ಜ್ಞಾನ ಸತ್‌ದಿಂದ ವಿಲಕ್ಷಣವದೆ. ಈ ಕಾರಣದಿಂದ ರಜ್ಜು ಸರ್ಪ ಮತ್ತು ಅದರ ಜ್ಞಾನ ಅಧಿಷ್ಠಾನ ಚೇತನದಿಂದ ವಿಪರೀತ ಸ್ವಭಾವವುಳ್ಳ ಅನ್ಯಥಾ ಸ್ವರೂಪ ಅಂದರೆ ಚೇತನಕ್ಕಿಂತ ಬೇರೆ ಪ್ರಕಾರದ ಆಕಾರವದೆ.

||೧೩೬|| ರಜ್ಜು ಮತ್ತು ಅಂತಃಕರಣ ಉಪಹಿತ ಚೇತನ ಅಧಿಷ್ಠಾನ ವಿರುವದು. ರಜ್ಜುವಲ್ಲ ಸರ್ಪ ಮತ್ತು ಅದರ ಜ್ಞಾನದ ರಜ್ಜು ಜ್ಞಾನದಿಂದ ನಿವೃತ್ತಿಯು.

೧. ಮಿಥ್ಯಾಸರ್ಪದ ಅಧಿಷ್ಠಾನವು ರಜ್ಜು ಉಪಹಿತ ಚೇತನವಾಗಿದೆ.

ರಜ್ಜುವಲ್ಲ. ಯಾಕಂದರೆ ಸರ್ಪದಂತೆ ರಜ್ಜುವೂ ಸಹ ಕಲ್ಪಿತವದೆ.
ವಸ್ತುವು ಅನ್ಯಕಲ್ಪಿತವಸ್ತುವಿನ ಅಧಿಷ್ಠಾನವಾಗುವದಿಲ್ಲ. ಈ ಕಾರಣ
ರಜ್ಜು ಉಪಹಿತ ಚೇತನವೇ ಅಧಿಷ್ಠಾನವಾಗಿದೆ. ಮತ್ತು ರಜ್ಜುವಿ
ಅಧಿಷ್ಠಾನವೆಂದರೆ, ರಜ್ಜು ಮತ್ತು ಚೈತನ್ಯವು ಸಹ ಅಧಿಷ್ಠಾನ
ವದು. ಅದರಲ್ಲಿ ರಜ್ಜುಭಾಗದಲ್ಲಿ ಅಧಿಷ್ಠಾನತ್ವವು ಬಾಧಿತವದೆ.
ಕಾರಣದಿಂದ ರಜ್ಜು ಉಪಹಿತ ಚೈತನ್ಯವೇ ಅಧಿಷ್ಠಾನವದೆ. ರಜ್ಜು
ಷ್ಟ ಚೈತನ್ಯವಲ್ಲ.

೨. ಇದರಂತೆ ಸರ್ಪಜ್ಞಾನದ ಅಧಿಷ್ಠಾನವು ಸಾಕ್ಷೀಚೈತನ್ಯವ
ಈ ಪ್ರಕಾರವಾಗಿ ಭ್ರಮಸ್ಥಾನದಲ್ಲಿ ವಿಷಯಗಳ ಮತ್ತು ಜ್ಞಾನದ
ಷ್ಠಾನವು ಉಪಾಧಿ ಭೇದದಿಂದ ಭಿನ್ನ ಭಿನ್ನವಾಗಿದೆ. ಒಂದೇ ಯ
ವದಿಲ್ಲ.

೧. ವಿಶೇಷ ರೂಪದಿಂದ ರಜ್ಜುವಿನ ಅಜ್ಞಾನವು ಅವಿದ್ಯೆಯಲ್ಲಿ
ಬದ್ವಾರಾ ಸರ್ಪೋತ್ಪತ್ತಿ ಮತ್ತು ಜ್ಞಾನೋತ್ಪತ್ತಿಯಲ್ಲಿ ನಿಮಿತ್ತ
ರುವದು.

೨. ಇದರಂತೆ ರಜ್ಜುವಿನ ಜ್ಞಾನವು ಸರ್ಪ ಮತ್ತು ಸರ್ಪ
ಇವುಗಳ ನಿವೃತ್ತಿವಿಷಯುದಲ್ಲಿ ಕಾರಣವಾಗಿದೆ. ಈ ವಿಷಯದಲ್ಲಿ.

## ॥೧೩೭॥ ಆಕ್ಷೇಪ ರಜ್ಜುವಿನ ಜ್ಞಾನದಿಂದ ಸರ್ಪದ ನಿವೃತ್ತಿಯು ಆಗುವದಿಲ್ಲ.

ಹೀಗೆ ಆಕ್ಷೇಪ ಉಂಟಾಗಿರುವದಲ್ಲಾ ? ರಜ್ಜುವಿನ ಜ್ಞಾನ
ಸರ್ಪದ ನಿವೃತ್ತಿಯು ಸಂಭವಿಸುವದಿಲ್ಲ. ಯಾಕಂದರೆ;- "ಮಿಥ್ಯಾ
ವಿನ ಯಾವ ಅಧಿಷ್ಠಾನವು ಆಗುವದೋ, ಆ ಅಧಿಷ್ಠಾನದ ಜ್ಞಾನ
ಮಿಥ್ಯಾವಸ್ತುವಿನ ನಿವೃತ್ತಿಯು ಉಂಟಾಗುತ್ತದೆ" ಎಂದು
ವಾದದ ಸಿದ್ಧಾಂತವದೆ. ಅಲ್ಲದೇ ಮಿಥ್ಯಾಸರ್ಪದ ಅಧಿಷ್ಠಾನವು
ಉಪಹಿತ ಚೈತನ್ಯವಾಗಿದೆ ರಜ್ಜುವಲ್ಲ. ಈ ಕಾರಣದಿಂದ ರಜ
ಜ್ಞಾನದಿಂದ ಸರ್ಪದ ನಿವೃತ್ತಿಯು ಸಂಭವಿಸುವದಿಲ್ಲ ಈ ಆಕ್ಷೇಪ

## ॥೧೩೮॥ ಸಮಾಧಾನ ರಜ್ಜುವಿನ ಜ್ಞಾನವೇ ಸರ್ಪಾಧಿಷ್ಠಾನದ ಜ್ಞಾನವದೆ.

"ರಜ್ಜು ಮೊದಲಾದ ಜಡಪದಾರ್ಥಗಳ ಅಂತಃಕರಣ ವೃತ್ತಿ
ಜ್ಞಾನವಾಗುತ್ತದೆ. ಅದರಲ್ಲಿ ಆವರಣಭಂಗ ವೃತ್ತಿಯು ಪ್ರಯೋಜ
ಈ ಆವರಣವು ಅಜ್ಞಾನದ ಶಕ್ತಿಯಾಗಿದೆ. ಈ ಕಾರಣದಿಂದ ಆ
ಜಡದಆಶ್ರಿತವಲ್ಲ. ಆದರೆಜಡದಅಧಿಷ್ಠಾನವಾದಯಾವಚೇತನವಿರು



ಅದರ ಆಶ್ರಿತವಾಗಿರುವದು. ಈ ಕಾರಣದಿಂದ.

೧. ರಜ್ಜುವಿನ ಸಮಾನಾಕಾರ ಅಂತಃಕರಣದ ವೃತ್ತಿಯಿಂದ ರಜ್ಜುವು ಅವಿಚ್ಛಿನ್ನ ಚೈತನ್ಯದ್ದೂ ಸಹ ಆವರಣ ಭಂಗವಾಗುತ್ತದೆ.

೨. ವೃತ್ತಿಯಲ್ಲಿ ಯಾವ ಚಿದಾಭಾಸವಿರುವದೋ, ಅದರಿಂದ ರಜ್ಜುವಿನ ಪ್ರಕಾಶವಾಗುತ್ತದೆ.

೩. ಚೈತನ್ಯವು ಸ್ವಯಂಪ್ರಕಾಶವದೆ. ಅದರಲ್ಲಿ ಆಭಾಸದಉಪಯೋಗವಿಲ್ಲ.

ಗ

ಈ ಪ್ರಕ್ರಿಯೆಯನ್ನು ಸಂಪೂರ್ಣವಾಗಿ ಮುಂದೆ ಪ್ರತಿಪಾದನ ಮಾಡುವೆವು. ಈ ರೀತಿಯಿಂದ.

೧. ಚಿದಾಭಾಸ ಸಹಿತ ಅಂತಃಕರಣದ ವೃತ್ತಿರೂಪ ಜ್ಞಾನದಲ್ಲಿಯಾವ ವೃತ್ತಿಭಾಗ ವಿರುವದೋ, ಅದರ ಆವರಣ ಭಂಗರೂಪ ಫಲವು ಚೇತನದಲ್ಲಿದೆ.

೨. ಚಿದಾಭಾಸ ಭಾಗದ ಪ್ರಕಾಶರೂಪ ಫಲವು ರಜ್ಜುವಿನಲ್ಲಿದೆ.

ಈ ಕಾರಣದಿಂದ ವೃತ್ತಿಜ್ಞಾನದ ಕೇವಲ ಜಡ ರಜ್ಜುವು ವಿಷಯವಲ್ಲ. ಆದರೆ ಅಧಿಷ್ಠಾನ ಚೇತನ ಸಹಿತ ರಜ್ಜುವು ಸಾಭಾಸವೃತ್ತಿಯ ವಿಷಯವಾಗಿದೆ. ಈ ಕಾರಣದಿಂದ ಸಿದ್ಧಾಂತ ಗ್ರಂಥದಲ್ಲಿ ಉಲ್ಲೇಖಿಸಿರುವದೇನಂದರೆ;- ಅಂತಃಕರಣ ಜನ್ಯವೃತ್ತಿಜ್ಞಾನ ಸರ್ವವು ಬ್ರಹ್ಮವನ್ನೇ ವಿಷಯವನ್ನಾಗಿ ಮಾಡುವದು.

ಈ ಪ್ರಕಾರವಾಗಿ ರುಜ್ಜು ಜ್ಞಾನದಿಂದ ನಿರಾವರಣವಾಗಿ ಸರ್ಪದ ಅಧಿಷ್ಠಾನ ರಜ್ಜುವಿನ ಅವಿಚ್ಛಿನ್ನ ಚೇತನದ ನಿಜಪ್ರಕಾಶದಿಂದ ಭಾಸವಾಗುತ್ತದೆ. ಈ ಕಾರಣದಿಂದ ರಜ್ಜುವಿನ ಜ್ಞಾನವೇ ಸರ್ಪದ ಅಧಿಷ್ಠಾನದ ಜ್ಞಾನವಾಗಿರುವದು, ಇದರಿಂದ ಸರ್ಪದ ನಿವೃತ್ತಿಯು ಸಂಭವಿಸುತ್ತದೆ.

## ॥೧೩೯॥ ಆಕ್ಷೇಪ ರಜ್ಜು ಜ್ಞಾನದಿಂದ ಸರ್ಪಜ್ಞಾನದ ನಿವೃತ್ತಿಯು ಸಂಭವಿಸುವದಿಲ್ಲ.

ಅನ್ಯಾಕ್ಷೇಪ. ಯದ್ಯಪಿ ಈ ರೀತಿಯಿಂದ ಸರ್ಪದನಿವೃತ್ತಿಯುರಜ್ಜುವಿನ ಜ್ಞಾನದಿಂದ ಸಂಭವಿಸುತ್ತದೆ. ತಥಾಪಿ ಸರ್ಪಜ್ಞಾನದ ನಿವೃತ್ತಿಯು ಸಂಭವಿಸುವದಿಲ್ಲ. ಯಾಕಂದರೆ ಸರ್ಪದ ಅಧಿಷ್ಠಾನ ರಜ್ಜು ಅವಿಚ್ಛಿನ್ನ ಚೇತನವದೆ. ಮತ್ತು ಸರ್ಪಜ್ಞಾನದ ಅಧಿಷ್ಠಾನ ಸಾಕ್ಷೀಚೇತನವದೆ, ಪೂರ್ವ

ದಲ್ಲಿ ಹೇಳಿವ ಪ್ರಕಾರದಿಂದ ರಜ್ಜು ಜ್ಞಾನದಿಂದ ರಜ್ಜು ಅವಿಚ್ಛಿ ನಪ ಭಾನವೂ ಆಗುವದು. ಸಾಕ್ಷೀಚೇತನದ್ದು ಅಲ್ಲ. ಈ ಕಾರಣ ಜ್ಜುವಿನ ಜ್ಞಾನವಾದರೂ ಸಹ ಸರ್ಪಜ್ಞಾನಾಧಿಷ್ಠಾನ ಸಾಕ್ಷೀ ಚೈತ ಅಜ್ಞಾತವದೆ. ಮತ್ತು ಅಜ್ಞಾತ ಅಧಿಷ್ಠಾನದಲ್ಲಿ ಕಲ್ಪಿತದ ನಿವೃ ಆಗುವದಿಲ್ಲ;-ಆದರೆ ಜ್ಞಾತ ಅಧಿಷ್ಠಾನದಲ್ಲಿ ಕಲ್ಪಿತದ ನಿವೃತ್ತಿಯು ತ್ತದೆ. ಈ ಪ್ರಕಾರ ರಜ್ಜು ಜ್ಞಾನದಿಂದ ಸರ್ಪಜ್ಞಾನದ ನಿವೃತ್ತಿಯು ಭವಿಸುವದಿಲ್ಲ.

||೧೪೦|| ಇದರ ಸಮಾಧಾನ ಸರ್ಪದ ಅಭಾವದಿಂದ ಸ ಜ್ಞಾನದ ನಿವೃತ್ತಿಯು ಅಗುವದು ||೧೪೦--೫೪

ಸಮಾಧಾನವೇನಂದರೆ;-ಜ್ಞಾನವು ವಿಷಯಾಧೀನವಾಗಿದೆ ವಿಷಯವಾದ ಯಾವ ಸರ್ಪ, ಇದರ ನಿವೃತ್ತಿಯಾದ ಕೂಡಲೆ ವಿ ಅಭಾವದಿಂದ ಸರ್ಪಜ್ಞಾನವು ತನ್ನಷ್ಟಕ್ಕೆ ತಾನೇ ನಿವೃತ್ತವಾಗುತ್ತ

||೧೪೧|| ಹೀಗೆ ಅಂದರೆ-ಕಲ್ಪಿತದ ನಿವೃತ್ತಿಯು ಅಧಿಷ್ಠಾನ ನದ ಹೊರ್ತು ಆಗುವದಿಲ್ಲ, ಮತ್ತು ಸರ್ಪದ ಜ್ಞಾನವೂ ಸಹ ಕ ಗಿದೆ, ಇದರ ಅಧಿಷ್ಠಾನವು ಸಾಕ್ಷೀ ಚೇತನವದೆ. ಇದರ ಜ್ಞಾನ ಹೊರ್ತು ಕಲ್ಪಿತ ಸರ್ಪಜ್ಞಾನ ನಿವೃತ್ತಿಯು ಸಂಭವಿಸುವದಿಲ್ಲ.

೧೪೨ ಇದರ ಸಮಾಧಾನ ನಿವೃತ್ತಿಯು ಎರಡುಪ್ರಕಾ ವಾಗಿರುವದು.

೧. ಒಂದು ಆತ್ಯಂತ ನಿವೃತ್ತಿಯು.

೨. ಎರಡನೇದು ಕಾರಣದಲ್ಲಿ ಕಾರ್ಯದ ಲಯ.

ಕಾರಣಸಹಿತ ಕಾರ್ಯದ ನಿವೃತ್ತಿಯು ಅತ್ಯಂತ ನಿವೃತ್ತಿಯೆ ಸುವದು. ಎಲ್ಲ ಕಲ್ಪಿತವಸ್ತುಗಳ ಕಾರಣವು ಅಧಿಷ್ಠಾನದ ಆಶ್ರಿತ ನವದೆ.

೧. ಆ ಅಜ್ಞಾನಸಹಿತ ಕಲ್ಪಿತಕಾರ್ಯದ ನಿವೃತ್ತಿಯು ಅ ಜ್ಞಾನದಿಂದ ಆಗುವದು.

೨. ಆದರೆ ಕಾರಣದಲ್ಲಿ ಲಯರೂಪ ಯಾವ ನಿವೃತ್ತಿಯು ಅದು ಅಧಿಷ್ಠಾನ ಜ್ಞಾನವಾಗುವದು.

ಹೇಗೆ ಸುಷುಪ್ತಿ ಮತ್ತು ಪ್ರಲಯದಲ್ಲಿ ಸರ್ವಪದಾರ್ಥಗಳ ಅಜ್ಞಾನದಲ್ಲಿ ಅಧಿಷ್ಠಾನಜ್ಞಾನದವಿಲ್ಲದಿದ್ದರೂ ಆಗುವದು. ಆ ಕಾಲ ಪದಾರ್ಥಗಳ ಲಯದಲ್ಲಿ ನಿಮಿತ್ತ ಭೋಗದ ಸನ್ಮುಖಕರ್ಮದ ಅ



ದರಂತೆ ಅಧಿಷ್ಠಾನದ ಸಾಕ್ಷಿಯ ಜ್ಞಾನದ ಹೊರ್ತು ಸರ್ಪಜ್ಞಾನದ ಲಯ ವಾಗುತ್ತದೆ. ಇಲ್ಲಿ ಸರ್ಪಜ್ಞಾನದ ವಿಷಯವಾದ ಯಾವ ಸರ್ಪವಿರುವ ದೋ ಆದರ ಅಭಾವವು ಸರ್ಪಜ್ಞಾನದ ಲಯದಲ್ಲಿ ನಿಮಿತ್ತವಾಗಿದೆ.

ಈ ಪ್ರಕಾರದಿಂದ ಸರ್ಪದ ನಿವೃತ್ತಿಯು ರಜ್ಜು ಜ್ಞಾನದಿಂದ ಆಗು ವಲ್ಲದೆ ಸರ್ಪಜ್ಞಾನದ ವಿಷಯವು ಯಾವ ಸರ್ಪವೋ, ಅದರ ಅಭಾವ ದಿಂದ ಸರ್ಪಜ್ಞಾನದ ಲಯವಾಗುವದು.

೧೪೩|| ರಜ್ಜುಜ್ಞಾನ ಸಮಯದಲ್ಲಿ ಸಾಕ್ಷಿಯಭಾನವಾಗುವದು.

ಅಥವಾ ಸರ್ಪ ಮತ್ತು ಅದರ ಜ್ಞಾನ, ಇವುಗಳ ನಿವೃತ್ತಿಯು ರಜ್ಜು ಜ್ಞಾನದಿಂದ ಆಗುವದು. ಯಾಕಂದರೆ ಯಾವಾಗ ರಜ್ಜುವಿನ ಪ್ರತ್ಯಕ್ಷಜ್ಞಾ ನವಾಗುವದೋ, ಆಗ ಅಂತಃಕರಣದ ವೃತ್ತಿಯು ನೇತ್ರದ್ವಾರದಿಂದ ಹೊರ ಬಿದ್ದು ರಜ್ಜು ದೇಶದಲ್ಲಿ ಪ್ರಾಪ್ತವಾಗುವದು. ಆಗ ರಜ್ಜು ಸಮಾನ ವೃತ್ತಿ ಯು ಆಕಾರವಾಗುವದು. ಈ ಕಾರಣದಿಂದ ರಜ್ಜುವಿನ ಪ್ರತ್ಯಕ್ಷಜ್ಞಾನಕಾಲ ದಲ್ಲಿ ವೃತ್ತ್ಯುಪಹಿತ ಚೈತನ್ಯ, ಮತ್ತು ರಜ್ಜು ಉಪಹಿತ ಚೈತನ್ಯ, ಈ ಎರ ಡೂ ಏಕವಾಗುವವು. ಅವುಗಳಲ್ಲಿ ಭೇದವುಳಿಯುವದಿಲ್ಲ. ಇದರಲ್ಲಿ ಉದ್ದೇ ಶವೇನಂದರೆ;-ಚೇತನದ ಸ್ವರೂಪದಿಂದ ಅಭೇದವು ಎಲ್ಲಿಯೂ ಇರುವದಿಲ್ಲ. ಆದರೆ ಉಪಾಧಿಯ ಭೇದದಿಂದ ಚೇತನದ ಭೇದವಾಗಿದೆ.

ವೃತ್ತ್ಯುಪಹಿತ ಚೇತನ ಮತ್ತು ರಜ್ಜು ಉಪಹಿತ ಚೇತನದ ಭೇದಕ ಉಪಾಧಿಯು ವೃತ್ತಿ ಮತ್ತು ರಜ್ಜುವಾಗಿರುವದು.

೧. ಆ ವೃತ್ತಿ ಮತ್ತು ರಜ್ಜುಗಳಿಂದ ಭಿನ್ನಭಿನ್ನವಾದ ದೇಶದಲ್ಲಿ ಸ್ಥಿತವಾಗಿರಲು, ಉಪಾಧಿಯುಕ್ತ ಚೇತನದ ಭೇದವಾಗುವದು.

೨. ಎರಡೂ ಉಪಾಧಿಗಳು ಒಂದೇ ದೇಶದಲ್ಲಿ ಸ್ಥಿತವಾಗಿರಲು ಆಗ ಉಪಹಿತ ಚೇತನದ ಭೇದವು ಸಂಭವಿಸುವದಿಲ್ಲ.

ಈ ಪ್ರಸಂಗವು ವೇದಾಂತ ಪರಿಭಾಷಾದಿ ಗ್ರಂಥಗಳಲ್ಲಿ ಉಲ್ಲೇಖಿ ಸಲ್ಪಟ್ಟಿರುವದು.

೧. ಭಿನ್ನದೇಶದಲ್ಲಿ ಸ್ಥಿತವಾದ ಉಪಾಧಿಯಿಂದಲೆ ಉಪಹಿತ ಚೇತ ನದ ಭೇದವಾಗಿದೆ.

೨. ಒಂದೇ ದೇಶದಲ್ಲಿ ಯಾವಾಗ ಎರಡೂ ಉಪಾಧಿಗಳು ಸ್ಥಿತವಾ ಗುವವೋ, ಆಗ ಎರಡೂ ಉಪಹಿತ ಚೈತನಗಳು ಒಂದೇಯಾಗುವವು.

ಈ ಪ್ರಕಾರ ರಜ್ಜುವಿನ ಪ್ರತ್ಯಕ್ಷ ಜ್ಞಾನಕಾಲದಲ್ಲಿ ರಜ್ಜು ಉಪಹಿತ

ಚೈತನ್ಯ ಮತ್ತು ವೃತ್ತ್ಯುಪಹಿತ ಚೈತನ್ಯ ಇವುಗಳು ಒಂದೇಯಾಗು ಆಗ ಸಾಕ್ಷೀಚೈತನ್ಯವೇವೃತ್ತ್ಯುಪಹಿತ ಚೈತನ್ಯವಾಗುವದು. ಯಾಕ ಅಂತಃಕರಣ ಮತ್ತು ಅದರ ವೃತ್ತಿಯಲ್ಲಿ ಸ್ಥಿತವಾದ ಆಭಾಸ ಈ ಸ್ವ ಪ್ರಕಾಶಕ ಚೈತನ್ಯವನ್ನು ಮಾತ್ರ ಸಾಕ್ಷೀ ಎನ್ನಬೇಕು. ಈ ರೀತಿಯ ರಜ್ಜು ಜ್ಞಾನಕಾಲದಲ್ಲಿ ಸಾಕ್ಷೀ ಚೈತನ್ಯ ಮತ್ತು ರಜ್ಜು ಉಪಹಿತ ಚೈ ನದ ಅಭೇದವಾಗುವದು.

೧. ರಜ್ಜು ಜ್ಞಾನದಿಂದ ರಜ್ಜು ಉಪಹಿತ ಚೈತನ್ಯದ ಭಾ ಗುವದು.

೨. ರಜ್ಜು ಉಪಹಿತ ಚೈತನ್ಯದಿಂದ ಅಭಿನ್ನವಾದ ಯಾವ ಸಾಕ್ಷಿ ಭಾನವಿರುವುದೋ ಅದು ರಜ್ಜು ಜ್ಞಾನದಿಂದ ಆಗುವದು.

ಈ ಪ್ರಕಾರವಾಗಿ ರಜ್ಜು ಜ್ಞಾನ ಸಮಯದಲ್ಲಿ ಅಧಿಷ್ಠಾನ ಸ ಯ ಭಾನವುಂಟಾಗುವದರಿಂದ ಕಲ್ಪಿತ ಸರ್ಪಜ್ಞಾನದ ನಿವೃತ್ತಿಯು ವಿಸುವದು.

||೧೮೪|| ಸರ್ವತ್ರಿಪುಟಗಳ ಜ್ಞಾನದಲ್ಲಿ ಸಾಕ್ಷಿಯು ಜ್ಞಾನವಾಗು ಇಲ್ಲವೇ ಕೂಟಸ್ಥದೀಪದಲ್ಲಿ ವಿದ್ಯಾರಣ್ಯಸ್ವಾಮಿಗಳು ಈ ಪ್ರಕ್ರಿಯೆ ಹೇಳಿದ್ದಾರೆ ಅದರಂತಾಗುವುದು.

೧. ಆಭಾಸ ಸಹಿತ ಅಂತಃ ಕರಣದ ವೃತ್ತಿಯು ಇಂದ್ರಿಯ ದಿಂದ ಹೊರಟು ಘಟಾದಿಕ ವಿಷಯಗಳನ್ನು ಪ್ರಕಾಶಿಸುವದು.

೨. ಘಟಾದಿಕ ವಿಷಯ ಆಭಾಸ ಸಹಿತ ವೃತ್ತಿರೂಪ ಜ್ಞಾ ಭಾಸ ಸಹಿತ ಅಂತಃಕರಣ ರೂಪ ಜ್ಞಾತಾ, ಈ ಮೂವರನ್ನೂ ಸಾಕ್ಷಿ ಪ್ರಕಾಶಿಸುವದು.

೧. "ಇದು ಘಟವದೆ" ಎಂಬ ಈ ರೀತಿಯಿಂದ ಆಭಾಸ ಸಹಿ ತ್ತಿಯಿಂದ ಘಟ ಮಾತ್ರದ ಪ್ರಕಾಶನಾಗುವದು.

೨. "ನಾನು ಘಟವನ್ನು ತಿಳಿದೆನು" ಎಂಬ ಈ ರೀತಿಯಿಂದ,

(೧) ನಾನು ಎಂಬ ಶಬ್ದದ ಅರ್ಥವು ಜ್ಞಾತಾ ಮತ್ತು, (೨) ಜ್ಞೇಯ ಮತ್ತು (೩) ಅದರ ಜ್ಞಾನ ಈ ತ್ರಿಪುಟಗಳ ಸಾಕ್ಷಿಯಿಂದ ಕಾಶವಾಗುವದು.

ಈ ಪ್ರಕಾರವಾಗಿ ಸರ್ವತ್ರಿಪುಟಗಳ ಪ್ರಕಾಶಕವು ಸಾಕ್ಷಿಯು

ಸಾಕ್ಷಿಯು ತಾನು ಅಜ್ಞಾತವಾದರೆ, ತ್ರಿಪುಟಿಯ ಜ್ಞಾನವು ಯಿಂದ ಆಗಲಾರದು. ಈ ಕಾರಣದಿಂದ ಸರ್ವತ್ರಿಪುಟಗಳ ಜ್ಞಾನ ಕ್ಷಿಯ ಜ್ಞಾನವು ಅವಶ್ಯಕವಾಗಿರುವದು.



ಈ ಸಾಕ್ಷೀ ಜ್ಞಾನದಿಂದ ಸರ್ಪಜ್ಞಾನದ ನಿವೃತ್ತಿಯು ಸಂಭವಿಸುವದು. ಈ ಪೂರ್ವ ರೀತಿಯಿಂದ ಸರ್ಪ ಮತ್ತು ಅದರ ಜ್ಞಾನದ ಅಧಿಷ್ಠಾನವು ಭಿನ್ನಭಿನ್ನವಾಗಿ ಹೇಳಲ್ಪಟ್ಟಿತು. ಆದರೆ ಈ ಪಕ್ಷವಿಷಯದಲ್ಲಿ ಶಂಕಾ ಸಮಾಧಾನರೂಪ ವಿವಾದವು ಬಹಳವಿರುವದು ಈ ಕಾರಣದಿಂದ

||೧೮೫|| ಸರ್ಪ ಮತ್ತು ಅದರಜ್ಞಾನದ ಅಧಿಷ್ಠಾನವು ಸಾಕ್ಷಿಯಾಗಿರುವದು. ||೧೮೫-೧೮೬||

ಸರ್ಪ ಮತ್ತು ಅದರ ಜ್ಞಾನದ ಅಧಿಷ್ಠಾನವು ಒಂದೇಯಾಗಿರುವದು, ಎಂಬ ಪಕ್ಷವನ್ನು ಹೇಳಿರುವದು.

ಬಾಹ್ಯದಲ್ಲಿ ಯಾವ ರಜ್ಜು ಚೈತನ್ಯವದೆಯೋ, ಅದ್ದರಿಂದ ಆ ಸರ್ಪ ಮತ್ತು ಅದರ ಜ್ಞಾನದ ಅಧಿಷ್ಠಾನವೆನ್ನಬೇಕು; ಅಂದರೆ ಇದು ಸಂಭವಿಸುವದಿಲ್ಲ. ಕಾರಣವೇನಂದರೆ:—

೧. ಎಷ್ಟು ಜ್ಞಾನವಾಗುತ್ತದೋ ಅಷ್ಟು ಪ್ರಮಾತಾ ಅಥವಾ ಸಾಕ್ಷಿಯ ಆಶ್ರಿತವಾಗುತ್ತದೆ. ಇದರಿಂದ ಬಾಹ್ಯರಜ್ಜು ಚೈತನ್ಯಾಶ್ರಿತ ಜ್ಞಾನವು ಸಂಭವಿಸುವದಿಲ್ಲ.

೨. ಇದರಂತೆ ಸರ್ಪ ಮತ್ತು ಅದರಜ್ಞಾನದ ಅಧಿಷ್ಠಾನವೇ ಅಂತಃಕರಣ ಉಪಹಿತಸಾಕ್ಷಿ ಚೈತನ್ಯವೆಂದು, ಅಂದರೆ ಶರೀರದಲ್ಲಿಯ ಅಂತಃಕರಣ ದೇಶದಲ್ಲಿ ಸರ್ಪದ ಪ್ರತೀತಿಯು ಇರಬೇಕು. ರಜ್ಜುದೇಶದಲ್ಲಿ ಸರ್ಪ ಪ್ರತೀತಿಯು ಬಹಿರಂಗದಲ್ಲಿ ಮಾಯಾಬಲದಿಂದ ತಿಳಿಯಲು ಆತ್ಮಖ್ಯಾತಿ ಮತವು ಸಿದ್ಧವಾಗುವದು. ಈ ರೀತಿಯಿಂದ—

೧. ರಜ್ಜು ಉಪಹಿತ ಚೇತನ ಜ್ಞಾನದ ಅಧಿಷ್ಠಾನವು ಸಂಭವಿಸುವದಿಲ್ಲ.

೨. ಅಂತಃಕರಣ ಉಪಹಿತಚೇತನ ಸರ್ಪದ ಅಧಿಷ್ಠಾನವು ಸಂಭವಿಸುವದಿಲ್ಲ. ಈ ಕಾರಣದಿಂದ ಸರ್ಪ, ಮತ್ತು ಅದರ ಜ್ಞಾನದ ಅಧಿಷ್ಠಾನವು ಒಂದೇಯಾಗಿದೆ ಎಂಬ ಪ್ರತಿಪಾದನವು ಸಿದ್ಧವಾಗುವದಿಲ್ಲ.

ತಥಾಪಿ ರಜ್ಜುವಿನ ಸಮೀಪದಲ್ಲಿ ಪ್ರಾಪ್ತವಾದ ಅಂತಃಕರಣದ ಇದಮಾಕಾರವೃತ್ತಿ, ಇದರಲ್ಲಿ ಸ್ಥಿತವಾಗಿದ್ದ ಚೇತನಾಶ್ರಿತ ಅವಿದ್ಯೆಯು ಸರ್ಪಾಕಾರ ಮತ್ತು ಜ್ಞಾನಾಕಾರ ಪರಿಣಾಮವನ್ನು ಹೊಂದುವದು.

೧. ವೃತ್ತ್ಯುಪಹಿತ ಚೇತನದಲ್ಲಿ ಸ್ಥಿತವಾದ ಅವಿದ್ಯೆಯ ತಮೋ

ಗುಣಾಂಶವು ಸರ್ಪದ ಉಪಾದಾನಕಾರಣವಾಗಿದೆ.

೨. ಇದರಲ್ಲಿಯೇ ಸ್ಥಿತವಾದ ಸತ್ವಗುಣಾಂಶವು ಸರ್ಪಜ್ಞಾ… ಉಪಾದಾನ ಕಾರಣವಾಗಿದೆ. ಸರ್ಪ ಮತ್ತು ಅದರ ಜ್ಞಾನವ ವೃತ್ತಿ… ಉಪಹಿತ ಚೇತನವೂ ಅಧಿಷ್ಠಾನವದೆ.

೧. ವೃತ್ತಿಯು ರಜ್ಜುದೇಶದಿಂದ ಹೊರಗೆ ಹೋದಕಾರಣ… ವೃತ್ತ್ಯುಪಹಿತ ಚೇತನವೂ ಹೊರಗೇ ಅದೆ. ಈ ಕಾರಣದಿಂದ ಸರ್ಪ… ಆಶ್ರಯವಾಗಿದೆ.

ಅಂತಃಕರಣದ ಸ್ವರೂಪವು ಎಷ್ಟುವಿಧವೋ, ಅಷ್ಟು ಸಾಕ್ಷಿಯ… ರೂಪವಿರುವವು. ಶರೀರದಲ್ಲಿ ಸ್ಥಿತ ಅಂತಃಕರಣವೇ ವೃತ್ತಿಸ್ವರೂಪ ವಿಷ… ಮುವನ್ನು ಹೊಂದುತ್ತದೆ. ಈ ಕಾರಣದಿಂದ ವೃತ್ತಿ ಉಪಹಿತ ಚೇತನ… ಕ್ಷಿಯಾಗಿದೆ. ಈ ಕಾರಣದಿಂದ ಜ್ಞಾನದ ಆಶ್ರಯವು ಸಂಭವಿಸುತ್ತ…

ರಜ್ಜುವಿನ ಸಾಕ್ಷಾತ್ಕಾರವು ಯಾವಾಗ ಆಗುವದೋ ಆಗ ರಜ್ಜು… ತನ ಮತ್ತು ವೃತ್ತಿಚೇತನ ಇವೆರಡೂ ಏಕವಾಗುವವು. ಈ ಕಾರಣ… ರಜ್ಜುಜ್ಞಾನದಿಂದ ಸರ್ಪವು ಮತ್ತು ಅದರ ಜ್ಞಾನದ ನಿವೃತ್ತಿಯು ಸ… ವಿಸುತ್ತದೆ,

॥೧೪೬॥ ಯಾವಾಗ ಒಂದೇ ರಜ್ಜುವಿನಲ್ಲಿ ಹತ್ತು ಮಂದಿಗೆ … ಬೇರೆ ವಿಧವಾಗಿ ಒಬ್ಬನಿಗೆ ಸರ್ಪ, ಒಬ್ಬನಿಗೆ ದಂಡ, ಒಬ್ಬನಿಗೆ ಪೂಮಾ… ಒಬ್ಬನಿಗೆ ಪೃಥ್ವಿಯರೇಖ, ಒಬ್ಬನಿಗೆ ಜಲಧಾರೆ, ಈ ರೀತಿಯಿಂದ ಭಿನ್ನ… ವಾಗಿ ಪ್ರತೀತವಾಗುತ್ತದೆ. ಅಥವಾ ಸರ್ವರಿಗೂ ಸರ್ಪವೇ ಪ್ರತೀತ… ಗುವದೋ, ಆಗ ಅವನ ವೃತ್ತಿಚೈತನ್ಯದಲ್ಲಿ ಕಲ್ಪಿತ ಅಧ್ಯಾಸದ ನಿ… ಯಾಗುವದು. ಯಾವನಿಗೆ ರಜ್ಜುಜ್ಞಾನವಾಗುವದಿಲ್ಲವೋ, ಅವನ ಅ… ಸದ ನಿವೃತ್ತಿಯು ಆಗುವದಿಲ್ಲ. ಈ ಕಾರಣದಿಂದ ವೃತ್ತಿಚೇತನವೇ ಕ… ತದ ಅಧಿಷ್ಠಾನವಾಗಿದೆ. ರಜ್ಜು ಮೊದಲಾದ ವಿಷಯ ಉಪಹಿತಚೇತನ…

ಒಂದು ಪಕ್ಷದಲ್ಲಿ ರಜ್ಜು ಉಪಹಿತ ಚೇತನವನ್ನೇ ಸರ್ಪದಂಡಾದಿ… ಅಧಿಷ್ಠಾನವೆಂದು ತಿಳಿದರೆ, ಹತ್ತು ಮಂದಿಗೆ ಪ್ರತೀತವಾದ ಯಾವ ಹ… ಪದಾರ್ಥಗಳುಂಟೊ ಅದು ಪ್ರತಿಯೊಬ್ಬನಿಗೂ ಪ್ರತೀತವಾಗಬೇಕು. ಮ… ನಮ್ಮ ರೀತಿಯಿಂದ ಯಾವನ ವೃತ್ತಿಯಲ್ಲಿ ಯಾವ ಪದಾರ್ಥವು ಕಲ್ಪಿತ… ಗುವದೋ ಅದೇ ಅವನಿಗೆ ಪ್ರತೀತವಾಗುವದು, ಅನ್ಯರಿಗೆ ಆಗುವದಿಲ್ಲ.

ಈರೀತಿಯಿಂದ ಬಾಹ್ಯಸರ್ಪಾದಿಕ ಮತ್ತು ಅವುಗಳಜ್ಞಾನದ ವೃ…



…ಉಪಹಿತ ಸಾಕ್ಷಿಯು ಅಧಿಷ್ಠಾನವಾಗಿದೆ. ಸ್ವಪ್ನದ ಪದಾರ್ಥ, ಮತ್ತು …ಅವುಗಳ ಜ್ಞಾನವುಸಹ ಅಂತಃಕರಣ ಉಪಹಿತಸಾಕ್ಷಿಯೇ ಅಧಿಷ್ಠಾನವದೆ.

ಈ ಪ್ರಕಾರದಿಂದ ಸತ್ ಅಸತ್ತಿನಿಂದ ವಿಲಕ್ಷಣ ಅನಿರ್ವಚನೀಯ ಅವಿ…ದ್ಯೆಯ ಪರಿಣಾಮ, ಅನಿರ್ವಚನೀಯ, ಸರ್ಪಾದಿಕ ಇವುಗಳ ಖ್ಯಾತಿ ಅಂದರೆ

೬

…ಪ್ರತೀತಿ ಮತ್ತು ಕಥನ ಇವುಗಳಿಗೇ ಅನಿರ್ವಚನೀಯ ಖ್ಯಾತಿ ಎನ್ನಬೇಕು.

…ಟಿಪ್ಪಣಿ—[೧] ಇದರ ವಿಶೇಷ ಕಥನವನ್ನೂ ಮತ್ತು ಖಂಡನವನ್ನೂ ವೃತ್ತಿರತ್ನಾವಳಿಯ ತ್ರಯೋದಶ ರತ್ನದಲ್ಲಿಯೂ, ಮತ್ತು ವೃತ್ತಿಪ್ರಭಾಕರದ ಸಪ್ತಮ ಪ್ರಕಾಶದಲ್ಲಿಯೂ ಮಾಡಿದ್ದಾರೆ.

೨. ಸೂರ್ಯ ಮೊದಲಾದ ಜ್ಯೋತಿಗಳು.

೩. ತಿಮಿರ ಈ ಶಬ್ದದಿಂದ ಕಿಂಚಿತ್ ಅಂಧಕಾರವನ್ನು ಸಹ ಗ್ರಹಣಮಾಡಲಿಕ್ಕೆ …ಬರುತ್ತದೆ. ಯಾಕೆಂದರೆ ನಿರ್ದೋಷವಾದ ನೇತ್ರವುಳ್ಳವನಿಗೆ ಸ್ಪಷ್ಟಪ್ರಕಾಶದಲ್ಲಿ ರಜ್ಜು ಮೊದಲಾದ ಅಧಿಷ್ಠಾನದ ವಿಶೇಷರೂಪದ ಅಜ್ಞಾನವುಆಗುವದಿಲ್ಲ. ಮತ್ತು ಗಾಢಾಂಧಕಾರದಲ್ಲಿ ಅಧಿಷ್ಠಾನದ ಸಾಮಾನ್ಯರೂಪ ಇದರಂತೆ ಜ್ಞಾನವಾಗುವದಿಲ್ಲ. ಮತ್ತು ಅಧಿಷ್ಠಾನದ ವಿಶೇಷರೂಪದ ಅಜ್ಞಾನದ ಹೊರ್ತು ಮತ್ತು ಸಾಮಾನ್ಯ ರೂಪದ ಜ್ಞಾನದ ಹೊರ್ತು ಅಧ್ಯಾಸವಾಗುವದಿಲ್ಲ. ಈ ಸಂಗತಿಯನ್ನು ಇದೇ ಗ್ರಂಥದ ದ್ವಿತೀಯ ತರಂಗದಲ್ಲಿ ವಿವರಿಸಿರುವದು. ಮತ್ತು ಕಿಂಚಿತ್ ಅಂಧಕಾರದಲ್ಲಿ ವಿಶೇಷರೂಪದ ಅಜ್ಞಾನ, ಮತ್ತು ಸಾಮಾನ್ಯ ರೂಪದ ಜ್ಞಾನ, ಈ ಎರಡೂ ಸಂಭವಿಸುವವು. ಈ ಕಾರಣದಿಂದ ನೇತ್ರದ ವಿಷಯಗತ ಅಧ್ಯಾಸದಲ್ಲಿಕಿಂಚಿತ್ ಅಂಧಕಾರದ ಅಪೇಕ್ಷೆಯುಂಟಾಗುವದರಿಂದ ಅದು ಸಹ ಗ್ರಹಣವದೆ. ಮತ್ತು ನೇತ್ರದ ಮಂದತ್ವರೂಪ ತಿಮಿರದೋಷವು ಸಹ ಗ್ರಹಣವದೆ. ಈ ಎರಡರಲ್ಲಿ ಒಂದು ಯಾವಾಗ ಉಂಟಾಗುವದೋ ಆಗ ಭ್ರಮೆಯುಂಟಾಗುವದು. ಮತ್ತು ಆದಿ ಶಬ್ದದಿಂದ ಕಾಮಿಣಿ ಮೊದಲಾದ ನೇತ್ರರೋಗಗಳ ಗ್ರಹಣವೂ ಅದೆ.

೪. ಇಲ್ಲಿ ಈ ಆಕ್ಷೇಪವುಂಟು,—ಸತ್'ಕ್ಕಿಂತ ವಿಲಕ್ಷಣವಾದದ್ದು 'ಅಸತ' ಇದಕ್ಕೆ "ಅಸತ್"ಕ್ಕಿಂತ ವಿಲಕ್ಷಣವೆಂಬುವದು ವಿರುದ್ಧವಾದದ್ದು. ಮತ್ತು ಅಸತ್ಕ್ಕಿಂತ ವಿಲಕ್ಷಣವಾದದ್ದು 'ಸತ' ಇದಕ್ಕೆ ಸತ' ಕ್ಕಿಂತ ವಿಲಕ್ಷಣವೆಂಬುವದು ವಿರುದ್ಧವಾದದ್ದು ಮತ್ತು ಸತ', ಅಸತ'ಗಳಿಗಿಂತ ಭಿನ್ನವಾದ ತೃತೀಯ ಪದಾರ್ಥದ ಅಭಾವವಿರುವದು. ಈ ಕಾರಣದಿಂದ ಅನಿರ್ವಚನೀಯ ಶಬ್ದದ ಅರ್ಥದ ಉಪಲಬ್ಧವಿರುವದಿಲ್ಲ, ಈ ಆಕ್ಷೇಪಣೆಗೆ ಸಮಾಧಾನವೇನಂದರೆ—೧. ತ್ರಿಕಾಲ ಅಬಾಧ್ಯವಾದದ್ದು ಸತ' ಎಂದುಹೇಳಿದೆ. ಇದಕ್ಕೆ ವಿಲಕ್ಷಣವೆನ್ನುವದರಿಂದ ಬಾಧಯೋಗ್ಯದ ಗ್ರಹಣವದೆ.

೨. ಸ್ವರೂಪಹೀನ ವಂಧ್ಯಾಪುತ್ರಾದಿಗಳು "ಅಸತ್, ಎಂದು ಹೇಳಿದೆ. ಇ ವಿಲಕ್ಷಣವೆನ್ನುವದರಿಂದ ಸ್ವರೂಪವಂತನೆಂದು ಗ್ರಹಣವದೆ.

ಈ ಕಾರಣದಿಂದ ಬಾಧಯೋಗ್ಯ ಸ್ವರೂಪವಂತನು ಅನಿರ್ವಚನೀಯ
ರ್ಥವು, ಇದರಂತೆ ಪ್ರಪಂಚ ಮತ್ತು ರಜ್ಜು ಸರ್ಪಾದಿಗಳಿರುವವು.
ಉಪಲಬ್ಧ ಅಂದರೆ ಪ್ರತೀತಿಯು ವೇದಾಂತನಿಪುಣ ಪಂಡಿತರಿಗೆ ಉ
ಗುವದು.

೫. ಈ ಪ್ರಕ್ರಿಯೆಯನ್ನು ಮುಂದೆ ಇದೇ ಚತುರ್ಥರಂಗದ ೧೮೭ನೇ ಅಂ
ವಿಷಯದಲ್ಲಿ ನಿರೂಪಣ ಮಾಡುವವು.

೬. ಅನಿರ್ವಚನೀಯ ಖ್ಯಾತಿಯ ಕಿಂಚಿತ್ ಕಥನವನ್ನು ವೃತ್ತಿರತ್ನಾ
ಅಷ್ಟಮ ರತ್ನದಲ್ಲಿ ಮಾಡಲ್ಪಟ್ಟದೆ. ಮತ್ತು ಅದರ ಸವಿಸ್ತರ ಪಿ
ವನ್ನು ವೃತ್ತಿಪ್ರಭಾಕರದ ಸಪ್ತಮ ಪ್ರಕಾಶದಲ್ಲಿ ಮಾಡಲ್ಪಟ್ಟದೆ.

॥೧೪೭॥ ಪ್ರಶ್ನೆ. ಅಪಾರ ಮಿಥ್ಯಾ ಜಗತ್ತಿನ ಆಧಾರ
ಮತ್ತು ಅಧಿಷ್ಠಾನ ಯಾವನಿರುವನು ?

॥ ಶಿ ಷ್ಯ ಉ ವಾ ಚ ॥

॥ ದೋ ಹಾ ॥

ಯಹ ಮಿಥ್ಯಾ ಪರತೀತ್‌ಹ್ವೈ । ಜಾನ್ಯೈ ಜಗತ ಅಪಾರ ॥
ಸೋ ಭಗವನ ಮೋಕೊ ಕಹೌ । ಕೊ ಯಾಕೊ ಆಧಾರ

ಅರ್ಥ॥ ಈ ದೋಹಾದ ಅರ್ಥವು ಮೇಲಿನ ಪ್ರಶ್ನೆಯಲ್ಲಿರುವದು.॥

ಗತ ಪ್ರಶ್ನೆಯ ಉತ್ತರ. ॥ ೧೪೮—೧೪೯॥
ನೀನು ಇರುವಿ.

॥ ಶ್ರೀ ಗು ರು ರು ವಾ ಚ ॥

॥ ದೋ ಹಾ ॥

ತವ ನಿಜರೂಪ ಅಜ್ಞಾನತೈ । ಹ್ವೈ ಮಿಥ್ಯಾ ಜಗಭಾನ ॥
ಅಧಿಷ್ಠಾನ ಅಧಾರ ತೂ । ರಜ್ಜು ಭುಜಂಗ ಸಮಾನ ॥

ಟೀಕಾ ॥ ಎಲೈ ಶಿಷ್ಯನೇ ! ನಿನ್ನ ಯಾವ ನಿಜರೂಪ ಅಂದರೆ
ಸ್ವರೂಪದಿಂದ ಅಜ್ಞಾನ, ಇವರಿಂದ ಮಿಥ್ಯಾಜಗತ್ತು ಪ್ರತೀತವಾಗು
ಈ ಕಾರಣದಿಂದ ಜಗತ್ತಿನ ಆಧಾರ ಮತ್ತು ಅಧಿಷ್ಠಾನವು ನೀನೇ
ರುವಿ. ಹೀಗೆ ರಜ್ಜುವಿನ ಅಜ್ಞಾನದಿಂದ ಮಿಥ್ಯಾಭುಜಂಗವು ಪ್ರತೀ
ಗುವದು. ಅಲ್ಲಿಮಿಥ್ಯಾಭುಜಂಗದಆಧಾರಮತ್ತು ಅಧಿಷ್ಠಾನರಜ್ಜುವಿ

ಯದ್ಯಪಿ ಮಿಥ್ಯಾಸರ್ಪದಅಧಿಷ್ಠಾನವು ಮುಖ್ಯದ್ವಿತೀಯ ಪಕ್ಷ



ವೃತ್ತ್ಯುಪಹಿತ ಚೇತನವದೆ. ಮತ್ತು ಪ್ರಥಮ ಪಕ್ಷದಲ್ಲಿ ರಜ್ಜು ಉಪಹಿತ
ಚೇತನವದೆ. ಯಾವ ಪಕ್ಷದಲ್ಲಿಯೂ ರಜ್ಜುವು ಅಧಿಷ್ಠಾನವಲ್ಲ.

ತಥಾಪಿ ಪ್ರಥಮ ಪಕ್ಷದ ಚೇತನದಲ್ಲಿ ಅಧಿಷ್ಠಾನತ್ವದ ಉಪಾಧಿಯು
ರಜ್ಜುವದೆ.ಈ ಕಾರಣದಿಂದ ಸ್ಥೂಲದೃಷ್ಟಿಯಿಂದ ರಜ್ಜು ಅಧಿಷ್ಠಾನವೆಂದು
ಹೇಳಿದೆ. ಹೇಗೆ ಮಿಥ್ಯಾಭುಜಂಗದ ಆಧಿಷ್ಠಾನ ಮತ್ತು ಆಧಾರ ರಜ್ಜುವಿ
ನವದೋ, ಹಾಂಗೆ ಮಿಥ್ಯಾಜಗತ್ತಿನ ಅಧಿಷ್ಠಾನ ಮತ್ತು ಆಧಾರವುನೀನೇ
ಆಗಿರುವಿ ? .

॥೧೪೯॥ ಆತ್ಮನ ಸಾಮಾನ್ಯರೂಪವು ಆಧಾರ ಮತ್ತು ವಿಶೇಷ
ರೂಪವು ಅಧಿಷ್ಠಾನ ಅದೆ.

ಈ ಸ್ಥಳದಲ್ಲಿ ಈ ಅಭಿಪ್ರಾಯವಿರುವದು.ರಜ್ಜುವಿನಲ್ಲಿ ಎರಡು ಸ್ವರೂ
ಪಗಳಿರುವವು. (೧) ಸಾಮಾನ್ಯರೂಪ (೨) ವಿಶೇಷರೂಪ.

(೧) ಸಾಮಾನ್ಯ ರೂಪ "ಇದಂ" ಅದೆ.

(೨) ವಿಶೇಷರೂಪ "ರಜ್ಜು" ಅದೆ.

೧. "ಇಲ್ಲಿ ಸರ್ಪವದೆ" ಈ ರೀತಿಯಿಂದ ಮಿಥ್ಯಾಸರ್ಪದಿಂದ ಅಭಿ
ನ್ನವಾಗಿ ಭ್ರಾಂತಿಕಾಲದಲ್ಲಿ ಸಹ ಪತ್ರೀತವಾಗುವದೇ " ಇದಂ ರೂಪ "
ಅದು ಸಾಮಾನ್ಯ ರೂಪವದೆ.

(೨) ಯಾವ ಸ್ವರೂಪವು ಭ್ರಾಂತಿ ಕಾಲದಲ್ಲಿ ಪ್ರತೀತವಾಗುವದಿ
ಲ್ಲವೋ, ಯಾವ ಸ್ವರೂಪದ ಪ್ರತೀತಿಯಾಗುವದರಿಂದ ಭ್ರಾಂತಿಯು ದೂ
ರವಾಗುವದೋ, ಅದು ರಜ್ಜುವಿನ ವಿಶೇಷರೂಪವದೆ.

(೧) ಸತ್ ರೂಪವು ಸಾಮಾನ್ಯರೂಪವೆ.

(೨) ಅಸಂಗತಾ, ಕೂಟಸ್ಥತಾ, ನಿತ್ಯಮುಕ್ತತಾ ಮೊದಲಾದವು
ಗಳು ವಿಶೇಷರೂಪಗಳು.

ಯಾಕಂದರೆ (೧) "ಸ್ಥೂಲ ಸೂಕ್ಷ್ಮ ಸಂಘಾತ"ವದೆ. ಈ ವಾಕ್ಯ
ದಲ್ಲಿ ಸ್ಥೂಲ ಸೂಕ್ಷ್ಮಸಂಘಾತವು ಭ್ರಾಂತಿ ಸಮಯದಲ್ಲಿ ಸಹ ಮಿಥ್ಯಾ
ಸಂಘಾತದಿಂದ ಅಭಿನ್ನವಾಗಿ ಸತ್‌ರೂಪವು ಪ್ರತೀತವಾಗುವದು. ಈ ಕಾ
ರಣದಿಂದ ಆತ್ಮನ ಸತ್‌ಸ್ವರೂಪವು ಸಾಮಾನ್ಯರವಪವದೆ.

(೨) ಸ್ಥೂಲ ಸೂಕ್ಷ್ಮ ಸಂಘಾತವು ಭ್ರಾಂತಿಸಮಯದಲ್ಲಿ ಆತ್ಮನ
ಅಸಂಗಕೂಟಸ್ಥ ನಿತ್ಯಮುಕ್ತ ಸ್ವರೂಪಗಳು ಪ್ರತೀತವಾಗುವದಿಲ್ಲ. ಆದರೆ

ಆತ್ಮನ ಅಸಂಗಾದಿ ಸ್ವರೂಪಗಳು ಪ್ರತೀತವಾಗಲು, ಸಂಘಾತ ಭ್ರಾ ಯು ದೂರವಾಗುವದು. ಈ ಕಾರಣದಿಂದ ಅಸಂಗತಾ ಕೂಟಸ್ಥತಾ, ಮುಕ್ತತಾ, ವ್ಯಾಪಕತಾ, ಮೊದಲಾದವುಗಳು ವಿಶೇಷರೂಪವಾಗಿರುವವು.

(೧) ಸರ್ಪ ಭ್ರಾಂತಿಯಲ್ಲಿ ಸಾಮಾನ್ಯರೂಪವು ಆಧಾರವಾಗಿದೆ.

(೨) ವಿಶೇಷರೂಪವನ್ನು ಅಧಿಷ್ಠಾನವೆನ್ನಬೇಕು.

(೧) ಸರ್ಪದ ಆಶ್ರಯುವಾದ ಯಾವ ರಜ್ಜುವು ಇದರ ಸಾಮಾ "ಇದಂ" ಸ್ವರೂಪವು ಸರ್ಪದ ಆಧಾರವದೆ.

(೨) ವಿಶೇಷ ರಜ್ಜು ಸ್ವರೂಪವು ಅಧಿಷ್ಠಾನವದೆ.

(೧) ಇದರಂತೆ,ಮಿಥ್ಯಾಪ್ರಪಂಚಕ್ಕೆ ಆಶ್ರಯುವಾದ ಯಾವ ಆ ಅವನ ಸಾಮಾನ್ಯ ಸತ್‌ರೂಪವು ಪ್ರಪಂಚದ ಆಧಾರವದೆ.

(೨) ಅಸಂಗತಾದಿ ವಿಶೇಷರೂಪಗಳು ಅಧಿಷ್ಠಾನವಾಗಿದೆ.

ಈ ರೀತಿಯಿಂದ ಆಧಾರ ಮತ್ತು ಅಧಿಷ್ಠಾನಗಳ ಕಿಂಚಿತ್ ಭೇ ವನ್ನು ಸರ್ವಜ್ಞಾತ್ಮ[೧] ನಾಮಕ ಮುನಿಯು ಪ್ರತಿಪಾದನ ಮಾಡಿದ್ದಾನೆ.

ಟಿಪ್ಪಣಿ—೧ ಸಂಕ್ಷೇಪ ಶಾರೀರಕ ನಾಮಕ ಗ್ರಂಥಕರ್ತನು ಶ್ರೀಶಂಕರಾಚಾ ಪೌತ್ರ ಶಿಷ್ಯನು.

||೧೫೦|| ಪ್ರಶ್ನೆ-ಜಗತ್ ದ್ರಷ್ಟೃವು ಆತ್ಮನಿಂದಭಿನ್ನವಾಗಿರುವನೆಂದು ಅನ್ನಲಿಕ್ಕೆ ಬೇಕಲ್ಲವೇ ?

|| ಶಿಷ್ಯ ಉವಾಚ ||

|| ದೋಹಾ ||

ಭಗವನ ಮಿಥ್ಯಾಜಗತಕೊ । ದ್ರಷ್ಟಾಕಹಿಯೆ ಕೌನ ||
ಅಧಿಷ್ಠಾನ ಆಧಾರ ಜೊ। ದ್ರಷ್ಟಾ ಹೋಯು ನ ತೌನ||೫

. ಟೀಕಾ--ಜಗತ್ತಿನ ಆಧಾರ ಮತ್ತು ಅಧಿಷ್ಠಾನ, ಆತ್ಮನಿರುವ ಈ ಕಾರಣದಿಂದ ಜಗತ್ತಿನ ದ್ರಷ್ಟೃವು ಆತ್ಮನಿಂದ ಭಿನ್ನನೆಂದು ಹೇಳ ಬೇಕು. ಹೇಗೆ ಸರ್ಪದ ಆಧಾರ ಮತ್ತು ಅಧಿಷ್ಠಾನವಾದ ರಜ್ಜುವು ದ್ರಷ್ಟೃವಾದ ಪುರುಷನು ಭಿನ್ನನಾಗಿರುವನು. ||೫೨||

|| ಗತಪ್ರಶ್ನೆಯ ಉತ್ತರ ||೧೫೧—೧೫೨||

||೧೫೧|| ಸರ್ವಕಲ್ಪಿತಗಳಿ ಅಧಿಷ್ಠಾನವು ದ್ರಷ್ಟಾ ಆಗಿರುವನು.



|| ಶ್ರೀಗುರು ರುವಾಚ ||

|| ಚೌಪಾಈ ||

ಮಿಥ್ಯಾವಸ್ತು ಜಗತಮೈ ಜೈ ಹೈ ||
ಅಧಿಷ್ಠಾನಮೈ ಕಲ್ಪಿತ ತೆ ಹೈ ||
ಅಧಿಷ್ಠಾನ ಸೋ ದ್ವಿವಿಧ ಪಿಛಾನಹು ।
ಇಕ ಚೇತನ ದೂಜೊ ಜಡ ಜಾನಹು ||೫೩||
ಅಧಿಷ್ಠಾನ ಜಡವಸ್ತು ಜಹಾ ಹೈ ।
ದ್ರಷ್ಟಾ ತಾತೈ ಭಿನ್ನ ತಹಾ ಹೈ ||
ಜಹಾ ಹೊಯ ಚೇತನ ಅಧಾರಾ ।
ತಹಾ ನದ್ರಷ್ಟಾ ಹೋವೈ ನ್ಯಾರಾ ||೫೪||

ಟೀಕಾ-೧ ಎಲ್ಲಿ ಜಡವು ಅಧಿಷ್ಠಾನವಿರುವದೋ, ಅಲ್ಲಿ ಅಧಿಷ್ಠಾನದಿಂದ ಭಿನ್ನದ್ರಷ್ಟಾ ಆಗುವನು. ||೫೩||

೨. ಎಲ್ಲಿ ಚೇತನವು ಅಧಿಷ್ಠಾನವಾಗುವದೋ, ಅಲ್ಲಿ ಅಧಿಷ್ಠಾನವೇದ್ರಷ್ಟಾ ಆಗುವದು. ಭಿನ್ನವಲ್ಲ. ||೫೪||

|| ದೋಹಾ ||

ಚೇತನ ಮಿಥ್ಯಾಸ್ವಪ್ನಕೊ । ಅಧಿಷ್ಠಾನ ನಿರ್ಧಾರ ||
ಸೋ ಈ ದೃಷ್ಟಾ ಭಿನ್ನ ನಹಿ । ತೈಸೆ ಜಗತ ವಿಚಾರ ||೫೫||

ಟೀಕಾ| ಹೇಗೆ| ಸ್ವಪ್ನದ| ಅಧಿಷ್ಠಾನ ಸಾಕ್ಷೀಚೇತನವು ಸ್ವಪ್ನದ ದ್ರಷ್ಟಾವಾಗಿದೆಯೋ ಹಾಗೆ ಜಗತ್ತಿನ ಅತ್ಮನೂ, ಅಧಿಷ್ಠಾನ ಆಗಿರುವನು. ಇವನೇ ದ್ರಷ್ಟಾ ಆಗಿರುವನು. ಈ ಆಕ್ಷೇಪವನ್ನು ಮತ್ತು ಸಮಾಧಾನವನ್ನು ಸ್ಥೂಲ ದೃಷ್ಟಿಯಿಂದ ರಜ್ಜುವಿಗೆ ಸರ್ಪದ ಅಧಿಷ್ಠಾನವನ್ನು ತಿಳಿದುಕೊಂಡು ಹೇಳಿರುವದು. ಅಲ್ಲದೆ ಸಿದ್ಧಾಂತ ಮತದಲ್ಲಿ ಆ ಸರ್ಪದ ಅಧಿಷ್ಠಾನವು ಸಾಕ್ಷೀ ಚೇತನವದೆ; ಇದೇ ದ್ರಷ್ಟಾ ಅದೆ. ಈ ಕಾರಣದಿಂದ ಎಲ್ಲ ಕಲ್ಪಿತಗಳ ಅಧಿಷ್ಠಾನವೂ ದ್ರಷ್ಟಾ ಅದೆ. ಈ ವಿಷಯದಲ್ಲಿ ಶಂಕಾ ಸಮಾಧಾನಗಳು ಸಂಭವಿಸುವದಿಲ್ಲ. ||೫೫||

||೧೫೨|| ಮಿಥ್ಯಾಸಂಸಾರದ ನಿವೃತ್ತಿಯ ಇಚ್ಛೆಯು ಉಂಟಾಗುವದಿಲ್ಲ.

॥ ದೋಹಾ ॥

ಇಮ ಮಿಥ್ಯಾ ಸಂಸಾರ ದುಖ। ಹ್ವೈ ತೋಮ್ಯೈ ಭ್ರಮ ಭಾ
ತಾಕೀ ಕಹಾ ನಿವೃತ್ತಿ ತೂ। ಚಾ ಹೈ ಸಿಷ್ಯ ಸು ಜಾನ ॥೫

ಟೀಕಾ—ಎಲೈ ಶಿಷ್ಯನೇ! ಈರೀತಿಯಿಂದ ನಿನ್ನ ವಿಷಯದಲ್ಲಿ ಸಂ
ರರೂಪ ದುಃಖವು ಮಿಥ್ಯಾಭ್ರಾಂತಿಯಿಂದಲೇ ಪ್ರತೀತವಾಗುತ್ತದೆ. ಅ
ನಿವೃತ್ತಿಯ ಇಚ್ಛೆಯು ಸಿದ್ಧವಾಗುವದಿಲ್ಲ.

ದೃಷ್ಟಾಂತ—ಮಂತ್ರಗಾರ ನೊಬ್ಬನು ತನ್ನ ಮಂತ್ರಬಲದಿ
ಒಬ್ಬ ಮನುಷ್ಯನಿಗೆ ಅವನ ಶತ್ರುವನ್ನು ಮಂತ್ರ ಬಲದಿಂದ ತೋರಿಸಲು
ಮನುಷ್ಯನು ಆ ಶತ್ರುವನ್ನು ಹೊಡೆಯುವ ಪ್ರಯತ್ನವನ್ನು ಮಾಡುವದಿ
ಹೀಗೆಯೇ ಸತ್ ಜ್ಞಾನದಿಂದ ಸಂಸಾರವು ಮಿಥ್ಯವೆಂದು ತಿಳಿದರೂ,
ಮಿಥ್ಯಾಸಂಸಾರದ ಇಚ್ಛೆಯು ಪುರುಷನಿಗೆ ನಿವೃತ್ತವಾಗುವುದಿಲ್ಲ.

---

॥೧೫೩॥ ಪ್ರಶ್ನೆ—ಜನ್ಮ ಮೊದಲಾದ ಸಂಸಾರಗಳು ದುಃಖ
ಸಾಧನವಾಗಿರುವವು. ಈ ಕಾರಣದಿಂದ ಅದರ ನಿವೃ
ತ್ತಿಯ ಉಪಾಯವನ್ನು ತೋರಿಸಬೇಕು.

॥ ಶಿಷ್ಯ ಉವಾಚ ॥

॥ ಚೌಪಾಈ ॥

ಜಗ ಯದ್ಯಪಿ ಮಿಥ್ಯಾಗುರು ದೇವಾ।
ತಥಾಪಿಮ್ಯೈ ಚಾಹೂ ತಿಹಿಛೇವಾ ॥
ಸ್ವಪ್ನ ಭಯಾನಕ ಜಾಕೂ ಭಾಸೈ।
ಕರಿ ಸಾಧನ ಜನ ಜಿಮತಿಹಿನಾಸೈ ॥೫೭॥
ಯಾತೈ ಹ್ವೈ ಜಾತೈ ಜಗ ಹಾನಾ।
ಸೋಃ ಉಪಾವ ಭಾಖೊ ಭಗವಾನಾ ॥
ತುಮ ಸಮಾನ ಸತಗುರು ನಹಿ ಆನಾ।
ಶ್ರವನ ಘಾಕ ದೇಃ ವಂಚಕ ನಾನಾ[೧] ॥೫೮॥

ಟೀಕಾ—ಭಗವನ್ ತಾವು "ಜಗತ್ತು ನಿನ್ನ ವಿಷಯದಲ್ಲಿ ಮಿಥ
ರೂಪದಿಂದ ಅದೆ ಸತ್ಯರೂಪದಿಂದ ಇಲ್ಲ." ಎಂದು ಹೇಳಿದಿರಲ್ಲಾ! ಇ
ಯದ್ಯಪಿ ಸತ್ಯ ವಿದ್ದರೂ ಮಿಥ್ಯಾರೂಪದಿಂದ ಇರುತ್ತಿದ್ದರೂ ಉ



ಪ ಉಪಾಯದಿಂದ ಮಂಚಹಾದಿ ಸಂಸಾರಗಳೂ ನನ್ನ ವಿಷಯದಲ್ಲಿ ಭಾಸ
ವಾಗಲಾರವೋ ಆ ಉಪಾಯವನ್ನು ತಾವು ಹೇಳಬೇಕು.

ತಾವು "ಮಿಥ್ಯೆಯ ನಿವೃತ್ತಿಯ ಸಲುವಾಗಿ ಸಾಧನಗಳು ಬೇಕಾ
ಗಿಲ್ಲ" ಎಂದು ಹೇಳಿದಿರಿ. ಹೀಗೆ ಹೇಳಿದ್ದು ಸತ್ಯವದೆ. ಆದರೆ ಭಗವನ್
ಯಾವನಿಗೆ ಮಿಥ್ಯಾಪಧಾರ್ಥಗಳೇ ದುಃಖದ ಸಾಧನವಾಗಿರುವವೋ, ಅವ
ನು ಅವುಗಳನ್ನು ಮಿಥ್ಯಾಸಾಧನಗಳಿಂದಲೇ ನಿವೃತ್ತಿ ಮಾಡುವದು ಯೋ
ಗ್ಯವದೆ. ಒಬ್ಬ ಪುರುಷನಿಗೆ ಪ್ರತಿದಿನವೂ ಭಯಾನಕ ಸ್ವಪ್ನಗಳು ಬೀಳು
ತ್ತವೆ. ಅವು ಮಿಥ್ಯವಾಗಿಯೇ ಇರುವವು. ಅವನು ಆವುಗಳ ನಿವೃತ್ತಿ
ಸುವಾಗಿ ಜಪಮೊದಲಾದ ಅನೇಕ ಅನುಷ್ಠಾನಗಳನ್ನು ಮಾಡುತ್ತಾನೆ
ಇವನಂತೆ ಈ ಸಂಸಾರವಾದರೂ ಮಿಥ್ಯವೇ ಆಗಿರುವದು. ಆದರೆ ಜನ್ಮಾದಿ
ದುಃಖಸಾಧನಗಳು ನನಗೆ ಪ್ರತೀತವಾಗುತ್ತವೆ. ಈ ಕಾರಣದಿಂದ ಸಂಸಾ
ರದ ನಿವೃತ್ತಿಯನ್ನು ನಾನು ಇಚ್ಛಿಸುತ್ತೇನೆ. ತಾವು ಕೃಪೆಯಿಂದ ಅದರ
ಉಪಾಯವನ್ನು ತೋರಿಸಬೇಕು. ॥೫೭-೫೮॥

ಟಿಪ್ಪಣಿ—(೧) ಮೋಸಗಾರನು.

---

॥ ಗತ ಪ್ರಶ್ನೆಯ ಉತ್ತರ ॥೧೫೪—೧೫೫॥

॥೧೫೪॥ ಆತ್ಮ ಅಜ್ಞಾನದಿಂದ ಜಗತ್ತಿನ ಪ್ರತೀತಿಯು
ಉಂಟಾಗುತ್ತದೆ. ಅದರ ನಿವೃತ್ತಿಯ ಉಪಾಯವು.
ಜ್ಞಾನದ ಸ್ವರೂಪವು.

॥ಶ್ರೀ ಗುರು ರುವಾಚ॥

॥ ಸೊರಠಾ ॥

ಸೋ ಮ್ಯೈ ಕಹ್ಯೋ ಬಖಾನಿ।
ಜೋ ಸಾಧನ ತೈ ಪೂಛಿಯೊ ॥
ನಿಜ ಹಿಯ ನಿಶ್ಚಯ ಆನಿ।
ರಹೈ ನ ರಂಜಕ ಖೇದ ಜಗ ॥ ೫೯ ॥

ಟೀಕಾ॥ ಎಲೈ ಶಿಷ್ಯನೇ! ನೀನು ಜಗತ್‌ರೂಪೀ ದುಃಖದ ನಿವೃತ್ತಿ
ಯ ಸಾಧನವನ್ನು ಹೇಳಬೇಕೆಂದು ಕೇಳಿದೆ. ಅದಕ್ಕೆ ನಾನು ಈ ಮೊದಲೇ
ಉತ್ತರವನ್ನು ಹೇಳಿದ್ದೇನೆ. ಅದನ್ನೇ ನೀನು ದೃಢವಾಗಿ ಮನಸ್ಸಿನಲ್ಲಿ ವಿಚಾ

ರನಾಡು ; ಅದರಿಂದ ಜಗತ್‌ರೂಪೀ ದುಃಖವು ನಿಲ್ಲಲಾರದು. ||೫೯||

ಟಿಪ್ಪಣಿ—೧. ಈ ಪೂರ್ವದಲ್ಲಿ ಇವೇ ತರಂಗದಲ್ಲಿ ೧೫೫ ಮತ್ತು ೧೫೬ನೇ ಅಂ ಗಳ ವಾಕ್ಯದಲ್ಲಿ ಹೇಳಲ್ಪಟ್ಟಿದೆ. ಅದನ್ನೇ ಪುನಃ ಎರಡು ದೋಹೆ ಯಿಂದ ಹೇಳುವೆನು.

|| ದೋಹಾ ||

ನಿಜ ಆತಮ ಅಜ್ಞಾನ ತೈ । ಹ್ವೆ ಪ್ರತೀತ ಜಗಭೇದ ||
ನಸ್ಯೆ ಸು ತಾಕೆ ಬೋಧತೈ । ಯಹ ಭಾಖತ ಮುನಿವೇದ||
ಜಗಮೋಪೈ ನಹಿ 'ಬ್ರಹ್ಮಮೈ,' । 'ಅಹಂಬ್ರಹ್ಮ,' ಯಹಜ್ಞಾ
ಸೋ ತೋಕೂ ಸಿಷ ಮೈಕಹ್ಯೋ । ನಹಿ ಉಪಾಯಕೊ ಅ

ಟೀಕಾ|| ಎಲೈ ಶಿಷ್ಯನೇ ? ತನ್ನ ಆತ್ಮಸ್ವರೂಪ ಅಜ್ಞಾನದಿಂದ ಜ ತ್‌ರೂಪೀ ಭೇದವು ಪ್ರತೀತವಾಗುವದು. ಅದು ಆತ್ಮಜ್ಞಾನದಿಂದ ನಾ ವಾಗುವದು. ಯಾವ ವಸ್ತುವು ಅಜ್ಞಾನದಿಂದ ಪ್ರತೀತವಾಗುವದೋ, ಅದರ ಜ್ಞಾನದಿಂದ ನಾಶವಾಗುವದು, ಎಂಬ ನಿಯಮವಿರುವದು. ಹೇ ರಜ್ಜುವಿನ ಅಜ್ಞಾನದಿಂದ ಸರ್ಪಪ್ರತೀತವಾಗುವದೋ ಹೇಗೆ ಈ ಅಜ್ಞಾ ಸವು ರಜ್ಜುಜ್ಞಾನದಿಂದ ನಾಶವಾಗುವದೋ, ಹಾಗೆ ಆತ್ಮಜ್ಞಾನದಿಂದ ಜಗತ್ತಿನ ನಾಶವಾಗುತ್ತದೆ; ಆ ಆತ್ಮಜ್ಞಾನವನ್ನು ನಾನು ಹೇಳಿರುವೆ ಜಗತ್ತು ನನ್ನಲ್ಲಿ ತ್ರಿಕಾಲದಲ್ಲಿಯೂ ಇಲ್ಲ. ಯಾಕಂದರೆ ಮಿಥ್ಯವದೆ, ಯಾ ವದು ಮಿಥ್ಯಾವಸ್ತುವಾಗುವದೋ ಅದರಿಂದ ಅಧಿಷ್ಠಾನದ ಹಾನಿಯು ಉಂಟಾಗಲಾರದು. ಮೃಗಜಲದಿಂದ ಹೇಗೆ ಪೃಥ್ವಿಯು ಹಸಿಯಾಗುವದಿ ಲ್ಲವೋ, ಹಾಗೆ ಜಗತ್ತು ಪ್ರತೀತವಾದರೂ ಮಿಥ್ಯವದೆ. ನನ್ನ ಹಾನಿಯ ನ್ನು ಮಾಡಲು ಕಿಂಚಿತ್ತಾದರೂ ಸಮರ್ಥವಾದದ್ದಲ್ಲ.

"ನಾನು ಸತ್‌ಚಿತ್ ಆನಂದರೂಪ ಬ್ರಹ್ಮಸ್ವರೂಪನಾಗಿದ್ದೇನೆ" ಎಂ ಯಾವ ನಿಶ್ಚಯವಿರುವದೋ, ಅದಕ್ಕೆ ಜ್ಞಾನವೆಂಬ ಹೆಸರು. ಇದೇ ಮೋ ಕ್ಷದ ಸಾಧನವಾಗಿರುವದು. ಬೇರೆ ಯಾವಸಾಧನವೂ ಇಲ್ಲ. ಈ ಜ್ಞಾನ ನ್ನು ನಾನು ಪ್ರಥಮದಲ್ಲಿಯೇ ನಿರೂಪಿಸಿದ್ದೇನೆ. ||೬೦-೬೧||

|| ೧೫೫ || ಅಜ್ಞಾನದ ನಾಶವು ಕೇವಲ ಜ್ಞಾನದಿಂದಲೇ ಆ ವದಲ್ಲದೆ ಕರ್ಮ ಉಪಾಸನೆಗಳಿಂದ ಆಗುವದಿಲ್ಲ.

|| ದೋಹಾ ||

ಕರ್ಮ ಉಪಾಸನತೈ ನಹಿ । ಜಗ ನಿದಾನ ತಮ ನಾಸ ||



ಂಧಕಾರ ಜಿಮು ಗೇಹಮೈ । ನಸ್ಯೆ ನ ಬಿನ ಪರಕಾಸ || ೬೨ ||

ಟೀಕಾ|| ಎಲೈ ಶಿಷ್ಯನೇ ? ಜಗತ್ತಿನ ಉಪಾದಾನ ಕಾರಣವು ಯಾವ ಜ್ಞಾನವಿರುವದೋ, ಆ ಅಜ್ಞಾನದ ನಾಶದಿಂದ ಜಗತ್ತಿನ ನಾಶವು ತನ್ನ ಕ್ಕೆ ತಾನೇ ನಾಶವಾಗಿ ಹೋಗುವದು. ಯಾಕಂದರೆ ಉಪಾದಾನದ ನಾಶವಾಗಲು, ಪಶ್ಚಾತ್ ಕಾರ್ಯವು ಇರುವದಿಲ್ಲ. ಆ ಅಜ್ಞಾನದ ನಾಶ ವು ಕೇವಲ ಜ್ಞಾನದಿಂದಲೇ ಆಗುವದು. ಕರ್ಮ ಮತ್ತು ಉಪಾಸನೆಗ ದ ನಾಶವಾಗುವದಿಲ್ಲ, ಕಾರಣವೇನೆಂದರೆ, ಅಜ್ಞಾನಕ್ಕೆ ವಿರೋಧಿಯಾ ದ್ದು ಜ್ಞಾನವು, ಕರ್ಮ ಉಪಾಸನೆಗಳು ವಿರೋಧಿಗಳಲ್ಲ.

ದೃಷ್ಟಾಂತ—ಗೃಹದಲ್ಲಿದ್ದ ಅಂಧಕಾರವು ಪ್ರಕಾಶದ ಹೊರ್ತು ಅನ್ಯ ಉಪಾಯಗಳಿಂದ ನಾಶವಾಗುವದಿಲ್ಲ, ಕೇವಲ ಪ್ರಕಾಶದಿಂದಲೇ ನಾಶವಾ ಗುವದು. ಇದರಂತೆ ಅಜ್ಞಾನರೂಪೀ ಅಂಧಕಾರವು ಜ್ಞಾನರೂಪೀ ಪ್ರಕಾಶ ದ ನಾಶವಾಗುವದು. ಬೇರೆ ಯಾವಸಾಧನದಿಂದಲೂ ನಾಶವಾಗಲಾರದು.

|| ದೋಹಾ ||

ಖ್ಯೊ ಸಿಷ ಉಪದೇಸಮೈ । ಜಗ ಭುಂಜಕ ಹಿಯಧಾರಿ ||
ಜೊ ಯಾಮೈ ಸಂಸಯ ರಹ್ಯೊ । ಸೊತೂ ಪೂಛ ವಿಚಾರೀ ||

ಅರ್ಥ|| ಎಲೈ ಶಿಷ್ಯನೇ ? ನಾನು ಜಗತ್ತಿನ ಉಪದೇಶವನ್ನು ಹೇಳಿದೆನು. ದನ್ನು ಮನಸ್ಸಿನಲ್ಲಿ ಚನ್ನಾಗಿ ವಿಚಾರ ಮಾಡಿಕೊಂಡು, ಏನಾದರೂ ಶಯವು ಬಂದರೆ ನನ್ನನ್ನು ಕೇಳು. || ೬೩ ||

|| ಪ್ರಶ್ನೆ || ೧೫೬—೧೫೮ ||

||೧೫೬|| ಉಕ್ತ ಅರ್ಥದ ಅನುವಾದ ಪೂರ್ವಕ ವಕ್ಷ್ಯಮಾಣ ಶಂಕೆಯ ಸೂಚನೆ.

|| ಶಿಷ್ಯ ಉವಾಚ ||

||ಚೌಪಾಈ||

ಭೋ ಭಗವನ ಜೋ ಕಛು ತುಮ ಭಾಖ್ಯೊ ।
ಸೋ ಸಬ ಸತ್ಯ ಜಾನಿ ಹಿಯ ರಾಖ್ಯೊ ||
ಜಗನಿದಾನ ಅಜ್ಞಾನ ಬಖಾನ್ಯೊ ।
ತಾಕೋ ಭಂಜಕ ಜ್ಞಾನ ಪಿಛಾನ್ಯೊ || ೬೪ ||

ಜ್ಞಾನರೂಪ ಬರ್ಣನ ಪುನಿ ಕೀನಾ ।
ಜಗಮಿಥ್ಯಾ ಸೊ ಮೈ ಭಲ ಚೀನಾ ॥
ಸುಖಸ್ವರೂಪ ಆತಮು ಪರಕಾಸ್ಯೊ ।
ದಯಾ ತಿಹಾರೀ ಸೊ ಮುಹಿ ಭಾಸ್ಯೊ ॥೬೫॥
ಪುನಿ ಭಾಖ್ಯೊ ೕತೂ ಬ್ರಹ್ಮಸ್ವರೂಪಂ, ।
ಯುಹ ಮೈ ಲಖ್ಯೊ ನ ಭೇದ ಅನೂಪಂ ॥
ಯಾಮೈ ಮುಹಿ ಸಂಕಾ ಇಕ ಆವೈ ।
ಜೀವ ಬ್ರಹ್ಮಕೊ ಭೇದ ಜನಾವೈ ॥೬೬॥

ಟೀಕಾ॥ ಭಗವನ್ ! ತಾವು ಏನನ್ನು ಹೇಳಿದಿರೋ ಅದನ್ನು ಸ… ಸತ್ಯವೆಂದು ತಿಳಿಯುತ್ತೇನೆ. ತಾವು ಹೇಳಿದ್ದೇನೆಂದರೆ "ಜಗತ್ತಿನ… ಣವು ಅಜ್ಞಾನವಾಗಿದೆ. ಆ ಅಜ್ಞಾನದ ನಿವೃತ್ತಿಯೂ, ಮತ್ತು ಜ… ನಿವೃತ್ತಿಯೂ ಜ್ಞಾನದಿಂದಲೇ ಆಗುವದು." ಇದನ್ನು ನಾನು ಚ… ಅರಿತುಕೊಂಡೆನು.

ಆ ಜ್ಞಾನದ ಸ್ವರೂಪವನ್ನು ತಾವು ಈ ವಿಧವಾಗಿ ಹೇಳಿದಿರಿ… "ಜಗತ್ತು ಮಿಥ್ಯವದೆ, ಮತ್ತು ಜೀವವು, ಆನಂದ ಸ್ವರೂಪವದೆ, … ಬ್ರಹ್ಮನಿಂದ ಭಿನ್ನವಾಗಿರುವದಿಲ್ಲ. ಆದರೆ ಬ್ರಹ್ಮರೂಪವಾಗಿದೆ, … ನಿಶ್ಚಯವೇ ಜ್ಞಾನವು. ಆದರಲ್ಲಿ ಜಗತ್ತು ಮಿಥ್ಯವದೆ, ಮತ್ತು ಜೀ… ಆನಂದಸ್ವರೂಪವದೆ, ಎಂಬದನ್ನು ನಾನು ತಿಳಿದುಕೊಂಡೆನು.

ಆದರೆ "ಜೀವಬ್ರಹ್ಮರು ಒಂದೇ ಇರುವರು." ಎಂಬ ತಾತ್ಪ… ವನ್ನು ತಿಳಿಯಲಿಲ್ಲ, ಕಾರಣವೇನೆಂದರೆ-ಜೀವಬ್ರಹ್ಮರಲ್ಲಿ ಭೇದವನ್ನು… ರಿಸತಕ್ಕ ಆಕ್ಷೇಪವು ನನ್ನ ಹೃದಯದಲ್ಲಿ ಪೂರ್ಣವಾಗಿದೆ. ॥೬೪ ಟೀಕಾ… ॥೧೫೭॥ ಬ್ರಹ್ಮ, ಮತ್ತು ನನ್ನ ಸ್ವರೂಪವು ಪರಸ್ಪರ ವಿರುದ್ಧವಾ… ಈ ಕಾರಣದಿಂದ ಬ್ರಹ್ಮನಲ್ಲಿ ನನ್ನ ಐಕ್ಯತ್ವವು ಸಂಭವಿಸುವ…

॥ ಈ ಆಕ್ಷೇಪಣೆಯ ಚೌಪಾಈ ॥

ಪುನ್ಯ ಪಾಪಕಾ ಹೊ ಮೈ ಕರ್ತಾ ।
ಜನ್ಮಮರನ ಔ ಸುಖದುಖ ಧರ್ತಾ ।
ಔರ ಅನೇಕ ಭ್ರಾಂತಿ ಜಗ ಭಾಸೈ ॥



ಚಹೂ ಜ್ಞಾನ ಅಜ್ಞಾನ ಜು ನಾಸೈ ॥೬೭॥
ಜೊ ಯಾತೈ ವಿಪರೀತ ಸ್ವರೂಪಾ ।
ತಾಕೂ ಬ್ರಹ್ಮ ಕಹತ ಮುನಿ ಭೂಪಾ ॥
ಕಹೊ ಎಕತಾ ಕೈಸೈ ಜಾನೂ ? ।
ರೂಪ ವಿರುದ್ಧ ಹಿಯೆ ಪಹಿಚಾನೂ ॥೬೮॥

ಟೀಕಾ॥ ಭಗವನ್ (೧) ನಾನು ಪಾಪಪುಣ್ಯಗಳ ಕರ್ತೃವಾಗಿರುವೆನು. …ಅವುಗಳ ಫಲವಾದ ಜನ್ಮಮರಣ ಮತ್ತು ಸುಖದುಃಖಗಳನ್ನು ಧಾರ…ಮಾಡುವೆನು. (೩) ಅನೇಕ ವಿಧವಾದ ಜಗತ್ತು ನನ್ನಲ್ಲಿ ಪ್ರತೀತ…ವಾಗುವದು. (೪) ಜಗತ್ತಿಗೆ ಕಾರಣವಾದ ಅಜ್ಞಾನವನ್ನು ದೂರೀಕರಿ…ಸುವದಕ್ಕೋಸುಗ ಜ್ಞಾನವನ್ನು ಅಪೇಕ್ಷಿಸುತ್ತೇನೆ. (೧) ಬ್ರಹ್ಮ…ಕ್ಕೆ ಪಾಪವಿಲ್ಲ, ಪುಣ್ಯವಿಲ್ಲ, (೨) ಜನ್ಮವಿಲ್ಲ, ಮರಣವಿಲ್ಲ, ಸುಖವಿಲ್ಲ …ದುಃಖವಿಲ್ಲ (೩) ಯಾವ ಬಗೆಯ ಕ್ಲೇಶವೂ ಬ್ರಹ್ಮನಿಗಿಲ್ಲ, (೪) ಜ್ಞಾನೇ…ಯೂ ಇಲ್ಲ. ಈ ಕಾರಣದಿಂದ ಬ್ರಹ್ಮನ ಸ್ವರೂಪದಲ್ಲಿಯೂ ನನ…ರೂಪದಲ್ಲಿಯೂ ವಿರುದ್ಧವಿರುವದು. ಈ ಕಾರಣದಿಂದ ಜೀವಬ್ರಹ್ಮರ …ಐಕ್ಯತ್ವವು ಸಂಭವಿಸುವದಿಲ್ಲ.

ಯದ್ಯಪಿ ನನ್ನಲ್ಲಿ ಸಹಾ ಜನ್ಮಾದಿಸಂಸಾರವು ಸತ್ಯವಾಗಿಲ್ಲ. ತಥಾಪಿ …ಮಿಥ್ಯಾಜನ್ಮಾದಿಗಳು ನನ್ನಲ್ಲಿ ಭ್ರಾಂತಿಯಿಂದ ಪ್ರತೀತವಾಗುವವು, ಬ್ರಹ್ಮ[೧]…ದಲ್ಲಿ ಪ್ರತೀತವಾಗುವದಿಲ್ಲ. ಈ ಪ್ರಕಾರದ ಭೇದವಿರುವದರಿಂದ ಐಕ…ತ್ವವು ಉಂಟಾಗುವದಿಲ್ಲ.

…ಟಿಪ್ಪಣಿ-೧. ಇದು ಪ್ರಮೇಯಗತ ಸಂಶಯದ ಸ್ವರೂಪವದೆ.

…೧೫೮॥ ಪಕ್ಷೀ ರೂಪದಿಂದ ವಿಲಕ್ಷಣ ಜೀವಬ್ರಹ್ಮರ ಐಕ್ಯತ್ವ ದಿಂದ ಕರ್ಮ ಉಪಾಸನಾ ಪ್ರತಿಪಾದಕ ವೇದವು ನಿಷ್ಫಲವಾಗುವದು.

॥ ಅನ್ಯ ಸಂಶಯದ ಚೌಪಾಈ ॥

ಸುನಹು ಗುರೂ ದೂಜೊ ಪುನಿ ಸಂಸೈ ।
ಜೀವ ಬ್ರಹ್ಮ ಏಕತ್ವ ಪ್ರಸಂಸೈ ॥
ಏಕ ವೃಚ್ಛಮೈ ದ್ವೈ ಪಚ್ಛೀ ।

ಫಲಭೋಗ್ಯೆ ಇಕ ದೂಜೊ ಸ್ವಚ್ಛೇ ॥೬೯॥
ಭೋಗರಹಿತ ಪರಕಾಸ ಅಸಂಗಾ ।
ವೇದವಚನ ಯಹ ಕಹತ ಪ್ರಸಂಗಾ ॥
ಕರ್ಮ ಉಪಾಸನ ಪುನಿ ಬಹು ಭಾಖೈ ।
ಜೀವ ಬ್ರಹ್ಮ ಯಾತೈ ದ್ವಯ ರಾಖೆ ॥೭೦॥

ಟೀಕಾ ॥ ಗುರುವರ್ಯ ! ನನಗೆ ಇನ್ನೊಂದು ಸಂಶಯುವಿರು ಅದನ್ನು ತಾವು ಕೇಳಬೇಕು. ಸಂಶಯುವೇನೆಂದರೆ;- ಯಾವದರಿಂದ ಜೀ ಬ್ರಹ್ಮರ ಐಕ್ಯತ್ವದ ನಿಶ್ಚಯವು ನಿವೃತ್ತವಾಗುತ್ತದೆಯೋ, ಆ ಸಂ ವನ್ನು ನಾನು ತಮ್ಮೊಡನೆ ಹೇಳುವೆನು. ತಾವು ಶ್ರವಣಮಾಡಿ ಆಸಂ ವನ್ನು ದೂರಮಾಡಬೇಕು. ವೇದದಲ್ಲಿ ನನಗೆ ಕಂಡು ಬಂದದ್ದೇನೆ ಒಂದು ಬುದ್ಧಿರೂಪೀ ಎಂಬ ವೃಕ್ಷದಲ್ಲಿ ಎರಡು ಪಕ್ಷಿಗಳಿರುವವು. ರಡೂ ಸಮಾನ ಇರುವವು. ಅವುಗಳಲ್ಲಿ (೧) ಒಂದು ಕರ್ಮಫಲಭೋ (೨) ಮತ್ತೊಂದು ಸ್ವಚ್ಛ, ಅಂದರೆ ಶುದ್ಧವದೆ, ಭೋಗರಹಿತ ಅಸಂಗತವದೆ, ಮತ್ತು ಕರ್ಮಫಲ, ಭೋಕ್ತೃವಿನ ಪ್ರಾಕಾಶಕವದೆ, ಗಳಲ್ಲಿ (೧) ಕರ್ಮಫಲ ಭೋಕ್ತೃವು ಜೀವನು ಪ್ರತೀತವಾಗಿರುವನು. ಪರಮಾತ್ಮಾ ಪ್ರತೀತವಾಗಿರುವನು. ವೇದದಲ್ಲಿ ಕರ್ಮ ಮತ್ತು ಉ ಸನೆಗಳನ್ನು ಬಹುವಿಧವಾಗಿ ಹೇಳಿರುವರು. ಅವು ಜೀವಬ್ರಹ್ಮರ ತ್ವದ ವಿಷಯದಲ್ಲಿ ನಿಷ್ಫಲವಾಗಿ ಹೋಗುವವು. ಕಾರಣವೇನು ತಾವು ಜೀವಬ್ರಹ್ಮರ ಐಕತ್ವವನ್ನು ಹೇಳುವಿರಿ. (೧) ಬ್ರಹ್ಮನಲ್ಲಿ ಸ್ವರೂಪವನ್ನು ಅಂತರ್ಭಾವದೆಂದು ಹೇಳುವಿರೋ ? (೨) ಅಥವಾ ನಲ್ಲಿ ಬ್ರಹ್ಮಸ್ವರೂಪವನ್ನು ಅಂತರ್ಭಾವವೆಂದು ಹೇಳುವಿರೋ ?

(೧) ಕದಾಚಿತ್ ಬ್ರಹ್ಮನಲ್ಲಿ ಜೀವ ಸ್ವರೂಪವನ್ನು ಅಂತರ್ಭಾ ವೆಂದು ಹೇಳಿದರೆ, ಜೀವನಿಗೆ ಬ್ರಹ್ಮಸ್ವರೂಪ ವುಂಟಾಗುವದರಿಂದ ಅ ರಿಗಳ ಅಭಾವವಾಗುವದು. ಈ ಕಾರಣದಿಂದ ಕರ್ಮ ಮತ್ತು ಉಪಾ ಗಳು ನಿಷ್ಫಲವಾಗುವವು.

(೨) ಜೀವನಲ್ಲಿ ಬ್ರಹ್ಮಸ್ವರೂಪವನ್ನು ಅಂತರ್ಭಾವವೆಂದು ದರೆ, (೧) ಬ್ರಹ್ಮನಿಗೆ ಜೀವರೂಪವು ಉಂಟಾಗುವದರಿಂದ ಯಾವನ ಸನೆಯನ್ನು ಮಾಡಿರುವೆವೋ, ಆ ಉಪಾಸ್ಯಕನ ಅಭಾವ ಉಂ ವದು. ಈಕಾರಣದಿಂದ ಉಪಾಸನೆಯು ನಿಷ್ಫಲವಾಗುವದು, (೨)



ಫಲವನ್ನು ಕೊಡತಕ್ಕ ಪರಮಾತ್ಮನ ಅಭಾವವಾಗುವದು. ಈ ಕಾರಣ ದ ಕರ್ಮವು ನಿಷ್ಫಲವಾಗುವದು. ಮೀಮಾಂಸಕರು ಹೀಗೆ ಹೇಳುವರು ರ್ಮವೇ ಈಶ್ವರನು ಅದರಿಂದಲೇ ಫಲವಾಗುವದು" ಎಂದುಹೀಗೆ ಹೇಳು ದು ಸರ್ಮರ್ಪಕವಾಗಿ ತೋರುವದಿಲ್ಲ. ಯಾಕಂದರೆ ಕರ್ಮವು ಜಡವದೆ. ಕ್ಕೆ ಫಲವನ್ನು ಕೊಡುವ ಸಾಮರ್ಥ್ಯವಿರುವದಿಲ್ಲ. ಈ ಕಾರಣದಿಂದ ರ್ಮದ ಫಲವನ್ನು ಈಶ್ವರನೇ ಕೊಡುವನು. ಈ ಪ್ರಕಾರದಿಂದ ಪರ ಮಾತ್ಮಾ ಮತ್ತು ಜೀವ ಇವರ ಐಕ್ಯತ್ವವು ಸಂಭವಿಸುವದಿಲ್ಲ ॥೬೯-೭೦॥ ಪ್ರಶ್ನೆ—(೧) ಇದು ಪ್ರಮಾಣಗತ ಸಂಶಯದ ಸ್ವರೂಪವದೆ.

---

ಅಂಕ ೧೫೭ ರಲ್ಲಿಯ ಪ್ರಶ್ನೆಯ ಉತ್ತರ ॥೧೫೯-೧೭೨॥
॥೧೫೯॥ ನಾಲ್ಕು ಆಕಾಶ, ಮತ್ತು ನಾಲ್ಕು ಚೇತನ.

॥ ಶ್ರೀಗುರು ರುವಾಚ ॥

॥ಚೌಪಾಈ॥

ಸುನಹು ಸಿಷ್ಯ ಇಕ ಕಹೂ ವಿಚಾರ ।
ಹ್ವೈ ಜಾತೈ ಸಂಕಾ ವಿಸ್ತಾರಾ ॥
ಘಟಾಕಾಸ ಇಕ ಜಲ ಆಕಾಸಾ ।
ಮೇಘಾಕಾಸ ಮಹಾ ಆಕಾಸಾ ॥೭೧॥
ಜ್ಯಾರಿಭೇದ ಯೇನ ಭಕೆ ಜಾನಹು ।
ಪುನಿ ಚೇತನಕೆ ತಥಾ ಪಿಛಾನಹು ॥
ಇಕ ಕೂಟಸ್ಥ ಜೀವ ಪುನಿ ಕಹಿಯೇ ।
ಈಸ ಬ್ರಹ್ಮ ಹಿಯ ಜಾನ್ಯೆ ರಹಿಯೆ ॥೭೨॥
ಜಬ ಇನಕೊ ತೂ ರೂಪ ಪಿಛಾನೈ ।
ನಿಜಸಂಕಾ ತಬಹೀ ಸಬ ಭಾನೈ ॥
ಯಾತೈ ಸುನ ಇನಕೊ ಅಬ ಭೇದಾ ।
ನಸೈ ಸುನತ ಜನ್ಮಾದಿಕ ಖೇದಾ ॥೭೩॥

ಟೀಕಾ—ಎಲೈ ಶಿಷ್ಯನೇ! ನಿನಗೆ ಉತ್ಪನ್ನವಾದ ಅಕ್ಷೇಪಣೆಯ ನಿ ವಾರಣೆಯು ಯಾವದರಿಂದ ದೂರವಾಗುವದೋ ಆ ವಿಚಾರವನ್ನು ನಾನು ಹೇಳುತ್ತೇನೆ. ನೀನು ಕೇಳುವಂಥವನಾಗು. ಒಂದೇ ಆಕಾಶದಲ್ಲಿ ನಾಲ್ಕು

ಭೇದಗಳಿರುವವು. ಅವು ಯಾವವೆಂದರೆ;- (೧) ಘಟಾಕಾಶ (೨) ಜಲಾ
(೩) ಮೇಘಾಕಾಶ (೪) ಮಹಾಕಾಶ ಎಂಬವುಗಳು. ಇದರಂತೆಯೇ ಒಂ
ಚೇತನದಲ್ಲಿ ನಾಲು ಭೇದಗಳಿರುವವು; ಅವು ಯಾವವೆಂದರೆ;- (೧) ಕೂಟ
(೨) ಜೀವ (೩) ಈಶ್ವರ (೪) ಬ್ರಹ್ಮ ಎಂಬವುಗಳು. ಎಲೈ ಶಿಷ್ಯನೇ! ಇವು
ಸ್ವರೂಪವನ್ನು ನೀನು ಯಾವಾಗ ಯಥಾರ್ಥವಾಗಿ ತಿಳಿದುಕೊಳ್ಳುವಿ
ಆಗ ನಿನಗುಂಟಾದ ಆಕ್ಷೇಪಣೆಯ ಸಮಾಧಾನವನ್ನು ನಿನ್ನಷ್ಟಕ್ಕೆ
ತಿಳಿದುಕೊಳ್ಳುವಿ. ಈ ಕಾರಣದಿಂದ ನಾನು ಇವುಗಳ ಸ್ವರೂಪ ವರ್ಣ
ಯನ್ನು ಮಾಡುವೆನು. ನೀನು ಅದನ್ನು ಕೇಳುವದರಿಂದ ಸಂಶಯ
ಜ್ಞಾನವುಂಟಾಗಿ, ಜನ್ಮಾದಿ ದುಃಖಗಳ ನಾಶವಾಗುವದು. ||೭೧-೭೨||

||೧೬೦|| ೧ ಅಥ ಘಟಾಕಾಶ ವರ್ಣನ.

|| ದೋಹಾ ||

ಜಲಪೂರಿತ ಘಟಕೂ ಜುದೆ | ಜಿತನೊ ನಭ ಅವಕಾಸ ||
ಯುಕ್ತಿ ನಿಪುನ ಪಂಡಿತ ಕಹ್ಯೆ | ತಾಕೂ ಘಟ ಆಕಾಸ ||೭

ಟೀಕಾ—ಎಲೈ ಶಿಷ್ಯನೇ? ಜಲದಿಂದ ಪೂರಿತವಾದ ಘಟದಲ್ಲಿ ಎಷ್ಟು
ಅವಕಾಶ ವಿರುವದೋ, ಅಷ್ಟು ಅವಕಾಶಕ್ಕೆ ಪಂಡಿತರು ಘಟಾಕಾಶ
ನ್ನುತ್ತಾರೆ.

ಟಿಪ್ಪಣಿ—೧ ಇಲ್ಲಿ ಒಂದು ಆಕ್ಷೇಪಣೆ ಯಿರುವದು. ಘಟದಿಂದ ಹೊರಗೆ ಇ
ಆಕಾಶಕ್ಕೆ ಮಹಾಕಾಶವೆನ್ನುತ್ತಾರೆ. ಅದರಿಂದ ಭಿನ್ನವಾಗಿ ಘಟದ
ದಲ್ಲಿರುವ ಆಕಾಶಕ್ಕೆ ಘಟಾಕಾಶವೆನ್ನುವರು. ಈ ಘಟಾಕಾಶದ ಲ
ವು ಸುಗಮವಾಗಿರುವದು. ಇದನ್ನು ಬಿಟ್ಟು 'ಜಲಪೂರಿತವಾದಘಟಕ್ಕೆಮ
ಕಾಶವು ಎಷ್ಟು ಅವಕಾಶವನ್ನು ಕೊಡುವದೋ ಅಷ್ಟು ಅವಕಾಶವೇ ಘ
ಕಾಶವು, ಈ ರೀತಿಯಾಗಿ ಲಕ್ಷ್ಯವನ್ನು ಹೇಳುವದರಿಂದ ಏನುಪ್ರಯೋ
ವದೆ ? ಈ ಪ್ರಶ್ನೆಗೆ ಉತ್ತರವೇನಂದರೆ:-ಈ ಪೂರ್ವದಲ್ಲಿ ಹೇಳಿದ ಘ
ಕಾಶದ ಲಕ್ಷಣದಂತೆ ಅದರಲ್ಲಿ ಸ್ಥಿತಿಯದೆ. ಈ ಆಕಾಶವು ಐದನೆಯ
ಕಸಾಲಾಕಾಶವೆಂದು ಹೇಳಬಹುದು. ಇದು ಶಾಸ್ತ್ರಕ್ಕೆ ವಿರುದ್ಧವಾದ
ಆದ್ದರಿಂದ ಈ ದ್ವಿತೀಯ ಲಕ್ಷಣವನ್ನೇ ಗ್ರಹಿಸುವದು ಉಚಿತವಾಗಿ

||೧೬೧|| ೨ ಅಥ ಜಲಾಕಾಶ ವರ್ಣನ.

|| ದೋಹಾ ||

ಜಲಪೂರಿತ ಘಟಮ್ಯೆ ಜುವುನಿ | ಹ್ಯೆ ನಭಕೊ ಅಭಾಸ



ಕಾಸಯುತ ವಿಜ್ಞಜನ | ಭಾಖತ ಜಲ ಆಕಾಸ || ೭೫ ||

ಟೀಕಾ—ಎಲೈ ಶಿಷ್ಯನೇ ! ಜಲಪೂರಿತವಾದ ಘಟದಲ್ಲಿ ನಕ್ಷ[೧]
ಸಹಿತ ಆಕಾಶದ ಪ್ರತಿಬಿಂಬವು ತೋರುತ್ತದೆ. ಈ ಆಕಾಶದ
ಬಿಂಬವೂ, ಮತ್ತು ಘಟಾಕಾಶವೂ ಕೂಡಲು, ಅದಕ್ಕೆ ಜಲಾಕಾಶ
ಹೆಸರು. ಈ ವಿಷಯದಲ್ಲಿ ಕೆಲವರು ಆಕ್ಷೇಪವನ್ನು ತೆಗೆದುಕೊ
ವದೇನಂದರೆ, ಆಕಾಶದ ಪ್ರತಿಬಿಂಬವು ಆಗುವದಿಲ್ಲ. ಆದರೆ ಕೇವಲ
ತ್ರಾದಿಗಳ ಪ್ರತಿಬಿಂಬವು ಉಂಟಾಗುವದು. ಯಾಕಂದರೆ ಆಕಾಶವು
ಪರಹಿತವಾಗಿವೆ. ಈಕಾರಣದಿಂದ ಆಕಾಶಕ್ಕೆ ಪ್ರತಿಬಿಂಬವಿಲ್ಲ. ಈ
ಕ್ಷೇಪಣೆಗೆ ಸಮಾಧಾನವನ್ನು ಹೇಳುತ್ತೇನೆ.

ಟಿಪ್ಪಣಿ-[೧] ಜಲದ ಹೊರ್ತು ಪ್ರತಿಬಿಂಬವುಂಟಾಗುವದಿಲ್ಲ. ಈ ಕಾರಣ
ದ ಇಲ್ಲಿ ಆಕಾಶದ ಪ್ರತಿಬಿಂಬವನ್ನು ಹೇಳುವವರು ಘಟದಲ್ಲಿ ಇದ್ದ ಜಲ
ಆಕಾಶದ ಪ್ರತಿಬಿಂಬವನ್ನು ಗ್ರಹಣಮಾಡಿದ್ದಾರೆ.

|| ದೋಹಾ ||

ಜಲಮ್ಯೆ ಆಕಾಸಕೊ | ನಹಿ ಪ್ರತಿಬಿಂದ ಲಖಾಯಿ ||
ರೈ ಮ್ಯೆ ಗಂಭೀರತಾ | ಹ್ಯೆ ಪ್ರತೀತ ಕಿಹಿ ಭಾಇ ||೭೬||
ತ್ಯೆ ಜಲಮ್ಯೆ ವ್ಯೊಮಕೊ | ಲಖಿ ಆಭಾಸ ಸುಜಾನ ||
ಪರಹಿತ ಜಿಮ ಸಬ್ದತ್ಯೆ | ಹ್ಯೆ ಪ್ರತಿಧ್ವನಿಕೊ ಭಾನ ||೭೭

ಟೀಕಾ|| ಜಲದಲ್ಲಿ ಆಕಾಶದ ಪ್ರತಿಬಿಂಬವು ಉಂಟಾಗದಿದ್ದರೆ ಅಲ್ಪಜಲ
ಮನುಷ್ಯಪರಿಮಾಣದ ಗಂಭೀರತೆಯು ಪ್ರತೀತಿಯು ಉಂಟಾಗಬಾರ
, ಈ ಕಾರಣದಿಂದ ಆಕಾಶದ ಪ್ರತಿಬಿಂಬವು ಉಂಟಾಗುವದೆಂದೇ
ಕಾರಮಾಡಲಿಕ್ಕೆ ಬೇಕು.

ಮತ್ತೆ ಕೆಲವರು "ರೂಪರಹಿತ ಪದಾರ್ಥಗಳಿಗೆ ಪ್ರತಿಬಿಂಬವು ಉಂ
ಟಾಗುವದಿಲ್ಲ." ಎಂದು ಆಕ್ಷೇಪಿಸುವರು. ಇದು ಸರಿಯಾದದ್ದಲ್ಲ. ಯಾ[೧]
ರೂಪರಹಿತವಾದ ಶಬ್ದಕ್ಕೆ ಪ್ರತಿಧ್ವನಿಯುಂಟಾಗುತ್ತದೆ. ಅದು
ದ ಪ್ರತಿಬಿಂಬವೆನಿಸುವದು. ಈ ಕಾರಣದಿಂದ ರೂಪರಹಿತವಾದ
ಶಕ್ಕೂ ಪ್ರತಿಬಿಂಬವು ಇರುತ್ತದೆ.

೧. ಗುಣವ ಆಶ್ರಿತವಾಗಿಗುಣವಿರುವದಿಲ್ಲ. ಆದರೆ ಅದು ಆಕಾಶಾದಿ ದ್ರವ್ಯ

ಗಳ ಆಶ್ರಿತಗುಣವಿರುವದು, ಈನಿಯಮದಿಂದ ನೀಲ, ಪೀತಮೊದಲಾದ ವ
ಮಿಶ್ರಿತವಾದ ರೂಪವಿರುವವೋ ಈ ರೂಪಗುಣಗಳು ಅನಾಶ್ರಿತವಾಗಿರು
ದರಿಂದ ರೂಪರಹಿತವಾಗಿವೆ. ಈ ರೂಪರಹಿತ ನೀಲ, ಪೀತ, ಮೊದಲಾ
ವರ್ಣಗಳು ದರ್ಪಣ ಮೊದಲಾದ ಸ್ವಚ್ಛ ಉಪಾಧಿಯಲ್ಲಿ ಪ್ರತಿಬಿಂಬವಾ
ತೋರುವವು. ಇದರಂತೆ ರೂಪರಹಿತ ಆಕಾಶ, ಮತ್ತು ರೂಪರ
ಚೇತನ ಇವುಗಳ ಪ್ರತಿಬಿಂಬವು ಇರುವದು.

## || ೧೬೨ || ೩. ಅಥ ಮೇಘಾಕಾಶವರ್ಣನ.

|| ದೋಹಾ ||

ಜೋ ಮೇಘಹಿ ಅವಕಾಶದೆ । ಪುನಿ ತಾಮ್ಯೆ ಆಭಾಸ ||
ತಿನ ದೊನೂ ಕೂ ಕಹತ ಹೈ । ಬುಧಜನ ಮೇಘಾಕಾಸ ||

ಟೀಕಾ || ಮಘಮಂಡಲದಲ್ಲಿಯ ಅವಕಾಶ ಮತ್ತು ಮೇಘಗಳ ಜಲದಲ್ಲಿಯ ಆಕಾಶದ ಪ್ರತಿಬಿಂಬ, ಇವೆರಡಕ್ಕೂ ಮೇಘಾಕಾಶವೆನ್ನಬೇ ಈ ವಿಷಯದಲ್ಲಿ ಆಕ್ಷೇಪಣೆ ಯುಂಟಾಗುವದೇನಂದರೆ-ಮೇಘಗಳ ಆಕಾಶದಲ್ಲಿಯೇ ಇರುವವು. ಅದರಲ್ಲಿ ಜಲ, ಮತ್ತು ಆಕಾಶಪ್ರ ಬಿಂಬ ಇವು ಇರುವವೆಂಬುದನ್ನು ಪ್ರತ್ಯಕ್ಷವಾಗಿ ನೋಡದೆ ಹೇಗೆ ತಿಳಿ ಕೊಳ್ಳಬೇಕು. ಎಂಬ ಪ್ರಶ್ನೆಗೆ ಸಮಾಧಾನವೇನೆಂದರೆ—

|| ದೋ ಹಾ ||

ವರ್ಷತ ಮೇಘ ಅನಂತಜಲ । ಉದಕ ಸಹಿತ ಇಹಿ ಹೇತ ||
ದಕ ನಹಿ ನಭಿ ಆಭಾಸ ಬಿನ । ಇಮು ಪ್ರತಿಬಿಂಬ ಸಮೇತ ||

ಟೀಕಾ || ಯದ್ಯಪಿ ಮೇಘದಲ್ಲಿಯ ಜಲ, ಮತ್ತು ಪ್ರತಿಬಿಂಬಗ ಪ್ರತ್ಯಕ್ಷವಲ್ಲ. ತಥಾಪಿ ಅನುಮಾನದಿಂದ ತಿಳಿದುಬರುವದು. ಹ ದರೆ, (೧) ಮೇಘದಿಂದ ಜಲವೃಷ್ಟಿಯಾಗುವದು. ಇದರಮೇಲಿಂದ ವಾಗುವದೇನೆಂದರೆ ಮೇಘದಲ್ಲಿ ಜಲವಿರುವದು. ಒಂದು ವೇಳೆ ಮೇ ದಲ್ಲಿ ಜಲವಿದ್ದರೆ ಜಲವೃಷ್ಟಿಯು ಮೇಘದಿಂದ ಆಗುತ್ತಿದ್ದಿಲ್ಲ. ( ಮೇಘದಲ್ಲಿ ಜಲವುಂಟು, ಅದು ಆಕಾಶ ಪ್ರತಿಬಿಂಬ ಸಹಿತವಾಗಿ ಉಂಟು, ಕಾರಣವೇನೆಂದರೆ, ಎಲ್ಲಿ ಜಲವಿರುವದೋ, ಅಲ್ಲಿ ಆಕಾಶವು ಬಿಂಬ ಸಹಿತವಾಗಿಯೇ ಇರುವದು. ಹೀಗೆ ಮೇಘದಲ್ಲಿಯ ಜಲ ತ್ತು ಅದರಲ್ಲಿಯ ಪ್ರತಿಬಿಂಬದ ತರ್ಕವಾಗುತ್ತದೆ.

## || ೧೬೩ || ೪. ಅಥ ಮಹಾಕಾಶ ವರ್ಣನ.



|| ದೋ ಹಾ ||

ಬಾಹರ ಭೀತರ ಏಕರಸ । ವ್ಯಾಪಕ ಜೊ ನಭರೂಪ ||
ಮಹಾಕಾಸ ತಾಕೂ ಕಹೈ । ಕೋವಿದ ಬುದ್ಧಿ ಅನೂಪ ||೮೦||

ಟೀಕಾ || ಹೊರಗೆ[೧] ಮತ್ತು ಒಳಗೆ ಎಲ್ಲ ಕಡೆಯಲ್ಲಿ ಏಕಸಮುದಾವ ದವಾಗಿ ವ್ಯಾಪಕವಾಗಿರುವ ಆಕಾಶಕ್ಕೇ ಪಂಡಿತರು ಮಹಾಕಾಶವೆ ನ್ನುತ್ತಾರೆ.

ಟಿಪ್ಪಣಿ. ೧, ಬ್ರಹ್ಮಾಂಡದ ಹೊರಗೆ ಮತ್ತು ಒಳಗೆ.

## || ೧೬೪ || ನಾಲ್ಕು ಚೇತನಗಳ ವರ್ಣನೆಯು ಉಪೋದ್ಘಾತವು.

|| ದೋಹಾ ||

ಚತುರ್ಭ್ರಾಂತಿ ನಭಕೆ ಕಹೆ । ಲಚ್ಛನ ಶ್ರುತಿ ಅನುಸಾರ ||
ಅಬ ಚೇತನಕೆ ಸಿಷ್ಯ ಸುನ । ಜಾಸೂ ಲಹೈ ವಿಚಾರ ||೮೧||

ಟೀಕಾ || ಎಲೈ ಶಿಷ್ಯನೇ ! ನಾಲ್ಕು ಪ್ರಕಾರದ ಆಕಾಶಗಳ ಲಕ್ಷಣಗಳನ್ನು ಹೇಳಿದೆನು. ಇನ್ನು ನಾಲ್ಕು ಪ್ರಕಾರದ ಭ್ರಾಂತಿಯು ಚೇತನಗಳ ಲಕ್ಷಣ ಗಳನ್ನು ಕೇಳು, ಅವನ್ನು ಕೇಳುವದರಿಂದ ವಿಚಾರದ ಫಲವಾದ ಜ್ಞಾನವು ಪ್ರಾಪ್ತವಾಗುವದು. || ೮೧ ||

## || ೧೬೫ || ಅಥ ಕೂಟಸ್ಥ ವರ್ಣನ.

ಮತಿ ವಾ ವ್ಯಷ್ಟಿ ಅಜ್ಞಾನಕೊ । ಅಧಿಷ್ಠಾನ ಚೈತನ್ಯ ||
ಘಟಾಕಾಸ ಸಮ ಮಾನಿಯೆ || ಕೂಟಸ್ಥ ಅಜನ್ಯ || ೮೨ ||

ಟೀಕಾ || ಬುದ್ಧಿ, ಅಥವಾ ವ್ಯಷ್ಟಿ, ಅಜ್ಞಾನದ ಯಾವಅಧಿಷ್ಠಾನ ಚೇ ತನವಿರುವದೋ, ಅದು ಕೂಟಸ್ಥವೆನಿಸುವದು. (೧) ಯಾವ ಪಕ್ಷದಲ್ಲಿ ಬುದ್ಧಿಸಹಿತ ಚೇತನ ಜೀವವಿರುವದೋ, ಆ ಪಕ್ಷದಲ್ಲಿ ಬುದ್ಧಿಯು ಅಧಿ ಷ್ಠಾನ ಕೂಟಸ್ಥವೆನ್ನಬೇಕು. (೨) ಯಾವ ಪಕ್ಷದಲ್ಲಿ ವ್ಯಷ್ಟಿ ಅಜ್ಞಾನ ಸಹಿತ ಚೇತನ ಜೀವವಿರುವದೋ, ಆ ಪಕ್ಷದಲ್ಲಿ ವ್ಯಷ್ಟಿ ಅಜ್ಞಾನದ ಯಾವ ಅಧಿಷ್ಠಾನವಿರುವದೋ ಅದು ಕೂಟಸ್ಥವೆನ್ನಬೇಕು ಈ ಸ್ಥಾನ ದಲ್ಲಿ ಈ ಸಿದ್ಧಾಂತವಿರುವದು. ಜೀವನದ ಯಾವ ವಿಶೇಷಣ ಮತ್ತು ಅದರ ಅಧಿಷ್ಠಾನವುಂಟೋ ಅದನ್ನು ಕೂಟಸ್ಥವೆನ್ನಬೇಕು. ಆ ಕೂಟ ಸ್ಥವು ಅಜನ್ಯ ಅಂದರೆ, ಉತ್ಪತ್ತಿ ರಹಿತವದೆ. ಇದರ ಅಭಿಪ್ರಾಯವು ಈ

ಬಗೆಯಾಗಿರುವದು. ಹೇಗೆ ಬ್ರಹ್ಮಸಿಂದ ಭಿನ್ನವಾದ ಚಿದಾಭಾ ಉತ್ಪನ್ನವಾಗುವದೋ, ಹಾಗೆ ಇದು ಉತ್ಪನ್ನವಾಗುವದಿಲ್ಲ. ಆದರೆ ಬ್ರ ರೂಪವೇ ಆಗಿದೆ, ಘಟಾಕಾಶವು ಮಹಾಕಾಶದಿಂದ ಬೇರೆಯಾಗಲಿಲ್ಲ. ರೆ ಮಹಾಕಾಶರೂಪವೇ ಆಗಿರುವದು. ಹೀಗೆಯೇ ಅದನ್ನು ತಿಳಿಯಬೇ

ಇಲ್ಲಿ ಯಾವ ಕೂಟಸ್ಥವದೆಯೋ ಅದು ಆತ್ಮಪದ ಲಕ್ಷ್ಯಾರ್ಥ ಇದಕ್ಕೇ ಪ್ರತ್ಯಕ್ಕೆಂದೂ, ನಿಜರೂಪವೆಂದೂ, ಜೀವಸಾಕ್ಷಿಯೆಂದೂ, ಬೇಕು.

||೧೬೬|| ೨. ಅಥ ಜೀವವರ್ಣನ. ||೧೬೬-೧೭೦||

|| ದೋಹಾ ||

ಕಾಮ ಕರ್ಮಯುತ ಬುದ್ಧಿಮ್ಯೆ । ಜೊ ಚೇತ ಪ್ರತಿಬಿಂಬ ||
ಜೀವಕಹ್ಯೆ ವಿದ್ವಾನ ತಿಹಿ। ಜಲ ನಭ ತುಲ್ಯ ಸ ಬಿಂಬ ||೧೬

ಟೀಕಾ|| ಅನೇಕ ಕಾಮ್ಯಕರ್ಮ ಸಹಿತವಾಗಿದ್ದ ಯಾವ ಬುದ್ಧಿ ಮತ್ತು ಅದರಲ್ಲಿ ಯಾವ ಚೇತನದ ಪ್ರತಿಬಿಂಬವಿರುವದೋ, ಇದ ಜ್ಞಾನೀ ಜೀವನೆನ್ನುವರು. ಅದರಲ್ಲಿ ಕೇವಲ ಪ್ರತಿಬಿಂಬ ಮಾತ್ರ ಜೀವನೆನ್ನುವದಿಲ್ಲ. ಆದರೆಹೇಗೆ ಘಟಾಕಾಶ ಸಹಿತ ಆಕಾಶದ ಪ್ರತಿಬಿಂ ಕ್ಕೆ ಜಲಾಕಾಶವೆನ್ನುತ್ತಾರೆಯೋ,ಹಾಗೆಯೇ ಸಬಿಂಬ ಅಂದರೆ ಬಿಂಬ ಯಾವ ಕೂಟಸ್ಥ ಇದರ ಸಹಿತವಾದ ಚಿದಾಭಾಸಕ್ಕೆ ಜೀವನೆನ್ನುತ್ತಾ

ಈಕಾರಣದಿಂದ ಈ ಸಿದ್ಧಾಂತವಾಯಿತು. ಬುದ್ಧಿಯಲ್ಲಿ ಯಾವಚಿದಾಭಾ ಮತ್ತು ಬುದ್ಧಿಯ ಅಧಿಷ್ಠಾನ ಚೇತನ ಈ ಎರಡರ ಹೆಸರು ಜೀವವು.[೨]

ಟಿಪ್ಪಣಿ- [೧] "ಇಲ್ಲಿ ಚಿದಾಭಾಸ ಎಂಬ ಶಬ್ದದಿಂದ ಬುದ್ಧಿಸಹಿತ ಚಿದಾಭಾ ಗ್ರಹಣವದೆ. ಈ ಸಂಗತಿಯನ್ನು ಮುಂದೆ ಇದೇ ತರಂಗದ ೧೮೫ನೇ ದೋಹಾ ಟೀಕಾದ ಆರಂಭದಲ್ಲಿ ಗ್ರಂಥಕಾರನು ಬರೆದಿರುವನು. ಮತ್ತು ಪಂಚದಶೀ ಶ್ರೀವಿದ್ಯಾರಣ್ಯಸ್ವಾಮಿಗಳು ಸಹ ಬುದ್ಧಿ ಮತ್ತು ಇದರಲ್ಲಿ ಸ್ಥಿತವಾದ ಚಿದಾಭಾಸ, ಮತ್ತು ಈ ಎರಡರ ಅಧಿಷ್ಠಾನ ಕೂಟಸ್ಥಚೈತನ್ಯ ಈ ಮೂರ ಸಮೂಹಕ್ಕೆ ಜೀವವೆಂದು ಹೇಳಿದ್ದಾರೆ. ಈ ಕಾರಣದಿಂದ ಬುದ್ಧಿ ಅಥವಾ ಅವಿದ್ಯಾ, ಮತ್ತು ಇದರಲ್ಲಿ ಸ್ಥಿತವಾದ ಯಾವ ಚಿದಾಭಾಸ, ಮತ್ತು ಇವುಗ ಳ ಅಧಿಷ್ಠಾನ ಕೂಟಸ್ಥ ಈ ಮೂರೂ ಕೂಡಿ ಜೀವ ಎಂದು ಹೇಳಿದ್ದಾರೆ.

(೨) ಕಾಮನಾ, ಮತ್ತು ಕರ್ಮರೂಪ ಜಲಸಹಿತ ಬುದ್ಧಿರೂಪ ಘಟದಲ್ಲಿ ಚೇತ



ಪ್ರತಿಬಿಂಬವದೆ. ಈರೀತಿಯು ದುರ್ಗಮವಾಗಿದೆ. ಈ ಕಾರಣದಿಂದ ಸ್ಥೂಲ ದೇಹರೂಪ ಘಟದಲ್ಲಿ ನಖಶಿಖಾ ಪರ್ಯಂತಭರಿತವಾದ ಬುದ್ಧಿರೂಪ ಜಲ ವಿರುವದು. ಇದರಲ್ಲಿ ಚೇತನದ ಪ್ರತಿಬಿಂಬ ಮತ್ತು ಕೂಟಸ್ಥ ಈ ಎರ ಡರ ನಾಮವೇ ಜೀವವು. ಈ ರೀತಿಯು ಸುಗಮವಾಗಿರುವದು.

ಇಲ್ಲಿ ಕೇವಲ ಬುದ್ಧಿ ಸಹಿತ ಚಿದಾಭಾಸಕ್ಕೆ ತ್ವಂ ಪದದ ಅರ್ಥವು ಜೀವ ವೆಂದು ಹೇಳಿದರು. ಇದರಲ್ಲಿ ಭಾಗತ್ಯಾಗ ಲಕ್ಷಣವು ಸಂಭವಿಸುವದಿಲ್ಲ. ಆದರೆ ಎಲ್ಲವಾಚ್ಯಭಾಗದ ತ್ಯಾಗರೂಪದ ಜಹತ್ ಲಕ್ಷಣವು ಸಂಭವಿಸಿದೆ. ಹೀಗೆ ತಿಳಿಯುವದು ಆಚಾರ್ಯರ ಯುಕ್ತಿಗೆ ವಿರುದ್ಧವಾಗಿರುವದು.

ಅಧಿಷ್ಠಾನದಿಂದ ಅಭಿನ್ನವಾಗಿ ಅಧಿಷ್ಠಾನವನ್ನು ಆವರಿಸುವದಕ್ಕೇ ಅಧ್ಯಾಸ ವೆನ್ನುವರು. ಅಧಿಷ್ಠಾನದಿಂದ ಭಿನ್ನವಾಗಿ ಎಂದೂ ಆರೋಪ್ಯದ ಪ್ರತೀ ತಿಯು ಉಂಟಾಗುವದಿಲ್ಲ. ಈ ಅನುಭವದಿಂದ ಸಹ ವಿರುದ್ಧವದೆ.

ಈ ಕಾರಣದಿಂದ ಚಿದಾಭಾಸ ಸಹಿತ ಬುದ್ಧಿವಿಶಿಷ್ಟ ಕೂಟಸ್ಥಚೇತನವೇ ಜೀ ವವಾಗಿದೆ, ಹೀಗೆ ತಿಳಿಯುವದು ಯೋಗ್ಯವಾಗಿದೆ.

||೧೬೭|| ||ದೋಹಾ||

ಅಧಿಷ್ಠಾನ ಕೂಟಸ್ಥಸ್ಯೆ । ಹ್ವೈ ಆಭಾಸ ಬಹಾಲ ||
ರಕ್ತ ಪುಷ್ಪ ಊಪರ ಧರ್‍ಯೊ । ಸ್ಫಟಿಕ ಹೊ ಇ ಜಿಮಲಾಲ||

ಟೀಕಾ—ಪೂರ್ವ ದೋಹಾದಲ್ಲಿ ಬಿಂಬರೂಪ ಯಾವ ಕೂಟಸ್ಥವದೆಯೋ, ಆಕೂಟಸ್ಥ ಸಹಿತ ಆಭಾಸಕ್ಕೆ ಜೀವನೆಂದು ಹೇಳಿದೆ. ಈ ಕಾರಣದಿಂದ (೧) ಹೀಗೆ ಪ್ರತೀತವಾಗುವದಲ್ಲಾ! ಯಾವದು ಬುದ್ಧಿಯಲ್ಲಿ ಪ್ರತಿಬಿಂಬವದೆಯೋ, ಅದು ಕೂಟಸ್ಥದ್ದಿರುತ್ತದೆ; ಮತ್ತು ಹೊರಗಿನ ಬ್ರಹ್ಮ ದ್ದಿರುವದಿಲ್ಲ.ಯಾಕಂದರೆ ಯಾವದರ ಪ್ರತಿಬಿಂಬವಾಗುದೋ ಅದಕ್ಕೆ ಬಿಂ ಬವೆನ್ನುತ್ತಾರೆ. ಆ ಕೂಟಸ್ಥನಿಗೆ ಬಿಂಬವೆಂದು ಹೇಳಿದ್ದರಿಂದ ಇದರ ಪ್ರತಿ ಬಿಂಬವು ಅದೆ ಎಂದು ಪ್ರತೀತವಾಗುತ್ತದೆ. ಉದಾಹರಣ; ರಕ್ತಪುಷ್ಪದ ಮೇಲೆ ಹಿಡಿದ ಸ್ವಚ್ಛವಾದ ಸ್ಫಟಿಕದಲ್ಲಿ ಪುಷ್ಪದ ಆರಕ್ತತೆಯು ಪ್ರತೀತ ವಾಗುತ್ತದೆ.ಈ ರಕ್ತತೆಗೆ ಪುಷ್ಪದ ಪ್ರತಿಬಿಂಬವೆನ್ನಬೇಕು. ಇದರಂತೆ ಕೂ ಟಸ್ಥನ ಆಶ್ರಿತವಾದ ಯಾವ ಬುದ್ಧಿಯಲ್ಲಿ ಕೂಟಸ್ಥನ ಪ್ರಕಾಶಕ್ಕೇ ಪ್ರತಿ ಬಿಂಬವೆನ್ನಬೇಕು. ಸ್ಫಟಿಕವು ಹೇಗೆ ಸ್ವಚ್ಛವಾಗಿರುವದೋ ಹಾಗೆ ಬುದ್ಧಿ ಯು ಅತ್ಯಂತ ಸ್ವಚ್ಛವಾಗಿರುವದು. ಕಾರಣವೇನಂದರೆ ಬುದ್ಧಿಯು ಸತ್ವ ಗುಣದ ಕಾರ್ಯವಾಗಿದೆ, ಈ ಕಾರಣದಿಂದ ಕೂಟಸ್ಥನ ಪ್ರಕಾಶತೆಯು ಇದರಲ್ಲಿ ಪ್ರತಿಬಿಂಬವದೆ.

೨. ಯಾವಾಗ ತ್ವಗಿಂದ್ರಿಯದಿಂದ ಸ್ಪರ್ಶಗುಣ ಮತ್ತು ಇದರ ಆಶ್ರಯವಾದ ಘ ಟಾದಿಗಳ ಪ್ರತ್ಯಕ್ಷವಾಗುವದೋ, ಆಗ ಶರೀರರೂಪಗೋಲಕವನ್ನು ಬಿ ವೃತ್ತಿಯು ಹೊರಗೆ ಹೋಗುವದಿಲ್ಲ. ಆದರೆ ಶರೀರದ ಕ್ರಿಯೆಯಿಂದ ಅಥ ಅನ್ಯಕ್ರಿಯೆಯಿಂದ ಶರೀರರೂಪ ಗೋಲಕದೊಡನೆ ಸಂಯೋಗವನ್ನು ಹೊಂ ದಿದ ಘಟಾದಿ ವಿಷಯಗಳನ್ನೂ ಮತ್ತು ಇವುಗಳ ಆಶ್ರಿತವಾಗಿದ್ದ ಕಠಿಣ ಮೊದಲಾದ ಸ್ಪರ್ಶಗುಣಗಳನ್ನೂ ಶರೀರರೂಪ ಗೋಲಕದಲ್ಲಿ ಸ್ಥಿತವಾದ ಸಾಭಾಸ ಅಂತಃಕರಣವೃತ್ತಿಯು ವಿಷಯವನ್ನಾಗಿ ಮಾಡುತ್ತದೆ. ಈವೃತ್ತಿ ಯಿಂದ ಆಶ್ರಯಸಹಿತ ಸ್ಪರ್ಶದ ಆವರಣ ಭಂಗವಾಗುತ್ತದೆ. ಮತ್ತು ಚಿದಾ ಭಾಸವು ಅದನ್ನು ಪ್ರಕಾಶ ಮಾಡುತ್ತದೆ.

೩. ಯಾವಾಗ ರಸನೇಂದ್ರಿಯದಿಂದ ರಸವಿಷಯವು ಪ್ರತ್ಯಕ್ಷವಾಗುವದೋ, ಆಗ ಜಿಹ್ವಾರೂಪ ಗೋಲಕವನ್ನು ಬಿಟ್ಟು ವೃತ್ತಿಯು ಹೊರಗೆ ಹೋಗುವದಿಲ್ಲ ಆದರೆ ಜಿಹ್ವಾರೂಪ ಗೋಲಕಕ್ಕೆ ಯಾವಾಗ ರಸವಿಷಯದ ಸಂಯೋಗವಾ ಗುವದೋ, ಆಗ ಜಿಹ್ವೆಯ ಅಗ್ರಭಾಗವರ್ತಿಯಾದ ರಸನೇಂದ್ರಿಯದಲ್ಲಿ ಸ್ಥಿತವಾದ ಸಾಭಾಸವೃತ್ತಿಯು ರಸವನ್ನು ವಿಷಯವನ್ನಾಗಿ ಮಾಡುತ್ತದೆ ಆಗ ವೃತ್ತಿಯಿಂದ ರಸದ ಆವರಣ ಭಂಗವಾಗುತ್ತದೆ, ಮತ್ತು ಚಿದಾಭಾಸ ವು ಮಧುರಾದಿ ರಸಗಳನ್ನು ಪ್ರಕಾಶ ಮಾಡುತ್ತದೆ,

೪. ಯಾವಾಗ ಘ್ರಾಣೇಂದ್ರಿಯದಿಂದ ಗಂಧದ ಆಶ್ರಯದ ಪ್ರತ್ಯಕ್ಷವಾಗುವದೋ ಆಗ ನಾಸಿಕಾರೂಪ ಗೋಲಕದಿಂದ ಪುಷ್ಪಾದಿರೂಪ ಗಂಧದ ಆಶ್ರಯದ ಮತ್ತು ಅದರ ಸೂಕ್ಷ್ಮ ಅವಯವಗಳ ಸಂಯೋಗವಾಗುವದು. ಆಗ ನಾಸಿ ಕೆಯ ಅಗ್ರಭಾಗವರ್ತಿಯಾದ ಘ್ರಾಣೇಂದ್ರಿಯದಲ್ಲಿ ಸ್ಥಿತವಾದ ಸಾಭಾಸ ಅಂತಃಕರಣದ ವೃತ್ತಿಯು ಪುಷ್ಪಾದಿರೂಪ ದ್ರವ್ಯದ ಆಶ್ರಿತವಾದ ಗಂಧವ ನ್ನು ಮಾತ್ರ ವಿಷಯವನ್ನಾಗಿ ಮಾಡುತ್ತದೆ ಆಗ ವೃತ್ತಿಭಾಗದಿಂದ ಗಂ ಧದ ಆವರಣ ಭಂಗವಾಗುತ್ತದೆ. ಮತ್ತು ವೃತ್ತಿಯಲ್ಲಿ ಸ್ಥಿತವಾದ ಚಿದಾಭಾಸ ಭಾಗವು ಗಂಧದ ಪ್ರಕಾಶವನ್ನು ಮಾಡುತ್ತದೆ.

ಇದು ಶ್ರೋತ್ರಾದಿಗಳ ಪ್ರತ್ಯಕ್ಷದ ರೀತಿಯದೆ.

(೪) ಯಾರ ಮತದಲ್ಲಿ ಪಂಚ ಭೂತಗಳನು ಅಂಗೀಕರಿಸಿರುವರೋ, ಅ ದೇಹಾತ್ಮವಾದಿಗಳಿಗೆ ಲೋಕಾಯತರೆನ್ನುತ್ತಾರೆ. ಇವರಿಂದ ವಿಪ ವಾಗಿ ಆಕಾಶತತ್ವವನು ಬಿಟ್ಟು ಉಳಿದ ನಾಲ್ಕು ಭೂತಗಳನ್ನೇ ಅಂಗೀ ಸಿದ ದೇಹಾತ್ಮವಾದಿಗಳಿಗೆ ಚಾರ್ವಾಕರೆನ್ನುತ್ತಾರೆ.

(೫) ಪ್ರತ್ಯಕ್ಷ ಪ್ರಮೆಯು, ಮತ್ತು ಪ್ರಮೆಯು ನಿರೂಪಣವನ್ನು ವೃತ್ತಿರತ್ನಾ ವಲಿಯ ದ್ವಿತೀಯ ರತ್ನದಲ್ಲಿ ಮತ್ತು ವೃತ್ತಿ ಪ್ರಭಾಕರದ ಪ್ರಥ ಪ್ರಕಾಶದಲ್ಲಿ ಸವಿಸ್ತರವಾಗಿ ಮಾಡಲ್ಪಟ್ಟಿದೆ

(೬) ವೈಶೇಷಿಕ ಶಾಸ್ತ್ರದ ಕರ್ತೃವಿಗೆ ಕಣಭುಕ್ ಎಂದೂ ಅನುತ್ತಾರೆ.

[೭) ಬೌದ್ಧಮತದ.



[೮] ಅನುಮಾನ ಪ್ರಮಾಣ, ಮತ್ತು ಅನುಮಿತಿಪ್ರಮೆಯು ನಿರೂಪಣವನ್ನು ವೃತ್ತಿರತ್ನಾವಲಿಯ ತೃತೀಯ ರತ್ನದಲ್ಲಿ ಮತ್ತು ವೃತ್ತಿಪ್ರಭಾಕರದ ದ್ವಿತೀ ಯ ಪ್ರಕಾಶದಲ್ಲಿ ಮಾಡಲ್ಪಟ್ಟದೆ.

(೯) ಶಬ್ದಪ್ರಮಾಣ, ಮತ್ತು ಶಾಬ್ದೀ ಪ್ರಮೇಯ ನಿರೂಪಣವನ್ನು ವೃತ್ತಿರ ತ್ನಾವಲಿಯ ಪಂಚಮ ರತ್ನದಲ್ಲಿ ಮತ್ತು ವೃತ್ತಿಪ್ರಭಾಕರದ ತೃತೀಯ ಪ್ರಕಾಶದಲ್ಲಿ ಮಾಡಲ್ಪಟ್ಟದೆ.

[೧೦] ಕಾಡುಕೋಣ.

(೧೧) ಉಪಮಾನಪ್ರಮಾಣ, ಮತ್ತು ಉಪಮಿತಿಪ್ರಮೆಯು ನಿರೂಪಣವನ್ನು ವೃತ್ತಿರತ್ನಾವಲಿಯ ಚತುರ್ಥರತ್ನದಲ್ಲಿ ಮತ್ತು ವೃತ್ತಿಪ್ರಭಾಕರದ ಪಂಚಮ ಪ್ರಕಾಶದಲ್ಲಿ ಮಾಡಲ್ಪಟ್ಟದೆ.

[೧೨] ಅರ್ಥಾಪತ್ತಿಪ್ರಮಾಣ, ಮತ್ತು ಪ್ರಮೆಯ ನಿರೂಪಣವನ್ನು ವೃತ್ತಿರ ತ್ನಾವಲಿಯ ಷಷ್ಟರತ್ನದಲ್ಲಿ ಮತ್ತು ವೃತ್ತಿಪ್ರಭಾಕರದ ಪಂಚಮ ಪ್ರಕಾಶ ದಲ್ಲಿ ಮಾಡಲ್ಪಟ್ಟದೆ, ಇಲ್ಲಿ ಟೀಕಾದಲ್ಲಿ ದೃಷ್ಟಿದೋಷದಿಂದ ಸಂಪಾದ್ಯ, ಮತ್ತು ಸಂಪಾದಕ ಶಬ್ದಗಳ ವಿಪರೀತ ಉಲ್ಲೇಖವಿತ್ತು ಅದನ್ನು ನಾವು ವೃತ್ತಿಪ್ರಭಾಕರದ ಅನುಸಾರವಾಗಿ ಯಥಾಸ್ಥಿತವಾಗಿ ಮಾಡಿದ್ದೇವೆ. ಇಲ್ಲಿ ಸಂಪಾದ್ಯವು ಕಾರ್ಯವದೆ. ಮತ್ತು ಸಂಪಾದಕವು ಕಾರಣವದೆ.

(೧೩) ಅನುಲಬ್ಧಿ ಪ್ರಮಾಣ, ಮತ್ತು ಅನುಪಲಬ್ಧಿ ಪ್ರಮಾನಾಮ, ಅಭಾವಪ್ರ ಮೆಯ ನಿರೂಪಣವನ್ನು ವೃತ್ತಿರತ್ನಾವಲಿಯ ಸಪ್ತಮರತ್ನದಲ್ಲಿ ಮತ್ತು ಪ್ರಭಾಕರದ ಷಷ್ಟಪ್ರಕಾಶದಲ್ಲಿ ಮಾಡಲ್ಪಟ್ಟಿರುವದು.

(೧೪] ಯಥಾರ್ಥ ಅನುಭವವು ಪ್ರಮಾ ಅದೆ. ಈ ಪ್ರಮೆಯ ಲಕ್ಷಣವು ಸ್ಮೃತಿಯಿಂದ ವ್ಯಾವೃತ್ತನಾಮ ಭಿನ್ನವದೆ.

[೧೫] ಯಥಾರ್ಥಜ್ಞಾನವು ಪ್ರಮಾ ಅದೆ. ಈ ಪ್ರಮೆಯ ಲಕ್ಷಣವು ಸಹ ಸ್ಮೃತಿಸಾಧಾರಣವದೆ.

(೧೬) ಇಲ್ಲಿ ಈ ವಿವೇಕವದೆ, ೧. ಭ್ರಮರೂಪ ಅನುಭವದ ಸಂಸ್ಕಾರದಿಂದ ಜ ನ್ಯವಾದ ಸ್ಮೃತಿಯು ಬಾಧಿತಾರ್ಥವನ್ನು ವಿಷಯವನ್ನಾಗಿ ಮಾಡಿಕೊಳ್ಳು ವದಾದ್ದರಿಂದ ಅ ಯಥಾರ್ಥವದೆ. ಇದರಿಂದ ಅದು ಅವಿದ್ಯೆಯ ವೃತ್ತಿಯ ದೆ, ಅಂತಃಕರಣದ ವೃತ್ತಿಯಲ್ಲ. ಮತ್ತು ಸಾಕ್ಷಿಯ ಆಶ್ರಿತವದೆ, ಪ್ರಮಾ ತಾದ ಆಶ್ರಯವಲ್ಲ. ೨. ಯಾವದು ಯಥಾರ್ಥ ಅನುಭವದ ಸಂಸ್ಕಾರ ದಿಂದ ಜನ್ಯವಾದ ಸ್ಮೃತಿಜ್ಞಾನವದೆಯೋ, ಅದು ಅಬಾಧಿತ ಅರ್ಥವನ್ನು ವಿ ಷಯವನ್ನಾಗಿ ಮಾಡಿಕೊಳ್ಳುವದಾದ್ದರಿಂದ ಯಥಾರ್ಥ ಜ್ಞಾನವದೆ. ಇದರಿಂದ ಇದು ಅಂತಃಕರಣದ ವೃತ್ತಿಯಲ್ಲ. ಅವಿದ್ಯೆಯ ವೃತ್ತಿಯಲ್ಲ ಮತ್ತು ಪ್ರಮಾತಾದ ಆಶ್ರಿತವದೆ ಸಾಕ್ಷಿಯ ಆಶ್ರಿತವಲ್ಲ. ಪರಂತು ಸ್ಮೃತಿಜ್ಞಾನದಲ್ಲಿ ಪೂರ್ವಾಚಾರ್ಯರು ಪ್ರಮಾ ವ್ಯವಹಾರವನ್ನು ಮಾಡಿರುವ

ದಿಲ್ಲ, ಈ ಕಾರಣದಿಂದ ಉಭಯಪ್ರಕಾರದ ಸ್ಮೃತಿಗಳು ಅಪ್ರಮಾ...
ಇವುಗಳಲ್ಲಿ ಯಥಾಸ್ಮೃತಿ, ಅಯಥಾರ್ಥ, ಅಪ್ರಮಾ ಎಂದು ಎರಡು...
ದಗಳು.

೧೭. ೧. ಯಾವದು ಕೇವಲ ಅಸಾಧಾರಣ ಕಾರಣಕ್ಕೆ ಕರಣವೆಂದು ಹೇಳ... ಅಲ್ಲಿ ಎರಡು ಅಸಾಧಾರಣ ಕಾರಣವಾಗುವವು. ಅಲ್ಲಿ ಯಾವದು ಕಾ... ಕರಣವಧೆ. ಎಂಬದು ನಿಶ್ಚಯಸಾಗುವದಿಲ್ಲ. ಈ ಕಾರಣದಿಂದ ಎ... ಕಾರಣಗಳಲ್ಲಿ ಒಂದಕ್ಕೆ ವ್ಯಾಪಾರರೂಪವೆಂದು ತಿಳಿದುಕೊಂಡು ಅ... ವಾದ ಎರಡನೇ ಕಾರಣಕ್ಕೆ ವ್ಯಾಪಾರ ಮಾಡತಕ್ಕ ಅಸಾಧಾರಣ ಕಾ... ಕರಣ ಎಂದು ಹೇಳಬೇಕು. ೨. ಯಾವ ಕಾರ್ಯಕ್ಕೆ ಯಾವದಾದ... ದು ದ್ವಾರದಿಂದ ಜನಿಸುವದೋ ಅದು ವ್ಯಾಪಾರ ಮಾಡತಕ್ಕ ಕಾರಣ... ದು ಹೇಳಬೇಕು. ಇದೇ ಕರಣವದೆ. ಹೇಗೆಂದರೆ ಕಪಾಲವು ಸಂ... ಗದ್ವಾರಾ ಘಟನನ್ನು ನಿರ್ಮಿಸುತ್ತದೆ. ಈ ಕಾರಣದಿಂದ ಕಪಾಲವು... ಟದ ವ್ಯಾಪಾರ ಮಾಡತಕ್ಕ ಕಾರಣವದೆ. ಇದೇ ಘಟದ ಕರಣವು...

೩ ಯಾವ ಕಾರ್ಯಕ್ಕೆ ಯಾವದಾದರೊಂದು ದ್ವಾರದಿಂದ ಜನಿಸುವದೆ... ಷ್ಟಕ್ಕೆ ತಾನೇ ಜನಿಸುವದೋ ಅದು ಕೇವಲ ಕಾರಣವದೆ. ಕರಣ... ಹೇಗೆಂದರೆ—ಎರಡು ಕಪಾಲಗಳ ಸಂಯೋಗವು ಘಟನನ್ನು ಸಾಕ್ಷಾ... ರ್ಮಾಣಮಾಡುತ್ತದೆ. ಈಕಾರಣದಿಂದ ಅದು ಘಟದ ಕೇವಲ ಕಾರಣವ... ಕರಣವಲ್ಲ.

ಯದ್ಯಪಿ ಈಗ ಹೇಳಿದ ಕರಣಗಳ ಲಕ್ಷಣ ವಾದ ಪ್ರತ್ಯಕ್ಷ, ಅನುಮಾ... ಮತ್ತು ಶಬ್ದ ಈ ಮೂರೂ ಪ್ರಮಾಣವಿಷಯದಲ್ಲಿ ಸಂಭವಿಸುತ್ತವೆ. ... ಪಿ ಉಪಮಾನ ಅರ್ಥಾಪತ್ತಿ, ಮತ್ತು ಅನುಪಲಬ್ಧಿ ಈ ಮೂರು ಪ್ರಮಾ... ಗಳು ಉಪಮಿತಿ ಮೊದಲಾದ ಪ್ರಮಾಗಳ ನಿರ್ವ್ಯಾಪಾರವು ಕಾರಣವಾ... ಇವುಗಳಲ್ಲಿ ವುಕ್ತಕರಣಗಳ ಲಕ್ಷಣಗಳ ಅವ್ಯಾಪ್ತಿಯಾಗುವದು. ಈಕಾ... ಣದಿಂದ 'ವ್ಯಾಪಾರದಿಂದ ಭಿನ್ನವಾದ ಅಸಾಧಾರಣ ಕಾರಣವು ಕರಣ... ದು ಹೇಳಿದೆ, ಈ ಕರಣದ ಲಕ್ಷಣವು ನಿರ್ದೋಷವದೆ. ಯಾಕಂದರೆ... ವ್ಯಾಪಾರವದೆ. ಎಲ್ಲಿ ವ್ಯಾಪಾರವಿಲ್ಲ. ಎರಡೂ ಸ್ಥಳದಲ್ಲಿ ವ್ಯಾಪಾ... ದಿಂದ ಭಿನ್ನತ್ವವು ಉಂಟಾಗುವದರಿಂದ

೧೮. ಇಲ್ಲಿ ಆದಿಶಬ್ದದಿಂದ ಈಶ್ವರನ ಜ್ಞಾನ, ಈಶ್ವರನ ಪ್ರಯತ್ನ ಕಾಲದಿ... ಅದೃಷ್ಟ, ಪ್ರಾಗಭಾವ ಪ್ರತಿಬಂಧಭಾವ, ಎಂದು ಏಳೂ ಗ್ರಹಣಮಾಡ... ಟ್ಟವೆ. ಇವೆಲ್ಲವು ಸರ್ವಕಾರ್ಯಗಳ ಸಾಧಾರಣ ಕಾರಣವಾಗಿವೆ.

[೧೯] ಕಾರ್ಯದಿಂದ ಸಂಬಂಧೀ.

[೨೦] ಆಶ್ರಯದ ಕಾರ್ಯದಲ್ಲಿ ಅಸಂಬಂಧಿತ್ವವು 'ಅಪ್ರವೇಶ' ಎಂದುಹೇಳಿದ್ದಾ...

[೨೧) ಅವಿವೇಕಿಗಳಾದ ಜನರಿಂದ ಅಂತಃಕರಣರೂಪ ವಿಶೇಷಣದ ಧರ್ಮವು... ಸಂಸಾರದ ಅಜ್ಞಾನಕೃತ ಭ್ರಾಂತಿಯಿಂದ ವಿಶೇಷಣ ಸಹಿತ ಚೇತನ... ಪ್ರತೀತಿ, ಮತ್ತು ಕಥನರೂಪ ವ್ಯವಹಾರವು ಮಾಡಲ್ಪಟ್ಟದೆ.

[೨೨] ಯದ್ಯಪಿ ಆಭಾಸವಾದದಲ್ಲಿ ಆಭಾಸದ ಕಲ್ಪನೆಯು ಅಧಿಕವಾಗಿ ಮಾಡಲ್ಪ... ಟ್ಟದೆ, ಅವಚ್ಛೇದವಾದದಲ್ಲಿಮಾಡಿರುವದಿಲ್ಲ, ಈಕಾರಣದಿಂದ ಆಭಾಸವಾದ...



ರವನವೆ, ಅವಚ್ಛೇದವಾದದಲ್ಲಿ ಲಘುತ್ವವದೆ. ತಥಾಪಿ ಮಂದಬುದ್ಧಿಗಳಾದ ಜಿಜ್ಞಾಸುಗಳ ಬುದ್ಧಿಯಲ್ಲಿ ಆಭಾಸವಾದದ ಆರೋಪವು ಜನ್ಯಾಗಿ ಬಿಂಬಿಸುತ್ತದೆ. ಈ ಅಭಿಪ್ರಾಯದಿಂದ ಇಲ್ಲಿ ಆಭಾಸವಾದದ ಸ್ತುತಿಯನ್ನು ಮಾಡಿದ್ದೇವೆ. ಭಾಷ್ಯಕಾರರೇ ಮೊದಲಾದವರ ಅಭಿಪ್ರಾಯವಾದರೂ ಹೀಗೆಯೇ ಇರುವದು.

## ೨೦೬॥ ಇಂದ್ರಿಯಗಳ ಸಂಬಂಧವಿಲ್ಲದೆ ಅಹಂಬ್ರಹ್ಮ, ಎಂಬ ಜ್ಞಾನವು ಪ್ರತ್ಯಕ್ಷ ಹೇಗೆ ಸಂಭವಿಸುವದು !

॥೨೦೬-೨೧೦॥ ತತ್ವದೃಷ್ಟಿರುವಾಚ ॥

ದೋಹಾ

...ದ್ರಿಯಕೆ ಸಂಬಂಧ ಬಿನ । 'ಅಹಂ ಬ್ರಹ್ಮ,ಯಹಜ್ಞಾನ ॥
...ಸೈ ಹ್ವೈ ಪ್ರತ್ಯಚ್ಛ ಪ್ರಭು । ಸೋ ಕೂ ಕಹೌ ಬಖಾನ ॥

ಟೀಕಾ ॥ ಅಪರೋಕ್ಷ ಬ್ರಹ್ಮಜ್ಞಾನದಿಂದ ಸಕಲ ಅವಿದ್ಯಾಜಾಲವ ...ಶವಾಗುತ್ತದೆ. ಪರೋಕ್ಷ ಜ್ಞಾನದಿಂದ ನಾಶವಾಗುವದಿಲ್ಲ, ಎಂದು ...ರ್ವದಲ್ಲಿ ಹೇಳಿದೆ. ಈ ವಿಷಯದಲ್ಲಿ ಉಂಟಾದ ಆಕ್ಷೇಪಣೆಯೇನೆಂ...ರೆ ಬ್ರಹ್ಮನ ಜ್ಞಾನವು ಪ್ರತ್ಯಕ್ಷವಾಗುವದಿಲ್ಲ. ಕಾರಣವೇನೆಂದರೆ:— ...ಇಂದ್ರಿಯ ಜನ್ಯ ಜ್ಞಾನವು ಪ್ರತ್ಯಕ್ಷವಾಗುತ್ತದೆ. ಬ್ರಹ್ಮಜ್ಞಾನವು ಇಂ...ದ್ರಿಯ ಜನ್ಯವಾಗಿ ಸಂಭವಿಸುವದಿಲ್ಲ. ಹೇಗೆಂದರೆ;—

## ॥೨೦೭॥ ಬ್ರಹ್ಮನು ನೇತ್ರಗಳಿಗೆ ಅವಿಷಯನು.

(ರಾಮಕೃಷ್ಣಾದಿಗಳ ಶರೀರವು ಬ್ರಹ್ಮವಲ್ಲ.)

ನೇತ್ರೇಂದ್ರಿಯದಿಂದ ರೂಪವುಳ್ಳ ವಸ್ತುಗಳ ಅಥವಾ ನೀಲ ಮೊದ...ದ ವರ್ಣಗಳ ಜ್ಞಾನವಾಗುತ್ತದೆ. ಬ್ರಹ್ಮನಿಗಂತೂ ರೂಪವಿಲ್ಲವಾದ್ದ...ದ ನೇತ್ರೇಂದ್ರಿಯ ಜನ್ಯಜ್ಞಾನದಿಂದ ಬ್ರಹ್ಮಜ್ಞಾನವು ಆಗುವದಿಲ್ಲ.

ರಾಮಕೃಷ್ಣಾದಿಗಳ ಮನುಷ್ಯಾಕಾರ ಮೂರ್ತಿಗಳು, ಯದ್ಯಪಿ ...ಪವುಳ್ಳವುಗಳಾಗಿದ್ದರೂ ಆ ಮೂರ್ತಿಗಳು ಮಾಯಾರಚಿತವಾಗಿವೆ, ಏ...ದ್ದಾಲಿವೆ, ಆ ಮೂರ್ತಿಗಳು ಬ್ರಹ್ಮವಲ್ಲ.

ಪುರಾಣಗಳಲ್ಲಿ ರಾಮಕೃಷ್ಣಾದಿಗಳಿಗೆ ಬ್ರಹ್ಮರೂಪತ್ವವನ್ನು ಹೇಳಿ...ದ್ದಾರೆ. ಅವು ಅವರ ಶರೀರರೂಪ ಮೂರ್ತಿಗಳೇ, ಬ್ರಹ್ಮರೂಪ ಅವೆ. ಈ ಅಭಿಪ್ರಾಯದಿಂದ ಹೇಳಿಲ್ಲ. ಆದರೆ ಅವರ ಶರೀರಗಳ ಅಧಿಷ್ಠಾನ ಚೈತನ್ಯವು ಬ್ರಹ್ಮನದೆ. ಈ ಅಭಿಪ್ರಾಯದಿಂದ ಹೇಳಿದರು. ಈ ವಿಷ

ಯದಲ್ಲಿ ಹೀಗೆ ಆಕ್ಷೇಪಣೆಯು ಉಂಟಾಗುವದಲ್ಲಾ ? ಸರ್ವ ಶರೀ ಅಧಿಷ್ಠಾನ ಚೇತನವು ಬ್ರಹ್ಮವಿದೆ. ಈ ಕಾರಣದಿಂದ ಅಧಿಷ್ಠಾನ ನದ ಅಭಿಪ್ರಾಯದಿಂದ ರಾಮಕೃಷ್ಣಾದಿಗಳಿಗೆ ಬ್ರಹ್ಮರೂಪವ ಸರ್ವ ಶರೀರಗಳ ಅಧಿಷ್ಠಾನ ಚೇತನವು ಬ್ರಹ್ಮವಾಗಿರುವದರಿಂದ ಪಶು ಪಕ್ಷಿ ಮೊದಲಾದ ಶರೀರಗಳೆಲ್ಲವು ಬ್ರಹ್ಮರೂಪವೇ ಆಗಬೇಕಾ ಇವುಗಳ ಸಮಾನ ಯೋಗ್ಯತೆಯವರೇ ರಾಮಕೃಷ್ಣಾದಿಗಳಂತಾ ಹೀಗೆ ಆಗುವುದಿಲ್ಲ. ರಾಮಕೃಷ್ಣಾದಿಗಳ ಅಧಿಷ್ಠಾನ ಚೇತನವು ವೆಂಬ ಅಭಿಪ್ರಾಯದಿಂದ ಬ್ರಹ್ಮರೂಪವನ್ನು ಹೇಳಲಿಲ್ಲ. ಅವ ಜೀವನಗಳಿಗಿಂತ ಇವರಲ್ಲಿ ವಿಶೇಷ ರೂಪತೆಯು ಸಿದ್ಧಿಯಿರುವ ರಾಮಕೃಷ್ಣಾದಿಗಳ ಶರೀರಗಳು ಬ್ರಹ್ಮವಾಗಿರುವದೆಂದು ತಿಳಿಯು ಯೋಗ್ಯವದೆ, ಇದು ಸರಿಯಾದದ್ದಲ್ಲ. ಯಾಕೆಂದರೆ, ಶರೀರಬಾಧ ಅವರ ಶರೀರಗಳಿಗೆ ಬ್ರಹ್ಮರೂಪವೆಂದು ತಿಳಿದುಕೊಂಡರೆ (೧) ಸರ್ವ ರಗಳ ಬಾಧಮಾಡಿ ಸರ್ವಶರೀರಗಳು ಬ್ರಹ್ಮರೂಪವೇ ಅವೆ. (೨) ಮಾಡದ ಹೊರ್ತು ಅನ್ಯಶರೀರಗಳಂತೆ ಹಸ್ತಪಾದಾದಿ ಅವಯವ ರೂಪವಾನ, ಕ್ರಿಯಾವಾನ, ಶರೀರಗಳಿಗೂ ನಿರವಯವ, ನಿರೂಪ ಅಕ್ರಿ ನಾದ ಬ್ರಹ್ಮನಿಗೂ ಅಭೇದವು ಉಂಟಾಗಲಾರದಾದ ಕಾರಣ ರಾ ಷ್ಣಾದಿಗಳ ಶರೀರಗಳು ಬ್ರಹ್ಮವಲ್ಲ, ಆದರೂ ಇಷ್ಟು ಭೇದವದೆ.

(೧) ಜೀವಗಳ ಶರೀರಗಳು ಪಾಪಪುಣ್ಯಾದಿಗಳ ಅಧೀನವಾಗಿ (೨) ಭೂತಗಳ ಕಾರ್ಯವದೆ.(೩)ಜೀವಗಳಿಗೆ ಅವಿದ್ಯಾಬಲದಿಂದ ದೇಹಾ ಅನಾತ್ಮ ಪದಾರ್ಥಗಳಲ್ಲಿ "ಅಹಂ" ಮಮಾಧ್ಯಾಸಗಳು ಅವೆ. ಆಚಾ ಉಪದೇಶದಿಂದ ಅಧ್ಯಾಸಗಳ ನಿವೃತ್ತಿಯಾಗುವದು.

(೧) ರಾಮಕೃಷ್ಣಾದಿಗಳ ಶರೀರಗಳು ಪಾಪ ಪುಣ್ಯಗಳಿಂದ ರ ವಾಗಿರುವದಿಲ್ಲ. ಅವು ಭೂತಗಳ ಕಾರ್ಯವಿಲ್ಲ. (೧) ಸೃಷ್ಟಿಯ ಕಾಲದಲ್ಲಿ ಯಾವಾಗ ಪ್ರಾಣಿಗಳ ಕರ್ಮವು ಭೋಗಕೊಡುವದಕ್ಕೆ ಸನ್ಮು ವಾಗುವದೋ, ಆಗ ಆಪ್ತಕಾಮನಾದ ಈಶ್ವರನು, ಅದರಲ್ಲಿ ಪ್ರಾಣಿ ಕರ್ಮಾನುಸಾರ "ಜಗದುತ್ಪತ್ತಿ ಮಾಡುವೆನು" ಎಂಬ ಸಂಕಲ್ಪವುಳ್ಳವ ಗುವನು. ಆ ಸಂಕಲ್ಪದಿಂದ ಜಗತ್ತಿನ ಉತ್ಪತ್ತಿರೂಪ ಸೃಷ್ಟಿಯು ಆ ತ್ತದೆ. (೨) ಇದರಂತೆ ಸೃಷ್ಟಿಯಾದ ಬಳಿಕ ಸಹ "ನಾನು ಜಗತ್ತಿನ ಪಾ ಲನಮಾಡುವೆನು." ಎಂದು ಈಶ್ವರನ ಸಂಕಲ್ಪವಾಗುವದು. ಈ ಸಂಕ ದಿಂದ ಪಾಲನವಾಗುವದು. ಕರ್ಮಗಳ ಅನುಸಾರವಾಗಿ ಸುಖದುಃಖ



ಯದಕ್ಕೆ ಪಾಲನವೆನ್ನುತ್ತಾರೆ. (೩) ಈ ಪಾಲನ ಸಂಕಲ್ಪದ ಮಧ್ಯದಲ್ಲಿ ಉಪಾಸಕ ಪುರುಷನ ಉಪಾಸನಾ ಬಲದಿಂದ ಈಶ್ವರನಿಗೆ ಹೀಗೆ ಸಂಕಲ್ಪ ವಾಗುವದು. "ರಾಮಕೃಷ್ಣಾದಿ ನಾಮಸಹಿತ ಮೂರ್ತಿಯು ನನ್ನಿಂದಾಗೂ ಪ್ರಕಟವಾಗಬೇಕು." ಈ ಈಶ್ವರ ಸಂಕಲ್ಪದಿಂದ ವಿಶೇಷ ನಾಮರೂಪ ಸಹಿತ ಈಶ್ವರನಲ್ಲಿ ರಾಮಕೃಷ್ಣಾದಿಕ ನಾಮ, ಪೀತಾಂಬರಾದಿ ಶ್ಯಾಮಶುಂ ದ ವಿಗ್ರಹರೂಪಗಳ ಉತ್ಪತ್ತಿಯಾಗುತ್ತದೆ. ಈ ವಿಗ್ರಹಗಳು ಕರ್ಮಾಧೀನ ವಲ್ಲ.

ಯದ್ಯಪಿ ರಾಮಕೃಷ್ಣಾದಿಗಳ ವಿಗ್ರಹದಿಂದ ಸಾಧುಗಳಿಗೆ, ಮತ್ತು ದುಷ್ಟರಿಗೆ ಕ್ರಮವಾಗಿ ಸುಖದುಃಖಗಳು ಆಗುತ್ತವೆ. ಅವರವರ ಸುಖ ದುಃಖಗಳ ಹೇತುವು ಅವರವರ ಪುಣ್ಯಪಾಪದಿಂದ ರಚಿತವಾಗಿವೆ. ಈ ಕಾ ರಣದಿಂದ ಪುಣ್ಯಪಾಪಾಧೀನವೆನ್ನುವರು. ಈ ರೀತಿ (೧) ಅವತಾರಶರೀರಗ ಳು, ಸಾಧುಪುರುಷರಿಗೆ ಸುಖದ ಹೇತುವಾಗುವದರ ಸಲುವಾಗಿ ಸಾಧುಪು ರುಷರ ಪುಣ್ಯಸಮುದಾಯದಿಂದ ರಚಿತವಾಗಿವೆ. (೨) ಇದರಂತೆ ಅಸುರಾದಿ ಅಸಾಧುಪುರುಷರಿಗೆ ದುಃಖದ ಹೇತುವಾಗುವದರ ಸಲುವಾಗಿ ಅವರ ಪಾ ಪದಿಂದ ರಚಿತವದೆ.

ಈ ಕಾರಣದಿಂದ "ಅವತಾರ ಶರೀರಗಳು ಪುಣ್ಯಪಾಪಗಳ ಅಧೀನ ವಲ್ಲ" ಎಂದು ಹೇಳುವದು ಸಂಭವಿಸುವದಿಲ್ಲ.

ತಥಾಪಿ ಜೀವವು ಪೂರ್ವಶರೀರದಲ್ಲಿ ಪುಣ್ಯಪಾಪ ಕರ್ಮಗಳನ್ನು ಮಾ ಡುವದು. ಇವುಗಳ ಫಲವು ಉತ್ತರಶರೀರದಲ್ಲಿ ಆ ಜೀವಕ್ಕೆ ಸುಖದುಃ ಖಗಳ ರೂಪವಾಗಿ ಪರಿಣಮಿಸುವದು. ಹೀಗೆ ಇದ್ದದರಿಂದ ಶರೀರಾಭಿ ಮಾನಿ ಜೀವನು ಪೂರ್ವಶರೀರದ ಪುಣ್ಯಪಾಪಾಧೀನವಾಗಿ ಉತ್ತರ ಶರೀರ ವೆಂದು ಹೇಳುತ್ತಾರೆ. ಹೀಗೆ ರಾಮಕೃಷ್ಣಾದಿಗಳ ಶರೀರಗಳು ಯದ್ಯಪಿ ಸಾಧು ಅಸಾಧು ಪುರುಷರ ಪುಣ್ಯಪಾಪಾಧೀನವದೆ. ಮತ್ತು ಅವರಿಗೆ ಸುಖದುಃಖಗಳ ಹೇತುವದೆ. ತಥಾಪಿ ರಾಮಕೃಷ್ಣಾದಿಗಳ ಅವತಾರ ಶರೀರಗಳು ಸ್ವಂತದ ಪುಣ್ಯಪಾಪಗಳಿಂದ ರಚಿತವಾಗಿರುವದಿಲ್ಲ, ಮತ್ತು ಅವರಿಗೆ ತಮ್ಮ ಶರೀರದಿಂದ ಸುಖದುಃಖಗಳ ಭೋಗವು ಉಂಟಾಗುವ ದಿಲ್ಲ. ಈ ಕಾರಣದಿಂದ ರಾಮಕೃಷ್ಣಾದಿಗಳ ಶರೀರಗಳು ತಮ್ಮ ಪುಣ್ಯ ಪಾಪಾಧೀನವಾಗಿರುವದಿಲ್ಲ, ಇದು ಯಥಾರ್ಥವದೆ.

ಹೀಗೆ ಭೂತಗಳ ಪರಿಣಾಮವು ಸಹ ರಾಮಕೃಷ್ಣಾದಿಗಳ ಶರೀರ ವಲ್ಲ. ಆದರೆ ಚೇತನಾಶ್ರಿತ ಮಾಯೆಯು ಪರಿಣಾಮವದೆ.

ಒಂದುವೇಳೆ ಪಂಚೀಕೃತ ಭೂತಗಳ ಪರಿಣಾಮವಾಗಿದ್ದರೆ ಕೃಷ್ಣ

ಶರೀರದಲ್ಲಿ ರಜ್ಜುಕೃತ ಬಂಧನಾದಿಗಳ ಅಭಾವವು ಶಾಸ್ತ್ರದಲ್ಲಿ ಹೇ ವುದು ಅಸಂಗತವಾಗಬಹುದು.

ಯದ್ಯಪಿ ಪಂಚಭೂತರಚಿತ ಸಿದ್ಧಯೋಗಿಗಳ ಶರೀರಗಳಲ್ಲಿ ಬಂಧನಾದಿಗಳು ಉಂಟಾಗುವದಿಲ್ಲ. ತಥಾಪಿ ಯೋಗಿಗಳ ಶರೀರದಲ್ಲಿ ವು ಬಂಧನಾದಿಗಳ ಸಂಭವವದೆ. ಪಶ್ಚಾತ್ ಯೋಗಾಭ್ಯಾಸರೂಪ ಷಾರ್ಥದಿಂದ ಬಂಧನಾದಿಗಳ ಯೋಗ್ಯತೆಯು ನಾಶವಾಗುತ್ತದೆ.

ಕೃಷ್ಣಾದಿಗಳ ಶರೀರದಲ್ಲಿ ಯೋಗಿಗಳಂತೆ ಏನಾದರೊಂದು ಪುರು ದಿಂದ ಬಂಧನಾದಿಗಳ ಅಭಾವವಿಲ್ಲ. ಆದರೆ ಅವರ ಶರೀರಗಳು ವಾಗಿ ಬಂಧನಾದಿಗಳಿಗೆ ಯೋಗ್ಯವಲ್ಲ. ಈ ಕಾರಣದಿಂದ ಭೂ ಪರಿಣಾಮವಲ್ಲ.

(೨) ಮಾಂಡೂಕ್ಯ ಉಪನಿಷತ್ತಿನ ಭಾಷೆಯ ಟೀಕೆಯಲ್ಲಿ ಆ ಯುರಾಮಾದಿಗಳ ಶರೀರಗಳು ಭೂತಗಳ ಪರಿಣಾಮವೆಂದು ಹೇಳಿರುವ ಇದು ಸ್ಥೂಲದೃಷ್ಟಿಯಿಂದ ಬೇರೆ ಶರೀರಗಳ ಸಮಾನವಾಗಿ ಶರೀರಗಳು ತೀತವಾಗುತ್ತವೆ. ಈ ಅಭಿಪ್ರಾಯದಿಂದ ಹೇಳಿರುವನು. ಕಾರಣವೇನ

(೩) ಭಾಷ್ಯಕಾರನು ಗೀತಾಭಾಷ್ಯದಲ್ಲಿ ಹೀಗೆ ಹೇಳಿರುವನು. " ಗಳಮೇಲೆ ಅನುಗ್ರಹಮಾಡಿ, ಶರೀರಧಾರಿಗಳಂತೆ ಮಾಯಾಬಲದಿಂದ ಮಾತ್ಮಾ ಕೃಷ್ಣರೂಪವು ಪ್ರತೀತವಾಗುತ್ತದೆ. ಇದು ಜನ್ಮಾದಿರಹಿತ ಅವನ ಜನ್ಮವು ವಸುದೇವನ ದ್ವಾರದಿಂದ ದೇವಕಿಯಲ್ಲಿ ಮಾಯೆಯಿಂ ಪ್ರತೀತವಾಗುತ್ತದೆ." ಈ ರೀತಿಯಿಂದ ಭಾಷ್ಯಕಾರನು ಕೃಷ್ಣನ ವು ಮಾಯೆಯ ಕಾರ್ಯವೆಂದು ಹೇಳಿದನು.

ಈ ಕಾರಣದಿಂದ ಭೂತಗಳಿಂದ ಅವತಾರ ಶರೀರಗಳ ಉತ್ಪತ್ತಿ ಆದರೆ ಅವರ ಶರೀರಗಳ ಉಪಾದಾನಕಾರಣವು ಸಾಕ್ಷಾತ್ ಮಾಯಾ

(೩) ಬೇರೆ ಜೀವಗಳಿಗೆ ದೇಹಾದಿಗಳಲ್ಲಿ ಆತ್ಮಭ್ರಾಂತಿಯಿರುವದು ಮಕೃಷ್ಣಾದಿಗಳಿಗೆ ಇರುವದಿಲ್ಲ. ಕಾರಣವೇನೆಂದರೆ;—

(೧) ಜೀವಗಳ ಉಪಾಧಿಯು ಅವಿದ್ಯಾಮಲಿನಸತ್ವಗುಣವುಳ್ಳದ್ದು ರಾಮಕೃಷ್ಣಾದಿಗಳ ಉಪಾಧಿಯು ಮಾಯಾಶುದ್ಧ ಸತ್ವಗುಣವುಳ್ಳದ್ದಾ ವದು. ಇದರಿಂದ ಜೀವಗಳಿಗೆ ಅವಿದ್ಯಾಕೃತ ಭ್ರಾಂತಿಯು ಮತ್ತು ರಾ ಕೃಷ್ಣಾದಿಗಳಿಗೆ ಮಾಯಾಕೃತ ಸರ್ವಜ್ಞತ್ವವು ಉಂಟಾಗಿದೆ.

(೨) ಜೀವಗಳಿ ಅಜ್ಞಾನಕೃತ ಆವರಣ ಮತ್ತು ಭ್ರಾಂತಿವಾಸನೆ ಗಳ ನಿಮಿತ್ತ ಆಚಾರ್ಯ ಮುಖದಿಂದ ಮಹಾವಾಕ್ಯ ಉಪದೇಶಜನ್ಯ ನದ ಅಪೇಕ್ಷೆಯದೆ. ಹೀಗೆ ರಾಮಕೃಷ್ಣಾದಿಗಳಿಗೆ ಆವರಣ ಮತ್ತು



ಇದರಿಂದ ಉಪದೇಶಜನ್ಯ ಜ್ಞಾನದ ಅಪೇಕ್ಷೆಯಿಲ್ಲ. ಆದರೆ ಜೀವಿ ಅಂತಃಕರಣ ವೃತ್ತಿರೂಪ ಜ್ಞಾನದಂತೆ, ಈಶ್ವರನಿಗೆ ಮಾಯಾವೃತ್ತಿ ಆತ್ಮಜ್ಞಾನವು ಉಪದೇಶ ಮೊದಲಾದವುಗಳ ಹೊರ್ತು ಆಗಿರುವು ದು. ಪರಂತು ಆ ಜ್ಞಾನದಿಂದ ಈಶ್ವರನಿಗೆ ಯಾವ ಪ್ರಯೋಜನವೂ ನಾಗುವದಿಲ್ಲ ಕಾರಣವೇನಂದರೆ:-

(೧) ಜೀವನಿಗೆ ಘಟಾದಿ ಜ್ಞಾನದಿಂದ ಘಟಾದಿಗಳ ಆವರಣಭಂಗ, ತ್ತು ಘಟಾದಿ ವಿಷಯಗಳ ಪ್ರಕಾಶವಾಗುತ್ತದೆ. ಮತ್ತು ಬ್ರಹ್ಮರೂಪ ದ ಆತ್ಮನ ಜ್ಞಾನವು ಜೀವನಿಗೆ ಆಗುತ್ತದೆ. ಆಗ ಜ್ಞಾನದ ವಿಷಯ ದ ಆತ್ಮನ ಆವರಣಭಂಗವು ಜ್ಞಾನದಿಂದ ಆಗುವದು; ಮತ್ತು ಆತ್ಮಾ ಷಯವು ಸ್ವಯಂಪ್ರಕಾಶವದೆ. ಈ ಕಾರಣದಿಂದ ಆತ್ಮಜ್ಞಾನದಿಂದ ವಿಷ ಪ್ರಕಾಶವಾಗುವದಿಲ್ಲ; ಹೀಗೆ ಈಶ್ವರನಿಗೆ ಮಾಯೆಯವೃತ್ತಿರೂಪವಾದ "ಅಹಂಬ್ರಹ್ಮಾಸ್ಮಿ" ಎಂಬ ಜ್ಞಾನವು ಇದರ ವಿಷಯವಾದ ಈಶ್ವರನ ಆತ್ಮ ವರಣ ರಹಿತ ಸ್ವಯಂಪ್ರಕಾಶವದೆ. ಈ ಕಾರಣದಿಂದ ಆವರಣಭಂಗೆ ವಿಷಯದಪ್ರಕಾಶ, ಇವು ಈಶ್ವರನ ಜ್ಞಾನಕ್ಕೆ ಪ್ರಯೋಜನವಿಲ್ಲ.

(೨) ಜೀವನ್ಮುಕ್ತ ವಿದ್ವಾಂಸನಿಗೆ ನಿರಾವರಣ ಆತ್ಮವಿಷಯವನ್ನುಮಾಡತಕ್ಕ ಅಂತಃಕರಣದ "ಅಹಂ ಬ್ರಹ್ಮಾಸ್ಮಿ," ಎಂಬ ವೃತ್ತಿಯು ಆವರಣಭಂಗಾದಿ ಪ್ರಯೋಜನ ರಹಿತವಾಗಿದೆ; ಇದರಂತೆ ಈಶ್ವರನಿಗೂ ಸಹ ಆವರಣಭಂಗಾದಿ ಪ್ರಯೋಜನದ ಹೊರ್ತು ಮಾಯೆಯ ವೃತ್ತಿರೂಪವಾದ "ಅಹಂಬ್ರಹ್ಮಾಸ್ಮಿ" ಎಂಬ ಜ್ಞಾನವು ಉಪದೇಶಾದಿಗಳಿಲ್ಲದೆ ಆಗುವದು. ಈ ರೀತಿಯಿಂದ ಮಕೃಷ್ಣಾದಿಗಳ ಜೀವಕ್ಕಿಂತ ವಿಲಕ್ಷಣವಾದ ಈಶ್ವರತ್ವವು ಅದೆ. ಪರಂ ತು ಅವರ ಶರೀರಗಳು ಮಾಯಾರಚಿತವಾಗಿರುವದರಿಂದ ಬ್ರಹ್ಮನಿಲ್ಲ; ಮಿಥ್ಯ ದೆ. ಮಾಯೆಯು ಉತ್ಪನ್ನಮಾಡಿದ ಅವತಾರ ಶರೀರಗಳು ಹಸ್ತಪಾದಾದಿ ಯಸಹಿತವಾಗಿಯೂ ಮತ್ತು ರೂಪಸಹಿತವಾಗಿಯೂ ಇವೆ. ಇದ ದ ನೇತ್ರೇಂದ್ರಿಯದ ವಿಷಯವಾಗಿ ಅವರ ಶರೀರಗಳು ಅವೆ; ಮತ್ತು ಬ್ರಹ್ಮನನ್ನು ನೇತ್ರೇಂದ್ರಿಯವು ವಿಷಯವನ್ನಾಗಿ ಮಾಡುವದಿಲ್ಲ.

೨೦॥ ೨. ಬ್ರಹ್ಮನು ತ್ವಚಾ ಇಂದ್ರಿಯದ ಅವಿಷಯತೆಯು.

ಇದರಂತೆ ತ್ವಚೇಂದ್ರಿಯವು ಸಹಾ ಸ್ಪರ್ಶವನ್ನೂ ಮತ್ತು ಸ್ಪರ್ಶದ ಆಶ್ರಯವನ್ನೂ ವಿಷಯವನ್ನಾಗಿ ಮಾಡುತ್ತದೆ. ಬ್ರಹ್ಮವು ಸ್ಪರ್ಶದ ಆಶ್ರಯವಲ್ಲ; ಮತ್ತು ಸ್ಪರ್ಶವೂ ಅಲ್ಲ, ಈ ಕಾರಣದಿಂದ ತ್ವಗಿಂದ್ರಿಯಕ್ಕೆ ಬ್ರಹ್ಮವು ವಿಷಯವಲ್ಲ.

॥೨೦೯॥ ೩--ಈ ಬ್ರಹ್ಮನು ರಸನಾ, ಘ್ರಾಣ, ಮತ್ತು ಶ್ರೋತ್ರೇಂದ್ರಿಯಗಳ ಅವಿಷಯತೆಯು.

ರಸನೇಂದ್ರಿಯದಿಂದ ರಸಜ್ಞಾನ, ಘ್ರಾಣೇಂದ್ರಿಯದಿಂದ ಗಂ ಜ್ಞಾನವೂ, ಶ್ರೋತ್ರೇಂದ್ರಿಯದಿಂದ ಶಬ್ದದ ಜ್ಞಾನವೂ ಆಗುತ್ತದೆ. ರಸ, ಗಂಧ, ಶಬ್ದಗಳಿಂದ ಬ್ರಹ್ಮನು ವಿಲಕ್ಷಣನಾಗಿರುವನು. ಈ ಕಾ ರಸನಾ,ಘ್ರಾಣ,ಮತ್ತು ಶ್ರೋತ್ರಗಳಿಂದ ಬ್ರಹ್ಮಜ್ಞಾನವಾಗುವದಿಲ್ಲ.

॥೨೧೦॥ ಬ್ರಹ್ಮನು ಕರ್ಮೇಂದ್ರಿಯದ ಅವಿಷಯವು.

ಕರ್ಮೇಂದ್ರಿಯಗಳು ಜ್ಞಾನದ ಸಾಧನವಲ್ಲ; ವಚನಾದಿ ಕ್ರಿಯೆಗ ಸಾಧನಗಳಾಗಿವೆ. ಆದಕಾರಣ ಇವುಗಳಿಂದ ಯಾವ ಬಗೆಯ ಜ್ಞಾನವೂ ಆಗುವದಿಲ್ಲ.

ಈ ರೀತಿಯಾಗಿ ಯಾವ ಇಂದ್ರಿಯಗಳಿಂದಲೂ ಬ್ರಹ್ಮಜ್ಞಾನವಾ ವದಿಲ್ಲ. ಮತ್ತು ಇಂದ್ರಿಯಗಳಿಂದ ಆಗುವ ಜ್ಞಾನಕ್ಕೆ ಪ್ರತ್ಯಕ್ಷ ನ್ನುವರು, ಪ್ರತ್ಯಕ್ಷಕ್ಕೇ ಅಪರೋಕ್ಷವೆನ್ನುತ್ತಾರೆ.

ಈ ಪ್ರಕಾರ ಬ್ರಹ್ಮನ ಅಪರೋಕ್ಷಜ್ಞಾನವು ಸಂಭವಿಸುವದಿಲ್ಲವಾ ರೂ ಶಬ್ದದಿಂದ ಮಾತ್ರ ಬ್ರಹ್ಮಜ್ಞಾನವಾಗುತ್ತದೆ. ಈ ಶಬ್ದದಿಂದಾ ಜ್ಞಾನಕ್ಕೇ ಪರೋಕ್ಷವೆನ್ನುತ್ತಾರೆ. ಈ ಕಾರಣದಿಂದ ಬ್ರಹ್ಮನ ಜ್ಞಾನವ ದರೂ ಪರೋಕ್ಷವೇ ಅದೆ.

---

॥೨೦೬ರಿಂದ ೨೧೦ ರಲ್ಲಿಯ ಪ್ರಶ್ನೆಗಳ ಉತ್ತರ॥೨೧೧-೨೧ ೨೧೧॥ ಇಂದ್ರಿಯಗಳ ಸಂಬಂಧವಿಲ್ಲದೆ ಪ್ರತ್ಯಕ್ಷಜ್ಞಾನವಾಗಲಾ ರದು,ಎಂಬ ನಿಯಮವಿಲ್ಲ.ಸುಖದುಃಖಗಳ ಸಾಕ್ಷೀ ಭಾಸ್ಯತ

॥ ಶ್ರೀಗುರು ರುವಾಚ ॥

॥ ದೋಹಾ ॥

ಇಂದ್ರಿಯ ಬಿನ ಪ್ರತ್ಯಚ್ಛನಹಿ।ಸಿಷಯುಹ ನಿಯುಮ ನ ಜಾನ।
ಬಿನ ಇಂದ್ರಿಯ ಪ್ರತ್ಯಚ್ಛಹ್ವೈ । ಜೈಸ್ಸೆ ಸುಖದುಖ ಜ್ಞಾನ।

ಟೀಕಾ॥ ಇಂದ್ರಿಯ ಸಂಬಂಧವಿಲ್ಲದೆ ಪ್ರತ್ಯಕ್ಷಜ್ಞಾನವು ಆಗುವದಿಲ್ಲ ಎಂಬ ನಿಯಮವಿಲ್ಲ; ಯಾಕಂದರೆ ಸುಖದ, ಮತ್ತು ದುಃಖದ, ಜ್ಞಾನವು ಯಾವ ಇಂದ್ರಿಯದಿಂದಲೂ ಆಗುವದಿಲ್ಲ. ಪರಂತು ಈ ಸುಖದುಃಖಗಳ ಜ್ಞಾನವು ಪ್ರತ್ಯಕ್ಷವದೆ. ಇದರಿಂದ ಇಂದ್ರಿಯಗಳ ಸಂಬಂಧದಿಂದ ಆಗುವ



ನವೇ ಪ್ರತ್ಯಕ್ಷಜ್ಞಾನವೆಂಬ ನಿಯಮವಿಲ್ಲ. ವಿಷಯಕ್ಕೂ ವೃತ್ತಿಗೂ ಬಂಧವಾಗಿ ಯಾವಾಗ ವಿಷಯಾಕಾರ ವೃತ್ತಿಯು ಆಗುವದೋ, ಆಗ ಕ್ಷ ಜ್ಞಾನವೆನ್ನಬೇಕು.

(೧) ಈ ವಿಷಯಕ್ಕೂ ವೃತ್ತಿಗೂ ಸಂಬಂಧವು ಎಲ್ಲಿ ಇಂದ್ರಿಯ ದ ಆಗುತ್ತದೆ. ಮತ್ತು, (೨) ಎಲ್ಲಿ ಶಬ್ದದಿಂದ ಆಗುತ್ತದೆ. ಹೇಗಂದರೆ ನು ದಶಮನು ನಿರುವಿ'' ಎಂಬ ಶಬ್ದದಿಂದ ದಶಮನಾದ ತನಗೂ,ತನ್ನಲ್ಲಿ ಅಂತಃಕರಣ ವೃತಿಗೂ ಸಂಬಂಧವಾಗಿ, ದಶಮಾಕಾರ ವೃತ್ತಿಯಾಗು ಈ ರಣವಿಂದ ಶಬ್ದಜನ್ಯವು ಸಹಾ ದಶಮನ ಜ್ಞಾನ ಪ್ರತ್ಯಕ್ಷವದೆ. ದವಂತೆ ಪ್ರಮಾತಾವಿನಲ್ಲಿ ಸುಖದುಃಖವಾಗುತ್ತದೆ. ಆಗ ಸುಖದುಃ ಕಾರವೃತ್ತಿಯು ಅಂತಃಕರಣದಲ್ಲಿ ಆಗುತ್ತದೆ. ಆ ವೃತ್ತಿಯಿಂದ ಸುಖ ಖಗಳ ಸಂಬಂಧವಾಗುತ್ತದೆ. ಈ ಕಾರಣದಿಂದ ಸುಖದುಃಖಗಳಜ್ಞಾ ವು ಪ್ರತ್ಯಕ್ಷವದೆ.

ಪೂರ್ವದಲ್ಲಿ ಉತ್ಪನ್ನವಾದ ಸುಖ ದುಃಖಗಳು ನಷ್ಟವಾದ ಬಳಿಕ, ಯಾವಾಗ ಪುರುಷನಿಗೆ ಸ್ಮರಣೆಯಾಗುತ್ತದೊ, ಆಗ ಅಂತಃಕರಣದ ವೃತ್ತಿ ಯು ಸುಖವು ದುಃಖಾಕಾರವಾಗುತ್ತದೆ.ಪರಂತು ವೃತ್ತಿಯುನಷ್ಟವಾದಬಳಿ ಸುಖದುಃಖಗಳ ಸಂಭಂಧವಿಲ್ಲ. ಇದರಿಂದ ಈಜ್ಞಾನವು ಸ್ಮೃತಿರೂಪವ ದೆ, ಪ್ರತ್ಯಕ್ಷರೂಪವಲ್ಲ.

೧. ಯದ್ಯಪಿ ಅಂತಃಕರಣದ ಧರ್ಮವು ಸುಖದುಃಖದ ಸಾಕ್ಷೀಭಾ ಸ್ಯವದೆ. ತಥಾಪಿ ಸುಖದುಃಖಾಕಾರ ಅಂತಃಕರಣದ ವೃತ್ತಿದ್ವಾರಾಸಾಕ್ಷಿ ಯು ಸುಖದುಃಖಗಳನ್ನು ಪ್ರಕಾಶಮಾಡುತ್ತದೆ.

೨. ಸಾಕ್ಷೀ ಭಾಸ್ಯ ಪದಾರ್ಥಗಳನ್ನು ವೃತ್ತಿಯ ಅಪೇಕ್ಷೆಯಿಂದಲೇ ಸಾಕ್ಷಿಯು ಪ್ರಕಾಶಿಸುತ್ತದೆ. ಹೇಗಂದರೆ ಶುಕ್ತಿರಜತವು ಸಾಕ್ಷೀ ಭಾಸ್ಯ ದೆ ಈ ಸ್ಥಳದಲ್ಲಿ ಅವಿದ್ಯಾವೃತ್ತಿದ್ವಾರಾ ಸಾಕ್ಷಿಯು ರಜತವನ್ನು ಪ್ರಕಾ ಮಾಡುತ್ತದೆ.

೧. ಪರಂತು ಸುಖದುಃಖಗಳ ಪ್ರಕಾಶನಸಮಯದಲ್ಲಿ ಅಂತಃಕರಣದ ವೃತ್ತಿಯು ಸಾಕ್ಷಿಯ ಸಹಾಯಕವದೆ.

೨. ಮಿಥ್ಯಾರಜತಾದಿ ಪ್ರಕಾಶನ ಸಮಯದಲ್ಲಿ ಅವಿದ್ಯೆಯ ವೃತ್ತಿ ಯು ಸಾಕ್ಷಿಯ ಸಹಾಯಕವದೆ.

ಈ ರೀತಿಯಿಂದ ಸಾಕ್ಷೀಭಾಸ್ಯ ಪದಾರ್ಥಗಳ ಜ್ಞಾನದಲ್ಲಿ ಸಹಾ ವೃತ್ತಿಯು ಅಪೇಕ್ಷೆಯುದೆ.

೧. ಈ ವೃತ್ತಿಯು ಯಾವಾಗ ಇಂದ್ರಿಯಾದಿ ಬಾಹ್ಯಸಾಧನಗಳ ಆಗುವದೋ, ಆಗ ಆ ವೃತ್ತಿಯು ವಿಷಯಕ್ಕೆ ಸಾಕ್ಷೀಭಾಸ್ಯವೆನ್ನಬಾರದು.

೨. ಸುಖದುಃಖಗಳನ್ನು ವಿಷಯುವನ್ನಾಗಿ ಮಾಡತಕ್ಕ ವೃತ್ತಿ ಬಾಹ್ಯೇಂದ್ರಿಯಗಳು ಹೇತುವಲ್ಲ, ಆದರೆ ಸುಖದುಃಖ ಜ್ಞಾನಕಾಲ ಅನ್ಯಸಾಧನಗಳ ಅಪೇಕ್ಷೆಯ ಹೊರ್ತು ಅಂತಃಕರಣದ ವೃತ್ತಿಯು ಸು ದುಃಖಾಕಾರವಾಗುತ್ತದೆ. ಈ ವೃತ್ತಿಯಲ್ಲಿ ಆರೂಢವಾದ ಸಾಕ್ಷಿ ಸುಖದುಃಖಗಳನ್ನು ಪ್ರಕಾಶಿಸುವದು. ಆದಕಾರಣ ಸುಖದುಃಖ ಸಾಕ್ಷೀಭಾಸ್ಯವೆಂದು ಅನ್ನುವರು.

||೨೧೨|| ಬ್ರಹ್ಮನ ಜ್ಞಾನವು ಪ್ರತ್ಯಕ್ಷಸಂಭವವದೆ.
ತತ್ವದೃಷ್ಟಿಗೆ ಭೇದ ಭ್ರಮದ ಅಂತವು.

ಅಂತಃಕರಣ ವೃತ್ತಿಯ ಸಂಬಂಧವು,ಬಾಹ್ಯ ಘಟಾದಿಗಳೊಡನೆ ನೇತ್ ದ್ರಿಯ ದ್ವಾರದಿಂದ ಆಗುತ್ತದೆ.ಇದರಿಂದ ಘಟಾದಿಗಳು ಸಾಕ್ಷೀಭಾಸ್ಯ

೨

ಇದರಂತೆ ಅಂತಃಕರಣದ ವೃತ್ತಿಯು ಬ್ರಹ್ಮಾಕಾರವನ್ನು ಯಾವಾ ಹೊಂದುವದೋ, ಆಗ ಈ ವೃತ್ತಿಯು ಹೊರಗೆ ಹೋಗದೆ ಬ್ರಹ್ಮನೊ ಸಂಬಂಧವನ್ನು ಹೊಂದುತ್ತದೆ. ಈ ಕಾರಣದಿಂದ ಬ್ರಹ್ಮನ ಜ್ಞಾ ಸದ ಸುಖದುಃಖಗಳ ಜ್ಞಾನದಂತೆ ಪ್ರತ್ಯಕ್ಷರೂಪವದೆ.

೧. ಸುಖದುಃಖಾಕಾರ ವೃತ್ತಿಯಲ್ಲಿ ಬಾಹ್ಯಸಾಧನಗಳ ಅಪೇಕ್ಷೆ ವಾದ್ದರಿಂದ ಸುಖದುಃಖಗಳು ಸಾಕ್ಷೀಭಾಸ್ಯವವೆ.

೨. ಬ್ರಹ್ಮಾಕಾರ ಅಂತಃಕರಣವೃತ್ತಿಯಲ್ಲಿ ಗುರುದ್ವಾರ ವೇದ
೩
ಗಳ ಶ್ರವಣದಿಂದ ಸಂಬಾಧ ಬಾಹ್ಯಸಾಧನವದೆ. ಇದರಿಂದ ಬ್ರಹ್ಮ ಸಾಕ್ಷೀಭ್ಯಾಸನಲ್ಲ.

ಈ ಪ್ರಕಾರವಾಗಿ ಯಾವಾಗ ವಿಷಯಕ್ಕೂ ವೃತ್ತಿಗೂ ಸಂಬಂಧವಾ ವದೋ, ಆಗ ಪ್ರತ್ಯಕ್ಷಜ್ಞಾನವೆನ್ನಬೇಕು. “ಅಹಂ ಬ್ರಹ್ಮಾಸ್ಮಿ” ಎಂಬ ತ್ತಿಯ ವಿಷಯುವಾದ ಬ್ರಹ್ಮವು, ಇದಕ್ಕೆ ಸಂಬಂಧವದೆ. ಇದರಿ ಬ್ರಹ್ಮನ ಜ್ಞಾನವು ಪ್ರತ್ಯಕ್ಷವೇ ಅದೆ.

೧. ಧೂಮವನ್ನು ನೋಡಿದ ಕೂಡಲೆ ಅಗ್ನಿಯ ಜ್ಞಾನವಾಗುತ್ತ ಈ ಧೂಮದ ಜ್ಞಾನವು ಪ್ರತ್ಯಕ್ಷವದೆ, ಅಗ್ನಿಯ ಜ್ಞಾನವು ಪ್ರ ವಿಲ್ಲ. ಕಾರಣವೇನೆಂದರೆ, ನೇತ್ರದ್ವಾರಾ ಅಂತಃಕರಣಧ ವೃತ್ತಿಗೂ ಧೂಮ



ಕ್ಕೆ ಸಂಬಂಧವದೆ. ಈ ಕಾರಣದಿಂದ ಧೂಮ ಜ್ಞಾನಕ್ಕೆ ಪ್ರತ್ಯಕ್ಷವೆನ್ನ ಬೇಕು.

೨. ಅನುಮಾನದಿಂದ ಅಂತಃಕರಣದ ವೃತ್ತಿಯು ಶರೀರದಲ್ಲಿಯೇ ನಿಯ ಆಕಾರವನ್ನು ಗ್ರಹಣ ಮಾಡುತ್ತದೆ. ಪರಂತು ಅಗ್ನಿಗೆ ವೃತ್ತಿಯ ಬಂಧವಿಲ್ಲ, ಆದ್ದರಿಂದ ಅಗ್ನಿಯಜ್ಞಾನವು ಪ್ರತ್ಯಕ್ಷವಲ್ಲ.

ಈ ಪ್ರಕಾರವಾಗಿ ಯಾವಾಗ ವೃತ್ತಿಯೊಡನೆ ವಿಷಯದ ಸಂಬಂಧ ಗುವದೋ, ಆಗ ಪ್ರತ್ಯಕ್ಷಜ್ಞಾನವಾಗುವುದೆನ್ನಬೇಕು.

ಯಾವಾಗ ವೃತ್ತಿಯೊಡನೆ ವಿಷಯದ ಸಂಬಂಧವಾಗದಿರುವುದೋ, ಗ ವಿಷಯವು ವೃತ್ತಿಯಿಂದ ದೂರವಾಗುವದು, ಅಥವಾ ಭೂತ ಇಲ್ಲವೆ ಷ್ಯತ್ ಆಗುವದು. ಮತ್ತು ಅನುಮಾನದಿಂದ ಅಥವಾ ಶಬ್ದದಿಂದ ಷಯಾಕಾರವೃತ್ತಿಯು ಅಂತರವಾಗುವದು. ಈ ಜ್ಞಾನಕ್ಕೆ ಪರೋಕ್ಷ ನ್ನಬೇಕು.

ಇಂದ್ರಿಯ ಜನ್ಯಜ್ಞಾನವು ಪ್ರತ್ಯಕ್ಷವಾಗಿದೆ ; ಎಂಬದಾದರೂ ನಿಯ ವಿಲ್ಲ. ಹೇಗೆ ಸುಖದುಃಖಗಳ ಜ್ಞಾನವು ಇಂದ್ರಿಯ ಜನ್ಯವಲ್ಲವೋ ತ್ತು ಪ್ರತ್ಯಕ್ಷವದೆಯೋ ಹಾಗೆ ದಶಮ ಪುರುಷನ ಜ್ಞಾನವು ಶಬ್ದಜನ್ಯ ದೆ. ಆದರೂ ಸಹ ಪ್ರತ್ಯಕ್ಷವದೆ.

ಈ ರೀತಿಯಿಂದ ಗುರುದ್ವಾರಾ ಶ್ರವಣಮಾಡಿದಂಥ ಮಹಾವಾಕ್ಯ ಪವಾದ ಜೀವಶಬ್ದದಿಂದ ಉತ್ಪನ್ನವಾದ ಬ್ರಹ್ಮಜ್ಞಾನವೂ ಸಹ ಪ್ರತ್ಯ ಕ್ಷವದೆ. ಮತ್ತು ಸಂಭಂಧವಾಗುತ್ತದೆ.

ಸ್ಪಷ್ಟ—೧, ವಿಷಯ ಚೇತನಕ್ಕೂ, ವೃತ್ತಿಚೇತನಕ್ಕೂ ಇದ್ದ ಅಭೇದವು ಪ್ರತ್ಯಕ್ಷ ಜ್ಞಾನದ ಲಕ್ಷಣವದೆ. ಈ ಅಭೇದವು ೧. ಎಲ್ಲಿ ಇಂದ್ರಿಯದ್ವಾರ ಆಗುವದು. ೨. ಎಲ್ಲಿ ಶಬ್ದದಿಂದ ಆಗುವದು. ೩. ಎಲ್ಲಿ ಇಂದ್ರಿಯಾದಿರೂಪ ಬಾಹ್ಯನಿಮಿತ್ತದಿಂದ ಹೊರ್ತು ಶರೀರದ ಮಧ್ಯದಲ್ಲಿ ಹುಟ್ಟಿದ ವೃತ್ತಿದ್ವಾರ ಆಗುವದು. ಎಂಬ ಈ ಪ್ರಶ್ನೆಗಳ ಉತ್ತರಗಳ ವಿವರಣಕ್ಕೆ ಪ್ರತ್ಯಕ್ಷಜ್ಞಾನವೆನ್ನುತ್ತಾರೆ.

ಚೇತನದ ಸ್ವರೂಪದಿಂದ ಎಲ್ಲಿಯೂ ಭೇದವಿರುವದಿಲ್ಲವಾದರೂ ವಿಷಯ ಮತ್ತು ವೃತ್ತಿರೂಪ ಉಪಾಧಿಯ ಮಾಡಲ್ಪಟ್ಟ ಭೇದವದೆ. ಈ ಉಪಾಧಿಯು ಯಾವಾಗ ಭಿನ್ನ ದೇಶದಲ್ಲಿ ಸ್ಥಿತವಾಗುವದೋ, ಆಗ ಈ ಉಪಾಧಿಯುಳ್ಳ ಚೇತನದ ಭೇದವು ಹೇಳಲ್ಪಟ್ಟಿದೆ.

ಯಾವಾಗ ವಿಷಯಾಕಾರ ವೃತ್ತಿಯು ಆಗುವದೋ ಆಗ ಎರಡೂ ಉಪಾಧಿಗಳು ಏಕದೇಶದಲ್ಲಿ ಸ್ಥಿತವಾಗುವವು. ಈ ಕಾರಣದಿಂದ ಈ ಉಪಾಧಿಯುಳ್ಳ ವಿಷಯ ಚೇತನ ಮತ್ತು ವೃತ್ತಿಚೇತನಗಳ ಅಭೇದವು ಪ್ರತ್ಯಕ್ಷಜ್ಞಾನವೆನ್ನುತ್ತಾರೆ. ಇದಕ್ಕೇ ಅಪರೋಕ್ಷಜ್ಞಾನ ಮತ್ತು ಸಾಕ್ಷಾತ್ಕಾರವೆಂದೂ ಅನ್ನುವರು.

ಈ ಪ್ರತ್ಯಕ್ಷಜ್ಞಾನದ ಲಕ್ಷಣವು ಇಂದ್ರಿಯ ಜನ್ಯ ಬಾಹ್ಯ ಘಟಾದಿ ಪ್ರತ್ಯಕ್ಷ ಜ್ಞಾನದಲ್ಲಿಯೂ ೧. ಮಹಾವಾಕ್ಯ ವೇದವಾಕ್ಯ ಜನ್ಯ ಬ್ರಹ್ಮ ಪ್ರತ್ಯಕ್ಷಜ್ಞಾನದಲ್ಲಿಯೂ ೨. ಬಾಹ್ಯನಿಮಿತ್ತವಿಲ್ಲದೆ. ಅಂತಃಹುಟ್ಟಿದ ಸುಖ ದುಃಖಗಳ ಪ್ರತ್ಯಕ್ಷ ಜ್ಞಾನದಲ್ಲಿಯೂ ೩. ಮಾಯಾವೃತ್ತಿರೂಪವಾದ ಈಶ್ವರ ಜ್ಞಾನದಲ್ಲಿಯೂ ೪. ಅವಿದ್ಯಾ ವೃತ್ತಿರೂಪ ರಜ್ಜು ಸರ್ಪಾದಿಗಳ ಜ್ಞಾನದಲ್ಲಿಯೂ ಅನುಗತವಾಗಿವೆ.

ಪ್ರತ್ಯಕ್ಷ ಜ್ಞಾನದ ಲಕ್ಷಣಗಳ ವಿಶೇಷ ನಿರ್ಣಯವು ವೃತ್ತಿರತ್ನಾವಳಿ ದ್ವಿತೀಯ ರತ್ನದಲ್ಲಿ ಮಾಡಲ್ಪಟ್ಟಿರುವದು.

೨. ೧ ಚಕ್ಷುವಿನಲ್ಲಿ ಸೂರ್ಯನ ಅಭೇದತೆಯಿರುವುದು. ಇದು ಅಂಗುಲ ಮಾತ್ರವಾದ ಸ್ವಲ್ಪ ಆವರಣದಿಂದ ಆಚ್ಛಾದಿತವಾಗಲು, ಬ್ರಹ್ಮಾಂಡವರ್ತಿಯಾದ ಸೂರ್ಯನ ಪ್ರಕಾಶವು ಕಾಣಿಸುವದಿಲ್ಲ. ೨ ಈ ಆವರಣವು ನಿವೃತ್ತವಾಗಲು ಚಕ್ಷುಗತ ಅಂತಃಕರಣದ ವೃತ್ತಿಯಿಂದ ಬ್ರಹ್ಮಾಂಡವರ್ತಿಯಾದ ಸೂರ್ಯನ ಪ್ರಕಾಶವು ಕಾಣಿಸುವದು.

ಇದರಂತೆ ೧ ಸಾಕ್ಷಿಯಾದ ಆತ್ಮನಲ್ಲಿ ಬ್ರಹ್ಮನ ಅಭೇದತೆಯಿರುವುದು ಇದಕ್ಕೆ ಅಂತಃಕರಣಗತ ಅಜ್ಞಾನಾಂಶರೂಪವಾದ ಸ್ವಲ್ಪ ಆವರಣದಿಂದ ಆಚ್ಛಾದಿತವಾಗಲು ಸರ್ವತ್ರ ಪರಿಪೂರ್ಣ ಬ್ರಹ್ಮನು ಪ್ರತ್ಯಕ್ಷವಾಗುವದಿಲ್ಲ. ೨ ಯಾವಾಗ ಶರೀರದ ಮಧ್ಯದಲ್ಲಿ ಬ್ರಹ್ಮ ಮತ್ತು ಆತ್ಮನ ಅಭೇದತೆಯ ಆಕಾರವೃತ್ತಿಯಿಂದ ಉಕ್ತ ಆವರಣದ ಭಂಗವಾಗುತ್ತದೆಯೋ ಆಗ ಘಟಗತ ಆಕಾಶದ ಅಸಂಗತಾದಿಗಳ ಜ್ಞಾನದಿಂದ ಮಹಾಕಾಶದ ಅಸಂಗತಾದಿಗಳ ಜ್ಞಾನದಂತೆ ಸರ್ವತ್ರ ಪರಿಪೂರ್ಣ ಬ್ರಹ್ಮನ ಸ್ವಪ್ರಕಾಶದಿಂದ ಭಾನವಾಗುವದು.

೩ ಬ್ರಹ್ಮನು ಹೇಗೆ ಸಾಕ್ಷೀಭಾಸ್ಯನಲ್ಲವೋ ಹಾಗೆ ಬ್ರಹ್ಮನು ಚಿದಾಭಾಸಸಹಿತ ಅಂತಃಕರಣದ ವೃತ್ತಿರೂಪ ಪ್ರಮಾತಾ ಸಹ ವಿಷಯವಲ್ಲ. ಅನ್ಯದೀಪಗಳ ಅಪೇಕ್ಷೆಯಿಂದ ರಹಿತವಾದ ಕೇವಲ ನೇತ್ರದ ವಿಷಯವಾದ ದೀಪದಂತೆ ಅಂತಃಕರಣದ "ಅಹಂ ಬ್ರಹ್ಮಾಸ್ಮಿ" ಎಂಬ ಆಕಾರವುಳ್ಳ ಕೇವಲ ವೃತ್ತಿಯ ವಿಷಯವು ಬ್ರಹ್ಮವದೆ. ಈ ಕಾರಣದಿಂದ ಬ್ರಹ್ಮನು ಪ್ರಮಾತೃಭಾಸ್ಯನು ಸಹಾ ಅಲ್ಲ. ಆದರೆ ತನ್ನ ಪ್ರಕಾಶದಲ್ಲಿ ಅನ್ಯಪ್ರಕಾಶದ ಅಪೇಕ್ಷೆಯಿಂದ ರಹಿತವಾದ ಸ್ವಯಂ ಸರ್ವಪ್ರಕಾಶಕ ಬ್ರಹ್ಮನಿದ್ದಾನೆ.



ವೃತ್ತಿಯು ಸಹ, ವಸ್ತ್ರದ ಮಲಿನಕ್ಕೆ ಸಬ್ಬಕಾರದಂತೆ ಬ್ರಹ್ಮನ ಆವರಣ ಭಂಗಮಾಡುವದು. ಇದು ಅದಕ್ಕೆ ವಿಷಯವನ್ನಾಗಿ ಮಾಡುವದದೆ, ಬೇರೆ ಪ್ರಕಾರದ ವಿಷಯವನ್ನಾಗಿ ಮಾಡುವದು, ವೃತ್ತಿಯಲ್ಲ.

ಅಹಂ ಬ್ರಹ್ಮಾಸ್ಮಿ, ಎಂಬ ವೃತ್ತಿರೂಪ ತತ್ವಜ್ಞಾನಕ್ಕೆ ಬಾಹ್ಯಸಾಧನಗಳ ಅಪೇಕ್ಷೆಯ ಹೊರ್ತು ಸಾಕ್ಷಿಯು ಪ್ರಕಾಶಿಸುವದು. ಈ ಕಾರಣದಿಂದ ಈ ತತ್ವಜ್ಞಾನವು ಸಾಕ್ಷೀಭಾಸ್ಯ ಅದೆ.

॥ ದೋಹಾ ॥

ಗುರುಕೊ ಅಸ ಉಪದೇಸ ಸುನಿ । ತತ್ವದೃಷ್ಟಿ ಬುಧಿವಂತ ॥
ಬ್ರಹ್ಮರೂಪ ಲಖಿ ಆತಮಾ । ಕಿಯೊ ಭೇದಭ್ರಮ ಅಂತ ॥೧೧೮॥

ಅರ್ಥ॥ ಈ ಪ್ರಕಾರದ ಗುರೂಪದೇಶವನ್ನು ಶ್ರವಣಮಾಡಿ ಬುದ್ಧಿವಂತನಾದ ತತ್ವದೃಷ್ಟಿಯು, ಸಂಪೂರ್ಣ ಬ್ರಹ್ಮರೂಪ ಆತ್ಮನನ್ನು ತಿಳಿದುಕೊಂಡು ಭೇದಭ್ರಮವನ್ನು ನಿರಸನ ಮಾಡಿಕೊಂಡನು. ॥೧೧೮॥

ಅಹಂಬ್ರಹ್ಮ, ಯಾವೃತ್ತಿಮೈ । ನಿರಾವರನ ಹ್ವೈ ಭಾನ ॥
ವಾದೂ ಆದು ರೂಪಸೊ । ಯೂ ಹಮ ಲಿಯೊ ಪಿಛಾನ ॥

ಇತಿ ಶ್ರೀ ವಿಚಾರಸಾಗರ ಗ್ರಂಥದಲ್ಲಿ ಉತ್ತಮಾಧಿಕಾರೀ

ಉಪದೇಶ ನಿರೂಪಣ ನಾಮ ಚತುರ್ಥಸ್ತರಂಗಃ

ಸಮಾಪ್ತಃ. ॥ ೪ ॥





ಓಂ

ವಿಘ್ನೇಶಾಯನಮಃ.

# ಸಟೀಕಾ ತಾತ್ಪರ್ಯ ವಿವರಣ ಸಹಿತ

# ವಿಚಾರ ಸಾಗರ

## ಪಂಚಮಸ್ತರಂಗಃ

॥ ಅಥ ಶ್ರೀಗುರು ವೇದಾದಿ ವ್ಯಾವಹಾರಿಕ ಪ್ರತಿಪಾದನ॥
॥ ೨೧೩—೨೭೬॥ ಮತ್ತು.

॥ಮಧ್ಯಮಾಧಿಕಾರೀ ಸಾಧನ ನಿರೂಪಣೆ ॥೨೭೭—೩೦೩॥

---

॥ ೨೧೩ ॥ ಅದೃಷ್ಟನ ಪ್ರಶ್ನೆ. ವೇದ ಮತ್ತು ಗುರು ಸತ್ಯವಾಗಲು, ಅಥವಾ ಮಿಥ್ಯವಾಗಲು, ಎರಡೂ ರೀತಿಯಿಂದ ವೇದ ಮತ್ತು ಗುರುವಿನಿಂದ ಅದ್ವೈತಜ್ಞಾನವು ಸಿದ್ಧವಾಗುವದಿಲ್ಲ.

ಪೂರ್ವತರಂಗದಲ್ಲಿ ಹೇಳಿದ್ದೇನೆಂದರೆ, "ಗುರುಮುಖದ್ವಾರಾ ಶ್ರವಣ ಮಾಡಲ್ಪಟ್ಟ ವೇದವಾಕ್ಯಗಳಿಂದ ಅದ್ವೈತ ಬ್ರಹ್ಮದ ಸಾಕ್ಷಾತ್ಕಾರವಾಗುವದು" ಈ ವಾಕ್ಯವನ್ನು ಶ್ರವಣಮಾಡಿ ಅದೃಷ್ಟ ಎಂಬ ಎರಡನೇ ಶಿಷ್ಯನು ಈ ಆಕ್ಷೇಪಣೆಯನ್ನು ಮಾಡುವನು. ಪ್ರಶ್ನೆ.—(೧) ವೇದ ಮತ್ತು ಗುರು, ಸತ್ಯವೆಂದರೆ, ಅದ್ವೈತದ ಹಾನಿಯಾಗುತ್ತದೆ. (೨) ಅಸತ್ಯವೆಂದರೆ ಅದ್ವೈತದ ಹಾನಿಯಾಗುತ್ತದೆ. ಮತ್ತು ಇವರಿಂದ ಪುರುಷಾರ್ಥಪ್ರಾಪ್ತಿಯು ಉಂಟಾಗುವದಿಲ್ಲ. ಈ ಎರಡೂ ವಿಧದಿಂದ ವೇದ ಮತ್ತು ಗುರುವಿನಿಂದ ಅದ್ವೈತಜ್ಞಾನವು ಸಿದ್ಧವಾಗುವದಿಲ್ಲ.

ಚೌಪಾಈ ॥ ವೇದ ಗುರು ಜೊ ಮಿಥ್ಯಾ ಕಹಿಯೆ ।
ತಿನತೈ ಭವದುಖ ನಸ್ಯೊ ನ ಚಾಹಿಯೆ ॥



ಜೈಸೈ ಮಿಥ್ಯಾ ಮರು ಥಲಕೊ ಜಲ ।
ಪ್ಯಾಸನಾಸಕೊ ನಹಿ ತಾಮೈ ಬಲ ॥೧॥

ಅರ್ಥ॥ ಹೇಗೆ ಮೃಗಜಲದಲ್ಲಿ ತೃಷಾ ನಿವಾರಣ ಸಾಮರ್ಥ್ಯವು ಇರುವದಿಲ್ಲವೋ, ಹಾಗೆ ವೇದ ಮತ್ತು ಗುರು, ಇವರು ಮಿಥ್ಯವೆಂದರೆ, ಇವರಿಂದ ಭವದುಃಖವು ನಾಶವಾಗಲಾರದು.

॥ ಚೌ ಪಾ ಈ ॥

ಸತ್ಯವೇದ ಗುರು ಕಹ್ಯೆ ತು ದ್ವೈತ ।
ಭಯೊ ಗಯೊ ಸಿದ್ಧಾಂತ ಅದ್ವೈತ ॥
ಯೂ ಸಂಕರ ಮತ ಪೇಖಿ ಅಶುದ್ಧಾ ।
ತಜ್ಯೊ ಸಕಲ ಮಧ್ವಾದಿ ಪ್ರಬುದ್ಧಾ ॥೨॥

ಅರ್ಥ॥ ವೇದ, ಮತ್ತು ಗುರು, ಸತ್ಯವೆಂದರೆ ದ್ವೈತವು ಸಿದ್ಧವಾಗಿ ಅದ್ವೈತ ಸಿದ್ಧಾಂತವು ಅಸತ್ಯವಾಗುವದು ಎಂದು ತಿಳಿದು ಅಶುದ್ಧವಾದ ಶಂಕರಮತವನ್ನು ಮಧ್ವಾದಿ ಸಕಲ ಪ್ರಮುಖರು ಬಿಟ್ಟುಬಿಡುವರು. ॥೨॥

॥ ಚೌ ಪಾ ಈ ॥

ಯಹ ಸಂಕಾ ಭಗವನ್ ಮುಹಿ ಉಪಜೈ ।
ಉತ್ತರ ದೇಹು ದಯಾಲ ನ ಕುಪಿ ಜೈ ॥
(ಉತ್ತರ ॥ ೨೧೪—೨೩೬ ॥)

॥ ೨೧೪ ॥ ಶಂಕರ ಮತದ ಪ್ರಮಾಣತೆಯು.

ಗುರು ಬೋಲೇ ಸಿಷಕೀ ಸುನಿ ಬಾನೀ ।
ಸಂಕರಕೋ ಮತ ಪರಮ ಪ್ರಮಾನೀ ॥೩॥

ಅರ್ಥ॥ ಭಗವನ್ ! ಈ ಆಕ್ಷೇಪಣೆಯು ನನ್ನಲ್ಲಿ ಹುಟ್ಟದೆ. ಆದ್ದರಿಂದ ದಯಮಾಡಿ, ನಿಶ್ಚಿತ ಉತ್ತರವನ್ನು ಹೇಳಬೇಕು. ಶಿಷ್ಯನ ಈ ಆಕ್ಷೇಪಣೆಯನ್ನು ಕೇಳಿ, ಶಂಕರಮತವೇ ಪ್ರಮಾಣವೆಂದು ಗುರುಗಳು ಹೇಳುವರು. ॥ ೩ ॥

ಚ್ಯಾರಿಯಾರ ಮಧ್ವಾದಿಕ ಜೆ ಹೈ ।
ವೇದವಿರುದ್ಧ ಕಹತ ಸಬತೆ ಹೈ ॥

ಯಾಮ್ಯೆ ವ್ಯಾಸವಚನ ಸುನಿಲೀ ಜೈ ।
ಸಂಕರ ಮತಹಿ ಪ್ರಮಾನ ಕರೀಜೈ ॥ ೪ ॥

ಅರ್ಥ॥ ಮಧ್ವಾದಿಕ ನಾಲ್ಕು ಜನ ಆಚಾರ್ಯರು, ವೇದವಿರುದ್ಧವಾಗಿಯೇ ಹೇಳುತ್ತಿರುವರು. ಈ ವಿಷಯದಲ್ಲಿಯ ವ್ಯಾಸೋಕ್ತಿಯನ್ನು ಕೇಳು ಅಂದರೆ ಶಂಕರಮತವೇ ಪ್ರಮಾಣವೆಂದು ಸಿದ್ಧವಾಗುವದು. ॥ ೪ ॥

ಕಲಿಮ್ಯೆ ವೇದ ಅರ್ಥ ಬಹು ಕರಿಹೈ ।
ಶ್ರೀ ಶಂಕರ ಸಿವ ತಬ ಅವತಾರಿ ಹೈ ॥
ಜೈನ ಬೌದ್ಧ ಮತ ಮೂಲ ಉಖಾರ್ಯೆ ।
ಗಂಗಾತ್ಯೆ ಪ್ರಭು ಮೂರ್ತಿ ನಿಕಾರ್ಯೆ ॥ ೫ ॥

ಅರ್ಥ॥ ಕಲಿಯುಗದಲ್ಲಿ ಅನೇಕಜನ ವಾದಿಗಳು ಉತ್ಪನ್ನರಾಗಿ ವೇದಾರ್ಥವನ್ನು ಅನೇಕ ವಿಧವಾಗಿ ಮಾಡುತ್ತಾರೆ. ಆ ಶ್ರೀ ಶಿವನು ಶಂಕರ ರೂಪದಿಂದ ಲೋಕೋದ್ಧಾರಾರ್ಥವಾಗಿ ಅವತಾರ ಮಾಡಿ, ಬುದ್ಧ, ಜೈನ ಮೊದಲಾದ ಮತಗಳನ್ನು ಖಂಡಿಸಿ, ದೇವನದಿಯೊಳಗಿಂದ ಶ್ರೀ ವಿಷ್ಣು ಮೂರ್ತಿಯನ್ನು ತೆಗೆದು ಪ್ರಕಟಗೊಳಿಸುವನು.

ಜೈಸ್ಯೆ ಭಾನು ಉದಯ ಉಜಿಯಾರೊ ।
ದೂರಿ ಕರ್ಯೆ ಜಗಮೆ ಅಂಧಿಯಾರೊ ॥
ಸಬ ವಸ್ತು ಹಿ ಜ್ಯೂಕೊ ತ್ಯೂ ಭಾಸ್ಯೆ ।
ಸಂಸ್ಯೆ ಔರ ವಿಪರ್ಯಯ ನಾಸ್ಯೆ ॥ ೬ ॥

ಅರ್ಥ ॥ ಜಗತ್ತನ್ನು ವ್ಯಾಪಿಸಿದಂಥ ಅಂಧಕಾರವು ಸೂರ್ಯೋದಯವಾದ ಕೂಡಲೆ ನಾಶವಾಗಿ, ಸರ್ವಪದಾರ್ಥಗಳು ಯಥಾರ್ಥವಾಗಿ ಕಾಣುವಂತೆ, ವಿಪರೀತವಾದ ಸರ್ವ ಸಂಶಯಗಳು ನಾಶವಾಗುವವು. ॥೬॥

ವೇದ ಅರ್ಥಮ್ಯೆ ತ್ಯೂ ಅಜ್ಞಾನಾ ।
ನಸಿ ಹೈ ಶ್ರೀ ಶಂಕರ ವ್ಯಾಖ್ಯಾನಾ ॥
ಕರಿಹೈ ತೆ ಉಪದೇಸ ಯಥಾ ರಥ ।
ನಾಸ ಹಿ ಸಂಶಯ ಅರು ಅಯಥಾರಥ ॥೭॥

ಅರ್ಥ॥ ಇದರಂತೆ ವೇದಗಳ ಅರ್ಥ ವಿಷಯದಲ್ಲಿ ಇದ್ದ ಅಜ್ಞಾನವು ಶ್ರೀ ಶಂಕರಭಾಷ್ಯದಿಂದ ದೂರವಾಗುವದು. ಮತ್ತು ಯಥಾರ್ಥ ಉಪದೇಶ ಮಾಡಲ್ಪಡುವದು. ಸಂಶಯ ಮತ್ತು ಭ್ರಾಂತಿಜ್ಞಾನವು ನಾಶಿಸಲ್ಪಡುವದು. ॥ ೭ ॥



ಔರ ಜು ವೇದ ಅರ್ಥಕೂ ಕರಿಹೈ ।
ತೆ ಸಠ ವೃಥಾ ಪರಿಶ್ರಮ ಧರಿಹೈ ॥
ಯೂ ಪುರಾನಮ್ಯೆ ವ್ಯಾಸ ಕಹೀ ಹೈ ।
ಸಂಕರ ಮತಮ್ಯೆ ಮಾನ ಯಹೀ ಹೈ ॥ ೮ ॥

ಅರ್ಥ॥ ಈ ಶಂಕರಾಚಾರ್ಯರ ತರುವಾಯ ಯಾರು ವೇದಗಳಿಗೆ ಅರ್ಥವನ್ನು ಮಾಡುವರೋ, ಅವರ ಶ್ರಮವು ನಿಷ್ಫಲವಾದದ್ದಾಗಿ ತಿಳಿಯ ಬೇಕೆಂದು ಶ್ರೀ ವ್ಯಾಸಮಹರ್ಷಿಗಳು ತಮ್ಮ ಪುರಾಣ ಗ್ರಂಥಗಳಲ್ಲಿ ಹೇಳಿದ್ದಾರೆ. ಈ ಕಾರಣದಿಂದ ಶಂಕರಮತವು ಶ್ರೇಷ್ಠವೆಂದು ತಿಳಿದುಕೋ.॥೮॥

ಮಧ್ವಾದಿ ಕ ಕೊ ಮತ ನ ಪ್ರಮಾನಿ ।
ಯಹ ಹಮ ವ್ಯಾಸವಚನ ತೈ ಜಾನೀ ॥
ಔರ ಪ್ರಮಾನ ಕಹೂ ಸೊ ಸುನಿಯೆ ।
ವಾಲಮಿಕರಿಷಿ ಮುಖ್ಯಜುಗಿನಿಯೆ ॥೯॥

ಅರ್ಥ॥ ವ್ಯಾಸ ಮಹರ್ಷಿಗಳ ಈ ವಚನಗಳಿಂದ ಮಧ್ವ ಮೊದಲಾದ ಈ ಆಚಾರ್ಯರ ಮತಗಳು ಅಪ್ರಮಾಣವೆಂದು ಸಿದ್ಧವಾದಂತಾಯಿತು. ಇದರಂತೆ ಶ್ರೀವಾಲ್ಮೀಕಿ ಋಷಿಯು ಮಾಡಿದಂಥ ಗ್ರಂಥಗಳಲ್ಲಿಯೂ ಈ ವಿಷಯದಲ್ಲಿ ಪ್ರಮಾಣಗಳುಂಟು ॥ ೯ ॥

ತಿನಮುನಿ ಕಿಯೊ ಗ್ರಂಥವಾಸಿಷ್ಟಾ ।
ತಾಮ್ಯೆ ಮತ ಅದ್ವೈತ ಸ್ಪಷ್ಟಾ ॥
ಶ್ರೀ ಸಂಕರ ಅದ್ವೈತಹಿ ಗಾನ್ಯೊ ॥
ತಿನಕೊ ಮತ ಯಹ ಹೇತು ಪ್ರಮಾನ್ಯೊ ॥ ೧೦ ॥

ಅರ್ಥ॥ ವಾಲ್ಮೀಕಿ ಮಹರ್ಷಿಯಿಂದ ಪ್ರಣೀತವಾದ ವಾಸಿಷ್ಠವೆಂಬ ಗ್ರಂಥದಲ್ಲಿ ಸಹಾ, ಅದ್ವೈತ ಮತವೇ ಶ್ರೇಷ್ಠವಾದದ್ದೆಂದು ವರ್ಣಿಸಲ್ಪಟ್ಟಿದೆ. ಶ್ರೀ ಶಂಕರನು ಸಹಾ, ಅದ್ವೈತವನ್ನೇ ವರ್ಣಿಸಿ, ಪ್ರಕಟಮಾಡಿದ್ದಾನೆ. ಈ ಕಾರಣದಿಂದ ಶ್ರೀಶಂಕರಾಚಾರ್ಯರ ಮತವೇ ಶ್ರೇಷ್ಠವಾದದ್ದೆಂದು ತಿಳಿ ॥ ೧೦ ॥

॥ ೨೧೫ ॥ ಭೇದವಾದದ ಅಪ್ರಾಮಾಣ್ಯವು.

ವಾಲಮೀಕರಿಷಿ ವಚನ ವಿರುದ್ಧಂ।
ಭೇದವಾದ ಲಖಿ ಸಕಲ ಅಸುದ್ಧಂ ॥ ೧೧ ॥

ಅರ್ಥ॥ ಈ ವಾಲ್ಮೀಕಿಋಷಿಯ ವಚನದಿಂದ ಭೇದವಾದವು ವಿರುದ್ಧವಾದದ್ದೆಂದೂ ಸರ್ವಪ್ರಕಾರದಿಂದಲೂ ಅಶುದ್ಧವಾದದ್ದೆಂದೂ ನೀನು ತಿಳಿದುಕೊಂಡು ಭೇದವಾದವನ್ನು ಸಂಪೂರ್ಣವಾಗಿ ತ್ಯಾಜ್ಯಮಾಡು. ॥೧೧॥

ಟೀಕಾ॥ ಈ ಹನ್ನೊಂದು ಪದ್ಯಗಳಿಂದ ಹೊರಟ ಭಾವಾರ್ಥವೇನೆಂದರೆ, ವ್ಯಾಸ ಮಹರ್ಷಿಗಳು ತಮ್ಮ ಪುರಾಣಗಳಲ್ಲಿ ಯಾವಾಗ ಕಲಿಯುಗದಲ್ಲಿ ಜನರು ವೇದಾರ್ಥವನ್ನು ಅನೇಕ ವಿಧವಾಗಿ ಮಾಡುವರೋ, ಆಗ ಕೃಪಾಳುವಾದ ಶಿವನು ಶ್ರೀ ಶಂಕರಾಚಾರ್ಯ" ಎಂಬ ನಾಮವನ್ನು ಧಾರಣಮಾಡಿಕೊಂಡು, ಅವತಾರಮಾಡಿ, ಬದರೀನಾಥನ ಮೂರ್ತಿಯನ್ನು ದೇವನದಿ ಅಂದರೆ ಭಾಗೀರಥಿಯೊಳಗಿಂದ ತೆಗೆದು ಸ್ವಸ್ಥಾನವಾದ ಬದರಿಕಾಶ್ರಮದಲ್ಲಿ ಸ್ಥಾಪನಮಾಡಿ, ಜೈನ ಬುದ್ಧಮತಗಳನ್ನು ಖಂಡಿಸಿ ಪ್ರಸ್ಥಾನಗಳಿಗೆ[೧] ಯಥಾರ್ಥ ವ್ಯಾಖ್ಯಾನವನ್ನು ಮಾಡುವರು, ಎಂದು ಹೇಳಿರುವನು. (೧) ಈ ವ್ಯಾಸವಚನದಿಂದ ಶ್ರೀಶಂಕರಮತವು ಪ್ರಮಾಣವದೆ. (೨)ಮತ್ತು ಮಧ್ವಾದಿಗಳ ಭೇದಮತವು ಅಪ್ರಮಾಣವಾದದ್ದು. ಮತ್ತು ಉಪನಿಷತ್ತುಗಳು ಗೀತಾ, ಸೂತ್ರ ಈ ಮೂರೂ ವೇದಾಂತಕ್ಕೆ ಪ್ರಸ್ಥಾನವಾಗಿವೆ. ಇವುಗಳಿಗೆ ಯದ್ಯಪಿ ಮಧ್ವ ಮೊದಲಾದ ಆಚಾರ್ಯರು, ಅನ್ಯಪ್ರಕಾರದಿಂದ ತಮ್ಮ ತಮ್ಮ ಮತಾನುಸಾರವಾಗಿಯಾದರೂ ವ್ಯಾಖ್ಯಾನವನ್ನುಮಾಡಿದ್ದಾಗ್ಯೂ ಶ್ರೀವ್ಯಾಸವಚನದಿಂದ ಶ್ರೀಶಂಕರ ಕೃತವ್ಯಾಖ್ಯಾನವೇ ಯಥಾರ್ಥವದೆ.

ಆದಿಕವಿಯಾದ ಸರ್ವಜ್ಞ ವಾಲ್ಮೀಕಿ ಋಷಿಯು ಉತ್ತರರಾಮಾಯಣ ವಾಸಿಷ್ಠ ನಾಮಕ ಗ್ರಂಥವನ್ನು ಮಾಡಿರುವನು. ಅದರಲ್ಲಿ ಯುಕ್ತಿಯಿಂದ ಅದ್ವೈತ ಮತದಲ್ಲಿ ಶ್ರೇಷ್ಠವಾದ ದೃಷ್ಟಿ ಸೃಷ್ಟಿವಾದವನ್ನು ಅನೇಕ ಇತಿಹಾಸಗಳಿಂದ ಪ್ರತಿಪಾದನ ಮಾಡಿರುವನು. ಈ ಕಾರಣದಿಂದ ವಾಲ್ಮೀಕಿ ಮತಾನುಸಾರ ಅದ್ವೈತ ಮತವೇ ಪ್ರಮಾಣವಾದದ್ದು. ಮತ್ತು ವಾಲ್ಮೀಕಿ ವಚನಕ್ಕೆ ವಿರುದ್ಧವಾದ ಭೇದಮತಗಳೆಲ್ಲ ಅಪ್ರಮಾಣವಾಗಿವೆ.

ಈ ಪ್ರಕಾರದಿಂದ ಸರ್ವಜ್ಞ, ಋಷಿ, ಮುನಿವಚನ, ವಿರೋಧದಿಂದ ಭೇದವಾದವು ಅಪ್ರಮಾಣವಾಗಿದೆ. ಮತ್ತು ಯುಕ್ತಿಯಿಂದಸಹ ಭೇದವಾದವು ವಿರುದ್ಧವದೆ. ಎಂಬಸಂಗತಿಯನ್ನು ಖಂಡನ ಮೊದಲಾದ ಗ್ರಂಥಗಳಲ್ಲಿ ಹರ್ಷ ಮೊದಲಾದವರು ಪ್ರತಿಪಾದನ ಮಾಡಿರುವರು. ಪರಂತು ಈ ಯುಕ್ತಿಯು ಕಠಿಣವಾಗಿದ್ದದರಿಂದ ಭೇದಮತ ಖಂಡನದ ಯುಕ್ತಿಯನ್ನು ನಾವು ಉಲ್ಲೇಖಿಸಿರುವದಿಲ್ಲ.



॥೨೧೬॥ ಭೇದವಾದದ ತಿರಸ್ಕಾರ.

ಋಷಿಮುನಿ ವಚನಗಳಿಂದ ವಿರುದ್ಧವಾದ ಭೇದಮತದಲ್ಲಿ ಜೈನಮತದಂತೆ ಅಪ್ರಮಾಣವು ನಿಶ್ಚಯವಾದ್ದರಿಂದ ಯುಕ್ತಿಯಿಂದ ಖಂಡನಮಾಡುವದು, ಆಸ್ತಿಕ ಅಧಿಕಾರಿಗಳಿಗೆ ಅಪೇಕ್ಷೆಯೂ ಇಲ್ಲ; ಎಂಬದನ್ನು ಈ ಕೆಳಗಿನ ಮೂರು ಚೌಪಾಯಿಗಳಲ್ಲಿ ಪ್ರತಿಪಾದನ ಮಾಡುತ್ತೇವೆ.

ಟಿಪ್ಪಣಿ—ಈ ಪ್ರಕಾರದ ವಾಯುಪುರಾಣ, ಕೂರ್ಮಪುರಾಣ, ಮೊದಲಾದ ಶ್ರೀ ವ್ಯಾಸಮಹರ್ಷಿಯ ವಾಕ್ಯಗಳಿಂದ.

---

॥ ಚೌಪಾಈ ॥

ಕಿಯೊ ಗ್ರಂಥ ಶ್ರೀಹರ್ಷ[೧] ಜು ಖಂಡನ।
ಖಂಡನಭೇದ ಏಕತಾ ಮಂಡನ ॥
ಲಿಖ್ಯೊ ತಹಾ ಯಹ ಬಹು ವಿಸ್ತಾರಾ।
ಭೇದವಾದ ನಹಿಂ ಯುಕ್ತಿ ಸಹಾರಾ ॥೧೨॥

ಅರ್ಥ॥ ಶ್ರೀಹರ್ಷನೆಂಬ ಪಂಡಿತನು ರಚಿಸಿದ ಖಂಡನನಾಮಕ ಗ್ರಂಥದಲ್ಲಿ ಭೇದಮತ ಖಂಡನವನ್ನೂ,ಐಕ್ಯಮತ ಮಂಡನವನ್ನೂ,ಬಹುವಿಸ್ತಾರವಾಗಿ ಉಲ್ಲೇಖಿಸಿದ್ದಾನೆ. ಅವನಿಗೆ ಭೇದವಾದ ಯುಕ್ತಿಯು ಸಹನೆಯಾಗಲಿಲ್ಲ.

ಟಿಪ್ಪಣಿ—೧. ಶ್ರೀಹರ್ಷ ಮಿಶ್ರಾಚಾರ್ಯ ನಾಮಕ, ಸರಸ್ವತೀ ಅನುಗ್ರಹಕ್ಕೆ ಪಾತ್ರನಾದ ಅದ್ವೈತವಾದಿಯಾದ ಪಂಡಿತನೊಬ್ಬನಿದ್ದನು. ಅವನು ಖಂಡನಖಂಡಖಾದ್ಯ ನಾಮಕ ಗ್ರಂಥವನ್ನು ರಚಿಸಿರುವನು ಅದರಲ್ಲಿ ಭೇದವಾದವನ್ನು ಧಿಕ್ಕರಿಸಿದ್ದಾನೆ.

---

॥ ಚೌಪಾಈ ॥

ಔರ ಭೇದಧಿಕ್ಕಾರ ಜು ಗ್ರಂಥಾ।
ತಹಾ ಭೇದ ಖಂಡನಕೊ ಪಂಥಾ ॥
ಕಠಿನ[೧] ದುರೂಹ ತರ್ಕ ಹೈತೆ ಅತಿ।

ನಹಿ ಪ್ರೈರಿಹಿ ಸಿಷ ತಿನಮ್ಮೆ ತೆ ಮತಿ ||೧೩||

ಅರ್ಥ|| ಭೇದಧಿಕ್ಕಾರ ನಾಮಕ ಗ್ರಂಥದಲ್ಲಿಯು ಭೇದಖಂಡನ ಪ್ರ ಥವು ಕಠಿಣವಾದದ್ದೂ ತಿಳಿಯಲಸಾಧ್ಯವಾದದ್ದೂ ಆಗಿರುವದರಿಂದ ಅ ರಲ್ಲಿ ನಿನ್ನ ಬುದ್ಧಿಯು ನಿಶ್ಚಯವುಳ್ಳದ್ದು ಆಗಲಾರದು. ||೧೩||

ಟಿಪ್ಪಣಿ—೧ ದೂರೂಹ ತರ್ಕ ಅಂದರೆ ಯಾವನ ಬುದ್ಧಿಯಲ್ಲಿ ಬಹುಶ್ರಮದಿಂ ಕಲ್ಪನೆಯು ಉಂಟಾಗುವದೋ, ಅಂಥ ಪ್ರತಿವಾದಿಯ ಅನಿಷ್ಟ ಸಂಪಾ ರೂಪತರ್ಕ ಯುಕ್ತಿಯು ಇರುವದು.

|| ಚೌಪಾಈ ||

ಯಾತೈ ಕಹೀ ನತೆ ತುಹಿ ಉಕ್ತೀ |
ಕರೈ ಜು ಭೇದಹಿ ಖಂಡನ ಯುಕ್ತೀ ||
ಅಪ್ರಮಾನ ಮತ ಭೇದ ಲಖ್ಯೋ ಜಬ |
ಖಂಡನಮ್ಮೆ ಯುಕ್ತಿ ನ ಚಹಿಯತ ತಬ ||೧೪||

ಅರ್ಥ|| ಇದರಿಂದ ಆ ಉಕ್ತಿಯನ್ನು ನಿನಗೆ ಹೇಳಲಿಲ್ಲ. ಭೇದಖಂಡ ನದಲ್ಲಿ ಭೇದಮತವು ಅಪ್ರಮಾಣವೆಂದು ಯುಕ್ತಿ ಯುಕ್ತವಾಗಿ ಸಿದ್ಧವಾ ಮೇಲೆ ಖಂಡನ ಯುಕ್ತಿಯ ಅಪೇಕ್ಷೆಯು ಯಾಕೆ?

ವೇದ ವಚನಗಳಿಂದಲೂ ಸಹ ಭೇದಮತ ವಿರುವದೆಂಬದ ಗುರುಗಳು ಹೇಳುತ್ತಾರೆ.

|| ಚೌಪಾಈ ||

ಭೇದಪ್ರತೀತಿ ಮಹಾದುಖ ದಾತಾ |
ಯಮು ಕಠಮ್ಮೆ ಯಹ ಟೇರತ ತಾತಾ ||
ಯಾತೈ ಭೇದವಾದ ಚಿತ ತ್ಯಾಗಹು |
ಇಕ ಅದ್ವೈತವಾದ ಅನುರಾಗಹು ||೧೫||

ಅರ್ಥ|| "ಭೇದ ಪ್ರತೀತಿಯು ಮಹಾ ದುಃಖವನ್ನು ಕೊಡುವಂಥ ದ್ದು" ಎಂದು ಕಠವಲ್ಲೀ ಉಪನಿಷತ್ತಿನಲ್ಲಿ ಯಮಧರ್ಮನು ಹೇಳಿದ್ದಾನೆ.ಆದ್ದ ರಿಂದ ಭೇದವಾದವನ್ನು ತ್ಯಾಗಮಾಡಿ, ಅದ್ವೈತವಾದದಲ್ಲಿ ಪ್ರೀತಿಯನ್ನು ಳ್ಳವನಾಗು. ||೧೫||

೧

||೧|| 'ಮೃತ್ಯೋಃ ಸ ಮೃತ್ಯುಮಾಪ್ನೋತಿ |



ಯ ಇಹ ನಾನೇವ ಪಶ್ಯತಿ,, ಇತಿ ಶೃತೇಃ ||

ಅರ್ಥ ಮತ್ತು ಟಿಪ್ಪಣೆ—"ಯಾವ ಪುರುಷನು ಈ ಪರಮಾತ್ಮನ ವಿಷಯದಲ್ಲಿ ಅನೇಕತ್ವಗಳನ್ನು ನೋಡುವನೋ, ಅವನು ಮೃತ್ಯುವಿನಿಂದ ಮೃತ್ಯುವನ್ನು ಹೊಂದುವನು." ಇತಿ ಶೃತ್ಯರ್ಥಃ ||

||೧|| "ದ್ವಿತೀಯಾದ್ವೈ ಭಯಂ ಭವತಿ,, ||

||೨|| "ಅನ್ಯೋಸಾವನ್ಯೋಹಮಸ್ಮೀತಿ ನಸ ವೇದಯಥಾ ಪಶುರೇವ ಸದೇವಾನಾಂ,, ಇತಿ ದ್ವೇಶೃತೀ ||

|| ಚೌಪಾಈ || ಅರ್ಥ ||

ಜೊ ದ್ವಿತೀಯಕೂ ಮತಿಮ್ಮೆ ಧಾರೈ |
ಭಯ ತಾಕೂ ಯಹ ವೇದ ಪುಕಾರೈ ||
ಜ್ಞೇಯ ಧ್ಯೇಯ ಮೊತೈ ಕಛು ಔರಾ |
ಲಖೈ ಸು ಪಸು ಯಹ ವೇದ ಢಂಢೋರಾ ||೧೬||

ಅರ್ಥ|| ಯಾವನು ಭೇದವಾದವನ್ನು ಮನಸ್ಸಿನಲ್ಲಿ ಧಾರಣಮಾಡುವನೋ, ಅವನಿಗೆ ಭಯವೆಂದು ಶೃತಿಯು ಹೇಳುತ್ತದೆ. ತನ್ನಿಂದ ಜ್ಞೇಯ, ಧ್ಯೇಯಗಳು ಅನ್ಯವಾಗಿರುವವೆಂದು ಯಾವನು ತಿಳಿಯುವನೋ, ಅವನು ನಿಶ್ಚಯವಾಗಿ ದೇವಪಶುವೆಂದು ತಿಳಿ.

ಮೇಲೆ ಹೇಳಿದ ಶೃತಿಗಳ ಅರ್ಥವು ಇದೇ. ||೧೬||

|| ಚೌಪಾಈ ||

ವಿಷ ಯಾತೈ ಮಧ್ವಾದಿಕ ಬಾನೀ ||
ಸುನೀ ಸು ಬಿಸರಹ ಅತಿ ದುಖದಾನೀ ||
ದ್ವೈತವಚನ ತವ ಹಿಯಮ್ಮೆ ಔಲಾ |
ಹ್ವೈ ಸಾಛಾತ್ ಅದ್ವೈತ ನ ತೌಲಾ ||೧೭||

ಅರ್ಥ—ಈ ಕಾರಣದಿಂದ ಎಲೈ ಶಿಷ್ಯನೇ! ಮಧ್ವಾದಿಗಳ ವಚನಗಳನ್ನು ಕೇಳಿದ ಕೂಡಲೆ ಮರೆಯಬೇಕು. ಆ ವಚನಗಳು ದುಃಖಜನ್ಯವಾದವುಗಳು; ಎಲ್ಲಿಯ ವರಿಯಂತ ನಿನ್ನ ಹೃದಯದಲ್ಲಿ ದ್ವೈತವಚನಗಳಿಂದ ಹುಟ್ಟಿದ ದ್ವೈತಭಾವ ವಿರುವದೋ, ಆವರಿಯಂತ ಅದ್ವೈತ ಸಾಕ್ಷಾತ್ಕಾರವು ಆಗಲಾರದು. || ೧೭ ||

॥ರಾಜನ ಮಂತ್ರಿಯಾದ ಭರ್ಥೂರ್ ಎಂಬವನ ಕಥೆ॥

॥ ೨೧೭—೨೨೮ ॥

॥೨೧೭॥ ಭರ್ಥೂರನು ತಪಸ್ವಿಯಾದದ್ದು ॥

॥ ಚೌಪಾಈ ॥

ದ್ವೈತವಚನಕೊ ಸ್ಮರನ ಜು ಹೋವೈ ॥
ಪೂರ್ವಸ್ಮೃತೀ ಸಾಛಾತ ಬಿನಾಸತ ।
ಸುನ ಇಕ ಅಸ ತುಹಿ ಕಥಾ ಪ್ರಕಾಸತ ॥ ೧೮ ॥

ಅರ್ಥ—ದ್ವೈತವಚನಗಳ ಸ್ಮರಣ ಮಾತ್ರದಿಂದ ನಿನ್ನಸಾಕ್ಷಾತ್ಕಾರವು ನಾಶವಾಗಿ ಹೋಗುವದು. ಪೂರ್ವಸ್ಮೃತಿಯೂ ಸಹ ಸಾಕ್ಷಾತ್ ನಾಶವಾಗುವದು ಎಂಬ ವಿಷಯಗರ್ಭಿತವಾದ ಒಂದು ಕಥೆಯನ್ನು ಹೇಳುತ್ತೇನೆ. ಚಿತ್ತವಿಟ್ಟು ಕೇಳು. ॥ ೧೮ ॥

॥ ಚೌಪಾಈ ॥

ರಾಜಾಕೊ ಇಕ ಭರ್ಥೂರ ಮಂತ್ರೀ ।
ರಾಜ ಕಾಜ ಸಬ ತಾಕೇ ತಂತ್ರೀ ।
ಔರ ಮುಸಾಹಿಬ ಮಂತ್ರೀ ಜೇತೆ ।
ಕರ್ರೈ ಈರಷಾ ತಾಸೂ ತೇತೆ ॥೧೯॥

ಅರ್ಥ—ಒಬ್ಬಾನೊಬ್ಬ ರಾಜನಲ್ಲಿ ಭರ್ಥೂರ ನಾಮಕ ಪ್ರಧಾನಿಯಿದ್ದನು. ಯಾವತ್ತೂ ರಾಜ್ಯಕಾರ್ಯಭಾರವು ಅವನ ವಶವರ್ತಿಯಾಗಿತ್ತು. ಇದರಿಂದ ಉಳಿದ ಯಾವತ್ತು ಮುತ್ಸದ್ದಿಗಳು ಅವನೊಡನೆ ದ್ವೇಷಮಾಡುತ್ತಿದ್ದರು.

ಟಿಪ್ಪಣಿ—ತಂತ್ರಿ ಅಂದರೆ ಅಧೀನ.

॥ ಚೌಪಾಈ ॥

ಕರಿ ನ ಸಕತ ಭರ್ಥೂರಕೀ ಹಾನಾ ।
ಮಹಾರಾಜ ನಿಜಜಿಯು ಪ್ರಿಯು ಜಾನಾ ॥
ತಬ ಸಬ ಮಿಲಿ ಯಹ ರಚ್ಯೋ ಉಪಾಯಾ ।
(೧)
ಧಾರೀ ದೌರ ದಂಗಾ ಮಚವಾಯಾ ॥೨೦॥



ಅರ್ಥ॥ ಆದರೂ ಅವನ ಹಾನಿಯನ್ನು ಮಾಡಲಸಮರ್ಥರಾಗಿದ್ದರು. ಅವನು ರಾಜನಿಗೆ ಅತ್ಯಂತ ವಿಶ್ವಾಸಿಕನಾದ್ದರಿಂದ ಹ್ಯಾಗಾದರೂ ಮಾಡಿ, ಅವನ ಮೇಲಿನ ವಿಶ್ವಾಸವನ್ನು ಕೆಡಿಸಬೇಕೆಂದು ರಾಜ್ಯದೊಳಗೆ ದೊಂಬಿಯನ್ನು ಎಬ್ಬಿಸಿದರು. ॥ ೨೦ ॥

ಟಿಪ್ಪಣಿ—(೧) ದೌಡು ಮಾಡಿ.

॥ಚೌಪಾಈ॥

ಸೊ ಸುನಿ ರಾಜಹಿ ಕರೀ ಕಚಹರೀ ।
ಲಿಯೆ ಬುಲಾಯ ಮುಸಾಹಿಬ ಜಹರೀ ॥
ತಿನಸೂ ಕಹ್ಯೋ ಬೇಗ ಚಢಿ ಜಾವಹು ।
(೧)
ಧೌರತ ಧಾರಿ ಸು ಧೂಮ ನಸಾವಹು ॥ ೨೧ ॥

ಅರ್ಥ॥ಈ ದೊಂಬಿಗಾರರ ವಾರ್ತೆಯನ್ನು ಕೇಳಿ, ರಾಜನು ಯಾವತ್ತು ಸರದಾರರನ್ನು ಕರೆಯಿಸಿ, ನೀವೆಲ್ಲರೂ ಒಗ್ಗಟ್ಟಾಗಿ ಹೋಗಿ, ಆದಂಗೆಯನ್ನು ನಾಶಮಾಡಿರಿ ? ಎಂದು ಹೇಳಿದನು.

ಟಿಪ್ಪಣಿ-(೧) ಧೌರತಧಾರಿ, ಅಂದರೆ ದೌಡು ಮಾಡಿ ಬಂದವರನ್ನು ಧೂಮ ಅಂದರೆ ಯುದ್ಧದಲ್ಲಿ, ಸು ಅಂದರೆ ಚನ್ನಾಗಿ ನಸಾವಹೂ ಅಂದರೆ ನಾಶಮಾಡಬೇಕು.

॥ ಚೌ ಪಾ ಈ ॥

ತಬ ಸಬ ಮಿಲಿ ಉತ್ತರ ಯಹ ನಾನಾ ।
ಸದಾ ಏಕ ಭರ್ಥೂರಹಿ ತುಮ ಚೀನಾ ॥
ಮರನಲಿ ಏ ಅಬ್ ಹಮಹಿ ಪಠಾವತು ।
ಭರ್ಥೂರಕೂ ಕಹು ಕ್ಯೂ ನ ಚಢಾವತು ! ॥೨೨॥

ಅರ್ಥ॥ ಆಗ ಅವರೆಲ್ಲರೂ ಕೂಡಿ, ನೀವು ಸರ್ವದಾ ಭರ್ಥೂರನ ಸ್ತುತಿಯನ್ನೇ ಮಾಡುತ್ತಿರುವಿರಿ; ಪ್ರಾಣಸಂಕಟವು ಬಂದಕೂಡಲೆ ನಮ್ಮನ್ನು ಕರೆಯು ಕಳುಹುತ್ತೀರಿ; ಅವನನ್ನು ಈ ದಂಡನ್ನು ಮುರಿಯಲಿಕ್ಕೆ ಯಾಕೆ ಕಳಿಸಬಾರದು.

॥ ಚೌ ಪಾ ಈ ॥

ತಬ ಬೋಲ್ಯೋ ಭರ್ಥೂರ ಕರ ಜೋರೀ ॥
ಮಹಾರಾಜ ಸುನು ವಿನತೀ ಮೋರೀ ॥

ಆಜ್ಞಾ ಹೋಯ ಮೋಹೀ ಯಹ [೧]ಕೌರೀ ।
ಮರೂ ಸಕಲ ಧಾರೀ ಜೊ ಧೌರೀ ॥೨೩॥

ಅರ್ಥ ॥ ಆಗ ಭರ್ಥುವು ಕೈಜೋಡಿಸಿಕೊಂಡು, ರಾಜನ್! ನನ್ನ ವಚನವನ್ನು ಕೇಳಬೇಕು. ನನಗೆ ಈ ಬಂಡನ್ನು ಮುರಿಯುವದಕ್ಕೆ ಅಪ್ಪಣೆಯಾದರೆ ಈಗಲೇ ಅದನ್ನು ಮುರಿದು ಬರುವೆನು. ॥ ೨೩ ॥

ಟಿಪ್ಪಣಿ. ಕೌರೀ ಅಂದರೆ ನಿಮ್ಮ.

॥ ಚೌ ಪಾ ಈ ॥

ತಬ ಭರ್ಥೂಕೂ ಬೋಲ್ಯೋ ರಾಜಾ ।
ತುಮ ಚಢಿ ಜಾಹು ಸಮಾರಹು ಕಾಜಾ ॥
ತೇ ಜಾತಹಿ ಭರ್ಥೂ ಸಬ ಮಾರೆ ।
[೧]ಬನಕ [೨]ಕೃಷೀಬಲ ಕಿಯೆ ಸುಖಾರೆ ॥ ೨೪ ॥

ಅರ್ಥ॥ ಎಂದು ಬಿನ್ನವಿಸಿದ ಮಂತ್ರಿಯ ವಾಕ್ಯವನ್ನು ಕೇಳಿ, ರಾಜನು ಹೋಗಲಪ್ಪಣೆಕೊಟ್ಟನು. ಆ ಕೂಡಲೆ ಭರ್ಥುವು ಹೋಗಿ ಆ ದಂಗೆಯನ್ನು ಮುರಿದು ಒಕ್ಕಲಿಗರಿಗೂ, ವ್ಯಾಪಾರಸ್ಥರಿಗೂ, ಸುಖವನ್ನುಂಟುಮಾಡಿದನು. ॥ ೨೪ ॥

ಟಿಪ್ಪಣಿ. (೧) ಬನಕ ಅಂದರೆ ವೈಶ್ಯ, (ಧನಿಕ) (೨) ಕಷೀಬಲ ಅಂದರೆ ಹೊಲವನ್ನು ಮಾಡುವವರು.

॥ ಚೌ ಪಾ ಈ ॥

ಭರ್ಥೂ ವಿಜಯ ಸುನ್ಯೋ ತಿನ ಜಬಹೀ ।
ರಾಜಾಪೈ ಭಾಖ್ಯೋ ಯಹ ತಬಹೀ ॥
ಭರ್ಥೂ ಮರ್‍ಯೋ ನ ಸುಧರ್‍ಯೋ ಕಾಜಾ, ।
ಮಿಥ್ಯಾ ವಚನ ಸುತನಹಿ ರಾಜಾ ॥ ೨೫ ॥

ಅರ್ಥ ॥ ಈ ಪ್ರಕಾರ ಭರ್ಥುವಿನ ವಿಜಯವನ್ನು ಕೇಳಿ, ಮತ್ಸರಿಗಳಾದ ಸರದಾರರೆಲ್ಲರು ಕೂಡಿ ರಾಜನ ಬಳಿಗೆ ಬಂದು "ಮಹಾರಾಜ! ಆ ದಂಗೆಯನ್ನು ಮುರಿಯುವದು ಭರ್ಥುವಿನಿಂದ ಅಸಾಧ್ಯವಾಗಿ ಅವನು ಅದರಲ್ಲಿ ಮೃತಿಯನ್ನೈದಿದನು. ಎಂದು ಅಸತ್ಯವನ್ನು ಹೇಳಿದರು. ॥ ೨೫ ॥



॥ಚೌಪಾಈ॥

[೧]ಔರಪ್ರಧಾನ ಮುಸಾಹಿಬ ಕೀನೊ ।
ಛತ್ರ ರು [೨]ಪೀನಸ ಪಂಖಾ ದೀನೋ ॥
ಬಂದೋಬಸ ತಿನ ಕಿನೇ ಅಪನಹು ।
ಸುನ್ಯೈ ನ ರಾಜಾ ಭರ್ಥೂ ಸುಪನಹು ॥ ೨೬ ॥

ಅರ್ಥ॥ ಆಮೇಲೆ ಎಲ್ಲರೂ ಕೂಡಿ ಆಲೋಚನೆಯನ್ನು ಮಾಡಿ, ಮತ್ತೊಬ್ಬನಿಗೆ ಮಂತ್ರಿಯ ಅಧಿಕಾರದಮೇಲೆ ನಿಯಮಿಸಿ, ಭರ್ಥುವಿನ ಮರಣ ಸಂಗತಿಯು ರಾಜನಿಗೆ ಕನಸಿನಲ್ಲಿ ಸಹಾ ಬರದಂತೆ ಮಾಡಿದರು.॥೨೬॥

ಟಿಪ್ಪಣಿ. [೧] ಮುಸಾಹಿಬ ಅಂದರೆ ಲಘುಮಂತ್ರಿಯನ್ನೂ ಪ್ರಧಾನ ಅಂದರೆ ಮುಖ್ಯ ಮಂತ್ರಿಯನ್ನಾಗಿ ಮಾಡಿ [೨] ಪೀನಸ ಅಂದರೆ ಪಲ್ಲಕ್ಕಿ.

॥ಚೌಪಾಈ॥

ಸಬ ವೃತ್ತಾಂತ ಭರ್ಥೂ ತಬ ಸುನಿಕೆ ।
ರೂಪ ತಪಸ್ವಿ ಧರ್‍ಯೋ ಯಹ ಗುನಿಕೆ ॥
ರಾಜಾಪೈ ಮುಹಿ ಜಾನ ನ ದೈ ಹೈ ।
ಗಯೆ ದ್ವಾರ ಲಗ ಪ್ರಾನಹು ಲೈ ಹೈ ॥೨೭॥

ಅರ್ಥ॥ ಈ ಎಲ್ಲ ವೃತ್ತಾಂತವು ಭರ್ಥುವಿಗೆ ತಿಳಿಯಿತು, ಆಗ ಅವನು ಯೋಚಿಸಿದ್ದೇನೆಂದರೆ, ನಾನು ಈಗ ರಾಜಸನ್ನಿಧಿಗೆ ಹೋದರೆ ಅವನು ನನ್ನನ್ನು ಕೊಲ್ಲದೆ ಇರಲಾರನು; ಆದರಿಂದ ತಪಸ್ವಿಯಾಗಿ ಬಿಡಬೇಕು.

॥ಚೌಪಾಈ॥

ಅಬಲಗ ಸಬಹಿ ವದಾರಥ ಭೋಗ್ಯೈ ।
ದೇಹರು ಇಂದ್ರಿಯ ರಹೆ ಆರೋಗ್ಯೈ ॥
[೧]ತಿಯಜೊ [೨]ಚಾರೀ ಚತುರ್ಪದ ಸೋಹತ ॥
ಚ್ಯಾರಿ ಫೂಲ ಫಲ ಖಗ ಮನ ಮೋಹತ ॥೨೮॥

ಅರ್ಥ ॥ ಇಷ್ಟು ದಿವಸ ಪರಿಯಂತ ಸಮಗ್ರ ಭೋಗಗಳನ್ನೂ ಅನುಭವಿಸಿದೆನು. ದೇಹ ಮತ್ತು ಇಂದ್ರಿಯಗಳು ರೋಗರಹಿತವಾಗಿದ್ದವು. ಸುಂದರವಾದ ಗೃಹದಲ್ಲಿ ಗೃಹಪತ್ನಿಯು ಶೋಭಿಸುತ್ತಿದ್ದಳು. ಮನಸ್ಸು ಸಂಸಾರದಲ್ಲಿಯೇ ಮೋಹವುಳ್ಳದ್ದಾಗಿತ್ತು. ॥ ೨೮ ॥

ಟಿಪ್ಪಣಿ. [೧] ಈ ಚೌಪಾಈಇಂದ ಆರಂಭ ಮಾಡಿಕೊಂಡು ೩೪ನೇ ಪದ್ಯದ ಪ
ಯಂತ ಕಾವ್ಯಗ್ರಂಥಗಳ ರೀತಿಯಿಂದ ಸ್ತ್ರೀ ಅಂಗಗಳ ವರ್ಣನರೂಪ
ರೋಪವನ್ನು ಮಾಡಲ್ಪಟ್ಟಿದೆ. ಅವು ದೋಷದೃಷ್ಟಿರೂಪ ಅಪವಾದದ
ವಾಗಿರುವವು. ಕಾರಣವೇನೆಂದರೆ,-ಲಕ್ಷ್ಯ ಅಂದರೆ ಗುರಿಯಿಲ್ಲದೆ ಹೊ
ಬಾಣಪ್ರಹಾರದಂತೆ ಆರೋಪವಿಲ್ಲದೆ ಅಪವಾದವುಂಟಾಗುವದಿಲ್ಲ. ಈ
ಣದಿಂದ ಪ್ರಥಮದಲ್ಲಿ ವಿಷಯಾಸಕ್ತ ಪಾಮರ ಕವಿಜನಗಳ ಕಥನದ
ವಾದರೂಪ ಆರೋಪವನ್ನು ಮಾಡಿದೆ. ಆಮೇಲೆ ಇದೇತರಂಗದ
ಪದ್ಯದಿಂದ ಸ್ತ್ರೀಯರ ಅಂಗಗಳ ದೋಷದೃಷ್ಟಿರೂಪ ಅಪವಾದ
ಹೇಳುವೆವು.

ಇದಕ್ಕೂ ಹಿಂದುಗಡೆಯಲ್ಲಿ ಅಪವಾದವನ್ನು ಮಾಡಲ್ಪಟ್ಟಿದೆ. ಅದು
ಇಲ್ಲಿ ಸ್ತ್ರೀಯರ ಅಂಗಗಳ ಉಪಮೆಯಲ್ಲಿ ತಾತ್ಪರ್ಯವಿಲ್ಲ. ಆದರೆ
ಉಪಮೆಯನ್ನು ಕೊಡತಕ್ಕ ವಿಷಯಲಂಪಟ ಜನಗಳ ಉಪವಾಸ
ತಾತ್ಪರ್ಯವುಂಟು ಸರ್ವ ಕಾವ್ಯ ಗ್ರಂಥಗಳಅಭಿಪ್ರಾಯವು ಸಹಾ
ರೀತಿಯಾಗಿರುವುದು.

ಉಕ್ತಸ್ತ್ರೀಯ ಅಂಗಗಳ ಉಪಮೆಯ ಯಥಾಸ್ಥಿತಖಂಡನವನ್ನು ಪಂ
ಪೀತಾಂಬರಜಿಯವರು ರೂಪಕಾದರ್ಶದಲ್ಲಿ ಶೃಂಗಾರ ವೈರಾಗ್ಯದ ಪ್ರ
ಗದಲ್ಲಿ ಉಲ್ಲೇಖಿಸಿರುವರು, ಅಲ್ಲಿ ನೋಡಿಕೊಳ್ಳಬೇಕು.

[೨) ಚತುಷ್ಪದಗಳುಳ್ಳ ಪಶುವಿನಂತೆ.

||೨೧೮|| ನಾರಿಯ ನಿಂದಾ.

"ತಿಯ" ಎಂಬ ಪದಾದಿಯಾಗಿ "ಖಗ"ಪದದ ಅಂತ್ಯದ ವ
ಈ ಎರಡು ಪದಗಳ ಅರ್ಥವದೆ.

||ದೋಹಾ||

೧
ಕರಿಕರ ಊರು ಮೃಗ ಖುರು ಪುರಜ । ಕೆಹರಿ ಸೀಕಟಿ ಮಾ
೨
ಲೋಯನ ಟಪಲ ತುರಂಗ ಸೈ । ಬರಸೈ ಪರಮ ಸುಜಾನ ||

ಅರ್ಥ || ಆನೆಯ ಶುಂಡದಂತೆ ಜಂಘ (ತೊಡೆಗಳು) ಸಿಂಹದ
ಕಟಿಯುಳ್ಳವಳು. ನೇತ್ರಗಳು ಹರಿಣ ನೇತ್ರದಂತೆ ಇರುವವು.
ವರ್ಣನೆ ಮಾಡಿದ್ದಾರೆ.

ಟಿಪ್ಪಣಿ. (೧) ಕರಿಕರ ಅಂದರೆ ಗಜಶುಂಡವತ್ ಅಂದರೆ ಊರು ತೊಡೆ
ಮೊಣಕಾಲಿನ ಮೇಲ್ಭಾಗದ ಅವಯವದ ಹೆಸರು, ೨-ಕಾವ್ಯಗ್ರಂಥ
ಕುಶಲರು.



|| ಚಾರೀ ಪೂಲ ||

೧
ಕಮಲ ವದನ ಅಲಸೀ ಕುಸುಮ । ಚಿಬುಕ ಚಿನ್ಹ ಮತಿಧಾಮ||
ತಿಲಪ್ರಸೂನಸೀ ನಾಸಿಕಾ । ಚಂಪಕ ತನು ಅಭಿರಾಮ ||೩೦||

ಅರ್ಥ:—ಕಮಲದಂತೆ ಮುಖವುಳ್ಳವಳೂ, ಅತಸೀಪುಷ್ಪಸಮಾನವಾದ
ಕತ್ತುಳ್ಳ ಚುಬಕ ಚಿಹ್ನವಿರಾಜಿತಳೂ,ತಿಲಕುಸುಮದ ಸೌಭಾಗ್ಯವನ್ನುಸೂರೆ
ಗೊಂಡ ನಾಸಿಕದಿಂದ ಪೊಪ್ಪುವವಳೂ ಸಂಪಿಗೆಯ,ವರ್ಣದಂತೆ ದೇಹ
ಕಾಂತಿವುಳ್ಳವಳೂ. || ೩೦ ||

|| ಚ್ಯಾರಿ ಫಲ ||

೧
ಬಿಂಬ ಅಧರ ದಾರಿಮ ದಸನ । ಉರಜ ಬಿಲ್ವಸೆ ಧೀರ||
೨
ಕೋಹರಸೀ ಏಡೀ ಕಹತ। ಕೋವೀದ ಮತಿ ಗಂಭೀರ||೩೧||

ಅರ್ಥ || ತೊಂಡೆಯ ಹಣ್ಣಿನಂತೆ ಕೆಂಪಾದ ತುಟಿಯುಳ್ಳವಳೂ ದಾಳಿಂ
ಬೆ ಬೀಜದಂತೆ ಮನೋಹರವಾದ ದಂತ ಪಂಗ್ತಿಯುಳ್ಳವಳೂ ಬಿಲ್ವಫಲ
ದಂತೆಕೋಮಲವಾದ ಕುಚದ್ವಯವುಳ್ಳವಳೂ ಉದಾರವಾಗಿಯೂ ಗಂಭೀ
ರವಾಗಿಯೂ ಇರುವ ಬುದ್ಧಿಯುಳ್ಳವಳೂ. ||೩೧||

ಟಿಪ್ಪಣಿ—೧. ಮೂಲಂಗಿಯು ಹೇಗೆ ಎಲೆಗಳುಳ್ಳದ್ದೋ ಇದರಂತೆ ಚಿಕ್ಕದಾದ
ಶಾಕ, ಅಂದರೆ ಪಲ್ಲೆಯ ವೃಕ್ಷವಿಶೇಷವು, ಇದಕ್ಕೆ ಕೋಹರವೆಂದು ಅನ್ನು
ತ್ತಾರೆ. ಇದಕ್ಕೇ ಹಿಂದುಸ್ತಾನೀ ಭಾಷೆಯಲ್ಲಿಯೂ ಪಾರಸೀ ಭಾಷೆಯಲ್ಲಿ
ಯೂ "ಸಲಗಮ" ಎಂದೂ ಅನ್ನುವರು. ಇದರ ಬುಡದಲ್ಲಿ ಉರುಳೇಗಡ್ಡೆ
ಯಂತೆ ಕೆಂಪು ಬಣ್ಣವುಳ್ಳ ದುಂಡಗಾಗಿರುವ ಫಲವು ಆಗುವದು. ಇದಕ್ಕೆ
ಕೋಹರ ಫಲವನ್ನುತ್ತಾರೆ.

೧ ||ಚ್ಯಾರಿ ಖಗ|| ೨

ಹೈ ಮರಾಲಸೀ ಮಂದಗತಿ । ಕಂಠ ಕಪೋತ ಸುಥಾರ ||
ಪಿಕಸೀ ಬಾನೀ ಅತಿ ಮಧುರ। ಮೋರ ಪುಚ್ಛಸೈವಾರ||೩೨||

ಅರ್ಥ|| ಹಂಸಪಕ್ಷಿಯ ಗಮನದಂತೆ ನಡಿಗೆಯುಳ್ಳವಳೂ ಕೋಕಿಲ
ಕಂಠವನ್ನು ಅಲ್ಲಗಳೆದ ಮೃದುಮಧುರವಾದ ಕಂಠಸ್ವರವುಳ್ಳವಳೂ ಶಾರಿ
ಕೆಯ ನುಡಿಗಳ ಸೊಬಗುಳ್ಳ ಭಾಷಣವುಳ್ಳವಳೂ ಮಯೂರದಪುಚ್ಛದಂತೆ
ಅತಿ ದೀರ್ಘವಾದ ಕೇಶಜಾಲವುಳ್ಳವಳೂ ||೩೨||

॥ ಚೌಪಾಈ ॥

ಗಂಗ ಪಯೋ ನಿಧಿ ಕಬಹು ನ ತ್ಯಾಗತ ।
ಜಾತ್ಯೈ ರಸಿಕಸು ಮನ ಅನುರಾಗ ತ ॥
ವಿಧಿ ತಿಲೋತ್ತಮಾ ಅಪರ ಬನಾ ಈ ।
ಹನ್ಯೊ ಸುಂದ ಜಿನ ಸೊ ನ ಸುಹಾ ಈ ॥೩೩॥

ಅರ್ಥ॥ ಇಂತು ಸರ್ವ ಲಕ್ಷಣ ಲಕ್ಷಿತಳಾದ ತಿಲೋತ್ತಮೆ ... ಸುಂದರಿಯನ್ನು ಚತುರ್ಮುಖನು ನಿರ್ಮಿಸಿದನು ಇಂತ ಯುವತೀ ರತ್ನ... ನ್ನು ಕಂಡ ವಿಟರ, ಅಥವಾ ಕಾಮುಕರ ಮನವು ಸಮುದ್ರವನ್ನು ಬಿಟ್ಟ... ಅಲುಗದ ಗಂಗಾನದಿಯಂತೆ ಚಂಚಲ ರಹಿತವಾಗುವದು. ಆದರೂ ಅತ್ಯ... ಲಾವಣ್ಯವತಿಯಾದ ಈ ತಿಲೋತ್ತಮೆಯು ಸುಂದೋಪ ಸುಂದ... ದೈತ್ಯರನಾಶಕ್ಕೆ ಕಾರಣಳಾದಳು (ಅಂದರೆ.) ತಿಲೋತ್ತಮೆಯು ... ಯವ್ವನಾದಿಗಳಿಂದ ಕೂಡಿದ್ದರೂ ಸದ್ಗುಣಗಳನ್ನು ಒಳಗೊಂಡಿದ್ದ... ಸುಂದೋಪಸುಂದರವಧೆಗೆ ಕಾರಣಳೆಂಬ ದೋಷಾರೋಪಣೆಯನ್ನು ... ಸಿದಳು. ನನ್ನ ಹೆಂಡತಿಯು ತಿಲೋತ್ತಮೆಗಿಂತಲೂ ಅತಿಶಯವಾದವಳೂ ದೋಷರಹಿತಳೂ ಬ್ರಹ್ಮಸೃಷ್ಟಿಗಿಂತಲೂ ಉತ್ತಮವಾದವಳೂ ಆಗಿರುವಳು ಎಂದುಭಾವವು. ॥೩೩॥

ಈ ಕಥೆಯು ಮಹಾಭಾರತದಲ್ಲಿ ಅದೆ;—ಸುಂದ, ನಿಸುಂದ... ನಾಮವುಳ್ಳ ಸಹೋದರರಾದ ಇಬ್ಬರು ದೈತ್ಯರಿದ್ದರು. ಅವರು ಬ್ರಹ್ಮದೇ... ನನ್ನುಕುರಿತು ತಪಸ್ಸುಮಾಡಿ,"ನಾವಿಬ್ಬರೂ ಸಹೋದರರು ನಮ್ಮ ನಮ್ಮೊ... ಳಗೆ ಬಡಿದಾಡಿಒಬ್ಬನಕ್ಕೈಯಿಂದ ಮತ್ತೊಬ್ಬನುಮೃತನಾಗಬೇಕೆ! ಹೊರ... ಅನ್ಯರ ಕಡೆಯಿಂದ ಮರಣವು ಬರಬಾರದು." ಎಂದು ವರವನ್ನು ಪಡೆ... ತ್ರಿ ಲೋ ಕ ಗ ಳಿ ಗೂ ದುಃ ಖ ವ ನ್ನು ಕೊಡಹತ್ತಿದರು. ಆಗ ಬ್ರಹ್ಮ... ...ವನು ಆ ದೈತ್ಯಬಂಧುಗಳ ನಾಶಾರ್ಥವಾಗಿ ಜಗತ್ತಿನಲ್ಲಿಯ ಸರ್ವಸ್ತ್ರೀ... ...ಗಿಂತಲೂ ಅತಿ ಸುಂದರಳಾದ ತಿಲೋತ್ತಮೆ ಎಂಬ ಅಪ್ಸರೆಯನ್ನು ನಿ...ಸಿ, ಪೃಥ್ವಿಯಮೇಲೆ ಆ ದೈತ್ಯರಿದ್ದ ಸ್ಥಳಕ್ಕೆ ಕಳುಹಿದನು. ಅವಳನ್ನು ನೋಡಿ ಆ ದೈತ್ಯರಿಬ್ಬರು ಮೋಹಿತರಾಗಿ "ನೀನು ನಮ್ಮಿಬ್ಬರನ್ನು ವರಿ... ...ಯಾ?" ಎಂದು ಕೇಳಲು, ಅವಳು- "ನಾನು ಒಬ್ಬನನ್ನೇ ವರಿಸುವೆ ...ಬ್ಬರನ್ನು ವರಿಸುವದಿಲ್ಲ." ಎಂದು ಹೇಳಿ, ಒಬ್ಬೊಬ್ಬನನ್ನೇ ಏಕಾಂತದ... ...ನು "ನೀನು ನಿನ್ನ ಸಹೋದರನನ್ನು ಕೊಲ್ಲು? ನಾನು ನಿನ್ನನ್ನು ...



...ಸುವೆನು." ಎಂಬದಾಗಿ ಪ್ರತ್ಯೇಕ ಪ್ರತ್ಯೇಕವಾಗಿ ಹೇಳಿದಳು. ಆಗ ಅವ... ...ಬ್ಬರು ತಮ್ಮ ತಮ್ಮೊಳಗೆ ಬಡಿದಾಡಿ ಸತ್ತರು.

ಈರೀತಿಯಿಂದ ಆ ತಿಲೋತ್ತಮೆಯು ಸುಂದ ಮತ್ತು ನಿಸುಂದರೈ... ...ರ ವಧೆಗೆ ಕಾರಣಳಾದಳು. ಆದ್ದರಿಂದ ಅವಳು ಘಾತಕಿಯಾದಳು.

---

॥ ಚೌಪಾಈ ॥

ಮಿಹಿಂದೀ ಜಾವಕ ಕರ ಪದ ರಾಗಾ ।
ತಿನಕೊ ಮೈ ಕಿಯ ನಿಮಿಷ ನ ತ್ಯಾಗಾ ॥
[1]
ಔರ ಭೋಗ ತಿನಕೆ ಉಪಕರನಾ ।
ಭೋಗ್ಯೆ ಸಬ್ಯೆ ನಿಕಟ ಭೌ ಮರನಾ ॥೩೪॥

ಅರ್ಥ॥ ಕೋಮಲವಾದ ಕರಚರಣಗಳು ಯಾವಾಗಲೂ ಸುವರ್ಣ... ಛಾಯೆಯನ್ನು ಧಿಕ್ಕರಿಸಿ ಶೋಭಿಸುತ್ತಿದ್ದುದರಿಂದ ನಾನು;ನವಮೋಹನಾಂ... ...ಗಿಯೂ ಲಾವಣ್ಯದಗಣಿಯೂ ಆಗಿರುವ ನನ್ನ ಅರ್ಧಾಂಗಿಯನ್ನು ಅರ... ...ಘಳಿಗೆ ಯಾದರೂ ಅಗಲದೆ ಆಕೆಯಲ್ಲಿ ಯಥೇಚ್ಛವಾದ ಸುರತ ಸುಖವ... ...ನ್ನು ಆ ಮರಣಾಂತವೂ ಅನುಭವಿಸುತ್ತಿದ್ದೆನು ॥೩೪॥

ಟಿಪ್ಪಣಿ—೧. ಮತ್ತು ಖ್ಯಾದ್ಯಪೇಯ ಮೊದಲಾದ ಅನ್ಯ ಇಂದ್ರಿಯಗಳ ವಿಷಯ ಭೋಗವು ಸಹ ಅವಳ (ಸ್ತ್ರೀಭೋಗದ) ಉಪಕರಣ ಅಂದರೆ ಸಾಮಗ್ರಿಗಳಾಗಿರುವವು.

---

॥ ಚೌಪಾಈ ॥

ಅಹೊ ಮೂಢ ಕೊ ಮಮ ಸಮ ಜಗ ಮೈ ।
ಭೌಲಂಪಟ ಅಬಲಗ ಮೈ ಭಗಮೈ ॥
ಗೀಲೊ ಮಲಿನ ಮೂತ್ರತೈ ನಿಸಿದಿನ ।
[2]
ಸ್ರವತ ಮಾಂಸಮಯ ರುಧಿರ ಜುಥತ ಬಿನ ॥೩೫॥

ಅರ್ಥ॥ ಅಯ್ಯೋ! ನನ್ನ ಸಮಾನನಾದ ಮೂಢರು ಪ್ರಪಂಚದಲ್ಲಿ ...ಯಾರಿರುವರು? ವ್ರಣವಿಲ್ಲದೆಯೇ ಮಾಂಸದಿಂದ ರಕ್ತವನ್ನು ಸುರಿಸುವಂತ ...ಹುದೂ ಮಲಮೂತ್ರಾದಿ ಅಸಹ್ಯಪದಾರ್ಥಗಳಿಂದ ತುಂಬಿರುವದೂ ಆದ ...ಅಂಗದಲ್ಲಿ ಆಸಕ್ತನಾಗುತ್ತಿದ್ದೆನಲ್ಲಾ ॥೩೫॥

ಟಿಪ್ಪಣಿ—(೧) ಈಪದ್ಯದಿಂದ ೩೮ನೇ ಪದ್ಯವು ಪೂರ್ಣವಾಗುವವರೆಗೆ ಇರುವ ನಾಲ್ಕು ಪದ್ಯಗಳು ಸ್ತ್ರೀಯರ ಬಳಿಯಲ್ಲಿ ಪುರುಷನು ಓದಲು ಯೋಗ್ಯವಾಗಿರುವದಿಲ್ಲ

[೨] ಶಸ್ತ್ರಾದಿಗಳಿಂದ ದೇಹದಲ್ಲಿ ಕಿಂಚಿತ್‌ಗಾಯವಾದರೆ ಅದಕ್ಕೆ ಕ್ಷತವೆನ್ನುತ್ತಾರೆ. ಈ ಕ್ಷತವಿಲ್ಲದೆ ರುತುಕಾಲದಲ್ಲಿ ಸ್ತ್ರೀಯರ ಯೋನಿಯೊಳಗಿಂದ ಮಾಂಸಮಯ ರುಧಿರವು ಸ್ರವಿಸುವದು ಇದು ಗ್ಲಾನಿಯ ಸ್ಥಲವು.

॥ ಚೌಪಾಈ ॥

ಚರ್ಮ ಲಪೇಟ್ಯೊ ಮಾಂಸ ಮಲೀನಾ ।
ಉಪರಿ ವಾರ ಅಸುದ್ಧ ಅಲೀನಾ ॥
ಇನಮೈ ಕೌನ ಪದಾರಥ ಸುಂದರ ।
ಅತಿ ಅಪವಿತ್ರ ಗ್ಲಾನಿಕೋ ಮಂದಿರ ॥೩೬॥

ಅರ್ಥ॥ ಶರೀರವು ಚರ್ಮದಿಂದ ಹೊದಿಸಲ್ಪಟ್ಟ ಮಾಂಸ ಮತ್ತು ಮಲಗಳ ಮುದ್ದೆಯು. ಈ ಚರ್ಮದ ಸೌಂದರ್ಯವನ್ನು ಕುಲಗೆಡಿಸುವುದು, ಅಶುದ್ಧವಾಗಿಯೂ ಮಲಿನವಾಗಿಯೂ ಇರುವ ಕೇಶಗಳಿಂದ ಆವೃತವಾದುದು. ಗ್ಲಾನಿಯ ತವರುಮನೆಯಾಗಿ ಇರುವದು. ಇಂತಿರುವ ಈ ದೇಹದಲ್ಲಿ ಯಾವ ಪದಾರ್ಥವು ತಾನೆ ಸುಂದರವಾಗಿ ಇರುವದು ॥೩೬॥

॥ ಚೌಪಾಈ ॥

೧
ತಿಯಕೀ ಜಂಘ ಜಘನ್ಯ ಸದಾ ಹೀ ।
ರಂಭಾಕರಿ ಕರ ಉಪಮಿತ ಜಾಹೀ ॥
ಆರ್ದ್ರ ಮೂತಕೊ ಮನು ಪತನಾರೊ ।
ರುಧಿರ ಮಾಂಸ ತ್ವಕ ಅಸ್ಥಿ ಪಸಾರೊ ॥೩೭॥

ಅರ್ಥ ॥ ಸ್ತ್ರೀಯರ ಜಂಘೆಗಳು ಸರ್ವದಾ ಮಲಿನವಾಗಿರುವವು. ಇಂಥ ತೊಡೆಗಳಿಗೆ ಕದಲೀ ಸ್ತಂಭಗಳೆಂತಲೂ, ಹಸ್ತಿಶುಂಡವೆಂತಲೂ ಉಪಮೆಯನ್ನು ಕೊಡುವರು. ಇವೆರಡೂ ಜಂಘೆಗಳು ಮೂತ್ರದ ಹರಿಯದಂಬಿಗಳಾಗಿರುವವು. ರಕ್ತ, ಮಾಂಸ, ಚರ್ಮ, ಅಸ್ಥಿಪಂಜರಮಯವಾಗಿರುವವು.

ಟಿಪ್ಪಣಿ—೧. ಸ್ತ್ರೀಯ ಜಂಘ ಅಂದರೆ ತೊಡೆಗಳು, ಇವು ಸರ್ವದಾ ನಿಕೃಷ್ಟವಾಗಿರುವವು. ಇಂಥವುಗಳಿಗೆ ರಂಭಾಸ್ತಂಭವೆಂತಲೂ, ಗಜಶುಂಡವೆಂತಲೂ, ವಿಷಯಲಂಪಟರಾದ ಕವಿಗಳು ಉಪಮೆಯನ್ನು ಕೊಡುವರು. ಆ ತೊಡೆಗಳು ಮೂತ್ರವನ್ನು ಹೊರಗೆ ಬಿಡುವಂಥ ಹರನಾಳಿಗೆಗಳಾಗಿರುವವು. ಹ-



ನಾಳಿಗೆ ಅಂದರೆ ವರ್ಷಾಕಾಲದಲ್ಲಿ ಮನೆಯಮೇಲೆ ಬಿದ್ದನೀರು ಹರಿದು ಹೋಗುವದಕ್ಕೆ ಹಚ್ಚಿದ ಪೋರಿಗಳು.

॥ ಚೌಪಾಈ ॥

೧
ಲಗತ ಜು ನೀಕೆ ಸ್ಥೂಲ ನಿತಂಬಾ ।
೨
ತಿನಕೆ ಮಧ್ಯ ಮಲಿನ ಮಲ ಬಿಂಬಾ ॥
ತಟ ತಾಕ ತೆ ಅತಿ ದುರ್ಗಂಧಾ ।
ಹ್ವೈಆಸಕ್ತ ತಹಾ ಸೊ ಅಂಧಾ ॥ ೩೮ ॥

ಅರ್ಥ॥ ಸ್ತ್ರೀಯಳ ಸ್ಥೂಲ ನಿತಂಬ ಭಾಗಗಳು ಉತ್ತಮವಾದವೆಂದು ವರ್ಣಿಸುವರು. ಅವುಗಳಂತೂ ಕೇವಲ ಮಲಿನವಾದ ಗುದಸ್ಥಾನದ ಅಶುದ್ಧ ದಂಡೆಗಳು; ಅತಿದುರ್ಗಂಧ ಮಯವಾದವುಗಳು. ಇದರಲ್ಲಿ ಆಸಕ್ತನಾಗುವ ಪುರುಷನು ಕೇವಲ ಅಂಧನು.

ಟಿಪ್ಪಣಿ. [೧] ಕಟಿ ಪಶ್ಚಾದ್ಭಾಗ (೨) ಗುದ ಮೂಲದ್ವಾರ.

॥ ಚೌಪಾಈ ॥

ಅಧರ ಜೊ ಥೂಕ ಲಾದಸ್ಯೆ ಭಿಜತ ।
ತಜಿಗ್ಲಾನಿ ನಿಜಮುಖಿಮೈ ದೀಜತ ॥
ತೃಷ್ಟ ಮದಾ ನಾರೀ ಮದಿರಾ ಭಜಿ ।
ಸುದ್ಧ ಅಸುದ್ಧ ವಿವೇಕ ದಿಯೋ ತಜಿ ॥೩೯॥

ಅರ್ಥ ॥ ಅವಳ ಅಧರವು ಯಾವಾಗಲೂ ಜೊಲ್ಲಿನಿಂದ ತೋಯ್ದಿರುವದು. ಅದನ್ನು ಪುರುಷನು ಕೇವಲ ಅಮೃತವೆಂದು ಸೇವನೆ ಮಾಡುತ್ತಾನೆ. ಮದ್ಯಪ್ರಾಶನ ಮಾಡುವವನು ಶುದ್ಧಾಶುದ್ಧ ವಿವೇಕವನ್ನು ಹೇಗೆ ತ್ಯಜಿಸುವನೋ, ಹಾಗೆ ದೃಷ್ಟಮದಾ ನಾರಿಯನ್ನು ಪುರುಷನು ಸೇವಿಸುವನು. (ದೃಷ್ಟಮದಾ ಅಂದರೆ ಯಾವಳನ್ನು ನೋಡಿದ ಕೂಡಲೆ ಮದವೇರುವದೋ ಅಂಥವಳು ಎಂದರ್ಥ.)

॥ ಚೌಪಾಈ ॥

ಕಹತ ನಾರೀಕೆ ಅಂಗ ಜು ನೀಕೆ ।
ಕರತ ಬಿಚಾರ ಲಗತ ಯೂ ಫೀಕೆ ॥
೧

ಕಪಟ ಕೂಟಕೊ ಆಕರ ನಾರೀ ।
ಮೈ ಜಾನೀ ಅಬ ತಜನ ವಿಚಾರೀ ॥೪೦॥

ಅರ್ಥ॥ ಸ್ತ್ರೀಯರ ಅಂಗಾಂಗಗಳು ಕೇವಲ ಸುಂದರವಾ ವೆಂದು ಕವಿಗಳು ವರ್ಣಿಸುತ್ತಿದ್ದರು. ವಿಚಾರಮಾಡಿ ನೋಡಲು ಕೇವಲ ಆಸತ್ಯವಾಗಿ ತೋರುವದು. ನಾರಿಯುಕೇವಲ ಕಪಟಪಕಣಿ ನಾನು ತಿಳಿದುಕೊಂಡು ಈಗ ಅವಳನ್ನು ತ್ಯಜಿಸುತ್ತೇನೆ.

ಟಿಪ್ಪಣಿ ೧. ಪುರುಷ ಸಮೂಹವು ಕೂಡಿಕೊಂಡು ವಿಚಾರಮಾಡತಕ್ಕ ವಿಷ

॥ ೨೧೯ ॥ ಭರ್ತೃವಿನ ವೈರಾಗ್ಯ ಕಥನ ॥

॥ ಚೌಪಾಈ ॥

ಕಲಾಕಂದ ದಧಿ ಪಾಯಸ ಫೇರಾ ।
ತಂದುಲ ಘೃತ ವ್ಯಂಜನ ಬಹುತೇರಾ ॥
ಔರ ವಿವಿಧ ಭೋಜನ ಚೇ ಕೀನೆ ।
ತಿನ ಸಬಕೆ ರಸನಾ ರಸ ಲೀನೆ ॥ ೪೧ ॥

ಅರ್ಥ॥ ಪೇಢೆ, ಬರ್ಫಿ, ಮೊಸರು, ಪಾಯಸ, ಅಕ್ಕಿಯ ಅನ್ನ,ತುಪ್ಪ ಅನೇಕ ತರದ ನಂಜಿಕೊಳ್ಳುವ ಪದಾರ್ಥಗಳು ಮೊದಲಾದವುಗಳು ಜಿಹ್ವೆ ಅಂದರೆ ನಾಲಿಗೆಯಿಂದ ಸೇವನ ಮಾಡಿದೆನು.

॥ ಚೌಪಾಈ ॥

ಅಬಲೌ ಭಈ ನ ತೃಪ್ತಿ ಜು ಯಾಕೂ ।
ಯಾತೈ ವೃಥಾ ಪೋಷಣಾ ತಾಕೂ ॥
ಛುದಾ ವಿನಾಸಹಿ ಬನ ಫಲ ಕಂದಾ ।
ಹ್ವೈಕ್ಯೊ ಪರಾಧೀನ ಯುಹ ಬರಿದಾ ॥ ೪೨ ॥

ಅರ್ಥ॥ ಅದ್ಯಾಪಿ ಈ ರಸನೆಯು ತೃಪ್ತಿಯಾಗಲಿಲ್ಲವೆಂದು ನಾನು ಇದನ್ನು ವೃಥಾ ಪೋಷಿಸಿದೆನು. ಕ್ಷುಧಾನಿವಾರಣೆಯ ಸಲುವಾ ಕಂದಮೂಲಗಳನ್ನು ಸೇವಿಸಿದೆನು. ಇನ್ನುಮೇಲೆ ಈ ರೀತಿಯಾಗಿ ಇಂದ್ರಿ ಯಗಳ ವಶವರ್ತಿಯಾಗಿರಲಾರೆನು. ಇದು ನಿಶ್ಚಯ. ॥ ೪೨ ॥



॥ ಚೌ ಪಾ ಈ ॥

ಗುಹಾ ಮಹಲ ಬನ ಬಾಗ ಘನೇರಾ ।
ಕ್ಯೂ ರಾಜಾಗೂ[೧] ಹ್ವೈ ಹೂ ಚೇರಾ ॥
ಸೈಜ ಸಿಲಾ ಅರು ನಿಜ ಭುಜ ತರೆಯಾ ।
ನಿರ್ಝರಜಲ ಕರ ಪಾತ್ರ ನ ರುಕಿಯಾ[೨] ॥ ೪೩ ॥

ಅರ್ಥ॥ ಗುಹೆಯೇ ಮಂದಿರವು. ಅರಣ್ಯವೇ ವನವು. ಹೀಗೆ ಇದ್ದು ರಾಜನ ವಶವರ್ತಿಯಾಗಿರುವದು ಏಕೆ ? ಮಲಗಿಕೊಳ್ಳುವದಕ್ಕೆ ಶಿಲೆ ಅಂದರೆ ಕಲ್ಲು ಹಾಸಿಗೆಯು ತಲೆದಿಂಬಿಗೆ ಸ್ವಂತ ಭುಜದಂಡಗಳು ಪ್ರಾಶನ ಮಾಡುವದಕ್ಕೆ ನಿರ್ಮಲವಾದ ನಿರ್ಝರೋದಕವು ಮತ್ತು ಹಸ್ತವೇ ಪಾತ್ರೆಯು. ಇದಕ್ಕೆ ಯಾರ ಪ್ರತಿಬಂಧವೇಕೆ ॥ ೪೩ ॥

ಟಿಪ್ಪಣಿ. ೧. ಕಿಂಕರ ಅಂದರೆ ಸೇವಕ ೨. ನ ರುಕಿಯಾ ಅಂದರೆ ಮೃತ್ತಿಕೆಯ ಹೂಜೆಯು. ಇದಕ್ಕಿಂತಲೂ ಬಾಯಿಯುಳ್ಳ ಪಾತ್ರೆಯು ಇರುವದಿಲ್ಲ ಈ ಹೂಜೆಯ ಬದಲಾಗಿ ಸ್ವತಃ ಸಿದ್ಧವಾದ ಕರರೂಪ ಪಾತ್ರೆಯು ಇರುವದು.

॥ ಚೌ ಪಾ ಈ ॥

ಬೈಠೀ ಇಕಂತ ಹೋಯ ಸು ಛಂದಾ ।
ಲಹಿಯೆ ಭರ್ತೃ ಪರಮಾನಂದಾ ॥
ಬಿನ ಏಕಾಂತ ನ ಆನಂದ ಕ ಬಹೂ ।
ಮಿಲೈ ಅಬ್ಧಿಲೌ ಪೃಥ್ವೀ ಸಬಹೂ ॥ ೪೪ ॥

ಅರ್ಥ॥ ಈ ಪ್ರಕಾರ ವಿಚಾರ ಮಾಡಿಕೊಂಡು ಭರ್ತೃವು ಸ್ವಚ್ಛಂದ ವೃತ್ತಿಯಿಂದ ಏಕಾಂತದಲ್ಲಿ ಕುಳಿತುಕೊಳ್ಳಲು ಕೇವಲ ಪರಮಾನಂದವನ್ನು ಹೊಂದಿದನು. ಏಕಾಂತವಿಲ್ಲದೆ ಕಾಲತ್ರಯದಲ್ಲಿಯೂ ಸಹ ಸಮುದ್ರ ವಲಯಾಕಿಂತ ಪೃಥ್ವಿಯು ಸಿಕ್ಕರೂ ಸಹ ಏಕಾಂತವಿಲ್ಲದೆ ಆನಂದವು ಸಿಗಲಾರದು. ॥ ೪೪ ॥

॥೨೨೦॥ ರಾಜಪದವಿಯಿಂದ ಆರಂಭವಾಗಿ ಬ್ರಹ್ಮನ ಪದವಿಯ ಪರಿಯಂತ ಇರುವ ಸರ್ವ ಸುಖಗಳು ಏಕಾಂತದಿಂದಲೇ ಲಭಿಸುವವು.

॥ ದೋಹಾ ॥[೧]

ಪೃಥ್ವೀಪತೀ ನಿರೋಗಯುವ । ದೃಢ ಸ್ಥೂಲ ಬಲವಂತ ॥
ವಿದ್ಯಾಯುತ ತಹಿ ಭೂಪನ್ಯೆ।ಮಾನುಷ ಸುಖಕೊ ಅಂತ॥

ಅರ್ಥ॥ ಸಾರ್ವಭೌಮ ಪದವೂ ಆರೋಗ್ಯತೆಯೂ, ತಾರುಣ್ಯ... ಘಟ್ಟವೂ ಸ್ಥೂಲವೂ, ಬಹು ಸಾಮರ್ಥ್ಯಯುಕ್ತವೂ ವಿದ್ಯೆಯೂ ... ಮೊದಲಾದ ಸಪ್ತಗುಣಗಳು. ಇವು ಮನುಷ್ಯ ಸುಖದ ಅಂತ್ಯವಾಗಿರು...

ಟಿಪ್ಪಣಿ. ೧. ಇಲ್ಲಿಂದ ಆರಂಭಮಾಡಿಕೊಂಡು ೫೧ನೇ ಪದ್ಯದ ಪರಿಯಂತ ಹೇ... ವರು. ಇದು ಈ ಶಾದ್ಯಷ್ಟೋಪ ಉಪನಿಷತ್ತಿನಲ್ಲಿರುವುದು, ಇದನ್ನು ... ಬರಜೇಯುವರು ಈ ಶಾದ್ಯಷ್ಟೋಪ ನಿಷೇದ್ಗತ ವುಪನಿಷತ್ತಿನ ಪ್ರಾ... ಟೀಕೆಯಲ್ಲಿ ಸವಿಸ್ತರವಾಗಿ ಉಲ್ಲೇಖಿಸಿರುವರು

॥ ಚೌ ಪಾ ಈ ॥

ಜೆ ಮಾನವ ಗಂಧರ್ವ ಕಹಾವತ ।
ತಾ ನೃ ಪತ್ಯೆ ಸತಗುನ ಸುಖಪಾವತ ॥
ಹೋತೆ ದೇವ ಗಂಧರ್ವ ಜು ಔರಾ ।
ತಿನಹ್ಯೆ ತಹ ಸೌಗುನ ಸುಖ ಚ್ಯಾರಾ ॥ ೪೬ ॥

ಅರ್ಥ॥ ಯಾವನಿಗೆ ಮನುಷ್ಯಗಂಧರ್ವನೆನ್ನುವರೋ, ಅವನು ರಾಜನಿ... ನೂರುಪಾಲು ಹೆಚ್ಚಾಗಿ ಆನಂದವನ್ನು ಹೊಂದುವನು. ಮತ್ತು ... ರಾದ ದೇವಗಂಧರ್ವರೂ ನೂರುಪಾಲು ಹೆಚ್ಚು ಸುಖವನ್ನು ಹೊಂದುವ...

॥ ಚೌಪಾಈ ॥

ಸುಖ ಗಂಧರ್ವ ದೇವನಕೊ ಜೊ ಹೈ ।
ತಾತ್ಯೆ ಸತಗುನ ಪಿತರನಕೊ ಹೈ ॥
ಪುನಿ ಅಜಾನ ದೇವನ್ಯೆ ತಿನತ್ಯೆ ।
ಸೌಗುನ ಕರ್ಮ ದೇವನ್ಯೆ ಜಿನತ್ಯೆ ॥ ೪೭ ॥

ಅರ್ಥ॥ ಈ ದೇವಗಂಧರ್ವರಿಗಿಂತಲೂ ನೂರುಪಾಲು ಅಧಿಕವಾದ ಸು... ಪಿತೃದೇವತೆಗಳಿಗೆ ಇರುವದು. ಇವರಿಗಿಂತಲೂ ನೂರುಪಾಲು ಹೆ... ಅಜಾನದೇವತೆಗಳಿಗೆ. ಇವರಿಂಗಿಂತಲೂ ನೂರು ಪಾಲು ಹೆಚ್ಚು ... ದೇವತೆಗಳಿಗೆ ಉಂಟು.



॥ ಚೌಪಾಈ ॥

ಮುಖ್ಯ ದೇವ ಜೆ ಹೈ ಪುನಿ ತಿನಮ್ಯೆ ।
ಕರ್ಮದೇವತ್ಯೆ ಸೌಗುನ ಜಿನಮ್ಯೆ ॥
ಜೋ ತ್ರಿಲೋಕ ಪತಿ ಇಂದ್ರ ಕಹೀಜ್ಯೆ ।
ತಾಮ್ಯೆ ಪುನಿ ಸೌಗುನ ಗಿನಿ ಲೀಜ್ಯೆ ॥ ೪೮ ॥

ಅರ್ಥ॥ ಕರ್ಮದೇವತೆಗಳಿಗಿಂತಲೂ ಶತಗುಣ ಅಧಿಕನಾಗಿ ಮುಖ್ಯ ...ದೇವತೆಗಳಿಗೆ ಸುಖವುಂಟು. ಈ ಮುಖ್ಯ ದೇವತೆಗಳಿಗಿಂತಲೂ ಇಂದ್ರನಿಗೆ ನೂರುಪಾಲು ಅಧಿಕ ಸುಖವುಂಟು. ॥ ೪೮ ॥

ಮುಖ್ಯದೇವತೆಗಳೆಂದರೆ—ಏಕಾದಶರುದ್ರರು, ದ್ವಾದಶಾದಿತ್ಯರು ಅಷ್ಟವಸುಗಳು, ಈ ಮೂವತ್ತೊಂದು ದೇವತೆಗಳಿಗೆ ಮುಖ್ಯದೇವತೆಗಳು ಎನ್ನಬೇಕು.

॥ ಚೌಪಾಈ ॥

ಸಬ ದೇವನಕೊ ಗುರು ಬೃಹಸ್ಪತಿ ।
ಲಹ್ಯೆ ಇಂದ್ರತ್ಯೆ ಸತಗುನ ಸುಖಗತಿ ॥
ಜಾಕೊ ನಾಮ ಪ್ರಜಾಪತಿ ಭಾಖತ ।
ಗುರುತ್ಯೆ ಸುಖ ಸೌಗುನ ಸೊ ರಾಖತ ॥ ೪೯ ॥

ಅರ್ಥ॥ ಸರ್ವದೇವತೆಗಳಿಗೂ ಗುರುವಾದ ಬೃಹಸ್ಪತಿಗೆ ಇಂದ್ರನಿಗಿಂ...ತಲೂ ಶತಗುಣ ಅಧಿಕ ಸುಖವುಂಟು. ಈ ಬೃಹ್ಮಸ್ಪತಿಗಿಂತಲೂ ಶತಗುಣಾ...ಧಿಕ ಸುಖವುಂಟು. ॥ ೪೯ ॥

॥ ಚೌಪಾಈ ॥

ತಾಹೂತ್ಯೆ ಸೌಗುನ ಬ್ರಹ್ಮಹಿ ಸುಖ ।
ಲಹ್ಯೆ ನ ರಂಚಕ ಸೊ ಕಬಹೂ ದುಖ ॥
ಇತನ್ಯೆ ಯಾ ಕ್ರಮತ್ಯೆ ಸುಖ ಪಾವತ ।
ತೈತಿರೀಯ ಶ್ರುತಿ ಯೂ ಸಮುಝಾವತ ॥ ೫೦ ॥

ಅರ್ಥ॥ ಪ್ರಜಾಪತಿಗಿಂತಲೂ ಬ್ರಹ್ಮನಿಗೆ ನೂರುಪಾಲು ಅಧಿಕ ಸುಖ ...ವುಂಟು, ಈ ಬ್ರಹ್ಮನಿಗೆ ಕಾಲತ್ರಯದಲ್ಲಿಯೂ ಸಹ ದುಃಖವಿಲ್ಲ. ಈ ಪ್ರಕಾ...

ರವಾಗಿ ಆಯಾಯ ಪದವಿಗಳಿಗೆ ತಕ್ಕಂತೆ ಕ್ರಮವಾಗಿ ಹೆಚ್ಚು ಹೆಚ್ಚು ಖವುಂಟು ಎಂದು ತೈತ್ತಿರೀಯ ಶ್ರುತಿಯು ಸಾರುತ್ತಿರುವದು. ||೫೦||

|| ಸೊರಠಾ ||

ರಾಜಾತೈ ಬ್ರಹ್ಮಾಂತ । ಕಹ್ಯೊ ಜು ಸುಖ ಸಗರೋಲಹೈ ।
ರಹತಸದಾ ಏಕಾಂತ । ಕಾಮ ದಗ್ಧ ಜೊಕೊ ನಹಿಯ ||೫೧||

ಅರ್ಥ|| ರಾಜನಿಂದ ಬ್ರಹ್ಮದೇವರ ಪರಿಯಂತ ಇದ್ದು ಸುಖವಗ ತವನ್ನು ಪ್ರಸ್ತುತಕ್ಕೆ ಹೇಳಿದೆನಷ್ಟೇ? ಆದರೆ ಈ ಸುಖಗಳೆಲ್ಲವೂ, ಏಕಾಂ ವಾಸದಲ್ಲಿದ್ದು ಕಾಮವನ್ನು ಜಯಿಸಿದವನಿಗೆ ಸಿಗುತ್ತವೆ. ||೫೧||

|| ಚೌಪಾಈ ||

ಹ್ವೈ ಏಕಾಂತ ದೇಸಮ್ಯೆ ಅಸ ಸುಖ ।
ಯುವತೀ ಪುತ್ರ ಧನ ಸಂಗ ಸದಾ ದುಃಖ ||
ಯುವತಿ ಕುರೂಪ ಕು ಭೋಲಿನಿ ಜಾಕೆ ।
ಸದಾ ಸೋಕ ಹಿಯ ಹ್ವೈ ಯಹ ತಾಕೆ || ೫೨||

ಅರ್ಥ|| ಈ ಪ್ರಕಾರ ಏಕಾಂತಸ್ಥಳದಲ್ಲಿಯ ವಾಸವು ಅತ್ಯಂತ ಸು ದಾಯಕವಾಗಿರುವದು. ಯಾವನ ಸ್ತ್ರೀಯು ಅತಿಕುರೂಪಿಯಾಗಿದ್ದು ಸ ದಾ ಕುಹಕ ಮಾತನ್ನಾಡುತ್ತಿರುವಳೋ, ಅಂಥವನಿಗೆ ಸರ್ವದಾ ದುಃಖ ತಪ್ಪಲಾರದು. || ೫೨ ||

೧ || ಚೌಪಾಈ ||

ಪ್ರಭು ಪುರೀಷಪಂಡಾ ಯಹ ರಂಡಾ ।
ದಿಯು ಮುಹಿ ಕೌನ ಪಾಪಕೊ ದಂಡಾ ||
ಬೋಲತ ಬೈನ ವ್ಯಾಲ ಕಾಗನಿಕೆ ।
ಭೆಡ ಭೈಸಿ ನ್ಯೊರೀ ನಾಗನಿಕೆ || ೫೩ ||

ಅರ್ಥ|| ಹೇ ಪ್ರಭೋ ? ಈ ಸ್ತ್ರೀಯಳು ಕೇವಲ ಮಲಮೂತ್ರ ಗಳಿಂದ ತುಂಬಿದವಳು. ಇಂಥ ಸ್ತ್ರೀಯ ಸಂರಕ್ಷಣೆಯ ರೂಪ ದಂಡ ಯನ್ನು ಯಾವಪಾಪದಸಲುವಾಗಿ ನನಗೆಕೊಟ್ಟೆ? ಇವಳುಕುರಿ,ಎಮ್ಮೆ,ಮುಂ ಗಲಿ ಸರ್ಪಿಣಿ,ಕಾಗೆ, ಮೊದಲಾದವುಗಳಂತೆ ಸರ್ವದಾ ದುಷ್ಟಮಾತುಗಳ ಆಡುತ್ತಿರುವಳು. || ೫೩ ||



ಟಿಪ್ಪಣಿ—೧. ಪುರೀಷ ಪಂಡಾ ಅಂದರೆ ಮಲಪಿಂಡ.

|| ಚೌಪಾಈ ||

೧ ಭೂತ ಭಾವತೀ ಊತನಿಕೊ ಹೆ ||
ಬೋಲ ಖರೀಕೊ ಸುನಿ ಖರ ಮೋಹ್ಯೆ ||
೨ ರೈನಿ ಜು ಊಂಚೆ ಸ್ವರಹಿ ಉಚಾರತ ।
ಸ್ಯಾರ ಹಜಾರನ ಸುನತ ಪುಕಾರತ ||೫೪||

ಅರ್ಥ|| ಭೂತನಿಗೆ ಪಿಶಾಚಿಯೂ, ಗಂಡು ಒಂಟೆಗೆ ಹೆಣ್ಣು ಒಂಟೆಯೂ ಪ್ರೀತಿದಾಯಕಗಳಾಗಿರುತ್ತವೆ. ಇದರಂತೆಯೇ ಗಾರ್ದಭಿಯ ಸ್ವರವನ್ನು ಕೇಳಿ, ಗಾರ್ದಭವು ಮೋಹವುಳ್ಳದ್ದಾಗುತ್ತದೆ. ರಾತ್ರಿಯಲ್ಲಿ ಹೆಣ್ಣು ನರಿಯು ಉಚ್ಚ ಸ್ವರದಿಂದ ಕೂಗಲು ಜಂಬುಕವು ಗರ್ಜನಮಾಡುತ್ತಿರುವದು. || ೫೪ ||

ಟಿಪ್ಪಣಿ-೧.ಭೂತ ಅಂದರೆ ಪಿಶಾಚಿ, ೨. ಶ್ಯಾಲನಾಮಕ ಪಶುವಿನ ಸ್ತ್ರೀ(ಶ್ಯಾಲಿನಿ)

|| ಚೌಪಾಈ ||

೧ ನಿರಪರಾಧ ತಿಯ ಬಿನ ವೈರಾಗಾ ।
ತಜತ ನ ಬನತ ಪಾಪ ಜಿಯ ಲಾಗಾ ||
ರಹತ ದುಖಿತ ಯೂ ನಿಸಿದಿನ ಪಿಯಮನ ।
ತಿಯ ಕುಬೋಲ ಸುನಿ ಲಖಿ ಕುರೂಪ ತನ ||೫೫||

ಅರ್ಥ|| ವೈರಾಗ್ಯವು ಉತ್ಪನ್ನವಾಗದೆ ನಿರಪರಾಧಿಯಾದ ಹೆಂಡತಿಯನ್ನು ಹೇಗೆ ತ್ಯಾಗಮಾಡಲಿಕ್ಕೆ ಆಗುವುದಿಲ್ಲವೋ, ಹಾಗೆಯೇ ಬಿಟ್ಟರೆ ಪಾಪಸಂಬಂಧವಾಗುವದು. ಆದರೆ ಅಂಥ ಕುರೂಪವನ್ನೂ ವಿರುದ್ಧವಾದ ವಚನಗಳನ್ನೂ ನಿರಂತರವಲ್ಲಿಯೂ ಕೇಳಿ ಪತಿಯ ಚಿತ್ತದಲ್ಲಿ ಖೇದವುಂಟಾಗುತ್ತದೆ. || ೫೫ ||

ಟಿಪ್ಪಣಿ—೧. ಇಲ್ಲಿ ಈ ಪ್ರಕಾರವಾಗಿ ಅರ್ಥವಿರುವದು. ವ್ಯಭಿಚಾರಾದಿ ಅಪರಾಧದಿಂದ ಅಥವಾ ವೈರಾಗ್ಯದಿಂದ ಸ್ತ್ರೀಯನ್ನು ತ್ಯಾಗಮಾಡಲಿಕ್ಕೆ ಬರುತ್ತದೆ. ಸ್ತ್ರೀಯರಲ್ಲಿ ಇರುವ ಕುರೂಪವೂ ಕುಹಕಮಾತುಗಳೂ ಇವು ಪೂರ್ವಕರ್ಮದ ಸಂಯೋಗದಿಂದಲೂ ಈಶ್ವರಾಜ್ಞೆಯಿಂದಲೂ ಪ್ರಾಪ್ತವಾಗಿರುವವು.

॥ ಚೌಪಾಈ ॥

ಕಾಮನಿ ಹ್ವೈ ಜು ಸುರೂಪ ಸುಬಾಸೀ ।
ಸೊ ಕುರೂಪತೈ ಹ್ವೈ ದುಖದಾಸೀ ॥
ಚಮಕ ಚಾಮಕೀ ಪಿಯಹಿ ಪಿಯಾರೀ ।
ಅರ್ಥ ಧರ್ಮ ನಸಿ ಮೋಛ ಬಿಗಾರೀ ॥೫೬॥

ಅರ್ಥ॥ ಒಂದುವೇಳೆ ಸ್ತ್ರೀಯು ರೂಪವತಿಯಾಗಿಯೂ, ಮಧುರಭಾಷಿಣಿಯಾಗಿ ಇದ್ದರಂತೂ, ಕುರೂಪಿಯಾದ ಸ್ತ್ರೀಗಿಂತಲೂ ವಿಶೇಷ ದುಃಖದಾಯಕಿಯಾಗುವಳು. ಅವಳ ಸುವರ್ಣಸಮ ಕಾಂತಿಯುಕ್ತದೇಹದಿಂದ ಪುರುಷನು ಸುಂದರನಾಗಿದ್ದರೆ ಅವಳಲ್ಲಿಯೇ ಮೋಹಿತನಾಗಿ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಚತುರ್ವಿಧಪುರುಷಾರ್ಥಗಳನ್ನು ಮರೆತು ಬಿಡುವನು. ಈ ರೀತಿಯಾಗಿಯೂ ಸ್ತ್ರೀಯು ಮೋಕ್ಷನಾಶಿನಿ ಯಾಗಿರುವಳು.

॥೨೨೨॥ ಯುವತೀಸಂಗದಿಂದ ಧನನಾಶ ವರ್ಣನ ॥

॥ ಚೌಪಾಈ ॥

ಮಿಠೆ ಬೈನ ಜಹರ ಯುತ ಲಡವಾ ।
ಖಾಯ ಗಮಾಯ ಬುಧ್ಧಿ ಹ್ವೈ ಭವಾ ॥
ಔರ ಕಭೂ ಶುಪನಹು ನಹಿ ದೇಖೈ ।
ಕಾಮ ಅಂಧ ಇಕ ಕಾಮನಿ ಲೇಖೈ ॥ ೫೭ ॥

ಅರ್ಥ—ಹೇಗೆ ವಿಷ ಸಂಯುಕ್ತವಾದ ಲಾಡೂ ಉಂಡೆಯನ್ನು ತಿನ್ನುವುದರಿಂದ ಬುದ್ಧಿಯು ನಾಶವಾಗಿ, ಪುರುಷನು ಭ್ರಮಿಷ್ಟನಾಗುವನೋ ಹಾಗೆ ಯುವತಿಯು ಮಧುರವಚನಗಳಿಂದ ಪುರುಷನು ಭ್ರಮಿತನಾಗುವನು. ಇಂಥ ಪುರುಷನಿಗೆ ಸ್ವಪ್ನದಲ್ಲಿ ಸಹಾ ಕಾಮಿನಿಯ ಹೊರ್ತು, ಅನ್ಯಪದಾರ್ಥಗಳು ಕಾಣಿಸುವದೇ ಇಲ್ಲ. ॥೫೭॥

॥ ಚೌಪಾಈ ॥

ಧನ ಕಛು ಮಿಲೈ ಜು ಬಾಹಿರ ಘರಮೈ ।
ಸೊ ಸಬ ಖರಚೈ ಕಾಮನಿ ಧರಮೈ ॥
ಭೂಷನ ವಸ್ತ್ರ ತಾಹಿ ಪಹಿರಾವೈ ।
ಗುರು ಪಿತು ಮಾತ ಯಾದಿಹು ನ ಆವೈ ॥ ೫೮ ॥

ಅರ್ಥ—ಕಾಮಾಂಧ ಪುರುಷನು, ಹೊಲಮನೆಗಳಿಂದ ಉಂಟಾದ ಧನವನ್ನೂ ಸ್ವತಃಸಂಪಾದನ ಮಾಡಿದ ಧನವನ್ನೂ ಸ್ತ್ರೀಯ ವಸ್ತ್ರಭೂಷಣಾದಿಗಳಿಗೆ ವ್ಯಯಮಾಡುವನೇ ಹೊರ್ತು, ಮಾತಾ, ಪಿತ, ಗುರು, ಬಂಧು ಬಾಂಧವರ ಸ್ಮರಣೆಯನ್ನೇ ಮಾಡುವದಿಲ್ಲ. ॥೫೮॥

॥ಚೌಪಾಈ॥ ಪಾಯಸ ಪಾನ ಮಿಠಾಈ ಮೇವಾ ।
ದೇಯ ಭಕ್ತಿತೈ ತಿಯ ನಿಜದೇವಾ ॥
ನೇಹ ನಾಥ[೧] ನಾಥ್ಯೋ ನಹಿ ಛೂಟೈ ॥
ತಿಯಕೃಸಾನ[೨] ಪಿಯ ಬೈಲಹಿ ಕೂಟೈ ॥ ೫೯ ॥

ಅರ್ಥ॥ ಭಕ್ತಿಪೂರ್ವಕವಾಗಿ ದೇವರಿಗೆ ಘೃತಪಾಯಸಗಳನ್ನು ಸಮರ್ಪಿಸುವಂತೆ, ಕಾಮಾಂಧನು ಸ್ತ್ರೀಯಳಿಗೇ ತನ್ನ ಸರ್ವಸ್ವವನ್ನು ಸಮರ್ಪಿಸುವನು. ಹೊಲ ಮಾಡುವವನು ಹೇಗೆ ಎತ್ತಿಗೆ ಮೂಗದಾಣವನ್ನು ಹಾಕಿ ಸರ್ವದಾ ಕೆಲಸವನ್ನು ಮಾಡಿಸಿಕೊಳ್ಳುತ್ತಿರುವನೋ, ಅದರಂತೆ ಕಾಮಾಂಧನು ಸ್ತ್ರೀ ಯೆಂಬ ಮೂಗದಾಣದಲ್ಲಿ ಸಿಲುಕಿ, ಅವಳ ಶಿಶ್ರೂಷೆಯಲ್ಲಿಯೇ ಕಾಲಹರಣ ಮಾಡುತ್ತಾನೆ. ॥೫೯॥

ಟಿಪ್ಪಣಿ, ೧. ಸ್ನೇಹರೂಪನಾಥ (ಎತ್ತಿನ ನಾಸಿಕದಲ್ಲಿ ಹಾಕತಕ್ಕ ಸೂತ್ರ) ದಿಂದ ನಾಥ್ಯೋ ಅಂದರೆ, ಕಟ್ಟಿದಂಥ ಪತಿರೂಪ ವೃಷಭವು ಬಿಡುಗಡೆಯನ್ನು ಹೊಂದಲಾರದು. ೨. ಸ್ತ್ರೀರೂಪಿಯಾದ ಹೊಲವನ್ನು ಮಾಡತಕ್ಕವಳು ಪತಿರೂಪಿಯಾದ ಎತ್ತನ್ನು ದುಡಿಸಿಕೊಳ್ಳುತ್ತಿರುವಳು.

॥೨೨೩॥ ಯುವತೀ ಸಂಗದಿಂದ ಧರ್ಮನಾಶ ವರ್ಣನ॥

॥ ಚೌ ಪಾ ಈ ॥

ಜ್ಯೋ ಸುವಾ ಪಿಂಜರೇಮೈ ಬಂಧುವಾ ।
ಸಿಖಿಯೊ ಬೋಲತ ಸುದ್ಧ ಅಸುದ್ಧವಾ ॥
ತೈಸೈ ಜೊ ಕಛು ನಾರಿ ಸಿಖಾವತ ।
ಸೊ ಗುರು ಪಿತು ಮಾತ ಹೀ ಸುನಾವತ ॥೬೦॥

ಅರ್ಥ॥ ಹೇಗೆ ಪಂಜರದಲ್ಲಿ ಹಾಕಿ ಇಟ್ಟು ಸಂರಕ್ಷಿಸುತ್ತಿದ್ದ ಶುಕವು ರಕ್ಷಣಕರ್ತನು ಕಲಿಸಿದ ಹಾಗೆ ಶುದ್ಧ ಅಶುದ್ಧವಾದ ಮಾತುಗಳನ್ನು ನುಡಿಯುವದೋ, ಹಾಗೆ ಕಾಮಿಯಾದವನು ತನ್ನ ಸ್ತ್ರೀಯು ಹೇಳಿದ ಮಾತುಗಳನ್ನೇ ಮಾತಾ, ಪಿತಾ, ಗುರು ಮೊದಲಾದವರೊಡನೇ ನುಡಿಯುವನು.

॥ ಚೌ ಪಾ ಈ ॥

ಜೈಸ್ಯೆ ಮೋರ ಮೋರನೀ ಆಗ್ಯೆ ।
ನಾಚಿ ರಿಝೂಯ ಆಪ ಅನುರಾಗ್ಯೆ ॥
ತೈಸ್ಯೆ ವಿವಿಧವೇಷ ಕರತೀಯಕೊ ।
ಮನ ರಿಝೂಯ ರೀಝುತ ಮನ ಪಿಯಕೊ ॥೬೧॥

ಅರ್ಥ॥ ಅಥವಾ ಹೇಗೆ ಮಯೂರವು ಮಯೂರಿಯ ಮುಂಭಾಗದಲ್ಲಿ ಣಿದು ಅವರ ಮನಸ್ಸನ್ನು ಸಂತೋಷಗೊಳಿಸುವದೋ, ಹಾಗೆ ಕಾಮ ಧನು ತನ್ನ ಸ್ತ್ರೀಯಳಿಗೆ ಅನೇಕ ಬಗೆಯ ವಸ್ತ್ರಭೂಷಣಗಳಿಂದ ಅ ಕರಿಸಿ, ಅವಳನ್ನು ತೃಪ್ತಿಪಡಿಸಿ ತಾನೂ ಅವಳನ್ನು ನೋಡಿ, ತೃಪ್ತಿಯ ಹೊಂದುವನು. ॥ ೬೧ ॥

೧ ॥ಚೌಪಾಈ॥

ಜಬ ದು ಹೂನಕೊ ಮನ ಅನುರಾಗ್ಯೋ।
ತಬಹಿ ಮದನ ಮದಿರಾ ಮದಜಾಗ್ಯೋ ॥
ಭಯ ಬಾವರೆ ವಸನಹು ತ್ಯಾಗೆ ।
ಅತಿ ಉನ್ಮತ್ತ ಘೂರನ ಪುನಿಲಾಗೆ ॥ ೬೨ ॥

ಅರ್ಥ ॥ ಈ ಪ್ರಕಾರ ಅನೇಕ ಬಗೆಯ ಪ್ರಿಯವಚನಗಳಿಂದಲೂ, ವಸ್ತ್ರ ಭೂಷಣಗಳಿಂದಲೂ, ಸ್ತ್ರೀಪುರುಷರ ಮನಸ್ಸು ಏಕವಾಗಲು, ಅನು ವು ಉದ್ಭವಿಸುವದು. ಕೂಡಲೆ ಕಾಮಮದವೇರುವದು, ತಕ್ಷಣದಲ್ಲಿ ಮೇಲಿನ ಬಟ್ಟೆಗಳನ್ನು ತ್ಯಜಿಸಿ, ಉಭಯತರೂ ಮದೋನ್ಮತ್ತರಾಗಿ ಕ್ರೀ ಸುವರು. ॥೬೨॥

ಟಿಪ್ಪಣಿ-೧, ಈ ಚೌಪಾಈ ಮೊದಲ್ಗೊಂಡು ೭೭ನೇ ಚೌಪಾಯಿಯ ಪರಿಯಂ ಇದ್ದ ಛಂದಗಳನ್ನು ಸ್ತ್ರೀಯರ ಮುಂದೆ ಪುರುಷನು ಓದಕೂಡದು,

॥ ಚೌ ಪಾ ಈ ॥

ಪ್ರೇತರೂಪ ಧರಿ ನಗ್ನ ಅಲುಂಗಲ ।
ಭಿರಿ ಫಿರಿ ಭಿರತ ಮೇಷ ಮನದಂಗಲ ॥
ಜ್ಯೂ ಲೋಟತ ಮದ್ಯ ಗಿ ಮತವಾರೊ ॥೬೩॥
ಗನತ ಮಲೀನ ಗಲೀನ ನನಾರೊ ॥೬೩॥



ಅರ್ಥ॥ ಹೇಗೆ ಹೆಂಡಕುಡುಕನು ಬುದ್ಧಿಹೀನನಾಗಿ ದುರ್ಗಂಧ ಮೊ ಳಾದವುಗಳನ್ನು ಲಕ್ಷಿಸದೆ ಮಲಿನಯುಕ್ತ ಕಾಲುವೆಗಳಹೊರಳಾಡುತ್ತಿರು ವನೋ ಅದರಂತೆ ಕಾಮಾಂಧದಿಂದ ಸ್ತ್ರೀಪುರುಷರು ಅಮಂಗಲವಾದ ಪ್ರೇತ ಸಮರೂಪವನ್ನು ಧಾರಣ ಮಾಡಿಕೊಂಡು ಏಕತ್ರ ಕುರಿಗಳಂತೆ ಮೆ ಂದ ಮೇಲೆ ಕ್ರೀಡಿಸ ಹತ್ತುವರು. ॥೬೩॥

॥ ಚೌಪಾಈ ॥

ತ್ಯೂ ನರನಾರೀ ಮದನ ಮದ ಅಂಧೇ ॥
ಅತಿ ಗಲೀದ ಅಂಗನವ್ಯೆ ಬಂಧೆ ॥
ಕರತ ಮದನ ಮದ ಭ್ರಮ ಜೆ ಮನಕೂ ॥
ಹ್ವೈಅಚರಜ ಸುನಿತ್ಯಾಗಿ ಜನಕೂ ॥೬೪॥

ಅರ್ಥ॥ ಹೀಗೆ ನರನಾರಿಯರು ಮದನ ಮದದಿಂದ ಅಂಧರಾಗಿ ತಮ್ಮ ಮಲಿನವಾದ ಅಂಗಾಂಗಗಳನ್ನು ಅಪ್ಪಿಕೊಂಡು, ಮದನ ಮದ ಭ್ರಮೆ ಯನ್ನು ಪೂರ್ಣಮಾಡಿಕೊಳ್ಳುವರು. ಇದನ್ನು ಸಂಸಾರ ತ್ಯಾಗಿಗಳಾದ ವರು ಕೇಳಿ, ಆಶ್ಚರ್ಯಪಡುವರು. ॥೬೪॥

॥ ಚೌಪಾಈ ॥

ನಸೈ ಮದನ ಮದತೈ ಮತಿ ನರಕೀ ।
ಲಖತ ನಊಂಚ ನೀಚ ಪರಜರಕೀ ॥
ತಿಯಹೂ ಬಾವರೀ ಮದನ ಬನಾಈ ॥ ೬೫ ॥
ಕ್ರಿಯಾ ದುಖದ ಜಿಹಿ ಹ್ವೈ ಸುಖದಾಈ ॥೬೫॥

ಅರ್ಥ ॥ ಮದನ ಮದದಿಂದ ಪುರುಷನ ಬುದ್ಧಿಯು ನಾಶವಾಗುತ್ತದೆ. ಆಮೇಲೆ ಉಚ್ಚ, ನೀಚ, ಸ್ವಕೀಯ, ಪರಕೀಯರನ್ನು ಲಕ್ಷಿಸಿದಂತಾಗು ತ್ತಾನೆ. ಕಾಮಾಂಧನಾಗಿ ಸ್ತ್ರೀಯ ಮೋಹಕ್ಕೆ ಸಿಕ್ಕಿ ದುಃಖಜನ್ಯ ವಾದ ಕ್ರಿಯೆಯನ್ನೇ ಸುಖದಾಯಕವೆಂದು ನಂಬುತ್ತಾನೆ. ॥೬೫॥

॥ ಚೌಪಾಈ ॥

ಪ್ರಬಲ ಕಾಮಮದಿರಾ ಮದ ಜಾಗ್ಯೆ ।
೧
ತಬ ದ್ವಿಜತಿಯ ಥಾನಕತ್ಯೆ ಲಾಗ್ಯೆ ॥

ಪಿಯೆ ಮದನ ಮದಿರಾ ನರನಾರೀ ।
ಐಸ್ಯೆ ಕರತ ಅನಂತ ಖುವಾರೀ ॥೬೬॥

ಅರ್ಥ॥ ಯಾವಾಗ ಕಾಮ ಮದವು ಅಧಿಕವಾಗುವದೋ, ಆ ಬ್ರಾಹ್ಮಣ ಸ್ತ್ರೀಯು ಸಹನೀಚಕುಲದ ಪುರುಷನೊಡನೆ ರತಳಾಗುವ, ಇದರಂತೆಯೇ ಪುರುಷನಾದರೂ ರಮಿಸ ಹತ್ತುವನು. ಈ ಪ್ರಕಾರ ನ ನಾರಿಯು ಕಾಮಜಂಬ ಮದ್ಯವನ್ನು ಸೇವಿಸಿ, ಮತ್ತರಾಗಿ ಬಹುಪ್ರಕಾರ ಅನರ್ಥಗಳನ್ನು ಮಾಡುವರು, ॥೬೬॥

ಟಿಪ್ಪಣಿ ೧. ಧಾನಕ ಅಂದರೆ ಬೇಟಿಗಾರ ಅಥವಾ ಭೋಯಿ ಅಂದರೆ ಪಲ್ಲಕ್ಕಿಯನ್ನು ಹೊರುವವರು.

॥ ಚೌಪಾಈ ॥

ಕಾಮ ದೋಷಯೂ ನಹಿ ಬಿಗೋವತ ।
ಸೊ ಪ್ರಕಟ ಸುಂದರೀ ತಿಯ ಜೋವತ ॥
ಯಾತೈ ಅತಿಸುರೂಪ ತಿಯ ದುಖದಾ ।
ತಾಕೊ ತ್ಯಾಗ ಕಹತ ಮುನಿ ಸುಖದಾ ॥ ೬೭ ॥

ಅರ್ಥ॥ ಯಾವಾಗ ಪುರುಷನಿಗೆ ಕಾಮಬಾಧೆಯು ಉತ್ಪನ್ನವಾಗುವದೋ, ಆಗ ಪುರುಷನು ಸುಂದರಳಾದ ಸ್ತ್ರೀಯನ್ನು ಹುಡುಕಲಾರಂಭಿಸಿದನು. ಈ ಕಾರಣದಿಂದ ಸುಸ್ವರೂಪಿಯಾದ ಸ್ತ್ರೀಯಿಂದ್ಯದುಃಖ ಉಂಟಾಗುವದು. ಆದ್ದರಿಂದ ಋಷಿಗಳು ಪೂರ್ಣಸುಖಪ್ರಾಪ್ತಿಯು ಬೇಕಾದರೆ ಸ್ತ್ರೀಯನ್ನು ತ್ಯಾಗಮಾಡಬೇಕೆಂದು ಹೇಳಿದ್ದಾರೆ,

॥ ಚೌಪಾಈ ॥

ಜೊ ಸುರೂಪ ತಿಯಮ್ಯೆ ಅನುರಾಗತ।
ವಿಷಸಮ ದುಖದ ಪೇಖಿ ನಹಿ ಭಾಗತ॥
ಉಭಯ ಲೋಕಕೀ ಕರತ ಸು ಹಾನೀ ।
ಮುನಿಜನ ಗನಗುನ ಸಾಖ ಬಖಾನೀ ॥ ೬೮ ॥

ಅರ್ಥ॥ "ಯಾವ ಪುರುಷನು ರೂಪವತಿಯಾದ ಸ್ತ್ರೀಯಲ್ಲಿ ಪ್ರೀತಿಯುಳ್ಳವನೋ ಅವನು ವಿಷವತ್ ದುಃಖದಾಯಿನಿ ಎಂದು ತಿಳಿದು ಅವಳನ್ನು ಬಿಡುವದಿಲ್ಲವೋ ಆ ಪುರುಷನಿಗೆ ಉಭಯ ಲೋಕಗಳ ಸುಖಗಳು ಲಭಿಸುವದಿಲ್ಲ" ಎಂದು ಮುನಿವರರು ಸಾಕ್ಷಿಯಾಗಿ ಹೇಳುತ್ತಿರುವರು. ॥೬೮॥



॥೨೨೪॥ ಯುವತಿ ಸಂಗದಿಂದ ಬಿಂದುನಾಶವು.

॥ ಚೌ ಪಾ ಈ ॥

ಜೊ ನಾನಾವಿಧ ಭೋಜನ ಖಾವೈ ।
ರಸ ತಾಕೊ ವಲ ಬಿಂದು ಉಪಾವೈ ॥
ಜೀವನ ಬಿಂದು ಅಧೀನ ಸಬನಕೊ ।
ನಸತ ಸೋಕ ಬಿಂದು ಹುತೈ ದುನಕೊ ॥ ೬೯ ॥

ಅರ್ಥ॥ ಅನೇಕ ವಿಧವಾದ ಪದಾರ್ಥಗಳನ್ನು ಭುಂಜಿಸುವದರಿಂದ ಅದರ ರಸವು ಬಿಂದುವಾಗಿ ದೇಹದಲ್ಲಿ ಪರಿಣಮಿಸುವದು. ಜೀವನ ಸರ್ವಸ್ವವು ಈ ಬಿಂದುವಿನ ವಶವರ್ತಿಯಾಗಿರುವದು. ಮತ್ತು ಈ ಬಿಂದುವಿನಿಂದಲೇ ಮನಸ್ಸಿನ ಶೋಕನಾಶವಾಗುವದು. ॥ ೬೯ ॥

॥ ಚೌ ಪಾ ಈ ॥

ಹ್ವೈಜಬ ಜನಕೊ ಮನ ಮಲವಾಸೀ ।
ಕರತ ಸೋಕ ಅತಿ ಧರತ ಉದಾಸೀ ॥
ರುಧಿರ ನಿವಾಸ ಧರತ ಮನ ಜಬಹೂ ।
ಚಂಚಲ ಅಧಿಕ ರಜೋಗುನ ತಬಹೂ ॥ ೭೦ ॥

ಅರ್ಥ॥ ಪುರುಷನ ಮನಸ್ಸು ಯಾವಾಗ ಮಲವಾಸಿಯಾಗಿರುವದೋ, ಆಗ ಅವನಿಗೆ ಉದಾಸೀನತೆಯೂ, ಶೋಕವೂ ಉಂಟಾಗುವವು. ಯಾವಾಗ ಮನಸ್ಸು ರುಧಿರನಿವಾಸಿಯಾಗಿರುವದೋ, ಅಗ ರಜೋಗುಣವು ಅಧಿಕವಾಗಿ ಮನಸ್ಸಿನ ಚಂಚಲತ್ವವು ಹೆಚ್ಚುವದು.

॥ ಚೌಪಾಈ ॥

ಜಬ ಮನ ಕರತ ಬಿಂದುಮ್ಯೆ ವಾಸಾ ॥
ತಬೈ ಸೋಕ ಚಂಚಲತಾ ನಾಸಾ ॥
ಪುನಿ ಆಪಹಿ ಬಲವತ ಜನ ಜಾನೈ ।
ಹ್ವೈ ಪ್ರಸನ್ನ ಸುಭಕಾ ರಜ ಠಾನೈ ॥೭೧॥

೨

೨. ಶುದ್ಧ ಬ್ರಹ್ಮವೇ ಅಧಿಷ್ಠಾನದ ಆಶ್ರಿತವಾದ ಅಜ್ಞಾನವು ಇದೇ ಬ್ರಹ್ಮವನ್ನೇ ಆಚ್ಛಾದನ ಮಾಡಿರುತ್ತದೆ. ಇದರ ನಂತರ "ನಾನು ಅಜ್ಞಾನಿ ಇದ್ದೇನೆ.,,ಎಂಬೀ ರೀತಿಯಿಂದ ಅಜ್ಞಾನದ ಅಭಿಮಾನೀ ರೂಪ ಅಶ್ರಯವು ಜೀವವಾಗುವುದು ಈಪ್ರಕಾರದಿಂದಸ್ವಾಶ್ರಯಸ್ವವಿಷಯ ಅಜ್ಞಾನವು

‖ ೨೪೭ ‖ ಒಂದು ಅಜ್ಞಾನ ಪಕ್ಷದಲ್ಲಿ ಬಂಧ ಮೋಕ್ಷಗಳ ವ್ಯವಸ್ಥೆಯು ಸರ್ವ ಪ್ರಕ್ರಿಯೆಗಳ ಶ್ರೇಷ್ಠತಾ ಪೂರ್ವಕ ಮಾಯೆಯ ನಾಮಭೇದದಿಂದ ಸ್ವರೂಪ.

ಈ ಅಜ್ಞಾನವು ಯದ್ಯಪಿ ಏಕವದೆ. ಮತ್ತು ಜ್ಞಾನದಿಂದ ನಿವೃತ್ತವಾಗಿದೆ. ಪರಂತು ಯಾವ ಅಂತಃಕರಣದಲ್ಲಿ ಅಜ್ಞಾನವುಂಟಾಗುವುದೋ ಆ ಅಂತಃಕರಣಾವಚ್ಛಿನ್ನ ಚೇತನದಲ್ಲಿ ಇದ್ದ ಅಜ್ಞಾನದ ಅಂಶವು ಅದರ ನಿವೃತ್ತಿ ಜ್ಞಾನದಿಂದಲೇ ಆಗುವುದು. ಅದೇ ಮುಕ್ತವಾಗುತ್ತದೆ. ಯಾವ ಅಂತಃಕರಣದಲ್ಲಿ ಜ್ಞಾನವುಂಟಾಗುವದಿಲ್ಲವೋ ಅಲ್ಲಿಅಜ್ಞಾನಾಂಶವು ಉಳಿಯುವುದಲ್ಲದೆ ಬಂಧವೂ ಉಳಿಯುವುದು. ಈರೀತಿಯಿಂದ ಒಂದು ಅಜ್ಞಾನಪಕ್ಷದಲ್ಲಿ ಬಂಧಮೋಕ್ಷ ವ್ಯವಹಾರವು ಸಂಭವಿಸುವದು.

ಕೆಲವರಿಗೆ ವಾಚಸ್ಪತಿಯ ರೀತಿಯಿಂದ ಅನೇಕ ಅಜ್ಞಾನವಾದಗಳೂ ಸಹ ಬುದ್ಧಿಯಲ್ಲಿ ಪ್ರವೇಶವಾಗುತ್ತವೆ. ಅವು ಸಹ ಅದ್ವೈತ ಜ್ಞಾನಕ್ಕೆ ಉಪಾಯವಾಗಿವೆ. ಅವುಗಳ ಖಂಡನ ವಿಷಯದಲ್ಲಿ ಏನೂ ಆಗ್ರಹವಿಲ್ಲ. ಯಾವರೀತಿಯಿಂದ ಜಿಜ್ಞಾಸುಗಳಿಗೆ ಅದ್ವೈತಬೋಧವಾಗುವದೋ ಹಾಗೆ ಬುದ್ಧಿಯ ಸ್ಥಿತಿಯನ್ನು ಮಾಡಬೇಕು.

ಶುದ್ಧ ಬ್ರಹ್ಮಾಶ್ರಿತ ಮಾಯಾ ಇವಕ್ಕೇ ಅವಿದ್ಯಾ ಮತ್ತು ಅಜ್ಞಾನವೆನ್ನುತ್ತಾರೆ.

೧. ಎಲ್ಲಿಅಚಿಂತ್ಯ ಶಕ್ತಿ ಮತ್ತು ಯುಕ್ತಿಯುಸಹನೆಮಾಡುವದಿಲ್ಲವೋ ಅದಕ್ಕೆ ಮಾಯಾ ಅನ್ನುತ್ತಾರೆ.

೨. ವಿದ್ಯೆಯಿಂದ ನಾಶವಾಗುತ್ತದೆಂದು ಅವಿದ್ಯಾ ಅನ್ನುತ್ತಾರೆ.

೩. ಸ್ವರೂಪದ ಆಚ್ಛಾದನಮಾಡುತ್ತದೆಂದು ಅಜ್ಞಾನವೆನ್ನುತ್ತಾರೆ.

೧. ಯಾವ ಚೇತನದ ಆಶ್ರಿತವಾಗಿರುವದೋ ಆ ಸಾಮಾನ್ಯಚೇತನವು ಅದರ ವಿರೋಧಿಯಲ್ಲಿ ಸಾಮಾನ್ಯ ಚೇತನವು ಮಾಯೆಯ ಸಾಧಕವಾಗಿ ಸತ್ತಾ ಸ್ಫುರಣೆಯನ್ನು ಕೊಡುವದು.



೨. ವೃತ್ತಿಯಲ್ಲಿ ಆರೂಢ ಅಂದರೆ ಸ್ಥಿತವಾದ ಈ ಚೈತನ್ಯ ಅಥವಾ ಚೈತನ್ಯ ಸಹಿತವೃತ್ತಿ, ಇದರ ವಿರೋಧಿಯೆಂದು ತಿಳಿಯಬೇಕು.

ಕವಿತ್ವದ ಮೂರು ಪಾದಗಳಿಂದ ಮಾಯೆಯ ಸ್ವರೂಪವನ್ನು ಹೇಳಿದಂತಾಯಿತು.

‖೨೪೮‖ ಪ್ರಸಂಗದಿಂದ ಈಶ್ವರನ ಸ್ವರೂಪ,ದ್ವಿವಿಧಕಾರಣಗಳ ಲಕ್ಷಣ ಜಗತ್ತಿನ ಉಪಾದಾನ ಮತ್ತು ನಿಮಿತ್ತಕಾರಣಗಳೇ ಈಶ್ವರನಾಗಿರುವನು. ‖ ೨೪೯---೨೪೯ ‖

"ಮಾಯೆಯಲ್ಲಿ ಆಭಾಸ" ಇತ್ಯಾದಿ ಚತುರ್ಥ ಪಾದದಿಂದ ಈಶ್ವರನ ಸ್ವರೂಪವನ್ನು ಕಥನ ಮಾಡುತ್ತೇನೆ.

೧. ಶುದ್ಧಸತ್ವಗುಣರಹಿತ ಮಾಯಾ ಮತ್ತು.

೨. ಮಾಯೆಯ ಅಧಿಷ್ಠಾನ ಚೇತನ.

೩. ಮಾಯೆಯಲ್ಲಿ ಆಭಾಸ.

ಈ ಮೂರೂ ಕೂಡಿ ಈಶ್ವರ ಅನ್ನುತ್ತಾರೆ, ಈ ಈಶ್ವರನು ಸರ್ವಜ್ಞನಿದ್ದಾನೆ. ಅವನೇ ಜಗತ್ತಿನ ಹೇತು ಅಂದರೆ-ಕಾರಣನಾಗಿದ್ದಾನೆ.

ಈ ಕಾರಣಗಳು ಎರಡು ವಿಧವಾಗಿವೆ (೧) ಉಪಾದಾನ ಕಾರಣ (೨) ನಿಮಿತ್ತ ಕಾರಣ.

೧. (೧) ಯಾವದರ ಪ್ರವೇಶವು ಕಾರ್ಯದಲ್ಲಿ ಆಗುವದೋ, ಮತ್ತು (೨) ಯಾವದರ ಹೊರ್ತು ಕಾರ್ಯದ ಸ್ಥಿತಿಯು ಆಗುವದಿಲ್ಲವೋ, ಅದಕ್ಕೆ ಉಪಾದಾನ ಕಾರಣವೆನ್ನುತ್ತಾರೆ. ಮೃತ್ತಿಕೆಯು ಘಟದ ಉಪಾದಾನ ಕಾರಣವಾಗಿರುವಂತೆ.

(೧) ಘಟದ ಸ್ವರೂಪದಲ್ಲಿ ಅದರ ಪ್ರವೇಶವದೆ. ಮತ್ತು (೨) ಮೃತ್ತಿಕೆಯ ಹೊರ್ತು ಘಟದ ಸ್ಥಿತಿ ಇಲ್ಲ.

೨. (೧) ಯಾವದು ಸ್ವರೂಪದಲ್ಲಿ ಪ್ರವೇಶವಿಲ್ಲ, ಆದರೆ(೨) ಕಾರ್ಯದಿಂದ ಭಿನ್ನವಾಗಿದ್ದು ಮಾಡಿಸುವದು ಮತ್ತು (೩) ಅದರ ನಾಶದಿಂದ ಕಾರ್ಯವು ನಾಶವಾಗುವದಿಲ್ಲ.

೫

ಇದಕ್ಕೆ ನಿಮಿತ್ತಕಾರಣ ಅನ್ನುತ್ತಾರೆ, ಉದಾಹರಣೆ-ಘಟವನ್ನು ಮಾಡುವ ಕುಲಾಲ, ದಂಡ, ಚಕ್ರ, ಮೊದಲಾದವುಗಳು ನಿಮಿತ್ತಕಾರಣಗಳಾಗಿವೆ.

(೧) ಘಟ ಸ್ವರೂಪದಲ್ಲಿ ಕುಲಾಲನ ಪ್ರವೇಶವಿಲ್ಲ, (೨) ಘಟದಿಂದ

ಭಿನ್ನನಾಗಿದ್ದು ಘಟದ ಉತ್ಪತ್ತಿಯನ್ನು ಮಾಡುವನು. ಮತ್ತು (೩)ಉತ್ಪ-
ತ್ತಿ ಮಾಡಿದ ನಂತರ ಕುಲಾಲ, ದಂಡ, ಚಕ್ರಮೊದಲಾದವುಗಳ ನಾಶದಿಂ
ಘಟವು ನಾಶವಾಗುವದಿಲ್ಲ.

ಈ ರೀತಿಯಿಂದ ಉಪಾದಾನ ಮತ್ತು ನಿಮಿತ್ತ ಈ ಎರಡು ಪ್ರಕಾ-
ರದ ಕಾರಣಗಳೂ ಕುಲಾಲನಾಗಿದ್ದಾನೆ. ಇದರಂತೆ. ॥ ೨೪೯ ॥

ಜಗತ್ತಿನ ಉಪಾದಾನ ಮತ್ತು ನಿಮಿತ್ತ ಈ ಎರಡೂ ಪ್ರಕಾರಗಳ
ಈಶ್ವರನೂ ಕಾರಣನಾಗಿದ್ದಾನೆ. ಹೇಗೆ ಒಂದೇ ಜೇಡಹುಳವು ಜಾಳಿಗೆಗೆ
ಉಪಾದಾನಕಾರಣಮತ್ತು ನಿಮಿತ್ತಕಾರಣವಾಗಿರುವದೋ ಅದರಂತೆ.

ಮತ್ತೆ ಕೆಲವರು ಹೀಗೆ ಹೇಳುತ್ತಾರೆ. (೧) ಜೇಡರ ಹುಳದ ಜಡಶ-
ರವು ಜಾಳಿಗೆಯ ಉಪಾದಾನ ಕಾರಣ ಮತ್ತು(೨)ಜೇಡರ ಹುಳದ ಲ-
ದಲ್ಲಿಯ ಚೇತನಭಾಗವು ನಿಮಿತ್ತಕಾರಣವಾಗಿವೆ.

ಇದರಿಂದ ಒಂದೇ ಈಶ್ವರನಿಗೆ ನಿಮಿತ್ತಕಾರಣ, ಉಪಾದಾನ ಕಾರ-
ನೆಂದು ತಿಳಿಯುವದಕ್ಕೆ ಯಾವ ದೃಷ್ಟಾಂತವೂ ಇಲ್ಲ ಆದರೆ ಜೇಡರಹು-
೬
ದಂತೆ (೧)ಈಶ್ವರನ ಶರೀರ ಜಡ ಮಾಯಾ ಜಗತ್ತಿನ ಉಪಾದಾನ ಕಾರ-
ಮತ್ತು(೨) ಚೇತನ ಭಾಗವು ನಿಮಿತ್ತಕಾರಣವಾಗಿದೆ.

ಈ ರೀತಿಯಿಂದ ಒಬ್ಬನೇ ಈಶ್ವರನು ಜಗತ್ತಿನ ಉಪಾದಾನ ಮತ್ತು
ನಿಮಿತ್ತಕಾರಣನಾಗಿದ್ದಾನೆ. ಈ ವಿಷಯದಲ್ಲಿ ಜೇಡರ ಹುಳದ ದೃಷ್ಟಾಂ-
೭
ವಲ್ಲದೆ ಸ್ವಪ್ನದೃಷ್ಟಾಂತ ಒಂದು ಮುಖ್ಯವದೆ.(೧) ಯಾವ ಸಮಯದ
ಜೀವದ ಕರ್ಮವು ಫಲಕೊಡುವದಕ್ಕೆ ಸನ್ಮುಖವಾಗುವದಿಲ್ಲವೋ, ಆ
ಪ್ರಳಯುವಾಗುವದು. ಮತ್ತು (೨) ಯಾವಾಗ ಜೀವದ ಕರ್ಮವು ಫಲಕೊ-
ಡುವದಕ್ಕೆ ಸನ್ಮುಖವಾಗುವದೋ, ಆಗ ಸೃಷ್ಟಿಯಾಗುವದು.

ಈ ರೀತಿಯಿಂದ ಜೀವಕರ್ಮಗಳ ಅಧೀನವಾಗಿ ಸೃಷ್ಟಿಯು ಉ-
ಈ ಕಾರಣದಿಂದ.

ಟಿಪ್ಪಣಿ—೧. ಇದರ ಅಭಿಪ್ರಾಯವೇನಂದರೆ, ಹೇಗೆ ಅಂಶೀರೂಪ ಅಂಧಕಾರ-
ಒಂದೇ ಅದೆ ಅಂಶರೂಪ ಅನೇಕ ಅಂಧಕಾರವು ಅಪ್ರತಿಗೃಹದಲ್ಲಿ ಸ್ಥಿತವಾ-
ಯಾವ ಗೃಹದಲ್ಲಿ ದೀಪವಿರುವದೋ, ಆಗೃಹದ ಅಂಶರೂಪ ಅಂಧಕಾರ-
ನಾಶವಾಗುವದು,ಹಾಗೆ ಅಂಶೀ ಅಜ್ಞಾನವು ಒಂದೇ ಅದೆ.ಆದರ ಅಂಶರೂ-
ಅನೇಕ ಅಜ್ಞಾನಗಳು ಅನೇಕ ಅಂತಃಕರಣಗಳಲ್ಲಿಪ್ರವೇಶಿಸಿ,ಸಾಕ್ಷೀ ಚೇತ-
ನಗಳಲ್ಲಿ ಸ್ಥಿತವಾಗಿವೆ. ಯಾವ ಅಂತಃಕರಣದಲ್ಲಿ ಜ್ಞಾನವುಂಟಾಗುವದೋ



ಅಂತಃಕರಣ ದೇಶಗತವಾದ ಅಜ್ಞಾನಾಂಶದ ನಾಶವಾಗುವದು. ಈಕಾರಣ-
ದಿಂದ ಒಬ್ಬನಿಗೆ ಜ್ಞಾನವುಂಟಾಗಲು, ಅವನಿಂದ ಸರ್ವರಿಗೂ ಅಜ್ಞಾನ ನಿವೃ-
ತ್ತಿಯಾಗಿ ಮುಕ್ತಿಯು ಪ್ರತೀತವಾಗುವದಿಲ್ಲ. ಈ ರೀತಿಯಾಗಿ ಒಂದೇ
ಅಜ್ಞಾನದ ಅಂಗೀಕಾರ ಮಾಡಿದರೂ ಬಂಧಮೋಕ್ಷದ ವ್ಯವಸ್ಥೆಯುಂಟಾ-
ಗುವದು ಮತ್ತು ಜೀವದ ಅಜ್ಞಾನದಿಂದ ಕಲ್ಪಿತ ಈಶ್ವರನು ಅನಂತರಾಗಿ
ಇರುವರು. ಮತ್ತು ಜೀವಜೀವಗಳಲ್ಲಿ ಸೃಷ್ಟಿಯು ಭೇದವದೆ. ಇದರಿಂದ
ಶ್ರುತಿ ಸ್ಮೃತಿ ಪುರಾಣಗಳಿಂದ ವಿರುದ್ಧ ಪಕ್ಷದ ಅಂಗೀಕಾರ ಮಾಡುವದೂ
ಉಂಟಾಗುವದಿಲ್ಲವಾದ್ದರಿಂದ ಈ ಪಕ್ಷವು ಸಮಾಚೀನವಾಗಿದೆ.

(೨) "ನಾನು ಅಜ್ಞಾನಿ ಇದ್ದೇನೆ,, ಎಂಬ ಅನುಭವದಿಂದ ವಾಚಸ್ಪತಿಮಿಶ್ರನು,
ಜೀವವು ಅಜ್ಞಾನದ ಆಶ್ರಯವೆಂದು ಹೇಳಿದ್ದಾನೆ ಈ ಸುಗಮರೀತಿಯಿಂದ
ಮುಮುಕ್ಷುಗಳ ಬುದ್ಧಿಯಲ್ಲಿ ಸಂಭವಿಸುವದು. ಈ ನಿಮಿತ್ತದಿಂದ ಹೇಳಿ-
ದ್ದಾನೆ. ಪರಂತು, ವಾಚಸ್ಪತಿಮಿಶ್ರನ ಗೂಢ ಅಭಿಪ್ರಾಯವೇನಂದರೆ:—
"ನಾನು,, ಶಬ್ದವಾಚ್ಯವಾದ ಯಾವ ಅಂತಃಕರಣದ ವಿಶಿಷ್ಟಚೇತನರೂಪವು
ಜೀವವದೆ. ಆದರ ವಿಶೇಷ್ಯ ಭಾಗವಾದ ಸಾಕ್ಷಿಚೇತನವು ಬ್ರಹ್ಮವದೆ.
ಅದು ಅಜ್ಞಾನದ ಆಶ್ರಯವದೆ, ಅದರ [ವಿಶೇಷ್ಯದ ಧರ್ಮದ] ವಿಶಿಷ್ಟದಲ್ಲಿ
ವ್ಯವಹಾರವಾಗುವದು.

[೩] ಈ ವಿಷಯದಲ್ಲಿ ನೈಷ್ಕರ್ಮ್ಯ ಸಿದ್ಧಿಕಾರನ ವಚನವು ಈಪ್ರಕಾರವಿರುವದು.
ಯಯಾ ಯಯಾ ಭವೇತ್ಪುಂಸಾಂ ವ್ಯುತ್ಪತ್ತಿಃ ಪ್ರತ್ಯಗಾತ್ಮನಿ ಸಾಸೈವಪ್ರ-
ಕ್ರಿಯೇಹಸ್ಯಾತ್ ಸಾಧ್ವೀ ಸಾಚ ವ್ಯವಸ್ಥಿತಿಃ ॥ ೧ ॥ ಅರ್ಥ—ಪುರುಷನಿಗೆ
ಯಾವ ಯಾವ ಪ್ರಕ್ರಿಯೆಗಳಿಂದ ಪ್ರತ್ಯಗಾತ್ಮನಲ್ಲಿ ಬೋಧವಾಗುವದೋ
ಆ ಯಾ ಪ್ರಕ್ರಿಯೆಗಳೇ ಇಲ್ಲಿ (ವೇದಾಂತ ಸಿದ್ಧಾಂತದಲ್ಲಿ) ಸಾಧುವಾಗಿರು-
ವುವು ಮತ್ತು ಇದೇ ವ್ಯವಸ್ಥಾ ಆಗಿರುವುದು.

(೪) ಕಾರ್ಯದ ಉತ್ಪತ್ತಿ ಸ್ಥಿತಿ ಮತ್ತು ಲಯ ಈ ಮೂರರ ಯಾವ ಕಾರಣವಿರು-
ವದೋ, ಅದು ಉಪಾದಾನ ಕಾರಣವದೆ. ಇದೇ ಉಪಾದಾನ ಲಕ್ಷಣವು.

(೫) ಕಾರ್ಯದ ಉತ್ಪತ್ತಿ ಮಾತ್ರಕ್ಕೆ ಯಾವ ಕಾರಣವಿರುವದೋ, ಅದೇ ನಿಮಿತ್ತ
ಕಾರಣವೆಂದು ಅನ್ನುತ್ತಾರೆ. ಈ ನಿಮಿತ್ತ ಕಾರಣಗಳು ಅನೇಕ ಪ್ರಕಾರಗ-
ಳಾಗಿವಿರುವವು.

[೬] ಜೇಡರಹುಳದ ಶರೀರವು ಜಾಳಿಗೆಯ ಉಪಾದಾನ ಕಾರಣವದೆ, ಮತ್ತು ೨.
ಅಂತಃಕರಣ ಸಹಿತ ಚೇತನಭಾಗವು ನಿಮಿತ್ತಕಾರಣವದೆ,
೧ ಇದರಂತೆ ತಮಃ ಪ್ರಧಾನ ಪ್ರಕೃತರೂಪವಾದ ಮಾಯೆಯು ಜಗತ್ತಿನ
ಉಪಾದಾನವದೆ.
೨ ಶುದ್ಧ ಸತ್ವ ಪ್ರಧಾನ ಮಾಯಾ ಸಹಿತ ಚೇತನ ಭಾಗವು ಜಗತ್ತಿನ
ನಿಮಿತ್ತ ಕಾರಣವದೆ, ಇದರಿಂದ ಕೇವಲ ಚೇತನ ಭಾಗದಲ್ಲಿ ಕಾರಣತೆಯು
ಇಲ್ಲ ಎಂಬ ಅಭಿಪ್ರಾಯವಿರುವದು,

[೭] ೧. ನ್ಯಾಯಮತದಲ್ಲಿ ಘಟದೊಡನೆ ಈಶ್ವರನ ಸಂಯೋಗದಲ್ಲಿ ಈಶ್ವರನನ್ನು

ಅಭಿನ್ನ ನಿಮಿತ್ತ ಉಪಾದಾನಕಾರಣ ಎಂದು ತಿಳಿಸಿದ್ದಾರೆ, ಅಲ್ಲದೆ ಜೀವ ಗತ ಜ್ಞಾನಾದಿ ಗುಣಗಳಲ್ಲಿ ಜೀವಾತ್ಮನನ್ನು ಅಭಿನ್ನ ನಿಮಿತ್ತ ಉಪಾದಾನ ಕಾರಣವೆಂದು ತಿಳಿದಿದ್ದಾರೆ.

೨. ಶ್ರೀಮದ್ಭಾಗವತದಲ್ಲಿ. ಯಾವಾಗ ಬ್ರಹ್ಮನು ವತ್ಸ ಮತ್ತು ವತ್ಸಪಾಲಕರ ಹರಣಮಾಡಿದನೋ ಆಗ ಶ್ರೀಕೃಷ್ಣಪರಮಾತ್ಮನು ವತ್ಸ ಮತ್ತು ವತ್ಸಪಾ ಲರ ಸರ್ವರೂಪಗಳನ್ನೂ ತಾನೇತೆಗೆದುಕೊಂಡಿದ್ದಾನೆ. ಅಲ್ಲಿ ಸಹಾ ಶ್ರೀಕೃ ಷ್ಣಪರಮಾತ್ಮನು ಅವುಗಳ ಅಭಿನ್ನ ನಿಮಿತ್ತ ಉಪಾದಾನ ಕಾರಣನಾಗಿ ದ್ದಾನೆ.

೩. ಸೂರ್ಯನು ಎಂಟುತಿಂಗಳ ಪರಿಯಂತ ಪೃಥ್ವಿಯ ರಸವನ್ನು ಶೋಷಿಸು ಡುವನು, ಪುನಃ ಗ್ರೀಷ್ಮ ಮತ್ತು ವರ್ಷಋತುಗಳ ನಾಲ್ಕುಮಾಸಗಳ ಪರಿ ಯಂತ ಜಲವನ್ನು ಬಿಡುವನು, ಈ ಜಲದ ಅಭಿನ್ನ ನಿಮಿತ್ತ ಉಪಾದಾನ ಕಾರಣವು ಸೂರ್ಯನಿದ್ದಾನೆ.

೪, ಒಬ್ಬ ಚಿತ್ರಲೇಖಕನು ನಖರೂಪಕುಂಚದಿಂದ ಸ್ವಶರೀರದ ಮೇಲೆ ಚಿತ್ರವನ್ನು ಬರೆಯುವನು. ಅದನ್ನು ನೋಡಿ ಆನಂದಪಡುವನು. ಪುನಃ ಅದನ್ನು ನಾ ನಾಶಮಾಡುವನು; ಆ ಚಿತ್ರದ ಚಿತ್ರಗಾರನು ಅಭಿನ್ನ ನಿಮಿತ್ತ ಉಪಾದಾನ ಕಾರಣನಾಗಿದ್ದಾನೆ.

೫. ಸಾಕ್ಷಿಚೇತನವು ಸ್ವಪ್ನಪ್ರಪಂಚದ ಅಭಿನ್ನ ನಿಮಿತ್ತ ಉಪಾದಾನ ಕಾರಣವು ಹೀಗೆಯೇ ಈಶ್ವರನು ಜಗತ್ತಿನ ಅಭಿನ್ನ ನಿಮಿತ್ತ ಉಪಾದಾನ ಕಾರಣವಾಗಿದ್ದಾನೆ.

## ||೨೫೦|| ಜೀವದ ಸ್ವರೂಪವನ್ನು ಹೇಳುವೆನು.

॥ ದೋಹಾ ॥

ಮಲಿನಸತ್ವ ಅಜ್ಞಾನನ್ಮೈ । ಜೋಚೇತನ ಆಭಾಸ
ಅಧಿಷ್ಠಾನಯುತ ಜೀವ ಸೋ । ಕರತ ಕರ್ಮ ಫಲಆಸ॥

ಟೀಕಾ ॥ ಯಾವದು ರಜತಮ ಗುಣಗಳನ್ನು ನಿಯಮನ ಮಾಡು ದೋ, ಅದಕ್ಕೆ ಶುದ್ಧ ಸತ್ವಗುಣವೆನ್ನುತ್ತಾರೆ. (೨) ಯಾವದು ರ ಜತಮ ಗುಣಗಳಿಗೆ ಸ್ವಾಧೀನವಾಗುವದೋ, ಅದಕ್ಕೆ ಮಲಿನ ಸತ್ವ ವೆನ್ನುತ್ತಾರೆ. (೧)ಆ ಮಲಿನ ಸತ್ವಗುಣಸಹಿತ ಅಜ್ಞಾನ ಅಂಶದಲ್ಲಿ ಚೈತನ್ಯದ ಆಭಾಸ, ಮತ್ತು (೨) ಅಜ್ಞಾನ,ಮತ್ತು [೩]ಅದರ ಅಧಿಷ್ಠಾನ ಕೂಟಸ್ಥ, ಈ ಮೂರೂ ಕೂಡಿ, ಜೀವ ವೆನ್ನುತ್ತಾರೆ. ಈ ಜೀವನು ಕರ್ಮವನ್ನು ಮಾಡುವದಲ್ಲದೆ ಫಲದ ಆಶೆಯನ್ನೂ ಮಾಡುವದು.



## ||೨೫೧|| ಈಶ್ವರನಲ್ಲಿ ವಿಷಮದೃಷ್ಟಿ ಮತ್ತು ಕ್ರೂರತೆಯುಇಲ್ಲ.

ಈ ಜೀವನ ಕರ್ಮಾನುಸಾರ ಉಚ್ಚ ನೀಚ ಭೋಗಗಳ ನಿಮಿತ್ತ ಈಶ್ವರ ಸೃಷ್ಟಿಯು ರಚಿತವಾಗಿದೆ. ಈ ಕಾರಣದಿಂದ ಈಶ್ವರನಲ್ಲಿ ವಿಷಮ ದೃಷ್ಟಿ ಮತ್ತು ಕ್ರೂರತೆಯು ಇಲ್ಲ.

ಕೆಲವರು ಹೀಗೆ ಅನ್ನುತ್ತಾರೆ "ಸರ್ವಕ್ಕಿಂತಲೂ ಪ್ರಥಮದಲ್ಲಿ ಯಾವ ಸೃಷ್ಟಿಯೊ ಆದಕ್ಕಿಂತ ಪೂರ್ವದಲ್ಲಿ ಕರ್ಮವಿಲ್ಲ. ಪ್ರಥಮಸೃಷ್ಟಿಯಲ್ಲಿಯೇ ಉಚ್ಚ ನೀಚ ಶರೀರಗಳು ಮತ್ತು ಭೋಗಗಳನ್ನು ಈಶ್ವರನು ರಚಿಸಿದ್ದರಿಂದ ಈಶ್ವರನು ವಿಷಮದೃಷ್ಟಿಯುಳ್ಳವನು ಎನ್ನುತ್ತಾರೆ.

ಇದು ಸಮಂಜಸವಾದದ್ದಲ್ಲ; ಕಾರಣವೇನೆಂದರೆ:- ಸಂಸಾರವು ಅನಾದಿಯದೆ. ಉತ್ತರೋತ್ತರ ಸೃಷ್ಟಿಯಲ್ಲಿ ಪೂರ್ವಪೂರ್ವ ಸೃಷ್ಟಿಯ ಕರ್ಮವು ಹೇತುವದೆ. ಎಲ್ಲಕ್ಕಿಂತಲೂ ಪ್ರಥಮದಲ್ಲಿ ಏನೂ ಸೃಷ್ಟಿಯಿಲ್ಲ ವಾದ್ದರಿಂದ ಈಶ್ವರನಲ್ಲಿ ದೋಷವಿಲ್ಲ.

## ||೨೫೨|| ಜೀವಗಳ ಭೋಗನಿಮಿತ್ತ ಈಶ್ವರನಿಗೆ ಜಗತ್ತನ್ನು ಉತ್ಪನ್ನಮಾಡಬೇಕೆಂಬ ಇಚ್ಛೆಯು.

||ಕವಿತ್ವ|| ಜೀವನಕೆ ಪೂರ್ವಸೃಷ್ಟಿ ಕರ್ಮ ಅನುಸಾರ ಈಸ ।
ಇಚ್ಛಾಹೋಯಿ ಜೀವಭೋಗ ಜಗ ಉಪ ಜಾಈಯೆ ॥
ನಭ ವಾಯು ತೇಜ ಜಲ ಭೂಮಿ ಭೂತ ರಚ್ಯೆತಹಾ।
ಶಬ್ದ ಸ್ಪರ್ಶ ರೂಪ ರಸ ಗಂಧ ಗುನ ಗಾಈ ಯೆ ॥
ಸತ್ವಅಂಶ ಪಂಚನಕೊಮೇಲಿ ಉಪಜತಸತ್ವ ।
ರಜೋಗುಣ ಅಂಶಮಿಲಿ ಪ್ರಾನತ್ಯೋ ಉಪಾಈಯೇ॥
ಏಕ ಏಕ ಭೂತಸತ್ವ ಅಂಶ ಜ್ಞಾನ ಇಂದ್ರಿ ರಚ್ಯೆ ॥
ಕರ್ಮ ಇಂದ್ರಿ ರಜೋಗುಣ ಅಂಸತೈ ಲಖಾಈಯೆ॥೧೫೬

ಟೀಕಾ॥ [೧] ಯಾವಾಗ ಜೀವನಗಳ ಕರ್ಮವು ಭೋಗಕೊಡುವದಕ್ಕೆ ಉದಾಸೀನವಾಗುವದೋ, ಆಗ ಪ್ರಳಯವಾಗುವದು. ಆ ಪ್ರಳಯದಲ್ಲಿ ಸರ್ವಪದಾರ್ಥಗಳ ಸಂಸ್ಕಾರವು ಮಾಯೆಯಲ್ಲಿ ಇರುವದು. ಆದರಿಂದ ಜೀವನ ಯಾವ ಕರ್ಮವು ಶೇಷವಾಗಿ ಉಳಿಯುವದೋ ಅದು ಸೂಕ್ಷ್ಮ ವಾಗಿ ಮಾಯೆಯಲ್ಲಿ ಇರುವದು.

(೨) ಯಾವಾಗ ಕರ್ಮವು ಭೋಗಕೊಡುವದಕ್ಕೆ ಸನ್ಮುಖವಾಗುವ
೧
ಆಗ ಈಶ್ವರನಿಗೆ ಇಚ್ಛೆಯುಂಟಾಗುವದೇನೆಂದರೆ, "ಜೀವಗಳ ಭೋ
ನಿಮಿತ್ತವಾಗಿ ಜಗತ್ತನ್ನು ಉತ್ಪನ್ನ ಮಾಡಬೇಕು.

ಟಿಪ್ಪಣಿ [೧] ದುಃಖ ಮತ್ತು ದುಃಖ ಸಾಧನಗಳ ನಿವೃತ್ತಿಯ ನಿಮಿತ್ತ
ಸುಖ ಮತ್ತು ಸುಖಗಳ ಸಾಧನಗಳ ಪ್ರಾಪ್ತಿಯ ನಿಮಿತ್ತ ಇಚ್ಛೆ
ವದು, ಅನ್ಯವಸ್ತುಗಳ ಇಚ್ಛೆಯು ಆಗುವದಿಲ್ಲ ಎಂಬ ನಿಯಮವದೆ. ಈಶ್ವ
ದುಃಖ ಮತ್ತು ದುಃಖಗಳ ಸಾಧನಗಳ ಅಭಾವವದೆ. ಈಕಾರಣದಿಂದ ಈಶ್ವ
ದುಃಖ ಮತ್ತು ದುಃಖಸಾಧನಗಳ ನಿವೃತ್ತಿಯನಿಮಿತ್ತ ಇಚ್ಛೆಯು
ಗುವದಿಲ್ಲ. ಮತ್ತು ೩. ಈಶ್ವರನು ಪೂರ್ಣಕಾಮನಿದ್ದಾನೆ. ಇದರಿಂದ
ನಿಗೆ ಸುಖ ಮತ್ತು ಸುಖಸಾಧನಗಳ ಪ್ರಾಪ್ತಿಯ ನಿಮಿತ್ತವಾಗಿಯು
ಇಚ್ಛೆಯುಂಟಾಗುವದಿಲ್ಲ.

ಯಾವಾಗಾದರೊಮ್ಮೆ ಬಾಲಕರಿಗೆವಿನೋದದಇಚ್ಛೆಯುಂಟಾಗುವ
ಇದರಂತೆ ಈಶ್ವರನಿಗೆ ಜಗದ್ರಚನಾರೂಪ ವಿನೋದದ ಇಚ್ಛೆಯು ನಿಮಿ
ತ್ತವಾಗಿ ಉತ್ಪನ್ನವಾಗುವದು ಎಂದು ಹೇಳುವದು ಸರಿಯಾದ
ರಣವೇನೆಂದರೆ. ಬಾಲಕರಿಗೆ ಹೇಗೆ ಚಿತ್ತದ ಆಹ್ಲಾದರೂಪ ಸುಖದ
ಪ್ತಿಯ ಇಚ್ಛೆಯುಂಟಾಗುವದೋ, ಅದರಂತೆ ಪೂರ್ಣಕಾಮನಾದ ಈಶ್ವ
ನಿಗೆ ಆಹ್ಲಾದರೂಪ ಸುಖಪ್ರಾಪ್ತಿಯ ಇಚ್ಛೆಯು ಉಂಟಾಗುವದಿಲ್ಲ.

ಈ ಆಕ್ಷೇಪಣೆಗೆ ಸಮಾಧಾನವೇನೆಂದರೆ:=ಕಲ್ಪ ವೃಕ್ಷವು ಹೇಗೆ ಅನ್ಯ ಪುರು
ಸಂಕಲ್ಪರೂಪ ನಿಮಿತ್ತದಿಂದ ಸ್ವಸ್ವಭಾವಾನುಸಾರವಾಗಿ ವಾಂಛಿತ
ನ್ನು ಕೊಡುವದೋ, ಹಾಗೆ ಈಶ್ವರನು ಸಹ ಫಲಕೊಡುವದಕ್ಕೆ ಸ
ನಾಗಲು ಜೀವನ ಅದೃಷ್ಟರೂಪ ನಿಮಿತ್ತದಿಂದ ಸ್ವಸ್ವಭಾವದಂತೆ
ಜ್ಞಾನ ಮತ್ತು ಕ್ರಿಯೆಗಳನ್ನು ಮಾಡುವನು.ಈ ಈಶ್ವರನ ಇಚ್ಛೆಯು
ಒಂದೊಂದೇ ವ್ಯಕ್ತಿಯು ಸೃಷ್ಟಿಯ ಆರಂಭ ಕಾಲದಲ್ಲಿ ಉತ್ಪನ್ನವಾ
ವದಲ್ಲದೆ ಪ್ರಳಯ ಪರ್ಯಂತ ಸ್ಥಿರವಾಗಿ ಇರುವನು. ಈ ಕಾರಣ
ನಿತ್ಯ ಅನ್ನುತ್ತಾರೆ. ಮತ್ತು ಭೂತ ಭವಿಷ್ಯತ್‌ವರ್ತಮಾನ ಕಾ
ಬಂದಂಥ ಸರ್ವಪದಾರ್ಥಗಳನ್ನೂ ವಿಷಯವನ್ನಾಗಿ ಮಾಡಿದ್ದಾರೆ.

ಈ ಕಾರಣದಿಂದ ಸರ್ವದಾ ಸೃಷ್ಟಿ, ಇಲ್ಲವೆ ಪ್ರಳಯ ಶೀತ, ಇಲ್ಲವೆ ಉಷ್ಣ
ಪರ್ಜನ್ಯಕಾಲವಾಗುವದಿಲ್ಲ. ಆದರೆ ಸಮಯಾನುಸಾರವಾಗಿ ಆಗು

## ॥ ಸೂಕ್ಷ್ಮ ಸೃಷ್ಟಿ ನಿರೂಪಣೆ ॥೨೫೩—೨೫೮॥

## ॥೨೫೪॥ ಪಂಚಭೂತ ಮತ್ತು ಅವುಗಳ ಗುಣಗಳ ಉತ್ಪತ್ತಿಯು.



೧
ಹೀಗೆ ಈಶ್ವರನ ಇಚ್ಛೆಯಿಂದ ಮಾಯೆಯು ತಮೋಗುಣ ಪ್ರಧಾನ
ವಾಗುವದು. ಈ ತಮೋಗುಣ ಪ್ರಧಾನ ಮಾಯೆಯಿಂದ,ಆಕಾಶ,ವಾಯು
ತೇಜ, ಜಲ, ಭೂಮಿ, ಎಂಬ ಪಂಚಭೂತಗಳು ಉತ್ಪನ್ನವಾಗುತ್ತವೆ. ಈ
ಪಂಚ ಭೂತಗಳಲ್ಲಿ ಕ್ರಮದಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ
ಪಂಚಗುಣಗಳು ಉತ್ಪನ್ನವಾದವು. (೧) ಮಾಯೆಯಿಂದ ಶಬ್ದಸಹಿತ ಆಕಾ
ಶದ ಉತ್ಪತ್ತಿ ಮತ್ತು (೨) ಆಕಾಶದಿಂದ ವಾಯುವಿನ ಉತ್ಪತ್ತಿ(ಅ) ವಾ
ಯುವು ಆಕಾಶದ ಕಾರ್ಯವದೆ. ಈ ಕಾರಣದಿಂದ ಆಕಾಶದ ಶಬ್ದಗುಣವು
ವಾಯುವಿನಲ್ಲಿ ಆಗಿರುವದು (ಬ) ತನ್ನ ಗುಣವು ಸ್ಪರ್ಶವಾಗಿರುವದು (೩)
ವಾಯುವಿನಿಂದ ತೇಜದ ಉತ್ಪತ್ತಿಯು ಮತ್ತು (ಅ) ತೇಜದಲ್ಲಿ ಆಕಾಶದ
ಶಬ್ದ (ಬ)ವಾಯುವಿನ ಸ್ಪರ್ಶಗುಣವು ಆಗಿರುವದು(ಕ)ತನ್ನಗುಣವು ರೂಪ
ವಾಗಿರುವದು(೪)ತೇಜದಿಂದಜಲದಉತ್ಪತ್ತಿಯು(ಅ)ಆಕಾಶದಶಬ್ದ(ಬ)ವಾ
ಯುವಿನಸ್ಪರ್ಶ(ಕ)ತೇಜದರೂಪಜಲದಲ್ಲಿಗುಣವಾಗಿರುವವು(ಡ)ತಾನುರಸವಾ
ಗಿರುವದು(೫)ಜಲದಿಂದ ಪೃಥ್ವಿಯ ಉತ್ಪತ್ತಿಯು ಮತ್ತು (ಅ) ಆಕಾಶದ
ಶಬ್ದ (ಬ) ವಾಯುವಿನ ಸ್ಪರ್ಶ (ಕ) ತೇಜದ ರೂಪ (ಡ) ಜಲದ ರಸ
ಪೃಥ್ವಿಯಲ್ಲಿ ಆಗಿರುವದು(ಇ)ಪೃಥ್ವಿಯ ಗಂಧವಾಗಿರುವದು(೧)ಆಕಾಶದಲ್ಲಿ
ಪ್ರತಿಧ್ವನಿರೂಪ ಶಬ್ದವದೆ. (೨)ವಾಯುವಿನಲ್ಲಿ ಸೀ, ಸೀ, ಎಂಬ ಶಬ್ದವೂ,
ಮತ್ತು ಉಷ್ಣ ಶೀತ ಕಠಿಣಗಳೆಂಬ ವಿಲಕ್ಷಣ ಸ್ಪರ್ಶವದೆ. (೩) ಅಗ್ನಿರೂಪ
ತೇಜದಲ್ಲಿ ಭುಕ್ ಭುಕ್ ಶಬ್ದವೂ, ಉಷ್ಣ ಸ್ಪರ್ಶವೂ, ಮತ್ತು
ಪ್ರಕಾಶರೂಪವೂ ಆದೆ. (೪) ಜಲದಲ್ಲಿ ಚುಲು ಚುಲು ಶಬ್ದವೂ ಶೀತಸ್ಪರ್ಶ
ವೂ ಶುಕ್ಲರೂಪವೂ ಮಧುರ ರಸವೂ ಆದೆ.ಮತ್ತು ಕ್ಷಾರ,ಹಾಗೆಯೇಕಟು,
ಪೃಥ್ವಿಯ ಸಂಬಂಧದಿಂದ ಜಲಪ್ರತೀತವಾಗುವದು.ಜಲದ ರಸವು ಮಧುರ
ವೂ ಇದೆ. ಈ ಮಧುರತೆಯು ನೆಲ್ಲೀಕಾಯಿ ಮೊದಲಾದವುಗಳನ್ನು ಭಕ್ಷಣ
ಮಾಡಿ ಜಲಪಾನಮಾಡಿದರೆ ಪ್ರಕಟವಾಗುವದು(೫) ಪೃಥ್ವಿಯಲ್ಲಿ ಕಟಕಟ
ಶಬ್ದವೂ, ಉಷ್ಣ ಶೀತಗಳಿಂದ ವಿಲಕ್ಷಣ ಕಠಿಣ ಸ್ಪರ್ಶವೂ ಇದೆ. ಶ್ವೇತ,
ನೀಲ, ಹಳದಿ, ಕೆಂಪು,ಹಸರು, ಮೊದಲಾದ ರೂಪಗಳು ಆವೆ, ಮಧುರ,
ಹುಳಿ ಕ್ಷಾರ,ಕಹಿ ಕಷಾಯ ಮೊದಲಾದ ರಸಗಳು ಅವೆ. ಸುಗಂಧ,ದುರ್ಗಂ
ಧಗಳೆಂಬ ಎರಡುತರದ ಗಂಧವದೆ. ಈ ರೀತಿಯಿಂದ ಆಕಾಶದಲ್ಲಿ ಒಂದು
ವಾಯುವಿನಲ್ಲಿ ಎರಡು ತೇಜದಲ್ಲಿ ಮೂರು, ಜಲದಲ್ಲಿ ನಾಲ್ಕು, ಪೃಥ್ವಿಯಲ್ಲಿ

ಐದು ಗುಣಗಳು ಅವೆ. ಇವುಗಳಲ್ಲಿ ಒಂದೊಂದು ತಮ್ಮವಿದ್ದು ಅಧಿ ವುಗಳು ಕಾರಣವುಗಳಿರುವವು. ಈ ಎಲ್ಲವುಗಳಿಗೂ ಮೂಲಕಾರಣನು ರನಾಗಿದ್ದಾನೆ. ಅವನಲ್ಲಿ ಮಾಯಾ ಮತ್ತು ಚೇತನ ಎಂಬ ಎರಡು ಳುಂಟು, (೧) ಮಿಥ್ಯಾತ್ವವು ಮಾಯೆಯ ಭಾಗವದೆ, ಮತ್ತು (೨)ಸ ಸ್ಫೂರ್ತಿಯು ಸರ್ವ ಭೂತಗಳಲ್ಲಿ ಚೇತನದ ಭಾಗವದೆ. ಕವಿತ್ವದ ಪಾದಗಳ ಅರ್ಥವು ಈರೀತಿಯಾಗಿರುವದು.

ಟಿಪ್ಪಣಿ-(೧)ಹೇಗೆ ಸ್ವಪತಿಯ ಶುಕ್ರರೂಪಬೀಜವನ್ನು ಧಾರಣಮಾಡತಕ್ಕ ಕ್ರಿಮಿ ಮೊದಲಾದ ಅನೇಕ ಜಂತುಯುಕ್ತ, ಪುತ್ರರೂಪಯುಕ್ತ ಗರ್ಭ ದ ಸ್ತ್ರೀಯು, ಪ್ರಸವಕಾಲಕ್ಕಿಂತ ಪೂರ್ವದಲ್ಲಿ ಸಂತತಿಯ ಆಭರಣ ತ್ರದಿಂದ ಸರ್ವದಾ ಪ್ರಸನ್ನಳಾಗಿರುವಳು. ಇದರಿಂದ ಸತ್ವಗುಣ ಪ್ರಧಾ ದಂತೆ ಅದೆ. ಹಿಂದುಗಡೆ ಪ್ರಸವಕಾಲದಲ್ಲಿ ವೇದನಾರೂಪ ನಿಮಿತ್ತದಿಂದ ನ್ನತೆಯನ್ನು ತ್ಯಾಜ್ಯಮಾಡಿ ಶೂನ್ಯಚಿತ್ತವುಳ್ಳವಳಾಗುವದರಿಂದ ತಮೋ ಪ್ರಧಾನತ್ವದಂತೆ ಆಗುವದು. ಮತ್ತು ಮೊದಲು ಬಿಳೇಬಣ್ಣವುಳ್ಳ ವರ್ಷಾಕಾಲದಲ್ಲಿ ಕೃಷ್ಣ ವರ್ಣವುಳ್ಳದ್ದಾಗುವದು.

ಇದರಂತೆ ಸೃಷ್ಟಿಗಿಂತ ಪೂರ್ವದಲ್ಲಿ ಬ್ರಹ್ಮದಪ್ರತಿಬಿಂಬರೂಪ ಜಗತ್ಕಾರ (ಕಾರಣ) ವನ್ನು ಧಾರಣಮಾಡತಕ್ಕ. ಮತ್ತು ಅವಿದ್ಯೋಪಾಧಿಕ ಜೀವಯುಕ್ತ ಪ್ರಪಂಚರೂಪ ಗರ್ಭಯುಕ್ತ ಶುದ್ಧ ಸತ್ವಪ್ರಧಾನ ಮಾ [ಈಶ್ವರನ ಉಪಾಧಿ] ಅದೆ. ಇದು ಸೃಷ್ಟಿಯ ಆರಂಭಕಾಲದಲ್ಲಿ ಶುದ್ಧಸ ಧಾನ ಸ್ವರೂಪದ ತ್ಯಾಜ್ಯವನ್ನು ಮಾಡಿ ಸೃಷ್ಟಿಯ ಯೋಗ್ಯ ತಮೋಗುಣ ಧಾನ ಪ್ರಕೃತಿರೂಪ ವಾಗುವದು.

॥೨೫೪॥ ಅಂತಃಕರಣದ ನಾಲ್ಕು ಭೇದಸಹಿತ ಉತ್ಪತ್ತಿ

ಪಂಚಭೂತಗಳ ಸತ್ವಗುಣಾಂಶವು ಕೂಡಿ ಸತ್ವ ಅಂದರೆ ಅಂತಃ ಣವು ಉತ್ಪನ್ನವಾಯಿತು. ಅಂತಃಕರಣವು ಜ್ಞಾನದ ಹೇತುವದೆ, ಮ ಜ್ಞಾನದ ಉತ್ಪತ್ತಿಯು ಸತ್ವಗುಣದಿಂದ ಆಗಿದೆ. ಈ ಕಾರಣದಿಂದ ಅಂ ಕರಣವು ಭೂತಗಳ ಸತ್ವಗುಣದ ಕಾರ್ಯವದೆ. ಮತ್ತು ಪಂಚಭೂ ಕಾರ್ಯ ಪಂಚಜ್ಞಾನೇಂದ್ರಿಯಗಳು ಇವು ಸರ್ವಕ್ಕೂ ಸಹಾಯವಾ ಇದರಿಂದ ಪಂಚಭೂತಗಳಿಂದ ಕೂಡಿದ ಸತ್ವಗುಣಗಳಿಂದ ಅಂತಃಕರ ಉತ್ಪತ್ತಿಯೆಂದು ಹೇಳಿದ್ದೇವೆ.

೧. ದೇಹದ ಅಂತರ ಅಂದರೆ ಮಧ್ಯದಲ್ಲಿ ಅದೆ, ಮತ್ತು ಅಂದರೆ ಜ್ಞಾನದ ಸಾಧನವದೆ. ಈ ಕಾರಣದಿಂದ ಅಂತಃಕರಣವೆನ್ನು ಮತ್ತು (೨) ಭೂತಗಳ ಸತ್ವಗುಣದ ಕಾರ್ಯವದೆ, ಈ ಕಾರಣ ಅಂತಃಕರಣದ ಸತ್ವನೆಂದೂ ಅನ್ನುತ್ತಾರೆ.



ಅಂತಃಕರಣದ ಪರಿಣಾಮಕ್ಕೆ ವೃತ್ತಿಯೆನ್ನುತ್ತಾರೆ, ಈ ಅಂತಃಕರಣ ವೃತ್ತಿಗಳು ನಾಲ್ಕು ಅವೆ.

೧. ಪದಾರ್ಥಗಳ ಉಚ್ಚನೀಚ ಸ್ವರೂಪಗಳನ್ನು ನಿಶ್ಚಯಮಾಡತಕ್ಕ ವೃತ್ತಿಗೆ ಬುದ್ಧಿಅನ್ನುತ್ತಾರೆ.

೨. ಸಂಕಲ್ಪ ವಿಕಲ್ಪ ವೃತ್ತಿಗೆ ಮನವೆನ್ನುತ್ತಾರೆ.

೩. ಚಿಂತಾವೃತ್ತಿಗೆ ಚಿತ್ತವೆನ್ನುತ್ತಾರೆ.

೪. “ಅಹಂ” ಎಂಬ ಅಭಿಮಾನವೃತ್ತಿಗೆ ಅಹಂಕಾರವೆನ್ನುತ್ತಾರೆ.

॥೨೫೫॥ ಪ್ರಾಣದ ಪಂಚಭೇದ ಸಹಿತ ಉತ್ಪತ್ತಿಯು.

ಪಂಚಭೂತಗಳಿಂದ ಕೂಡಿದ ರಜೋಗುಣಾಂಶದಿಂದ ಪ್ರಾಣದ ಉತ್ಪತ್ತಿಯಾಗಿರುತ್ತದೆ. ಪ್ರಾಣವು ಕ್ರಿಯಾಭೇದದಿಂದ ಮತ್ತು ಸ್ಥಾನ ಭೇದದಿಂದ ಐದು ವಿಧವಾಗಿರುತ್ತವೆ.

೧ (೧) ಯಾವದರ ಸ್ಥಾನ ಹೃದಯ, ಮತ್ತು (೨) ಹಸಿವೆ ನೀರಡಿಕೆ ಎಂಬ ಕ್ರಿಯಾ ಇರುವದೊ ಅದಕ್ಕೆ ಪ್ರಾಣವೆನ್ನುತ್ತಾರೆ.

೨ (೧) ಯಾವದರ ಸ್ಥಾನವು ಗುದವೋ (೨) ಮಲಮೂತ್ರಗಳನ್ನು ಬಿಡುವ ಕ್ರಿಯೆಯುಂಟೋ ಅದಕ್ಕೆ ಅಪಾನವೆನ್ನುತ್ತಾರೆ.

೩ (೧) ಯಾವದರಸ್ಥಾನವು ನಾಭಿಯೋ ಮತ್ತು (೨) ಪ್ರಾಶನ ಕ್ರಿಯೆಯುಂಟೋ ಅದಕ್ಕೆ ಸಮಾನ ವೆನ್ನುತ್ತಾರೆ.

೪ (೧) ಯಾವದರಸ್ಥಾನವು ಕಂಠವೋ, ಮತ್ತು (೨) ಶ್ವಾಸಕ್ರಿಯೆಯುಂಟೋ ಅದಕ್ಕೆ ಉದಾನ ವೆನ್ನುತ್ತಾರೆ.

೫ (೧) ಯಾವದರ ಸ್ಥಾನವು ಸರ್ವಶರೀರವೋ ಮತ್ತು (೨) ರಸವನ್ನು ಕೂಡಿಸುವ ಕ್ರಿಯೆಯನ್ನು ಮಾಡುವದೋ ಅದಕ್ಕೆ ವ್ಯಾನವೆನ್ನುತ್ತಾರೆ.

ಕೆಲವರು ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯಗಳೆಂಬ ಪಂಚಪ್ರಾಣಗಳನ್ನು ಅಧಿಕವಾಗಿ ಹೇಳಿದ್ದಾರೆ. ಮತ್ತು ಇವುಗಳ ಕಾರ್ಯಗಳು ಉದ್ಗಾರ, ನಿಮೇಷೋನ್ಮೇಷ, ಶೀನು, ಆಕಳಿಕೆ, ಮೃತಶರೀರವನ್ನು ಉಬ್ಬಿಸುವದು ಎಂದು ಕ್ರಮದಿಂದ ಹೇಳಿದ್ದಾರೆ. ಪೃಥಿವಿ, ಜಲ, ತೇಜ, ವಾಯು, ಆಕಾಶ, ಈ ಪಂಚಭೂತಗಳ ರಜೋಗುಣಾಂಶದಿಂದ ಒಂದೊಂದನ್ನೆ ಕ್ರಮವಾಗಿ ಉತ್ಪತ್ತಿಯನ್ನು ಹೇಳಿದ್ದಾರೆ. ಮತ್ತು ಅಪಾನ, ಸಮಾನ,

ಪ್ರಾಣ, ಉದಾನ, ವ್ಯಾನ, ಇವುಗಳ ಉತ್ಪತ್ತಿಯನ್ನು ಸಹ ಪೃಥಿವ್ಯಾ
ಬೇರೆಬೇರೆ ರಜೋಗುಣಾಂಶದಿಂದ ಹೇಳಿದ್ದಾರೆ. ಕೂಡುವಿಕೆಯು
ರಜೋಗುಣಾಂಶದಿಂದ ಇಲ್ಲ! ಆದರೆ ಅದ್ವೈತ ಸಿದ್ಧಾಂತದಲ್ಲಿ ಈ ಪ್ರಕ್ರಿ
ಯು ಇಲ್ಲ. ಕಾರಣವೇನಂದರೆ ವಿದ್ಯಾರಣ್ಯಸ್ವಾಮಿಗಳೂ, ಮತ್ತು
ಕರಣದಲ್ಲಿ ವಾರ್ತಿಕಕಾರನೂ ಸೂಕ್ಷ್ಮಶರೀರದಲ್ಲಿ ಮತ್ತು ಪಂಚಕೋ
ಳಲ್ಲಿ ನಾಗ, ಕೂರ್ಮ, ಮೊದಲಾದವುಗಳನ್ನು ಗ್ರಹಣಮಾಡಿರುವದಿಲ್ಲ.
ತ್ತು ಅವರು ಅಪಾನಾದಿಕ ಪಂಚಪ್ರಾಣಗಳ ಉತ್ಪತ್ತಿಯನ್ನು ಸಹ
ಗಳ ರಜೋಗುಣಾಂಶಗಳ ಕೂಡುವಿಕೆಯಿಂದಲೇ ಎಂದು ಹೇಳಿದ್ದಾರೆ.
ಕಾರಣದಿಂದ (೧) ಒಂದೊಂದರ ರಜೋಗುಣಾಂಶದಿಂದ ಅಪಾನ
ದವುಗಳ ಉತ್ಪತ್ತಿ ಕಥನವು ಅಸಂಗತವು. ಮತ್ತು (೨) ಸೂಕ್ಷ್ಮಶ
ನಾಗ, ಕೂರ್ಮ, ಮೊದಲಾದವುಗಳ ಗ್ರಹಣವೂ ಅಸಂಗತವು.
ಪಂಚಪ್ರಾಣಗಳಷ್ಟೇ ಸೂಕ್ಷ್ಮಶರೀರದಲ್ಲಿ ಗ್ರಹಣವದೆ.

ಪ್ರಾಣವು ವಿಕ್ಷೇಪರೂಪವದೆ ಮತ್ತು ವಿಕ್ಷೇಪಸ್ವಭಾವವು ರ
ಇದ್ದದೆ; ಈ ಕಾರಣದಿಂದ ಭೂತಗಳ ರಜೋಗುಣಾಂಶಗಳಿಂದ
ಉತ್ಪತ್ತಿಯನ್ನು ಹೇಳಿದ್ದೇವೆ, ಇದೇ ಕನಿತ್ವದ ಮೂರನೇಪಾದದ

॥೨೫೭॥ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ಉತ್ಪತ್ತಿ

೧. ಒಂದೊಂದು ಭೂತದ ಸತ್ವಗುಣಾಂಶದಿಂದ ಪಂಚಜ್ಞಾನೇ
ಯಗಳು ಉಂಟಾದವು.

೨. ಒಂದೊಂದರ ರಜೋಗುಣಾಂಶದಿಂದ ಒಂದೊಂದು ಕರ್ಮೇ
ಯವು ಉತ್ಪನ್ನವಾಯಿತು.

(೧) ಆಕಾಶದ ಸತ್ವಗುಣದಿಂದ ಶ್ರೋತ್ರ, (೨) ವಾಯುವಿನ
ಗುಣಾಂಶದಿಂದ ತ್ವಕ್,(೩) ತೇಜದ ಸತ್ವಗುಣಾಂಶದಿಂದ ನೇತ್ರ, (
ಸತ್ವಗುಣಾಂಶದಿಂದ ರಸನೆ, (೫) ಪೃಥ್ವಿಯ ಸತ್ವಗುಣಾಂಶದಿಂದ
ಉತ್ಪತ್ತಿಯಾಯಿತು. ಈ ಪಂಚೇಂದ್ರಿಯಗಳು ಜ್ಞಾನಕ್ಕೆ ಸಾಧನ
ಈ ಕಾರಣದಿಂದ ಇವುಗಳಿಗೆ ಜ್ಞಾನೇಂದ್ರಿಯಗಳೆನ್ನುತ್ತಾರೆ.

ಜ್ಞಾನವು ಸತ್ವಗುಣದಿಂದ ಉಂಟಾಗುವದು, ಈ ಕಾರಣದಿಂದ
ತಗಳ ಸತ್ವಗುಣಾಂಶಗಳಿಂದ ಉತ್ಪತ್ತಿಯೆಂದು ಹೇಳಿದ್ದೇವೆ.

ಶ್ರೋತ್ರೇಂದ್ರಿಯವು ಆಕಾಶದ ಗುಣವನ್ನು ಗ್ರಹಣಮಾಡು
ಈ ಕಾರಣದಿಂದ ಶ್ರೋತ್ರೇಂದ್ರಿಯಕ್ಕೆ ಆಕಾಶದಿಂದ ಉತ್ಪತ್ತಿ



ಹೇಳಿದೆವು. ಇದರಂತೆ ಯಾವ ಭೂತದ ಗುಣವನ್ನು ಯಾವ ಇಂದ್ರಿಯವು
ಗ್ರಹಣಮಾಡಿರುವದೋ ಆ ಭೂತದಿಂದ ಆ ಇಂದ್ರಿಯದ ಉತ್ಪತ್ತಿಯೆಂದು
ಹೇಳಿದಂತಾಯಿತು.

(೧) ಆಕಾಶದ ರಜೋಗುಣಾಂಶದಿಂದ ವಾಗಿಂದ್ರಿಯದ ಉತ್ಪತ್ತಿಯು
(೨) ವಾಯುವಿನ ರಜೋಗುಣಾಂಶದಿಂದ ಪಾಣಿಯ ಉತ್ಪತ್ತಿಯು (೩)
ತೇಜದ ರಜೋಗುಣಾಂಶದಿಂದ ಪಾದದ ಉತ್ಪತ್ತಿಯು, (೪) ಜಲದ
ರಜೋಗುಣಾಂಶದಿಂದ ಉಪಸ್ಥದ ಉತ್ಪತ್ತಿಯು. (೫) ಪೃಥ್ವಿಯ ರಜೋ
ಗುಣಾಂಶದಿಂದ ಗುದದ ಉತ್ಪತ್ತಿಯೂ ಆಗಿರುವದು.

ಸ್ತ್ರೀಯ ಯೋನಿ, ಪುರುಷನ ವಿಷಯಾನಂದದ ಸಾಧನ ಇಂದ್ರಿಯ
ಕ್ಕೆ ಉಪಸ್ಥ ಎಂದು ಹೇಳಿದ್ದಾರೆ. ಕರ್ಮ ಅಂದರೆ ಕ್ರಿಯೆ.

ಈ ಪಂಚೇಂದ್ರಿಯಗಳು ಕ್ರಿಯೆಯ ಸಾಧನವಾಗಿವೆ; ಈ ಕಾರಣ
ದಿಂದ ಕರ್ಮೇಂದ್ರಿಯವೆನ್ನುತ್ತಾರೆ.

ಕ್ರಿಯೆಯು ರಜೋಗುಣದಿಂದ ಉಂಟಾಗಿರುವದು; ಆದಕಾರಣ
ಭೂತಗಳ ರಜೋಗುಣಾಂಶಗಳಿಂದ ಇವುಗಳ ಉತ್ಪತ್ತಿಯನ್ನು ಹೇಳಿರು
ತ್ತೇವೆ.

॥ ಇತಿ ಸೂಕ್ಷ್ಮಸೃಷ್ಟಿ ನಿರೂಪಣ ॥

॥೨೫೭॥ ॥ ಸವೈಯಾ ಛಂದ ॥

ಭೂತ ಅಪಂಚೀಕೃತ ತೆ ಕಾರಜ।
ಇತನೀ ಸೂಛಮ ಸೃಷ್ಟಿ ಪಿಛಾನ ॥
ಪಂಚೀಕೃತ ಭೂತನತೈ ಉಪಜ್ಯೋ।
ಸ್ಥೂಲಪಸಾರೋ ಸಾರೊ ಮಾನ ॥
ಕಾರನ ಸೂಛಮ ಥೂಲದೇಹ ಅರು।
ಪಂಚಕೋಸ ಇನಹೀಮ್ಯೈ ಜಾನ ॥
ಕರಿ ವಿವೇಕ ಲಖಿ ಆತಮ ನ್ಯಾರೊ।
ಮುಂಜ ಇಷೀಕಾತ್ಯೆ ಜ್ಯೂ ಭಾನ ॥೧೫೭॥

ಟೀಕಾ॥ ಅಪಂಚೀಕೃತ ಭೂತ ಮತ್ತು ಇವುಗಳ ಕಾರ್ಯಗಳಾದ
ಅಂತಃಕರಣ, ಪ್ರಾಣ, ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಇವುಗಳಿಗೆ
ಸೂಕ್ಷ್ಮಸೃಷ್ಟಿ ಎನ್ನುತ್ತಾರೆ.

ಸೂಕ್ಷ್ಮಸೃಷ್ಟಿಯ ಜ್ಞಾನವು ಇಂದ್ರಿಯಗಳಿಂದ ಆಗುವದಿಲ್ಲ. ನೇತ್ರ

ನಾಸಿಕಾದಿ ಗೋಲಕಗಳು ಇಂದ್ರಿಯಗಳ ವಿಷಯವಾಗುವವು; ಪರು
ಈ ಗೋಲಕಗಳಲ್ಲಿ ಸ್ಥಿತವಾದ ಇಂದ್ರಿಯಗಳು ಮಾತ್ರ ಯಾವ ಇಂದ್ರಿ
ಗಳಿಗೂ ವಿಷಯವಲ್ಲ.

ಸೂಕ್ಷ್ಮಸೃಷ್ಟಿಯ ಉತ್ಪತ್ತಿಯಾದಮೇಲೆ ಈಶ್ವರನ ಇಚ್ಛೆ
ಸ್ಥೂಲಸೃಷ್ಟಿಯ ನಿಮಿತ್ತ ಭೂತಗಳ ಪಂಚೀಕರಣವಾಯಿತು.

(ಪಂಚೀಕರಣ.) ||೨೫೮—೨೫೯||

## ||೨೫೮|| ಪಂಚೀಕರಣ ಪ್ರಕಾರವು.

೧. ಒಂದೊಂದು ಭೂತದಲ್ಲಿ ಸಮನಾದ ಎರಡು ಭಾಗಗ
ಆಮೇಲೆ ಆ ಒಂದು ಭಾಗದಲ್ಲಿ ನಾಲ್ಕು ನಾಲ್ಕು ಭಾಗಗಳಾದವು.
ಭೂತಗಳ ಉಳಿದ ಅರ್ಧಭಾಗಗಳಲ್ಲಿ ಈ ನಾಲ್ಕುನಾಲ್ಕು ಭಾಗಗಳು
ಡಿಕೊಂಡವು. ಸರಿಯಾದ ಎರಡು ಭಾಗಗಳಲ್ಲಿ ತಮ್ಮ ತಮ್ಮ ಭಾಗ
ನ್ನು ಬಿಟ್ಟು, ಉಳಿದ ಭೂತಗಳಿಂದ ಬಂದ ಅರ್ಧದ ಒಂದು ನಾಲ್ಕಂಶ
ಗವನ್ನು ತಮ್ಮ ಅರ್ಧಭಾಗದಲ್ಲಿ ಕೂಡಿಸಿಕೊಳ್ಳಲು, ಇದೇ ಪಂಚೀಕ
ವಾಯಿತು.

೧

೨. ಎರಡನೇ ಪ್ರಕಾರವು ಹೇಗೆಂದರೆ:——ಒಂದೊಂದೇ ಭೂತಗಳ
ಆದ ಎರಡೆರಡು ಭಾಗಗಳು ಸಮನಾಗಿರುವದಿಲ್ಲ ಅದೆಂತೆನೆ ಒಂದುಭಾಗ
ನಾಲ್ಕು ಅಂಶದ್ದು, ಉಳಿದ ಎರಡನೇಭಾಗವು ಐದು ಅಂಶದ್ದು, ಈಪ್ರಕಾ
ಹೆಚ್ಚು ಕಡಿಮೆಯಿಂದ ಎರಡು ಭಾಗಗಳಾದವು, ಇವುಗಳಲ್ಲಿ ಸರ್ವಭೂ
ಗಳ ಅಧಿಕಭಾಗವು ಹೇಗೆ ಉಳಿದದ್ದೋ ಹಾಗೇ ಇತ್ತು. ಮತ್ತು ಉ
ಅರ್ಧದ ಐದನೇ ಅಂಶದಲ್ಲಿ ಪುನಃ ಐದುಭಾಗವಾಗಿ ದೊಡ್ಡಭಾಗದ
ಕೂಡಿಕೊಂಡು ಪಂಚೀಕರಣವಾಯಿತು.

೧. ಪ್ರಥಮ ಪಕ್ಷದಲ್ಲಿ ಒಂದುಭಾಗದ ನಾಲ್ಕು ಭಾಗವು ಪೃಥಕ್ಕಾ
ನಿಂತವು. ಅರ್ಧ ಅರ್ಧ ಭಾಗಗಳಲ್ಲಿ ತಮ್ಮ ಭಾಗವನ್ನುಬಿಟ್ಟು ಕೂಡಿದವು

೨. ದ್ವಿತೀಯ ಪಕ್ಷದಲ್ಲಿ ನ್ಯೂನಭಾಗದ ಪಂಚಭಾಗಗಳು ಪೃಥ
ಕ್ಕಾಗಿ ನಿಂತವು, ಅಧಿಕ ಪಂಚಭಾಗಗಳಲ್ಲಿ ತಮ್ಮ ತಮ್ಮ ಭಾಗಸಹಿತದಲ್ಲಿ
ಕೂಡಿ ಕೊಂಡವು.

೧. ಪ್ರಥಮಪಕ್ಷದಲ್ಲಿ ಪಂಚೀಕೃತಭೂತಗಳಲ್ಲಿ ತಮ್ಮ ಅರ್ಧ
ಅಂಶವೂ ಮತ್ತು ಉಳಿದಭೂತಗಳ ಅರ್ಧ ಅಂಶವು.



೨. ದ್ವಿತೀಯ ಪಕ್ಷದಲ್ಲಿ ಪಂಚೀಕರಣದಿಂದ ಆದ ತಮ್ಮ ಅಂಶ
ಇಪ್ಪತ್ತೊಂದು, ಉಳಿದ ಭೂತಗಳ ನಾಲ್ಕು ಅಂಶಗಳು.

ಈ ದ್ವಿತೀಯ ಪಕ್ಷದ ಸುಗಮರೀತಿಯು ಹೇಗೆಂದರೆ-ಒಂದೊಂದು
ಭೂತಗಳಲ್ಲಿ ಇಪ್ಪತ್ತೈದು ಭಾಗಗಳು. ಇಪ್ಪತ್ತೊಂದು ಭಾಗಗಳೂ ಮತ್ತು
ನಾಲ್ಕು ಭಾಗಗಳೂ ಪೃಥಕ್ಕಾದವು. ನಾಲ್ಕು ಭಾಗಗಳಲ್ಲಿಯ ಒಂದೊಂ
ದು ಭಾಗವು ಇಪ್ಪತ್ತೊಂದು ಭಾಗಗಳಲ್ಲಿ ಕೂಡಿಕೊಂಡವು. (ತಮ್ಮ ಇಪ್ಪ
ತ್ತೊಂದನೆಯ ಭಾಗವನ್ನು ಬಿಟ್ಟು.)

ಈ ರೀತಿಯಾಗಿ ಎರಡುವಿಧವಾಗಿ ಪಂಚೀಕರಣವನ್ನು ಹೇಳಿವು

ಒಂದೊಂದು ಭೂತದಲ್ಲಿ ಐದೈದು ಭೂತಗಳು ಕೂಡಲಾಗಿ, ಅದರ
ನಾಮವು ಪಂಚೀಕರಣವೆಂದು ಆಗುತ್ತದೆ.

ಯಾವ ಭೂತಗಳ ಪಂಚೀಕರವು ಮಾಡಲ್ಪಟ್ಟದೆಯೋ ಅದಕ್ಕೆ
ಪಂಚೀಕೃತವೆನ್ನುತ್ತಾರೆ.

ಟಿಪ್ಪಣಿ—೧ ಪಂಚೀಕರಣದ ಪ್ರಥಮರೀತಿಯಿಂದ ಸರ್ವಭೂತಗಳಲ್ಲಿ ಅರ್ಧ-ಅರ್ಧ
ಭಾಗವು ತಮ್ಮ ತಮ್ಮದದೆ, ಉಳಿದ ಅರ್ಧಭಾಗದಲ್ಲಿ ಅನ್ಯಭೂತಗ
ಳಿಂದ ನಾಲ್ಕು ಭಾಗಗಳು ಕೂಡಿಕೊಂಡಿವೆ, ಈ ಕಾರಣದಿಂದ ಅನ್ಯಭೂತಗಳ
ನಾಲ್ಕು ಭಾಗಗಳಿಂದ ತಮ್ಮ ತಮ್ಮ ಅರ್ಧ ಭಾಗದ ಶೇಷ ಉಳಿಯುವದರಿಂದ
ಆಕಾಶಾದಿ ಪ್ರತ್ಯೇಕ ಭೂತಗಳ ಪೃಥಕ್ ಪೃಥಕ್ ಭಾಗವು ಆಗಬಾರದು
ಆದರೆ ಆಗುತ್ತದೆ, ಈ ಕಾರಣದಿಂದ ಉಕ್ತಪಂಚೀಕರಣದ ರೀತಿಯು ಅಘ
ಟಿತವದೆ, ಎಂಬ ಆಕ್ಷೇಪಣೆಯು ಎಷ್ಟೋ ಜನ ಮುಮುಕ್ಷುಗಳ ಚಿತ್ತದಲ್ಲಿ
ಉಂಟಾದ್ದರಿಂದ ಅದರ ನಿವಾರಣಾರ್ಥವಾಗಿ ಪಂಚೀಕರಣದ ಎರಡನೇ
ಪ್ರಕಾರವನ್ನು ಹೇಳಿದ್ದೇವೆ,

## ||೨೫೯|| ಸ್ಥೂಲ ಬ್ರಹ್ಮಾಂಡಾದಿಗಳ ಉತ್ಪತ್ತಿಯು.

ಈ ಪಂಚೀಕೃತ ಭೂತಗಳಿಂದ (೧) ಇಂದ್ರಿಯಗಳಿಗೆ ವಿಷಯವಾದ
ಸ್ಥೂಲಬ್ರಹ್ಮಾಂಡವಾಯಿತು. (೨) ಆಬ್ರಹ್ಮಾಂಡದ ಅಂತರ್ಗತ ಭೂಲೋಕ
ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ ಜನಲೋಕ, ತಪೋಲೋಕ
ಸತ್ಯಲೋಕಗಳೆಂಬ ಏಳು ಭುವನಗಳು ಪೃಥ್ವಿಯಿಂದ ಊರ್ಧ್ವಭಾಗದಲ್ಲಿ
ಆದವು. (೩) ಅತಲ, ಸುತಲ, ಪಾತಾಲ, ವಿತಲ, ರಸಾತಲ, ತಲಾತಲ,
ಮಹಾತಲಗಳೆಂಬ ಏಳು ಲೋಕಗಳು ಪೃಥ್ವಿಯ ಕೆಳಭಾಗದಲ್ಲಿ ಆದವು.
(೪) ಈ ಚತುರ್ದಶ ಲೋಕಗಳಲ್ಲಿ ಜೀವಗಳ ಭೋಗಯೋಗ್ಯ ಅನ್ನಾದಿ
ಗಳನ್ನೂ ಮತ್ತು ಭೋಗಸ್ಥಾನ ದೇವ, ಮನುಷ್ಯ ಪಶುಮೊದಲಾದ ಸ್ಥೂಲ
ಶರೀರಗಳು ಉಂಟಾದವು.

ಈ ಪ್ರಕಾರ ಸಂಕ್ಷೇಪದಿಂದ ಸೃಷ್ಟಿಯು ನಿರೂಪಣವನ್ನುಮಾಡಿ… ಆದರೆ ನಂದುಕೋಟಿ ಬ್ರಹ್ಮದೇವರ ಆಯುಷ್ಯವು ಸಹ ಮಾಯ… ಪದಾರ್ಥಗಳ ನಿರೂಪಣೆಗೆ ಸಾಲದು; ಈ ಸಂಗತಿಯನ್ನು ವಾಲ್ಮೀಕಿ… ರ್ಷಿಯು ಅನೇಕ ಇತಿಹಾಸಗಳಿಂದ ವಾಸಿಷ್ಟದಲ್ಲಿ ನಿರೂಪಣಮಾಡಿ…

ಇದು ಸವಾಯಿಯಾ ಛಂದದ ಎರಡುಪಾದಗಳ ಅರ್ಥವಾಯಿತು.

---

||ಆತ್ಮವಿವೇಕ ಅಥವಾ ಪಂಚಕೋಶ ವಿವೇಕ ||೨೩೦—೨… ||೨೬೦||ಪಂಚಕೋಶ ಮತ್ತು ಅವುಗಳಿಂದ ಆತ್ಮನ ಆಚ್ಛಾ…

ಈ ಕೆಳಗೆ ವಿವರಿಸುವದು ಸವಾಯಿಯಾ ಛಂದದ ಮೂರನೇ ಚ… ಅರ್ಥವು.

ಇವುಗಳಲ್ಲಿ ಅಂದರೆ ಸ್ಥೂಲ, ಸೂಕ್ಷ್ಮ, ಮಾಯಾಕಾರ್ಯಗಳ… ದೇಹತ್ರಯಗಳೂ ಪಂಚಕೋಶಗಳೂ ಇರುವವು.

೧. (೧) ಶುದ್ಧ ಸತ್ವಗುಣಸಹಿತ ಮಾಯೆಯು ಈಶ್ವರನ ಕಾ… ಶರೀರವಾಗಿರುವುದು. ಮತ್ತು (೨) ಮಲಿನ ಸತ್ವಗುಣಸಹಿತ ಅವಿ… ಅಂಶವು ಜೀವನ ಕಾರಣಶರೀರವದೆ.

೨. (೧) ಉತ್ತರಶರೀರದ ಆರಂಭದ ಪಂಚ ಸೂಕ್ಷ್ಮ ಭೂತ, ಮ… ಬುದ್ಧಿ, ಚಿತ್ತ, ಅಹಂಕಾರ, ಪಂಚಪ್ರಾಣ, ಪಂಚಕರ್ಮೇಂದ್ರಿಯ, ಪ… ಜ್ಞಾನೇಂದ್ರಿಯ ಇವೆಲ್ಲವೂ ಕೂಡಿದರೆ ಜೀವನ ಸೂಕ್ಷ್ಮಶರೀರವೆನ್ನಬೇ…

(೨) ಸರ್ವಜೀವನಗಳ ಸೂಕ್ಷ್ಮಶರೀರಗಳೂ ಕೂಡಿ, ಈಶ್ವರನ ಸೂ… ಕ್ಷ್ಮಶರೀರವಾದೆ.

೩. (೧) ಸಂಪೂರ್ಣ ಸ್ಥೂಲ ಬ್ರಹ್ಮಾಂಡವು ಈಶ್ವರನ ಸ್ಥೂಲಶ… ವಾಗಿರುವುದು.

(೨) ಜೀವನಗಳ ವ್ಯಷ್ಟಿ, ಸ್ಥೂಲ ಶರೀರಗಳು ಪ್ರಸಿದ್ಧವದೆ, ಮ… ಈ ದೇಹತ್ರಯಗಳಲ್ಲಿಯೇ ಪಂಚಕೋಶಗಳಿರುವವು.

೧. ಕಾರಣ ಶರೀರಕ್ಕೆ ಅನಂದಮಯ ಕೋಶವೆನ್ನುತ್ತಾರೆ.

೨—೪. ವಿಜ್ಞಾನಮಯ, ಮನೋಮಯ, ಪ್ರಾಣಮಯ, ಎಂಬ ಈ… ಮೂರು ಕೋಶಗಳು ಸೂಕ್ಷ್ಮ ಶರೀರದಲ್ಲಿವೆ.

(೧) ಪಂಚಜ್ಞಾನೇಂದ್ರಿಯಗಳು, ಮತ್ತು ನಿಶ್ಚಯರೂಪ ಅಂತಃ…



…ರಣವೃತ್ತಿ ಬುದ್ಧಿಗೆ ವಿಜ್ಞಾನಮಯಕೋಶವೆನ್ನುತ್ತಾರೆ.

(೨) ಪಂಚಜ್ಞಾನೇಂದ್ರಿಯಗಳು, ಮತ್ತು ಸಂಕಲ್ಪವಿಕಲ್ಪ ಅಂತಃ …ರಣವೃತ್ತಿ ಮನಕ್ಕೆ ಮನೋಮಯಕೋಶವೆನ್ನುತ್ತಾರೆ.

(೩) ಪಂಚಪ್ರಾಣ, ಮತ್ತು ಪಂಚಕರ್ಮೇಂದ್ರಿಯಗಳಿಗೆ ಪ್ರಾಣಮಯ …ಕೋಶವೆನ್ನುತ್ತಾರೆ, ೫. ಸ್ಥೂಲಶರೀರಕ್ಕೆ ಅನ್ನಮಯಕೋಶವೆನ್ನುತ್ತಾರೆ.

ಈ ಪ್ರಕಾರದಿಂದ ದೇಹತ್ರಯಗಳಲ್ಲಿಯೇ ಪಂಚಕೋಶಗಳಿರುವವು.

೧

೧. ಈಶ್ವರನ ಶರೀರದಲ್ಲಿ ಈಶ್ವರನ ಕೋಶವದೆ.

೨. ಜೀವಶರೀರದಲ್ಲಿ ಜೀವನ ಕೋಶವದೆ.

ಕೋಶವೆಂದರೆ ಖಡ್ಗದ ಮೇಲಿನ ವರೆ. ಈ ಖಡ್ಗದ ವರೆಯು ಖಡ್ಗ …ವನ್ನು ಆಚ್ಛಾದಿಸುವಂತೆ ಪಂಚಕೋಶಗಳು ಆತ್ಮನ ಸ್ವರೂಪವನ್ನು ಆಚ್ಛಾ…ದನ ಮಾಡಿರುತ್ತವೆ. ಈ ಕಾರಣದಿಂದ ಅನ್ನಮಯ ಮೊದಲಾದ ಕೋಶ …ವೆಂದು ಅನ್ನುತ್ತಾರೆ.

ಅನೇಕ ಮಂದಮತಿಗಳಾದ ಪುರುಷರು ಪಂಚಕೋಶಗಳಲ್ಲಿ ಯಾವ ಅನಾತ್ಮ ಪಧಾರ್ಥವಿರುವದೋ; ಅವುಗಳಲ್ಲಿ ಯಾವದಾವದೊಂದಕ್ಕೆ ಆತ್ಮ …ವೆಂದು ತಿಳಿದು, ಮುಖ್ಯ ಸಾಕ್ಷೀ ಆತ್ಮಸ್ವರೂಪದಿಂದ ವಿಮುಖರಾಗಿರು…ವರು. ಈ ಕಾರಣದಿಂದ ಅನ್ನಮಯಾದಿ ಆತ್ಮಸ್ವರೂಪಕ್ಕೆ ಆಚ್ಛಾದನ ಮಾಡಿರುತ್ತದೆ.

ಟಿಪ್ಪಣಿ. [೧] ಸಮಷ್ಟಿ ಅಜ್ಞಾನರೂಪ ಮಾಯೆಯು ಈಶ್ವರನ ಕಾರಣಶರೀರವದೆ. ಇದು ಈಶ್ವರನ ಆನಂದಮಯ ಕೋಶವದೆ.

(೨-೪) ಜೀವನಗಳ ಸೂಕ್ಷ್ಮಶರೀರದ ಸಮಷ್ಟಿರೂಪ ಹಿರಣ್ಯಗರ್ಭ ಈಶ್ವರನ ಸೂಕ್ಷ್ಮಶರೀರವದೆ ಇದರಲ್ಲಿ ೧. ವಿಜ್ಞಾನಮಯ, ೨. ಮನೋಮಯ, ೩. ಪ್ರಾಣಮಯರೂಪ, ಈ ಮೂರು ಈಶ್ವರನ ಕೋಶಗಳಾಗಿವೆ. ಇವುಗಳಲ್ಲಿ ೧. ದಿಕ್ಪಾಲವಾಯು, ಸೂರ್ಯ ವರುಣ, ಮತ್ತು ಅಶ್ವಿನೀ ಕುಮಾರ ಎಂಬ ಈ ಐವರು ಈಶ್ವರನ ಜ್ಞಾನೇಂದ್ರಿಯಗಳು. ಮತ್ತು ಸಮಷ್ಟಿಬುದ್ಧಿಮಯ ಮಹತ್ವರೂಪ ಅಥವಾ ಸರ್ವಬುದ್ಧಿಗಳ ಅಭಿಮಾನಿ ಬ್ರಹ್ಮರೂಪ ಈಶ್ವರನ ಬುದ್ಧಿ ಇವು ಕೂಡಿ ವಿಜ್ಞಾನಮಯವಾದ ಕೋಶ ವದೆ.

೨. ಉಕ್ತಶ್ರೋತ್ರಾದಿಗಳ ಅಧಿಷ್ಠಾನ ದೇವತೆಗಳು ಐದು, ಈಶ್ವರನ ಜ್ಞಾನ ಇಂದ್ರಿಯ ಮತ್ತು ಸಮಷ್ಟಿ ಮನರೂಪ ಅಹಂಕಾರ ಮಯ ಅಥವಾ ಸರ್ವ ಮನಸ್ಸಿನ ಅಭಿಮಾನೀ ಚಂದ್ರಮಯು, ಈಶ್ವರನ ಮನ, ಇವು ಕೂಡಿ, ಈಶ್ವರನ ಮನೋಮಯ ಕೋಶವದೆ,

೩, ಅಗ್ನಿ ಇಂದ್ರ ಉಪೇಂದ್ರ, ಪ್ರಜಾಪತಿ, ಮತ್ತು ಮೃತ್ಯು [ಯಮ] ... ದೂ ಈಶ್ವರನ ಕರ್ಮೇಂದ್ರಿಯ ಮತ್ತು ಸಮಷ್ಟಿಪ್ರಾಣ ಅಥವಾ ... ವಿನ ಅಭಿಮಾನೀ ದೇವತಾ ರೂಪ ಈಶ್ವರನಪ್ರಾಣ ಇವು ಕೂಡಿ ಈ... ಪ್ರಾಣಮಯ ಕೋಶವದೆ.

೪. ಸಮಷ್ಟಿ ಸ್ಥೂಲದೃಷ್ಟಿರೂಪವು ವಿರಾಟ್ ಈಶ್ವರನ ಸ್ಥೂಲ ಶರೀ... ಇದು ಈಶ್ವರನ ಅನ್ನಮಯ ಕೋಶವದೆ.

ಜೀವ ಶರೀರದಲ್ಲಿ ಜೀವದ ಕೋಶವದೆ. ಈ ಕೋಶಾಕಾರವು ಕ್ರಿ... ಕೀಟಕ ರಚಿತ ಗೃಹರೂಪ ಕೋಶದಂತೆ ಜೀವನ ದೃಷ್ಟಿಯಿಂದ ಅ... ರೂಪ ಪ್ರತ್ಯಗಾತ್ಮನ ಆಚ್ಛಾದಕವದೆ. ಇದರಂತೆ ಈಶ್ವರನ ಶರೀ... ಈಶ್ವರನ ಕೋಶವದೆ ಇದು ಈಶ್ವರನ ದೃಷ್ಟಿಯಿಂದ ಅವನ ... ಬ್ರಹ್ಮದ ಆಚ್ಛಾದಕವಲ್ಲ, ಆದರೆ ಜೀವ ದೃಷ್ಟಿಯಿಂದ ಬ್ರಹ್ಮದ ಆಚ್ಛಾದ... ಕವದೆ, ಈ ಕಾರಣದಿಂದ ಜೀವನಿಗೆ ವ್ಯಷ್ಟಿಪಂಚಕೋಶಗಳಿಂದ ಹೇಗೆ ಪ್ರತ್ಯ... ಗಾತ್ಮದ ವಿವೇಚನ ಕರ್ತವ್ಯವದೆಯೋ, ಹಾಗೆ ಸಮಷ್ಟಿ ಪಂಚಕೋಶಗ... ಳಿಂದ ಬ್ರಹ್ಮದ ವಿವೇಚನವು ಸಹ ಜೀವನಿಗೆ ಕರ್ತವ್ಯವದೆ. ಈಶ್ವ... ಆವರಣದ ಅಭಾವದಿಂಥ ನಿತ್ಯ ಮುಕ್ತನಾಗಬೇಕೆಂಬ ಕರ್ತವ್ಯವು ... ಶ್ತಾದರೂ ಇರುವದಿಲ್ಲ.

॥೨೬೧॥ ವಿರೋಚನ ಸಿದ್ಧಾಂತ (ಅನ್ನಮಯಕೋಶ ಆತ್ಮ...

ಎಷ್ಟೋಜನ ಪಾಮರರು ವಿರೋಚನ ಮತಾನುಸಾರವಾಗಿ ಸ್ಥೂ... ಶರೀರರೂಪ ಅನ್ನಮಯ ಕೋಶಕ್ಕೆ ಆತ್ಮಾ ಅನುತ್ತಾರೆ. ಮತ್ತು ... ಕ್ತಿಯನ್ನೂ ಹೇಳುತ್ತಾರೆ.

೧. ಯಾವದರಲ್ಲಿ ಅಹಂಬುದ್ಧಿಯುಂಟಾಗುವದೋ, ಅದು ಆತ್ಮಾ ಅದೆ. ಈ ಅಹಂಬುದ್ಧಿಯು ಸ್ಥೂಲ ಶರೀರದಲ್ಲಿ ಇರುವದು.

(೧) "ನಾನು ಮನುಷ್ಯನಿದ್ದೇನೆ" "ನಾನು ಬ್ರಾಹ್ಮಣ ನಿದ್ದೇನೆ" ಎಂಬ ಪ್ರತೀತಿಯು ಸರ್ವರಿಗೂ ಇರುವದು.

(೨) ಮನುಷ್ಯತ್ವ, ಮತ್ತು ಬ್ರಾಹ್ಮಣತ್ವಗಳು ಸ್ಥೂಲ ಶರೀರದ... ಲ್ಲಿಯೇ ಅವೆ.

ಈ ರೀತಿಯಿಂದ ಸ್ಥೂಲಶರೀರವು ಅಹಂ ಬುದ್ಧಿಯ ವಿಷಯವಾಗು... ವದರಿಂದ ಆತ್ಮಾ ಅದೆ.

೨. ಅಥವಾ ಯಾವದರಲ್ಲಿ ಮುಖ್ಯ ಪ್ರೀತಿಯುಂಟಾಗುವದೋ, ಅದು ಆತ್ಮಾ ಅದೆ. (೧) ಸ್ತ್ರೀ, ಪುತ್ರ, ಧನ, ಪಶು ಮೊದಲಾದವುಗಳು ಸ್ಥೂಲ ಶರೀರದ ಉಪಕಾರಿಗಳಾದುದರಿಂದ ಅವುಗಳಲ್ಲಿ ಪ್ರೀತಿಯುಂಟಾಗುತ್ತೆ.



(೨) ಸ್ಥೂಲ ಶರೀರಕ್ಕೆ ಉಪಕಾರಿಗಳಾಗದೆ ಇದ್ದವುಗಳಲ್ಲಿ ಪ್ರೀತಿ ...ಯುಂಟಾಗುವದಿಲ್ಲ.

ಯಾವದರ ನಿಮಿತ್ತದಿಂದ ಅನ್ಯಪದಾರ್ಥಗಳಲ್ಲಿ ಪ್ರೀತಿಯುಂಟಾ...ಗುವದೋ ಇಂಥ ಮುಖ್ಯ ಪ್ರೀತಿಯು ಸ್ಥೂಲ ಶರೀರದಲ್ಲಿಯೇ ಅದೆ. ಈ ...ಕಾರಣದಿಂದ ಸ್ಥೂಲಶರೀರವೇ ಆತ್ಮಾ ಅದೆ.

ಸ್ಥೂಲಶರೀರಕ್ಕೆ ವಸ್ತ್ರ, ಭೂಷಣ, ಅಂಜನ, ಮಜ್ಜನ, ನಾನಾವಿಧ ...ಭೋಜನ, ಶೃಂಗಾರ, ಪೋಷಣ, ಮೊದಲಾದವುಗಳೇ ಪರಮ ಪುರುಷಾರ್ಥ ...ಗಳಾಗಿವೆ.

೧

ಇದು ಅಸುರ ಸ್ವಾಮಿ ವಿರೋಚನನ ಸಿದ್ಧಾಂತವದೆ.

...ಣೆ-೧. "ನಾನು ನೋಡುವೆನು,, "ಕೇಳುವೆನು,, ಈ ರೀತಿಯಿಂದ ಇಂದ್ರಿಯ ಗಳಲ್ಲಿ ಸಹ ಅಹಂಬುದ್ಧಿಯ ನೋಡುವಿಕೆಯಿಂದ ಮತ್ತು ಸ್ಥೂಲ ದೇಹದಿಂದ ಇಂದ್ರಿಯಗಳ ವಿಷಯದಲ್ಲಿ ಅಧಿಕ ಪ್ರೀತಿಯ ನೋಡುವಿಕೆಯಿಂದ ಸ್ಥೂಲ ದೇಹದಲ್ಲಿ ಅಲಂಬುದ್ಧಿ ಮತ್ತು ಮುಖ್ಯಪ್ರೀತಿಯ ವ್ಯಭಿಚಾರದಿಂದ, "ನನ್ನ ದೇಹವದೆ,, ಮತ್ತು "ನನ್ನ ಧಿಕ್ಕಾರವಿರಲಿ,, ಈ ರೀತಿಯಿಂದ ಸ್ಥೂಲ ದೇಹಕ್ಕೆ ವಿಪರೀತ ಮಮಕಾರಬುದ್ಧಿ, ಮತ್ತು ದ್ವೇಷದ ವಿಷಯಗಳು ಉಂಟಾಗುವದರಿಂದ ಈ ಸ್ಥೂಲ ದೇಹವು ಆತ್ಮಾ ಅಲ್ಲ.

ಈ ದೇಹಾತ್ಮವಾದಿಗಳ ಮತಖಂಡನವನ್ನು ವಿಶೇಷವಾಗಿ ಶ್ರೀ ಪೀತಾಂಬರಜಿಯವರು, ಪಂಚದಶಿಯ ಚಿತ್ರದೀಪಿಕೆಯ ೬೧ನೇ ಶ್ಲೋಕದ ಟಿಪ್ಪಣಿಯಲ್ಲಿ ಮಾಡಿರುವರು.

...೬೨॥ ಇಂದ್ರಿಯಗಳು ಆತ್ಮವೆಂದು ವಾದಿಸುವವರ ಮತ ॥

(ಇಂದ್ರಿಯಗಳೇ ಆತ್ಮವು.)

...ರೆ ಕೆಲವರು ಹೀಗೆ ಹೇಳುತ್ತಾರೆ. ಸ್ಥೂಲಶರೀರವು ಆತ್ಮಾ ಅಲ್ಲ. ಆದರೆ

೧. ಸ್ಥೂಲ ಶರೀರದಲ್ಲಿ ಯಾವದರ ಇರುವಿಕೆಯಿಂದ ಜೀವನ ವ್ಯವ...ಹಾರ ಉಂಟಾಗುವದೋ, ಮತ್ತು ಯಾವದು ಇಲ್ಲದಾಗುವದರಿಂದ ಮರಣ ...ವ್ಯವಹಾರ ವುಂಟಾಗುವದೋ ಇಂಥ ಆತ್ಮವು ಸ್ಥೂಲ ಶರೀರದಿಂದ ಭಿನ್ನ ... ಜೀವನ, ಮರಣಗಳು, ಇಂದ್ರಿಯಗಳು ಅಧೀನ ಅವೆ, ಎಷ್ಟು ಕಾಲ ...ಯಂತ ಶರೀರದಲ್ಲಿ ಇಂದ್ರಿಯಗಳಿರುವವೋ, ಅಷ್ಟು ಕಾಲ ಜೀವವಿರು... ಮತ್ತು ಯಾವ ಇಂದ್ರಿಯಗಳೂ ಇಲ್ಲದಂತಾಗಲು ಆಗ ಮರಣವು ...ವದು.

೨. "ನಾನು ನೋಡುವೆನು, "ನಾನು ಕೇಳುವೆನು" ನಾನು ... ವೆನು." ಈ ರೀತಿಯಾಗಿ ಅಹಂಬುದ್ಧಿಯು, ಇಂದ್ರಿಯಗಳಲ್ಲಿ ...[೧] ಉಂಟಾಗುವದು. ಈ ಕಾರಣದಿಂದ ಇಂದ್ರಿಯಗಳು ಆತ್ಮಾ ಅಲ್ಲ.

ಟಿಪ್ಪಣಿ. (೧) ೧ ಇಂದ್ರಿಯಗಳ ಅಭಾವದಿಂದ ಬಧಿರ, ಅಂಧ, ಮೂಕ, ... ರೂಪವಾಗಿ ಶರೀರವು ಬದುಕಿರುವದು. ಈ ಕಾರಣದಿಂದ ಜೀವನ... ಗಳು ಇಂದ್ರಿಯಗಳ ಅಧೀನವಲ್ಲ.

೨. "ನಾನು ಕ್ಷುಧೆಯುಳ್ಳವನಾಗಿದ್ದೇನೆ", "ನಾನು ನೀರಡಿಕೆಯುಳ್ಳವನಾಗಿ... ಹೀಗೆ ಕ್ಷುಧಾ ತೃಷಾರೂಪ ಧರ್ಮವುಳ್ಳ ಪ್ರಾಣದಲ್ಲಿ ಸಹ ಅಹಂಬುದ್ಧಿ... ಟಾಗುವದರಿಂದ;—

೩. "ನನ್ನ ಕಣ್ಣು, ನನ್ನ ವಾಣಿ, ಹೀಗೆ ಇಂದ್ರಿಯಗಳಿಗೆ ಮಂದಬುದ್ಧಿಯು... ವುಂಟಾಗುವದರಿಂದ ಇಂದ್ರಿಯಗತ ಅಹಂ ಬುದ್ಧಿಯ ವ್ಯಭಿಚಾರವ... ಈ ಕಾರಣದಿಂದ ಇಂದ್ರಿಯಗಳು ಆತ್ಮಾ ಅಲ್ಲ.

ಇಂದ್ರಿಯ ಆತ್ಮವಾದಿಗಳ ಮತದ ವಿಶೇಷ ಖಂಡನವನ್ನು ಶ್ರೀ... ಪೀತಾಂಬರಜಿಯವರು ಪಂಚದಶಿಯ ಚಿತ್ರದೀಪಿಕೆಯ ೭೫ನೇ ಶ್ಲೋ... ಟಿಪ್ಪಣಿಯಲ್ಲಿ ವಿಶೇಷವಾಗಿ ವಿವರಿಸಿರುವರು.

## ||೨೬೩|| ಹಿರಣ್ಯ ಗರ್ಭೋಪಾಸಕರ ಮತವು.

## (ಪ್ರಾಣವೇ ಆತ್ಮಾ)

ಹಿರಣ್ಯ ಗರ್ಭೋಪಾಸಕರು ಪ್ರಾಣವೇ ಆತ್ಮವೆಂದು ಹೇಳು... ಅವರು ಹೇಳುವ ಯುಕ್ತಿವಾದವೇನೆಂದರೆ:—

೧. ಮರಣ ಸಮಯದಲ್ಲಿ ಯಾವಾಗ ಮೂರ್ಛೆಯು ಬರು... ಆಗ ಆ ಜೀವನ ಸಂಬಂಧಿಗಳಾದ ಪುತ್ರ, ಮೊದಲಾದವರು ಪ್ರಾಣ... ರುವ ಪರಿಯಂತ ಜೀವವಿರುವದೆಂದು ಅನ್ನುತ್ತಾರೆ. ಪ್ರಾಣವು ... ಗಲು ಮರಣವೆಂದು ತಿಳಿಯುವರು.

೨. ಅಥವಾ ಶರೀರದಲ್ಲಿ ನೇತ್ರೇಂದ್ರಿಯವಿಲ್ಲದಿರಲು, ಅಂಧನು... ಇರುವದು; ಶ್ರೋತ್ರೇಂದ್ರಿಯವಿಲ್ಲದಿರಲು, ಬಧಿರವೆನಿಸುವದು... ದ್ರಿಯವಿಲ್ಲದಿದ್ದರೆ ಮೂಕವೆನಿಸುವದು. ಹೀಗೆ ಯಾವ ಇಂದ್ರಿಯ... ರುವದೋ, ಅದರ ವ್ಯಾಪಾರದ ಹೊರ್ತು ಶರೀರವು ಸ್ಥಿತವಾಗಿ... ಆದರೆ ಪ್ರಾಣವಿಲ್ಲದ್ದಾದ ಕ್ಷಣದಲ್ಲಿಯೇ ಸ್ಮಶಾನದಂತೆ ಅಮಂ... ಭಯಂಕರವಾಗಿ ಬೀಳುವದು.



೩. "ನೇತ್ರಸ್ವರೂಪನಾದ ನಾನು ನೋಡುತ್ತೇನೆ" "ಶ್ರವಣ ಸ್ವರೂಪನಾದ ನಾನು ಕೇಳುತ್ತೇನೆ" ಎಂದು ಹೇಳೋಣದರಿಂದ ಆತ್ಮವು ಪ್ರತೀತವಾಗುವುದಿಲ್ಲ. "ನಾನು ನೋಡುವೆನು" "ನಾನು ಕೇಳುವೆನು" ಎಂಬ ಪ್ರತೀತಿಯಿರುವುದರಿಂದ ಆತ್ಮವು ಯಾವಾಗಲೂ ಇಂದ್ರಿಯಗಳಿಂದ ಬೇರೆಯಾಗಿಯೇ ಇರುವುದೆಂದು ಸಿದ್ಧವಾಗುವುದು. ಆದ್ದರಿಂದ "ನೇತ್ರವುಳ್ಳ ನಾನು ನೋಡುತ್ತೇನೆ" "ಶ್ರೋತ್ರವುಳ್ಳ ನಾನು ಕೇಳುತ್ತೇನೆ" ಎಂಬ ಪ್ರತೀತಿಯುಂಟಾಗುವುದು. (ಅಂದರೆ ಇಂದ್ರಿಯಗಳೇ ಆತ್ಮವೆಂದು ವಾದಿಸುವ ಮತವು ಸಿದ್ಧವಲ್ಲ. ಎಂಬ ಭಾವವಿರುವುದು.)

೪. ಸುಷುಪ್ತ್ಯವಸ್ಥೆಯಲ್ಲಿ ಇಂದ್ರಿಯಗಳ ಕರಣ ವ್ಯಾಪಾರವು ಅಭಾವವಾಗುವುದು. "ನಾನು ನೋಡುತ್ತೇನೆ" "ನಾನು ಕೇಳುತ್ತೇನೆ" ಎಂಬ ಇಂದ್ರಿಯ ಸಂಬಂಧವಾದ ವ್ಯವಹಾರವು ದೇಹದಲ್ಲಿ ಪ್ರಾಣವಿರುವವರೆವಿಗೂ ಪ್ರತೀತವಾಗುವುದು. ಆದ್ದರಿಂದ ಇಂದ್ರಿಯಗಳು ಪ್ರಾಣಾಧೀನವಾದವುಗಳೆಂದು ಸಿದ್ಧವಾಯಿತು. ಇದರಿಂದ ಜೀವನ ಮರಣಗಳೂ ಸಹ ಪ್ರಾಣಾಧೀನವಾದುವೆಂದು ಹೇಳಿದಂತಾಯಿತು. ಆದ್ದರಿಂದ ಪ್ರಾಣವೇ ಆತ್ಮಾವಾಗಿರುವುದು.

ಟಿಪ್ಪಣಿ—೧. ಪ್ರಾಣವು ಆತ್ಮಾ ಅಲ್ಲವೆಂಬ ವಿಷಯವು ಪಂಚದಶಿಯ ಚಿತ್ರದೀಪಿಕೆಯ ೭೭ನೇ ಶ್ಲೋಕದ ಟಿಪ್ಪಣಿಯಲ್ಲಿ ಸವಿಸ್ತರವಾಗಿ ಇರುವದು.

## ||೨೬೪|| ಮನವೇ ಆತ್ಮವೆಂದು ಪ್ರತಿಪಾದಿಸುವವರ ಮತವು.

## (ಮನವೇ ಆತ್ಮವು.)

ಬೇರೆ ಕೆಲವರು ಹೀಗೆ ಹೇಳುತ್ತಾರೆ:—

೧. ಪ್ರಾಣವು ಜಡವದೆ, ಇದರಿಂದ ಘಟದಂತೆ ಅನಾತ್ಮಾ ಅದೆ.

೨. ಬಂಧ ಮೋಕ್ಷಗಳು ಮನಸ್ಸಿನ ಆಧೀನವಾಗಿವೆ. (೧) ವಿಷಯಗಳಲ್ಲಿ ಅಸಕ್ತವಾದ ಮನಸ್ಸು ಬಂಧನಕ್ಕೆ ಕಾರಣವಾಗಿರುವದು (೨) ವಿಷಯವಾಸನಾರಹಿತವಾದ ಮನಸ್ಸು ಮೋಕ್ಷಕ್ಕೆ ಹೇತುವಾಗಿರುವದು.

೩. ಮನಸ್ಸಿನ ಸಂಬಂಧದಿಂದಲೇ ಇಂದ್ರಿಯಗಳು ಜ್ಞಾನಕ್ಕೆ ಹೇತುವಾಗಿವೆ. ಮನಸಂಬಂಧದ ಹೊರ್ತು ಇಂದ್ರಿಯಗಳಿಂದ ಜ್ಞಾನವಾಗುವದಿಲ್ಲ. ಈ ಕಾರಣದಿಂದ ಸರ್ವ ವ್ಯವಹಾರಕ್ಕೂ ಮನಸ್ಸೇ ಕಾರಣವಾಗಿರು...[೧] ವ ಇದೇ ಆತ್ಮಾ ಅದೆ.

ಟಿಪ್ಪಣಿ—೧ ಮನಸ್ಸು ಆತ್ಮವಲ್ಲ ಎಂಬ ವಿಷಯವು ಪಂಚದಶಿಯ ಚಿತ್ರದೀಪಿಕೆಯ ೬೮ನೇ ಶ್ಲೋಕದ ಟಿಪ್ಪಣಿಯಲ್ಲಿ ಸವಿಸ್ತಾರದಿಂದ ಇರುವದು

### ॥೨೬೫॥ ವಿಜ್ಞಾನವಾದಿಗಳಾದ ಬೌದ್ಧರ ಮತವು
### (ಬುದ್ಧಿಯೇ ಆತ್ಮವು.)

ಕ್ಷಣಿಕ ವಿಜ್ಞಾನ ವಾದಿಗಳಾದ ಬೌದ್ಧರು ಹೇಳುವದೇನಂದರೆ:— ಬುದ್ಧಿಯು ಆಕಾರವಂತೆಯೇ ಮನವಾಗುವದರಿಂದ ಮನಸ್ಸಿನ ವ್ಯಾಪಾರವು ಬುದ್ಧಿಯ ಅಧೀನವಾಗಿರುವದು. ಇದರಿಂದ ಕ್ಷಣಿಕ ವಿಜ್ಞಾನರೂಪ ಬುದ್ಧಿಯೇ ಆತ್ಮಾ. ಮನಸ್ಸು ಅಲ್ಲ, ಇದರಲ್ಲಿ ಅವರ ಅಭಿಪ್ರಾಯವೇನಂದರೆ, (೧) ಸಂಪೂರ್ಣ ಪದಾರ್ಥವು ವಿಜ್ಞಾನಾಕಾರವೇ ಇರುವದು. (೨) ಈ ವಿಜ್ಞಾನವು ಪ್ರಕಾಶರೂಪವದೆ ಮತ್ತು (೩) ಕ್ಷಣ ಕ್ಷಣದಲ್ಲಿಯೂ ವಿಜ್ಞಾನದ ಉತ್ಪತ್ತಿ ನಾಶವಾಗುವದು.

ಪೂರ್ವ ವಿಜ್ಞಾನಕ್ಕೆ ಸಮಾನವಾದ ಅನ್ಯ ವಿಜ್ಞಾನದ ಉತ್ಪತ್ತಿಯಾದರೆ, ಪೂರ್ವ ವಿಜ್ಞಾನವು ನಾಶಹೊಂದುವದು. ಇದರಂತೆ ತೃತೀಯ ವಿಜ್ಞಾನದ ಉತ್ಪತ್ತಿಯು ಮತ್ತು ದ್ವಿತೀಯ ವಿಜ್ಞಾನದ ನಾಶವು, ಚತುರ್ಥ ವಿಜ್ಞಾನೋತ್ಪತ್ತಿಯು, ತೃತೀಯ ವಿಜ್ಞಾನ ನಾಶವೂ ಆಗುವದು. ಈರೀತಿಯಿಂದ ನದಿಯ ಪ್ರವಾಹದಂತೆ ವಿಜ್ಞಾನದ ಪ್ರವಾಹವು ಇರುವದು. ಈ ವಿಜ್ಞಾನದ ಪ್ರವಾಹವು ಎರಡು ವಿಧವಾಗಿರುವದು (೧) ಆಲಯ ವಿಜ್ಞಾನ ಪ್ರವಾಹ, (೨) ಪ್ರವೃತ್ತಿ ವಿಜ್ಞಾನಪ್ರವಾಹ.

(೧) "ಅಹಂ ಅಹಂ" ಎಂಬ ವಿಜ್ಞಾನ ಪ್ರವಾಹಕ್ಕೆ ಆಲಯ ವಿಜ್ಞಾನಧಾರಾ ಅನ್ನುತ್ತಾರೆ. ಇದಕ್ಕೇ ಬುದ್ಧಿಯೆಂದೂ ಅನ್ನುವರು,

(೨) "ಇದು ಘಟವದೆ." "ಇದು ಶರೀರವದೆ" ಎಂಬ ವಿಜ್ಞಾನ ಪ್ರವಾಹಕ್ಕೆ ಪ್ರವೃತ್ತಿ ವಿಜ್ಞಾನಧಾರಾ ಅನ್ನುವರು.

ಆಲಯ ವಿಜ್ಞಾನಧಾರಾದಿಂದ ಪ್ರವೃತ್ತಿ ವಿಜ್ಞಾನಧಾರೆಯ ಉತ್ಪತ್ತಿಯಾಗುವದು. ಮನಸ್ಸಿನ ಸ್ವರೂಪವು ಸಹ ಪ್ರವೃತ್ತಿ ವಿಜ್ಞಾನ ಧಾರೆಯಲ್ಲಿ ಅದೆ. ಇದರಿಂದ ಆಲಯ ವಿಜ್ಞಾನ ಧಾರಾರೂಪವು ಬುದ್ಧಿಯ ಕಾರ್ಯವದೆ. ಈ ಬುದ್ಧಿಯೇ ಆತ್ಮಾ.

ಆಲಯ ವಿಜ್ಞಾನರೂಪ ಧಾರೆಯಲ್ಲಿ ಪ್ರವೃತ್ತಿ ವಿಜ್ಞಾನ ಧಾರೆಯ ಬಾಧಚಿಂತನೆಯಿಂದ ನಿರ್ವಿಶೇಷ ಕ್ಷಣಿಕ ವಿಜ್ಞಾನ ಧಾರೆಯ ಸ್ಥಿತಿಯು ಇವರ ಮತದಲ್ಲಿ ಮೋಕ್ಷವದೆ.



ಈ ರೀತಿಯಿಂದ ವಿಜ್ಞಾನವಾದಿಗಳು ಬುದ್ಧಿಗೇ[೧] ಕ್ಷಣಿಕ ರೂಪವು, ಮತ್ತು ಸ್ವಯಂಪ್ರಕಾಶ ರೂಪವನ್ನು ಕಲ್ಪನೆಮಾಡಿ ಆತ್ಮಾ ಎಂದು ಹೇಳುತ್ತಾರೆ.

ಟಿಪ್ಪಣಿ—೧. ಕ್ಷಣಿಕ ವಿಜ್ಞಾನರೂಪ ಬುದ್ಧಿಯೇ ಆತ್ಮಾ- ಹೀಗೆ ತಿಳಿಯು ತಕ್ಕ ಕ್ಷಣಿಕ ವಿಜ್ಞಾನವಾದಿಗಳ ಮತದ ಪ್ರತಿಪಾದನ ಮತ್ತು ಖಂಡನವು ಚಿತ್ರದೀಪಿಕೆಯ ೬೪ನೇ ಶ್ಲೋಕದ ಟಿಪ್ಪಣಿಯಲ್ಲಿ ವಿಸ್ತಾರವಾಗಿ ಬರೆದಿರುವರು.

### ॥೨೬೬॥ ಭಟ್ಟಪಾದಾಚಾರ್ಯನ ಮತವು.
### (ಆನಂದಮಯ ಕೋಶವೇ ಆತ್ಮವು.)

ಪೂರ್ವಮೀಮಾಂಸಾ ವಾರ್ತಿಕಕಾರನಾದ ಭಟ್ಟಪಾದಾಚಾರ್ಯನು ಹೇಳುವದೇನಂದರೆ;—ವಿದ್ಯುಲ್ಲತೆಯಂತೆ ಆತ್ಮವು ಕ್ಷಣಿಕರೂಪವಾದದ್ದಲ್ಲ, ಆದರೆ ಸ್ಥಿರಸ್ವರೂಪ ಆತ್ಮವು (೧) ಅದು ಜಡಸ್ವರೂಪ ಮತ್ತು (೨) ಚೈತನ್ಯಸ್ವರೂಪವಾಗಿದೆ ಎಂದು ಅವನ ಅಭಿಪ್ರಾಯ.

೧. ಸುಷುಪ್ತ್ಯವಸ್ಥೆಯಿಂದ ಜಾಗ್ರದವಸ್ಥೆಗೆ ಬಂದ ಪುರುಷನು ನಾನು ಜಡವಾಗಿ ಮಲಗಿದ್ದೆನು ಎನ್ನುವುದರಿಂದ ಆತ್ಮಾ ಜಡರೂಪವದೆ.

೨. ಜಾಗ್ರತ್ತಿನಲ್ಲಿ ಸ್ಮೃತಿಯುಂಟಾಗುತ್ತದೆ. ಆದರೆ ಅಜ್ಞಾತ ವಿಷಯದ ಸ್ಮೃತಿಯಾಗುವುದಿಲ್ಲ. ಅದರಿಂದ ಸುಷುಪ್ತಿಯಲ್ಲಿ ಆತ್ಮಸ್ವರೂಪದಿಂದ ಭಿನ್ನ, ಅನ್ಯಜ್ಞಾನದ ಸಾಧನವು ಇಲ್ಲ. ಇದರಿಂದ ಸ್ಮೃತಿಯ ಹೇತುವು ಸುಷುಪ್ತಿಯಲ್ಲಿ ಜ್ಞಾನವದೆ. ಅದೇ ಆತ್ಮದ ಸ್ವರೂಪವೂ ಅದೆ.

ಈ ರೀತಿಯಿಂದ ಖದ್ಯೋತವತ್ ಆತ್ಮಾಪ್ರಕಾಶ ಮತ್ತು ಅಪ್ರಕಾಶ ರೂಪವದೆ.

೧. ಜ್ಞಾನರೂಪವಾಗಿರುವುದರಿಂದ ಪ್ರಕಾಶರೂಪವದೆ.

೨. ಜಡವಿರುವುದರಿಂದ ಅಪ್ರಕಾಶರೂಪವದೆ.

ಈ ಪ್ರಕಾಶರೂಪ ಮತ್ತು ಅಪ್ರಕಾಶರೂಪವು ಆನಂದಮಯ ಕೋಶವದೆ. ಕಾರಣವೇನಂದರೆ ಸುಷುಪ್ತಿಯಲ್ಲಿ ಚೇತನದ ಆಭಾಸಸಹಿತ ಯಾವ ಅಜ್ಞಾನವಿರುವದೋ ಅದಕ್ಕೆ ಆನಂದಮಯಕೋಶವೆನ್ನುತ್ತಾರೆ. ಅಲ್ಲಿ ಆಭಾಸವು ಪ್ರಕಾಶರೂಪವಾಗಿ, ಮತ್ತು ಅಜ್ಞಾನವು ಅಪ್ರಕಾಶರೂಪವಾಗಿದೆ. ಇದರಿಂದ ಭಟ್ಟಪಾದರ ಮತದಲ್ಲಿ[೧] ಆನಂದಮಯ ಕೋಶವೇ ಆತ್ಮಾ ಅದೆ.

ಟಿಪ್ಪಣೆ—೧. ಆತ್ಮಕ್ಕೆ ಜಡ ಮತ್ತು ಚೇತನ ಎಂಬ ಉಭಯರೂಪಗಳೆಂದು ಯುಕ್ತ ಭಟ್ಟಮತದ ಖಂಡನವನ್ನು ಚಿತ್ರದೀಪಿಕೆಯ ೯ಲನೇ ಶ್ಲೋ ಟಿಪ್ಪಣಿಯಲ್ಲಿ ಶ್ರೀ ಪೀತಾಂಬರಜಿಯವರು ಉಲ್ಲೇಖಿಸಿದ್ದಾರೆ

## ॥೨೬೭॥ ಮಾಧ್ಯಮಿಕ ಬೌದ್ಧರ ಮತವು.

### (ಆನಂದ ಮಯಕೋಶವೇ ಆತ್ಮಾ.)

ಶೂನ್ಯವಾದಿಗಳಾದ ಬೌದ್ಧರು ಹೇಳುವದೇನಂದರೆ;—"ಆತ್ಮಾ ರಂಶವದೆ. ಇದರಿಂದ ಒಂದು ಆತ್ಮಕ್ಕೆ ಪ್ರಕಾಶರೂಪ ಮತ್ತು ಅಪ್ರಕಾ ರೂಪವೆಂದು ಹೇಳುವದು ಸರಿಯಾದ್ದಲ್ಲ. ಮತ್ತು ಖದ್ಯೋತದ ಒ ಅಂಶವು ಪ್ರಕಾಶರೂಪವಾಗಿಯೂ ಎರಡನೇ ಅಂಶವು ಅಪ್ರಕಾಶರೂಪವಾ ಗಿಯೂ ಇರುವುದು. ಇದರಂತೆ ಅಂಶರಹಿತ ಆತ್ಮ ವಿಷಯದಲ್ಲಿ ಉಭ ರೂಪವನ್ನು ಹೇಳುವದು ಅಸಂಗತವದೆ, ಇದರಿಂದ (೧) ಉಭಯ ಸಿದ್ಧಿಯು ಸಲುವಾಗಿ ಆತ್ಮಾ ಅಂಶಸಹಿತವೆಂದು ತಿಳಿಯಬೇಕಾದೀತು (೨) ಘಟಮೊದಲಾದ ಅಂಶವುಳ್ಳ ಪದಾರ್ಥಗಳು ಇರುವವು. ಇವು ಉತ್ಪ ತ್ತಿ ಮತ್ತು ನಾಶವುಳ್ಳವಳಾಗಿರುವವು. ಇದರಂತೆ ಆತ್ಮಾ ಸಹ ಉತ್ ಸಹಿತ ವುಳ್ಳದ್ದಾಗುವದರಿಂದ ಉತ್ಪನ್ನನಾಶವುಳ್ಳದ್ದೇ ಎಂದು ತಿಳಿ ಬೇಕಾಗುತ್ತದೆ.

೧. ಉತ್ಪತ್ತಿ ನಾಶವುಳ್ಳ ಪದಾರ್ಥಗಳು ಉತ್ಪತ್ತಿಯ ಪೂರ್ವದ ಮತ್ತು ನಾಶದನಂತರ ಅಸತ್ ಇರುವವು. ಯಾವವು ಆದ್ಯಂತದಲ್ಲಿ ಅಸತ್ ಇರುವವೋ ಅವು ಮಧ್ಯದಲ್ಲಿ ಸಹ, ಸತ್ ಆಗುವದಿಲ್ಲ. ಆದರೆ ಮಧ್ಯ ದಲ್ಲಿಯೂ ಸಹ ಅಸತ್ತೇ ಇರುವವೋ ಈ ಕಾರಣದಿಂದ ಆತ್ಮವು ಅಸತ್ ರೂಪವದೆ.

೨. ಇದರಂತೆ ಆತ್ಮದಿಂದ ಭಿನ್ನವಾಗಿದ ಸಂಪೂರ್ಣ ಪದಾರ್ಥಗಳು ಸಹ ಉತ್ಪತ್ತಿನಾಶವುಳ್ಳವುಗಳೇಇರುತ್ತವೆ. ಇದರಿಂದಅಸತ್‌ರೂಪವಾಗಿ

ಈ ರೀತಿಯಿಂದ ಆತ್ಮಾ ಮತ್ತು ಅನಾತ್ಮರೂಪ ಸಮಗ್ರವಸ್ತುಗಳು ಅಸತ್ ರೂಪವುಳ್ಳವುಗಳೇ ಆಗುವದರಿಂದ ಶೂನ್ಯವೇ ಪರಮತತ್ವ ಆ ಇದು ಶೂನ್ಯವಾದೀ ಮಾಧ್ಯಮಿಕ ಬೌದ್ಧರ ಮತವದೆ.

ಈ ಶೂನ್ಯವಾದಿಗಳು ಸಹ ಅಜ್ಞಾನರೂಪ ಆನಂದಮಯಕೋಶ ಪ್ರತಿಪಾದನ ಮಾಡುತ್ತಾರೆ. ಕಾರಣವೇನೆಂದರೆ, ಅಜ್ಞಾನವು ಮೂ ರೂಪಗಳಿಂದ ಪ್ರತೀತವಾಗುತ್ತದೆ.

೧. ಅದ್ವೈತಶಾಸ್ತ್ರ ಸಂಸ್ಕಾರರಹಿತ ಮೂಢನಾದವನಿಗೆ ಜಗತ್ ಪರಿಣಾಮಕ್ಕೆ ಪ್ರಾಪ್ತ ಅಜ್ಞಾನವು, ಸತ್ಯ ಪ್ರತೀತವಾಗುತ್ತದೆ,



೨. ಅದ್ವೈತ ಶಾಸ್ತ್ರದ ಅನುಸಾರ ಯುಕ್ತಿನಿಪುಣ ಪಂಡಿತನಿಗೆ ಅಸತ್ತುಗಳಿಂದ ವಿಲಕ್ಷಣ ಅನಿರ್ವಚನೀಯರೂಪ ಅಜ್ಞಾನ ಮತ್ತು ಕಾರ್ಯ ಜಗತ್ತು ಪ್ರತೀತವಾಗುತ್ತದೆ.

೩. ಜ್ಞಾನನಿಷ್ಠೆಗೆ ಪ್ರಾಪ್ತವಾದ ಜೀವನ್ಮುಕ್ತ ವಿದ್ವಾಂಸನಿಗೆ ಕಾ ಸಹಿತ ಅಜ್ಞಾನದ ತುಚ್ಛರೂಪವು ಪ್ರತೀತವಾಗುತ್ತದೆ.

ತುಚ್ಛ, ಅಸತ್, ಶೂನ್ಯ, ಈ ಮೂರೂ ಶಬ್ದಗಳು ಒಂದೇ ಅರ್ಥ ಹೇಳುವವು.

ಈ ರೀತಿಯಿಂದ ಜೀವನ್ಮುಕ್ತನಿಗೆ ಯಾವ ತುಚ್ಛರೂಪವು ಪ್ರತೀತ ಗುವದೋ, ಅದು ಅಜ್ಞಾನವು. ಇದರಲ್ಲಿ ಮೋಹಿತರಾದ ಶೂನ್ಯವಾದಿಗ೧ ಪರಮ ಪುರುಷಾರ್ಥವನ್ನು ತಿಳಿಯಲಾರರು; ಆದರೆ ತುಚ್ಛರೂಪ ಆನಂದಮಯಕೋಶಕ್ಕೇ ಆತ್ಮಾ ಅನ್ನುತ್ತಾರೆ.

ಟಿಪ್ಪಣಿ. ಶೂನ್ಯವಾದೀ ಮಾಧ್ಯಮಿಕರ ಮತದ ಖಂಡನವನ್ನು ಚಿತ್ರದೀಪಿ ೭೭ನೇ ಶ್ಲೋಕದ ಟಿಪ್ಪಣಿಯಲ್ಲಿ ಪೀತಾಂಬರಜೀಯವರು ಉಲ್ಲೇಖಿಸಿ ದ್ದಾರೆ.

## ॥೨೬೮॥ ಪ್ರಭಾಕರ ಮತ್ತು ನೈಯಾಯಿಕರ ಮತವು.

### (ಆನಂದಮಯ ಕೋಶವೇ ಆತ್ಮವು.)

ಪೂರ್ವಮೀಮಾಂಸೆಯ ಏಕದೇಶೀ ಪ್ರಭಾಕರ, ಮತ್ತು ನೈಯಾಯಿ ಕರು ಹೇಳುವದೇನೆಂದರೆ, ಆತ್ಮಾ ಶೂನ್ಯ ರೂಪವಲ್ಲ. ಏಕೆಂದರೆ:— ಆತ್ಮವು ಶೂನ್ಯರೂಪವೆಂದು ಯಾರು ತಿಳಿಯುವರೋ, ಅವರನ್ನು ಕುರಿತು ಮಾಡುವ ಪ್ರಶ್ನೆಯೇನೆಂದರೆ;—"ನಿಮ್ಮಿಂದ ಶೂನ್ಯರೂಪದ ಅನುಭವವು ಮಾಡಲ್ಪಟ್ಟಿರುವದೋ ! ಅಥವಾ ೨ ಇಲ್ಲವೋ !"

ಇದಕ್ಕೆ ಅವರು "ಶೂನ್ಯರೂಪದ ಅನುಭವವನ್ನು ಮಾಡಿರುವದಿಲ್ಲ" ಎಂದು ಉತ್ತರಕೊಟ್ಟರೆ ಶೂನ್ಯವಿಲ್ಲವೆಂದು ಸಿದ್ಧವಾಗುತ್ತದೆ. ಒಂದುವೇಳೆ ಅವರಿಂದ "ಶೂನ್ಯರೂಪದ ಅನುಭವವನ್ನು ಮಾಡಿದ್ದೇವೆ" ಎಂದು ಉತ್ತರ ಬಂದರೆ ಯಾವ ಆತ್ಮವು ಶೂನ್ಯರೂಪದ ಅನುಭವವನ್ನು ಮಾಡಿರುವದೋ ಆತ್ಮವು ಶೂನ್ಯದಿಂದ ವಿಲಕ್ಷಣವಾಗಿರುವದೆಂದು ಸಿದ್ಧವಾಗುತ್ತದೆ.

ಈ ರೀತಿಯಿಂದ ಶೂನ್ಯದಿಂದ ವಿಲಕ್ಷಣ ಆತ್ಮಾ ಅದೆ.

೧. ಇದರ ವಿಷಯದಲ್ಲಿ ಮನಸ್ಸಂಯೋಗದಿಂದ ಜ್ಞಾನವಾಗುತ್ತದೆ.

೨. ಆ ಜ್ಞಾನಗುಣದಿಂದ ಆತ್ಮಾ ಚೇತನವೆನ್ನುತ್ತಾರೆ.

೩. ಸ್ವರೂಪದಿಂದ ಆತ್ಮಾ ಜಡವದೆ.

೪. ಇದರಂತೆ ಸುಖ, ದುಃಖ, ಇಚ್ಛಾ ದ್ವೇಷ, ಪ್ರಯತ್ನ, ಅಧರ್ಮ ಮೊದಲಾದ ಗುಣಗಳು ಆತ್ಮನಲ್ಲಿ ಇರುವವು.

ಅವರ ಮತದಲ್ಲಿ ಸಹ ಆನಂದಮಯಕೋಶವೇ ಆತ್ಮಾ ವಿಜ್ಞಾನಮಯಕೋಶದಲ್ಲಿ ಯಾವ ಬುದ್ಧಿಯು ಇರುವದೋ, ಆತ್ಮನ ಜ್ಞಾನಗುಣವೆಂದು ಹೇಳಿದ್ದಾರೆ. ಕಾರಣವೇನೆಂದರೆ, ಮಯಕೋಶದಲ್ಲಿ ಚೇತನವು ಗೂಢವದೆ. ಇದು ವಿವೇಕಹೀನ ತವಾಗುವದಿಲ್ಲ. ಪ್ರಭಾಕರ ಹಾಗು ನೈಯಾಯಿಕರು ಆತ್ಮಕ್ಕೆ ಸ ಯಲ್ಲಿ ಜ್ಞಾನವಿಲ್ಲವೆಂದು ತಿಳಿದು, ಸ್ವರೂಪದಿಂದ ಜಡ ಎಂದು ಹೇ ಈ ಕಾರಣದಿಂದ ಗೂಢಚೇತನ, ಆನಂದಮಯಕೋಶದಲ್ಲಿಯೂ ಆತ್ಮಭ್ರಾಂತಿಯು ಅದೆ.

ಹೃದಯದಲ್ಲಿಯ ಆತ್ಮಸ್ವರೂಪ ಜ್ಞಾನವು ನಿತ್ಯವೆಂದು ಇವ ದಿರುವದಿಲ್ಲ; ಅನಿತ್ಯಜ್ಞಾನವೆಂದು ತಿಳಿಯುತ್ತಾರೆ. ಈ ಅನಿತ್ಯ ಸಿದ್ಧಾಂತದಲ್ಲಿ ಅಂತಃಕರಣದ ವೃತ್ತಿಯು ಬುದ್ಧಿರೂಪವದೆ.

ಈ ರೀತಿಯಿಂದ ಪ್ರಭಾಕರ ನೈಯಾಯಿಕರ ಮತದಲ್ಲಿ ಆನಂದ ಕೋಶವೇ ಆತ್ಮಾ ಅದೆ. ಮತ್ತು ಬುದ್ಧಿಯು ಅದರ ಗುಣವದೆ. ಮತವು ಸಹ ಸಮೀಚೀನವಾದದ್ದಲ್ಲ.

ಟಿಪ್ಪಣಿ. (೧) ನೈಯಾಯಿಕ ಮತ್ತು ಪ್ರಭಾಕರ ಮತದ ಪ್ರತಿಪಾದನವನ್ನು ದೀಪಿಕೆಯ ೮೭ರಿಂದ ೯೪ನೇ ಶ್ಲೋಕದ ಪರಿಯಂತರ ಮಾಡಿ ಮತ್ತು ಇವರ ಮತಖಂಡನವನ್ನು ಚಿತ್ರದೀಪಿಕೆಯ ೭೫ನೇ ಟಿಪ್ಪಣಿಯಲ್ಲಿ ಶ್ರೀ ಪಂಡಿತ, ಪೀತಾಂಬರಜಿಯವರು ಉಲ್ಲೇಖಿಸಿ ಇಲ್ಲಿ "ಗೂಢಚೇತನ" ಈ ಶಬ್ದವು ಗೂಢವದೆ. ಚೇತನ ಇದರ ದಲ್ಲಿ ಹೀಗೆ ಆನಂದಮಯಕೋಶ ಅದರಲ್ಲಿ ಎಂಬ ಅರ್ಥವದೆ.

॥೨೬॥ ಜೀವದ ಪಂಚಕೋಶಗಳಂತೆಯೇ, ಈಶ್ವರನ ಕೋಶಗಳಿಂದ ಅವನ ಸ್ವರೂಪದ ಆಚ್ಛಾದನ.

೧. ಜ್ಞಾನದಿಂದ ಭಿನ್ನವಾಗಿದ್ದ ಜಡವಸ್ತುಗಳಾದ ಘಟ ಮೊ ವು ಅನಿತ್ಯವಾಗಿರುವವು. ಇದರಂತೆ ಆತ್ಮವು ಸಹ ಜ್ಞಾನಸ್ವ ದಿದ್ದರೆ ಘಟಾದಿಗಳಂತೆ ಜಡವಾಗುವದರಿಂದ ಅನಿತ್ಯವಾಗುವ



೨. ಆತ್ಮಾ ಅನಿತ್ಯವಾಗಲು ಮೋಕ್ಷಾರ್ಥ ಸಾಧನಗಳು ನಿಷ್ಫಲ ಗುವವು.

ಈ ರೀತಿಯಿಂದ ವೇದಾಂತ ವಾಕ್ಯಗಳಲ್ಲಿ ವಿಶ್ವಾಸಹೀನರಾದ ಅನೇ ಬಹಿರ್ಮುಖ ಪಂಚಕೋಶಗಳಲ್ಲಿಯ ಯಾವದೋ ಒಂದು ಪದಾರ್ಥ ಆತ್ಮಾ ಎಂದು ತಿಳಿದಿದ್ದಾರೆ. ಮತ್ತು ಮುಖ್ಯ ಆತ್ಮಾ ಸಾಕ್ಷೀ ರೂಪವನ್ನು ತಿಳಿಯುವದಿಲ್ಲ. ಈ ಕಾರಣದಿಂದ ಅನ್ನಮಯ ಮೊದ ವುಗಳು ಆತ್ಮನ ಆಚ್ಛಾದಕವಾಗುವದರಿಂದ ಕೋಶವೆನ್ನುತ್ತಾರೆ. ಜೀವನ ಪಂಚಕೋಶಗಳು ಜೀವನ ಯಥಾರ್ಥ ಸ್ವರೂಪ ಸಾಕ್ಷಿಯನ್ನು ಆಚ್ಛಾದನ ಮಾಡುವವೋ, ಹಾಗೆ ಈಶ್ವರನ ಸಮಷ್ಟಿ ಪಂಚಕೋಶ ಈಶ್ವರನ ಯಥಾರ್ಥ ಸ್ವರೂಪವನ್ನು ಆಚ್ಛಾದನ ಮಾಡಿರುವವು. ಣವೇನೆಂದರೆ:—ಈಶ್ವರನ ಯಥಾರ್ಥ ಸ್ವರೂಪವು "ತತ್" ಪದ ಷ್ಯವದೆ. ಇದನ್ನು ತ್ಯಾಗಮಾಡಿ (೧) ಕೆಲವರು ಆ ಮಾಯಾರೂಪ ಂದಮಯಕೋಶ ವಿಶಿಷ್ಟ ಯಾವ ಅಂತರ್ಯಾಮಿ ತತ್ ಪದದ ವಾಚ್ಯಕ್ಕೆ ನು ತತ್ವವೆನುತ್ತಾರೆ.

(೨) ಇದರಂತೆ ಹಿರಣ್ಯಗರ್ಭ, ವೈಶ್ವಾನರ, ವಿಷ್ಣು, ಬ್ರಹ್ಮ, ಶಿವ, ಣೇಶ, ದೇವಿ, ಸೂರ್ಯ ಮೊದಲಾದವರಲ್ಲಿಯೂ ಹಾಗೂ ಕುದ್ದಾಲಕ ವೃಕ್ಷ, ಅರ್ಕ, ವಂಶ ಮೊದಲಾದ ಪದಾರ್ಥಗಳಲ್ಲಿ ಪರಮಾತ್ಮ ಭ್ರಾಂತಿ ನ್ನು ಮಾಡುವರು. ಯದ್ಯಪಿ ಸರ್ವಪದಾರ್ಥಗಳಲ್ಲಿಯ ಲಕ್ಷ್ಯಭಾಗವು ರಮಾತ್ಮನಿಂದ ಭಿನ್ನವಾಗಿ ಇಲ್ಲ. ತಥಾಪಿ ಆಯಾ ಉಪಾಧಿ ಸಹಿತಕ್ಕೆ ವನ ಪರಮಾತ್ಮನೆಂದು ತಿಳಿಯುವರೋ, ಇದೇ ಅವರಿಗೆ ಭ್ರಾಂತಿಯಿರು ದು.

೧. ಪಂಚಕೋಶಗಳಿಂದ ಆವೃತರಾದ ಜೀವೇಶ್ವರ ಪರಮಾರ್ಥ ಸ್ವರೂ ಕ್ಕೆ ವಿಮುಖರಾಗಿ ದೇಹಾದಿಗಳಲ್ಲಿ ಆತ್ಮಭ್ರಾಂತಿಯನ್ನು ಮಾಡಿ, ಪಾಪ ಣ್ಯ ಕರ್ಮಗಳನ್ನು ಮಾಡುವರು.

೨. ಅಂತರ್ಯಾಮಿಯಿಂದ ಮೊದಲ್ಗೊಂಡು ವಂಶಪರಿಯಂತರ ಇರುವ ಪದಾರ್ಥಗಳನ್ನೆಲ್ಲ ಈಶ್ವರ ರೂಪವೆಂದು ತಿಳಿದು ಆರಾಧನ ಮಾಡಿ ಸುಖ ನ್ನು ಇಚ್ಛಿಸುವರು. ಹೇಗೆ ಉಪಾಧಿಯ ಆರಾಧನಮಾಡುವರೋ ತದನು ರವಾಗಿ ಅವರಿಗೆ ಫಲವಾಗುತ್ತದೆ. ಕಾರಣವೇನೆಂದರೆ, ಕಾರಣ, ಸೂಕ್ಷ್ಮ ಸ್ಥೂಲ ಪ್ರಪಂಚವೆಲ್ಲವೂ ಈಶ್ವರನ ಮೂರು ಶರೀರದಲ್ಲಿ ಅಂತರ್ಗತವಾಗಿ ವುಗಳಲ್ಲಿ ಉಪಾಸನಾನುಸಾರವಾಗಿ ಫಲವು ಸಹ ಎಲ್ಲವುಗಳಿಂದಲೂ ಗುತ್ತದೆ.

ಪರಂತು ಬ್ರಹ್ಮಜ್ಞಾನದ ಹೊರತು ಮೋಕ್ಷವಿಲ್ಲ. ಮೋಕ್ಷ... ಯುಂಟಾದರೆ ವಿವೇಕದಿಂದ ಜೀವೇಶ್ವರ ಸ್ವರೂಪವನ್ನು ಪಂಚಕೋ... ಳಿಂದ ಭಿನ್ನವೆಂದು ತಿಳಿಯಬೇಕು.

ಇದಕ್ಕೆ ದೃಷ್ಟಾಂತವೇನೆಂದರೆ, ಕಬ್ಬಿನಲ್ಲಿ ಮೇಲೆ ಬಿರುಸಾದ... ಯೂ, ಅದರ ಒಳಗೆ ಮಂಡಿಳಂದ ಕೂಡಿಕೊಂಡು ರಸವೂ ಇರುವದು ಕಬ್ಬನ್ನು ಗಾಣದಲ್ಲಿ ಹಾಕಿ, ರಸವನ್ನು ತೆಗೆದು, ಮೇಲಿನ ಸಿಪ್ಪೆ... ಬಿಂಡನ್ನೂ ಚಲ್ಲಿಕೊಟ್ಟು ಸಿಹಿಯಾದ ರಸವನ್ನು ಹೇಗೆ ಗ್ರಹಣಮಾಡು... ಹಾಗೆ ವಿವೇಕದಿಂದ ಜೀವೇಶ್ವರ ಸ್ವರೂಪವನ್ನು ಪಂಚಕೋಶಗಳಿಂ... ಥಕ್ಕಾಗಿ ಮಾಡಿ ತಿಳಿದುಕೊಳ್ಳಬೇಕು.

॥೨೭೦॥ ಈ ಪಂಚಕೋಶಗಳ ವಿವೇಕ ಪ್ರಕಾರ
ವನ್ನು ತೋರಿಸುತ್ತೇನೆ.

॥ ಸವ್ವೈಯಾ ॥

ಸ್ಥೂಲದೇಹಕೊ ಭಾನ ನ ಹೋವೈ ।
ಸ್ವಪ್ನಮಾಂಹಿ ಲಖಿ ಆತಮಜ್ಞಾನ ॥
ಸೂಖಮಜ್ಞಾನ ಸುಷುಪ್ತಿ ನವೈನಹಿ ।
ಸುಖಸ್ವರೂಪ ಹ್ವೈ ಆತಮ ಭಾನ ॥
ಭಾಸೈ ಭಯೆ ಸಮಾಧಿ ಅವಸ್ಥಾ ।
ನಿರಾವರನ ಆತಮ ನ ಅಜ್ಞಾನ ॥
ಐಸೈ ತೀನಿದೇಹ ವ್ಯಭಿಚಾರೀ ।
ಆತಮ ಅನುಗತ ನ್ಯಾರೊ ಜಾನ ॥೧೫೮॥

ಟೀಕಾ॥ ೧. ಸ್ವಪ್ನಾವಸ್ಥೆಯಲ್ಲಿ ಸ್ಥೂಲದೇಹದ ಭಾನವಾಗು... ಆದರೆ ಆತ್ಮಾದ ಭಾನವಾಗುವದು.

೨. ಇದರಂತೆ ಸುಷುಪ್ತ್ಯವಸ್ಥೆಯಲ್ಲಿ ಸೂಕ್ಷ್ಮಶರೀರದ ಜ್ಞಾನವಾ... ವದಿಲ್ಲ. ಆದರೆ ಸುಖಸ್ವರೂಪದಿಂದ ಆತ್ಮವು ಸ್ವಯಂಪ್ರಕಾಶ ರೂಪದಿಂ... ಭಾನ, ಅಂದರೆ ಪ್ರತೀತವಾಗುವದು. ಸುಖದ ಜ್ಞಾನವು ಸುಷುಪ್ತಿ... ಆಗದಿದ್ದರೆ "ನಾನು ಸುಖದಿಂದ ಮಲಗಿದ್ದೆನು" ಎಂಬ ಸ್ಮೃತಿಯು ಜಾ... ದವಸ್ಥೆಯಲ್ಲಿ ಆಗಲುಬಾರದು. ಅದರಿಂದ ಸುಖದ ಜ್ಞಾನವು ಸುಷುಪ್ತಿಯ... ಲ್ಲಿದೆ. ಈ ಸುಖವು ವಿಷಯಜನ್ಯ ಸುಷುಪ್ತಿಯಲ್ಲಿ ಇಲ್ಲ. ಆದರೆ...



...ರೂಪವೇ ಆಗಿರುವುದು. ಈ ಆತ್ಮನು ಸ್ವಯಂಪ್ರಕಾಶ ನಾಗಿರುವನು. ...ಕಾರಣ ಸುಖ ಸ್ವರೂಪನಾದ ಆತ್ಮಾ ಸ್ವಯಂಪ್ರಕಾಶರೂಪದಿಂದ ಸುಷುಪ್ತಿಯಲ್ಲಿ ಭಾಸವಾಗುವನು.

...ನಿದಿಧ್ಯಾಸದ ಫಲವಾದ ಅಜ್ಞಾನದಿಂದ ಮಾಡಲ್ಪಟ್ಟ ಆತ್ಮಾಭಾಸವು ...ನಿರ್ವಿಕಲ್ಪಸಮಾಧಿಯ ಅವಸ್ಥೆಯಲ್ಲಿ ಪ್ರತೀತವಾಗುವದು.

ಅಜ್ಞಾನ ಅಂದರೆ ಕಾರಣ ಶರೀರವಾದ ಅಜ್ಞಾನವು ಭಾಸವಾಗು ...ದಿಲ್ಲ.

೧. ಹೀಗೆ ಮೂರೂ ದೇಹಗಳೂ ವ್ಯಭಿಚಾರಿಗಳಾಗಿವೆ. ಒಂದು ...ವಸ್ಥೆಯನ್ನು ಬಿಟ್ಟು ಎರಡನೇ ಅವಸ್ಥೆಯಲ್ಲಿ ಭಾಸವಾಗುವದಿಲ್ಲ.

೨. ಆತ್ಮಾ ಅನುಗತವದೆ. ಇದು ಸರ್ವ ಅವಸ್ಥೆಗಳಲ್ಲಿಯೂ ಭಾಸಿ ...ಸುತ್ತದೆ. ಈ ಕಾರಣದಿಂದ ಆ ಆತ್ಮವು ವ್ಯಾಪಕವದೆ.

ಈ ವಿವೇಕದಿಂದ ಮೂರೂ ಶರೀರಗಳಿಂದ ಆತ್ಮಾ ಪೃಥಕ್ಕಾಗಿ ಇರು ...ವದೆಂದು ತಿಳಿಯಬೇಕು.

(೧) ಸ್ಥೂಲ ಶರೀರವು ಅನ್ನಮಯಕೋಶವದೆ. (೨) ಕಾರಣ ಶರೀ ...ರವು ಆನಂದಮಯಕೋಶವದೆ. (೩-೫) ಸೂಕ್ಷ್ಮಶರೀರದಲ್ಲಿ ಪ್ರಾಣ ...ಮಯ, ಮನೋಮಯ, ವಿಜ್ಞಾನಮಯ, ಎಂಬ ಮೂರು ಕೋಶಗಳು ...ರುವವು.

ಆದಕಾರಣ ಮೂರು ಶರೀರಗಳ ಜ್ಞಾನದಿಂದ ಪಂಚಕೋಶಗಳ ...ಜ್ಞಾನವೂ ಆಗುವದು.

ಜೀವದ ಸ್ವರೂಪವು ಪಂಚಕೋಶಗಳಿಂದ ಹೇಗೆ ಪೃಥಕ್ಕಾಗಿ ಇರುವ ...ದೋ, ಹಾಗೆ ಈಶ್ವರನ ಸ್ವರೂಪವೂ ಸಹ ಸಮಷ್ಟಿಯಾದ ಪಂಚಕೋಶಗ ...ಳಿಂದ ಪೃಥಕ್ಕಾಗಿರುವದು.

ಚತುರ್ಥ ತರಂಗದಲ್ಲಿ ಚತುರ್ವಿಧ ಆಕಾಶದ ದೃಷ್ಟಾಂತದಿಂದ ಜೀವೇಶ್ವರರ ಲಕ್ಷ್ಯಸ್ವರೂಪದ ವಿವೇಕವನ್ನು ವಿಸ್ತಾರದಿಂದ ಹೇಳಿರು ...ತ್ತೇವೆ. ಅಲ್ಲದೆ ಉತ್ತರ ತರಂಗದಲ್ಲಿ ಅಸ್ತಿ, ಭಾತಿ, ಪ್ರಿಯರೂಪ ನಿರೂ ...ಪಣೆಯಲ್ಲಿ ಹಾಗೂ ಮಹಾವಾಕ್ಯದ ಅರ್ಥನಿರೂಪಣೆಯಲ್ಲಿ ಆತ್ಮದ ...ಪರಮಾರ್ಥ ಸ್ವರೂಪವನ್ನು ಪ್ರತಿಪಾದನ ಮಾಡುವೆವು. ಆದ್ದರಿಂದ ಇಲ್ಲಿ ...ಆತ್ಮವಿವೇಕವು ಸಂಕ್ಷೇಪವಾಗಿ ಹೇಳಲ್ಪಟ್ಟಿರುವದು.

॥೨೭೧॥ ಮಹಾವಾಕ್ಯದ ಅರ್ಥೋಪದೇಶವು.

ಈ ರೀತಿ ಪಂಚಕೋಶಗಳಿಂದ ಆತ್ಮವನ್ನು ಪೃಥಕ್ಕಾಗಿ ತಿಳಿಯುವ

ಪರಿಂದಲೇ ಕೃತಕೃತ್ಯವಾಗಲಿಲ್ಲ; ಆದರೆ ಜೀವಬ್ರಹ್ಮರ ಅಭೇದದ ಸಿದ್ಧಿಯು ಸಲುವಾಗಿ ಪುನಃ ವಿಚಾರವು ಕರ್ತವ್ಯವಾಗಿದೆ. ಇದರಿಂದ ಕರ್ತವ್ಯದ ಅಭಾವರೂಪ ಕೃತಕೃತ್ಯತೆಯ ಸಿದ್ಧಿಯ ಸಲುವಾಗಿ ಮಹಾ ವಾಕ್ಯದ ಅರ್ಥವನ್ನು ಉಪದೇಶ ಮಾಡುವೆವು.

॥ ಸವೈಯಾ ॥

ಪಂಚಕೋಸತೆ ಆತಮ ನ್ಯಾರೊ ।
ಜಾನಿ ಸುಜಾನಹು ಬ್ರಹ್ಮಸ್ವರೂಪ ॥
ತಾತೈ ಭಿನ್ನ ಜು ದೀಖೈ ಸುನಿಯೆ ।
ಸೊ ಮಾನಹು ಮಿಥ್ಯಾ ಭ್ರಮರೂಪ ॥
ಮಿಥ್ಯಾ ಅಧಿಷ್ಠಾನ ನ ಬಿಗಾರೈ ।
ಸ್ವಪ್ನ ಭೀಖ ನ ದರಿದ್ರೀ ಭೂಪ ॥
ಸಬ ಕಛು ಕರ್ತಾ ತಊ ಅಕರ್ತಾ ।
ತವ ಅಸ ಅದ್ಭುತರೂಪ ಅನೂಪ ॥೨೫॥

ಟೀಕಾ ॥ ಎಲೈ ಶಿಷ್ಯನೇ ! ಪಂಚಕೋಶಗಳಿಂದ ಆತ್ಮವನ್ನು ಪೃಥಕ್ಕಾಗಿ ತಿಳಿದು, ಆ ಆತ್ಮವು ಬ್ರಹ್ಮರೂಪವಾಗಿದೆ, ಎಂಬುದನ್ನು ತಿಳಿದುಕೊ ಈ ವಿಷಯದಲ್ಲಿ.

॥ ೨೬೨ ॥ ಪ್ರಶ್ನೆ. ಆತ್ಮಾ ಪುಣ್ಯ ಪಾಪಗಳನ್ನು ಮಾಡುವದು,
ಸುಖದುಃಖಗಳನ್ನು ಅನುಭವಿಸುವದು. ಈ ಕಾರಣದಿಂದ
ಅದು ಬ್ರಹ್ಮನಲ್ಲಿ ಐಕ್ಯತೆಯನ್ನು ಹೊಂದಲಾರದು.

ಹೀಗೆ ಆಕ್ಷೇಪಣೆಯು ಉಂಟಾಗುವದು. ಆತ್ಮಾ ಪುಣ್ಯಪಾಪಗಳನ್ನು ಮಾಡುವದು, ಆದರಿಂದ ಸ್ವರ್ಗ, ನರಕ, ಮತ್ತು ಮೃತ್ಯುಲೋಕದಲ್ಲಿ ಅನೇಕ ಪ್ರಕಾರದ ಸುಖ ದುಃಖಗಳನ್ನು ಅನುಭೋಗಿಸುವದು, ಇದು ಬ್ರಹ್ಮನಲ್ಲಿ ಐಕ್ಯತ್ವವನ್ನು ಹೊಂದಲಾರದು.

॥ ಗತ ಪ್ರಶ್ನೆಯ ಉತ್ತರ ॥೨೬೩—೩೦೩॥

॥೨೬೩॥ ಕರ್ತಾ, ಅಭೋಕ್ತಾ, ಮತ್ತು ನಿತ್ಯಮುಕ್ತ
ಆತ್ಮವು ಸದಾ ಬ್ರಹ್ಮನಿಂದ ಅಭೇದವು,



ಇದಕ್ಕೆ ಸಮಾಧಾನ- "ಬ್ರಹ್ಮಸ್ವರೂಪದಿಂದ ಭಿನ್ನವಾಗಿ ಯಾವವು ಕಾಣುವವೋ" ಎಂಬ ಅರ್ಥವುಳ್ಳ ಸವೈಯಾದ ಮೂರು ಪಾದಗಳಿಂದ ಹೇಳುತ್ತೇವೆ.

ಆ ಬ್ರಹ್ಮರೂಪ ಆತ್ಮದಿಂದ ಭಿನ್ನವಾಗಿ ಯಾವವು ದೃಷ್ಟವಾಗುವವೋ, ಮತ್ತು ಶಾಸ್ತ್ರಗಳಿಂದ ಯಾವವು ಶ್ರುತವಾಗುವವೋ ಅಂಥ ಸ್ವರ್ಗ ನರಕ, ಪುಣ್ಯ, ಪಾಪ, ಇವೆಲ್ಲವೂ ಮಿಥ್ಯಾಭ್ರಮವೆಂದು ತಿಳಿ ಮತ್ತು ಮಿಥ್ಯಾವಸ್ತುವು ಅಧಿಷ್ಠಾನವನ್ನು ಕೆಡಿಸಲಾರದು. ಹೇಗೆ (೧) ಸ್ವಪ್ನದಲ್ಲಿ ಭಿಕ್ಷೆಯನ್ನು ಮಾಡುವದರಿಂದ ರಾಜನು ದರಿದ್ರನಾಗುವದಿಲ್ಲ, (೨) ಮರುಸ್ಥಲದ ಮಿಥ್ಯಾಜಲದಿಂದ ಭೂಮಿಯು ಹಸಿಯಾಗುವದಿಲ್ಲ ; (೩) ಮಿಥ್ಯಾಸರ್ಪದಿಂದ ರಜ್ಜುವು ವಿಷಸಹಿತವಾಗುವದಿಲ್ಲ.

ಆದ್ದರಿಂದ ಸರ್ವವು ಎಲ್ಲ ಕರ್ತಾ ಅಂದರೆ ಸಂಪೂರ್ಣ ಮಿಥ್ಯಾ ಶುಭಾಶುಭಕ್ರಿಯೆಗಳ ಕರ್ತಾ ಆಗಿದ್ದರೂ, ಅಕರ್ತಾ ಅಂದರೆ ಪರಮಾರ್ಥದಿಂದ ಕರ್ತಾ ಅಲ್ಲ. ಹೀಗೆ ನಿನ್ನ ಆಶ್ಚರ್ಯರೂಪ ಸ್ವರೂಪವು ಉಪಮಾರಹಿತವದೆ. ಇದರ ಭಾವಾರ್ಥವೇನೆಂದರೆ, (೧) ಬ್ರಹ್ಮನಿಂದ ಅಭಿನ್ನವಾದ ನಿನ್ನ ಸ್ವರೂಪದಲ್ಲಿ ಸ್ಥೂಲ ಸೂಕ್ಷ್ಮಶರೀರ ಮತ್ತು ಇವುಗಳ ಶುಭಾ ಶುಭ ಕ್ರಿಯಾ, ಮತ್ತು ಇವುಗಳ ಫಲ, ಜನ್ಮ, ಮರಣ, ಸ್ವರ್ಗ, ನರಕ, ಸುಖ ದುಃಖ ಇವುಗಳೆಲ್ಲವೂ ಸಂಪೂರ್ಣ ಅವಿದ್ಯೆಯಿಂದ ಕಲ್ಪಿತವಾಗಿವೆ, (೨) ಈ ಕಲ್ಪಿತ ಸಾಮಗ್ರಿಯಿಂದ ನಿನ್ನ ಬ್ರಹ್ಮಭಾವವು ನಾಶವಾಗುವದಿಲ್ಲ- ಈ ಕಾರಣದಿಂದ ಜ್ಞಾನಕ್ಕಿಂತಲೂ ಪೂರ್ವದಲ್ಲಿ ಆತ್ಮವು ಬ್ರಹ್ಮಸ್ವರೂಪವೆ ಆಗಿರುವುದು. (೩) ಇದರಲ್ಲಿ ಮೂರು ಕಾಲಗಳಲ್ಲಿ ಶರೀರ, ಮತ್ತು ಅದರ ಧರ್ಮಗಳ ಸಂಬಂಧವಿಲ್ಲ. ಆತ್ಮವು ಸರ್ವದಾನಿತ್ಯಮುಕ್ತವಾಗಿದೆ. ಇದಕ್ಕೂ ಬ್ರಹ್ಮನಿಗೂ ಎಂದೂ ಭೇದವಿಲ್ಲ. ॥೧೫॥

॥೨೬೪॥ ಜೀವನ್ಮುಕ್ತಿಯ ನಿಶ್ಚಯ, ವೇದಾಂತ ಶ್ರವಣದ ಫಲ.

ಇನ್ನು ಹೀಗೆ ಅಂದರೆ:—ಆತ್ಮಾ ಸರ್ವದಾ ನಿತ್ಯಮುಕ್ತ ಬ್ರಹ್ಮ ಸ್ವರೂಪವದೆ, ಹೀಗೆ ಇದ್ದಮೇಲೆ ಶ್ರವಣಾದಿಕ ಜ್ಞಾನ ಸಾಧನಗಳು ನಿಷ್ಫಲವಾಗುವವು. ಇದಕ್ಕೆ ಸಮಾಧಾನ:—

॥ ಇಂದವ ಛಂದ ॥

ನಾಹಿ ಖ ಪುಷ್ಪಸಮಾನ ಪ್ರಪಂಚ ತು ।
ಈಸ ಕಹಾ ಕರತಾ ಜು ಕಹಾವೈ ॥
ಸಾಧ್ಯ ನಹೀ ಇಮು ಸಾಖಿ ಸ್ವರೂಪ ನ ।

ದೃಶ್ಯನಹೀ ದೃಕ ಕಾಹಿ ಜನಾವೈ ।
ಬಂಧುಹು ಹೊಈ ತು ಮೋಕ್ಷ ಬನೈ ಅರು ।
ಹೋಯು ಅಜ್ಞಾನ ತು ಜ್ಞಾನ ನಸಾವೈ ।
ಜಾನಿ ಯುಹೀ ಕರತವ್ಯ ತಜೈ ಸಬ ।
ನಿಶ್ಚಲ ಹೋತಹಿ ನಿಶ್ಚಲ ಪಾವೈ ।।೧೬೦।।

ಟೀಕಾ ॥ ಜೀವನ್ಮುಕ್ತ ವಿದ್ವಾಂಸರ ದೃಷ್ಟಿಯಲ್ಲಿ ಅಜ್ಞಾನವೂ ಮ... ಅದರ ಕಾರ್ಯವೂ ತುಚ್ಛವದೆ. ಈ ಜೀವನ್ಮುಕ್ತರ ನಿಶ್ಚಯ... ತೋರಿಸುವೆನು. ಎಲೈ ಶಿಷ್ಯನೇ? (೧) ಈ ಪ್ರಪಂಚವು ಆಕಾಶಪುಷ್ಪ... ನವಾಗಿರುವದರಿಂದ ಇದರ ಕರ್ತೃವು ಈಶ್ವರನೂ ಅಲ್ಲ. (೨) ಸಾಕ್ಷಿ... ವಿಷಯಗಳಿಗೆ ಅಜ್ಞಾನಾದಿ ಸಾಕ್ಷ್ಯವೆನ್ನಬೇಕು. ಇದು ಸಾಕ್ಷ್ಯ... ಅದರಿಂದ ಸಾಕ್ಷಿಯೂ ಅಲ್ಲ. (೩) ಹೇಗೆ ದೃಶ್ಯದ ಪ್ರಕಾಶಕ್ಕೆ ದ್ರ... ಎಂದು ಹೇಳುತ್ತಾರೆ. ಪ್ರಕಾಶಿಸುವವಕ್ಕೆ ಯೋಗ್ಯ ದೇಹಾದಿಗ... ದೃಶ್ಯವೆನ್ನಬೇಕು. ಈ ದೇಹಾದಿಗಳು ದೃಶ್ಯವಲ್ಲ. ಅದರಿಂದ ದ್ರಷ್ಟ... ಅಲ್ಲ. ಯದ್ಯಪಿ ಕೇವಲ ಕೂಟಸ್ಥ ಚೈತನ್ಯಕ್ಕೆ ಸಾಕ್ಷಿ ಮತ್ತು ದ್ರ... ಅನ್ನುತ್ತಾರೆ. ಇದರ ನಿಷೇಧವು ಸಂಭವಿಸುವದಿಲ್ಲ. ತಥಾಪಿ ಸಾ... ಅಪೇಕ್ಷೆಯಿಂದ ಸಾಕ್ಷಿನಾಮ, ಮತ್ತು ದೃಶ್ಯದ ಅಪೇಕ್ಷೆಯಿಂದ ದ್ರ... ನಾಮ ಅದೆ. ಸಾಕ್ಷ್ಯ ಮತ್ತು ದೃಶ್ಯದ ಅಭಾವವದೆ. ಅದರಿಂದ ಸಾ... ಮತ್ತು ದ್ರಷ್ಟಾನಾಮದ ನಿಷೇಧ ಮಾಡಿದೆ. ಸ್ವರೂಪದ ನಿಷೇಧ... ಮಾಡಿಲ್ಲ. ಮತ್ತು (೪) ಬಂಧವು ಒಂದು ವೇಳೆ ಇದ್ದರೆ ಬಂಧ... ರೂಪ ಮೋಕ್ಷವು ಇರಬೇಕು. ಬಂಧವು ಇಲ್ಲ. ಮತ್ತು (೫) ಅಜ್ಞಾ... ಇದ್ದರೆ ಅದು ಜ್ಞಾನದಿಂದ ನಾಶವಾಗಬೇಕು. ಅಜ್ಞಾನವು ಇಲ್ಲ... ರಿಂದ ಅದರ ನಾಶಕ ಜ್ಞಾನವೂ ಇಲ್ಲ, ಆದ್ದರಿಂದ ಮೋಕ್ಷವೂ... ಎಂಬುವದನ್ನು ತಿಳಿದುಕೊಂಡು ಕರ್ತವ್ಯವನ್ನು ತ್ಯಾಗ ಅಂದರೆ ಕ... ಬುದ್ಧಿಯ ತ್ಯಾಗಮಾಡು. ಕಾರಣವೇನೆಂದರೆ, ಇಹಲೋಕ ಮ... ಪರಲೋಕ ಇವು ತುಚ್ಛ ಅವೆ. ಇವುಗಳ ನಿಮಿತ್ತ ಏನೂ ಕರ್ತ... ಆತ್ಮದಲ್ಲಿ ಬಂಧವಿಲ್ಲ. ಅದರಿಂದ ಮೋಕ್ಷದ ಸಲುವಾಗಿ ಏನೂ... ವ್ಯವಿಲ್ಲ.

ಈರೀತಿಯಿಂದ ಆತ್ಮವು ನಿತ್ಯಮುಕ್ತ ಬ್ರಹ್ಮರೂಪವೆಂದು... ಯಾವಾಗ ನಿಶ್ಚಯವಾಗಿ ಸರ್ವಕರ್ತವ್ಯವನ್ನು ಬಿಡುವಿಯೋ, ಆಗ... ಬ್ರಹ್ಮಸ್ವರೂಪ ವಿದೇಹ ಮೋಕ್ಷವು ಪ್ರಾಪ್ತವಾಗುವದು.



ಇದರ ಅಭಿಪ್ರಾಯವೇನಂದರೆ-ಆತ್ಮಾ ಜ್ಞಾನಕ್ಕಿಂತ ಪೂರ್ವದಲ್ಲಿ ...ದಾ ನಿತ್ಯಮುಕ್ತ ಬ್ರಹ್ಮಸ್ವರೂಪವೇ ಅದೆ. ಆದರೆ ಜ್ಞಾನಕ್ಕಿಂತ ಪೂರ್ವ...ದಲ್ಲಿ ಆತ್ಮನನ್ನು ಕರ್ತೃಭೋಕ್ತೃವೆಂದು ಮಿಥ್ಯವಾಗಿ ತಿಳಿದು ಸುಖ...ಪ್ರಾಪ್ತಿ ಮತ್ತು ದುಃಖನಿವೃತ್ತಿಯ ಸಲುವಾಗಿ ಅನೇಕ ಸಾಧನಗಳನ್ನು ...ಮಾಡುತ್ತದೆ ಯಾದ್ದರಿಂದ ಕ್ಲೇಶವನ್ನು ಹೊಂದುತ್ತದೆ.

ಯಾವಾಗ ಶ್ರೇಷ್ಠನಾದ ಆಚಾರ್ಯನ ಮುಖದಿಂದ ವೇದಾಂತ ...ವಾಕ್ಯಗಳ ಶ್ರವಣವಾಗುವದೋ, ಆಗ ಈರೀತಿಯಾಗಿ ಜ್ಞಾನವುಂಟಾಗು...ದು "ನಾನು ಕರ್ತಾ ಭೋಕ್ತಾ ಅಲ್ಲ, ನಾನು ಬ್ರಹ್ಮಸ್ವರೂಪನಿದ್ದೇನೆ. ...ಕಾರಣದಿಂದ ನನಗೆ ಕಿಂಚಿತ್ ಕರ್ತವ್ಯವು ಸಹಾ ಇಲ್ಲ" ಎಂದು ತಿಳಿ...ಯುವದೇ ಶ್ರವಣಾದಿಗಳ ಫಲವದೆ. ಮತ್ತು ಬ್ರಹ್ಮಪ್ರಾಪ್ತಿಯು ವೇದಾಂ...ತ ಶ್ರವಣದ ಫಲವಲ್ಲ; ಕಾರಣವೇನಂದರೆ ಬ್ರಹ್ಮವು ನಮ್ಮ ಸ್ವರೂಪವದೆ. ...ದರಿಂದ ಪನಿತ್ಯಪ್ರಾಪ್ತವದೆ. ||೧೬೦||

||೨೦೫|| ಜ್ಞಾನಿ ಮತ್ತು ಅಜ್ಞಾನಿಗಳ ಚಿನ್ಹೆ.

(ಅಕರ್ತವ್ಯ ಮತ್ತು ಕರ್ತವ್ಯ.)

|| ದೋಹಾ ||

...ಯುಹೀ ಚಿನ್ಹ ಅಜ್ಞಾನಕೊ । ಜೊ ಮಾನೈ ಕರ್ತವ್ಯ ||
...ಜೋ ಈ ಜ್ಞಾನೀ ಸುಘಾರನ । ನಹಿ ಜಾಕೂ ಭವಿತವ್ಯ ||೧೬೧||

ಟೀಕಾ|| ಯಾವದು ಕರ್ತವ್ಯನೆಂದು ತಿಳಿಯುವೆವೋ ಅದು ಅಜ್ಞಾ...ನದ ಚಿನ್ಹವದೆ. ಮತ್ತು ಯಾವನಿಗೆ ಭವಿತವ್ಯವಿಲ್ಲ; ಅಂದರೆ ಅನ್ಯರೂಪವ...ನ್ನು ಹೊಂದುವ ಇಚ್ಛೆಯಿಲ್ಲವೋ ಆ ನರನಿಗೆ ಜ್ಞಾನೀ ಅನ್ನಬೇಕು ||೧೬೧

||೨೦೬|| ಗೋಪ್ಯ ತತ್ವದ ಉಪದೇಶ.

|| ಇಂದವ ಛಂದ ||

ಏಕ ಅಖಂಡಿತ ಬ್ರಹ್ಮ ಅಸಂಗ ।
ಅಜನ್ಮ ಅದೃಶ್ಯ ಅರೂಪ ಅನಾಮೈ ||
ಮೂಲ ಅಜ್ಞಾನ ನಸೂಭವಮ ಥೂಲ ।
ಸಮಷ್ಟಿ ನ ವ್ಯಷ್ಟಿಪನೊ ನಹಿ ತಾಮೈ ||
ಈಸನ ಸೂತ್ರ ವಿರಾಟ ನ ಪ್ರಾಜ್ಞ ನ।

ತೈಜಸ ವಿಸ್ವಸ್ವರೂಪ ನ ಜಾಮ್ಯೆ ||
ಭೋಗ ನ ಜೋಗ ನ ಬಂಧನ ನೋಛ |
ನಹಿ ಕಛು ವಾಮ್ಯೆ ರುಹ್ಯೆ ಸಬ ವಾಮ್ಯೆ ||೧೬

ಅರ್ಥ|| ಬ್ರಹ್ಮನು ಒಬ್ಬನು ಭಾಗವಿಲ್ಲದವನು; ಸಂಗರಹಿತನು ರಹಿತನು, ಅಪೃಶ್ಯನು, ರೂಪರಹಿತನು, ನಾಮರಹಿತನು, ಆಗಿರುವನು. ನಲ್ಲಿ ಮೂಲ ಅಜ್ಞಾನ, ಸೂಕ್ಷ್ಮ, ಸ್ಥೂಲ, ಸಮಷ್ಟಿ, ವ್ಯಷ್ಟಿ, ಗಳು ಇಲ್ಲ. ಈಶ, ಸೂತ್ರ, ವಿರಾಟ, ಪ್ರಾಜ್ಞ, ತೈಜಸ, ವಿಶ್ವರೂಪ ಲಾದವುಗಳು ಇಲ್ಲ, ಅವನಲ್ಲಿ ಭೋಗ, ಯೋಗ, ಮೋಕ್ಷ, ಬಂಧ ಲ್ಲವೂ ಇಲ್ಲ; ಸರ್ವವೂ ಅವನಲ್ಲಿಯೇ ಐಕ್ಯವಾಗಿರುವವು. ||೧೬೩||

|| ಇಂದವ ಛಂದ ||

ಜಾಗ್ರತಮ್ಯೆ ಜು ಪ್ರಪಂಚ ಪ್ರಭಾಸತ |
ಸೊ ಸಬ ಬುದ್ಧಿ ವಿಲಾಸ ಬನ್ಯೋ ಹೈ ||
ಜ್ಯೂ ಸುಪನೇಮಹಿ ಭೋಗ್ಯ ನ ಭೋಗ |
ತಊ ಇಕ ಚಿತ್ರ ವಿಚಿತ್ರ ಜನ್ಯೋ ಹೈ ||
ಲೀನ ಸುಷೂಪತಿಮ್ಯೆ ಮತಿ ಹೋತಹಿ |
ಭೇದ ಭಗ್ಯೆ ಇಕ ರೂಪ ಸುನ್ಯೋ ಹೈ ||
ಬುದ್ಧಿ ರಚ್ಯೋ ಜು ಮನೋರಥ ಮಾತ್ರ ಸು
ನಿಶ್ಚಲ ಬುದ್ಧಿ ಪ್ರಕಾಸ ಭನ್ಯೋ ಹೈ ||೧೬೪

ಅರ್ಥ|| ಜಾಗ್ರತಾವಸ್ಥೆಯಲ್ಲಿ ತೋರುತ್ತಿರುವ ಈ ಪ್ರಪಂಚವೆಲ್ಲ ಕೇವಲ ಬುದ್ಧಿಯ ವಿಚಿತ್ರತೆಯೇ ಹೊರ್ತು ಬೇರೆಯಿಲ್ಲ. ಸ್ವಪ್ನದಲ್ಲಿ ಭೋಗವಸ್ತುವಿನ ಭೋಗವು ಕಿಂಚಿತ್ತಾದರೂ ಹೇಗೆ ಉಂಟಾಗುವದಿಲ್ಲ ಹಾಗೆ ಈ ಪ್ರಪಂಚವಾದರೂ ಬುದ್ಧಿಯಲ್ಲಿ ವಿಚಿತ್ರವಾಗಿ ಉದ್ಭವಿಸುತ್ತ ಈ ಬುದ್ಧಿಯು ಸುಷುಪ್ತಿಯಲ್ಲಿ ಲೀನವಾಗಲು ಭೇದವುನಾಶವಾಗಿ ರೂಪ ಚಿನ್ಮಾತ್ರತೆಯನ್ನೂ, ಬುದ್ಧಿರಚಿತವಾದಃಮನೋಮಾತ್ರ ತತ್ವ ನ್ನೂ ಈ ಬುದ್ಧಿಯೇ ಪ್ರಕಾಶಮಾಡುವದು. ||೧೬೪||



ಪ್ಪಣಿ—೧ ನಿಶ್ಚಲ ಅಂದರೆ ಬ್ರಹ್ಮ ಇದು ಬುದ್ಧಿಯ ಪ್ರಕಾಶಕವೆಂದು ಸಿದ್ಧಾಂತದಲ್ಲಿ ಹೇಳಿರುವದು. ಈ ಕಾರಣದಿಂದ ಕ್ಷಣಿಕ ವಿಜ್ಞಾನವಾದಿಗಳ ಮತದಲ್ಲಿ ಅತಿ ವ್ಯಾಪ್ತಿಯು ಇಲ್ಲ ಕಾರಣವೇನಂದರೆ ಅವರ ಮತದಲ್ಲಿ ಬುದ್ಧಿಯಿಂದ ಭಿನ್ನ ಪದಾರ್ಥ [ಪ್ರಕಾಶಕ]ಗಳು ಅಭಾವವಾಗಿರುವವು.

|| ಸವೈಯಾ ಛಂದ ||

ಜಾಕೆ ಹಿಯು ಜ್ಞಾನ ಉಜಿಯಾರೊ |
ತಮ ಅಂಧಿಯಾರೊ ಖರೊ ವಿನಾಸ ||
ಸದಾ ಅಸಂಗ ಏಕರಸ ಆತಮ |
ಬ್ರಹ್ಮರೂಪ ಸೊ ಸ್ವಯಂ ಪ್ರಕಾಸ ||
ನಾ ಕಛು ಭಯೊ ನಹ್ಯೆ ನಹಿ ಹ್ವೈ ಹೈ |
ಜಗತ ಮನೋರಥ ಮಾತ್ರ ವಿಲಾಸ ||
ತಾಕೀ ಪ್ರಾಪ್ತಿ ನಿವೃತ್ತಿ ನ ಚಾಹತ |
ಜ್ಯೋ ಜ್ಞಾನೀಕೆ ಕೋ ಉ ನ ಆಸ ||೧೬೫||

ಅರ್ಥ|| ಯಾವನ ಹೃದಯದಲ್ಲಿ ಜ್ಞಾನಪ್ರಕಾಶ ವುಂಟಾಗಿ ಅಂಧಕಾರ ನಿಶ್ಯೇಷವಾಗಿ ಹೋಗಿರುವದೋ, ಅವನು ಸದಾ ಅಸಂಗ ಏಕರಸ ಸ್ವಯಂಪ್ರಕಾಶ, ಬ್ರಹ್ಮರೂಪವನ್ನು ಹೊಂದುವನು; ಏನೂ ಆಗುವದಿಲ್ಲ ಮುಂದೆಯೂ ಏನೂ ಬರುವದಿಲ್ಲ; ಈ ಜಗತ್ತು ಮಾತ್ರ ಸರ್ವವಿಲಾಸ ಮನೋರಥವಾಗಿರುವದರಿಂದ ಇದರ ಪ್ರಾಪ್ತಿಯನ್ನು ಅಪೇಕ್ಷಿಸುವನು, ನಿವೃತ್ತಿಯನ್ನು ಇಚ್ಛಿಸುವದಿಲ್ಲ. ಜ್ಞಾನಿಗೆ ನಿಶ್ಚಯವಾಗಿಯೂ ಯಾವ ಆಶೆಯೂ ಇರುವದಿಲ್ಲ. ||೧೬೫||

|| ಸವೈಯಾ ಚಂದ ||

ದೇಖ್ಯೆ ಸುನ್ಯೆನ ಸುನ್ಯೆ ನ ದೇಖ್ಯೆ |
ಸಬ ರಸ ಗಹ್ಯೆ ರು ಲೇತ ನ ಸ್ವಾದ ||
ಸೂಂಘಿ ಪರಸಿ ಪರಸ್ಯೆ ನ ಸೂಂಘ್ಯೆ |
ಬೈನ ನ ಬೋಲ್ಯೆ ಕರ್ಯೆ ವಿವಾದ ||
ಗ್ರಹ ನ ಗ್ರಹ್ಯೆ ಮಲ ತಜ್ಯೆ ನ ತ್ಯಾಗ್ಯೆ |

ಚಲ್ಯೈ ನಹಿ ಅರು ಧಾವತ ಪಾದ ||
ಭೋಗ್ಯೈ ಯುವತಿ ಸದಾ ಸನ್ಯಾಸೀ |
ಸಿಷ ಲಖಿ ಯಹ ಅದ್ಭುತ ಸಂವಾದ ||೧೬೩||

ಅರ್ಥ || ನೋಡಿ, ಕೇಳಿ, ನೋಡುವದಿಲ್ಲ; ಕೇಳುವದಿಲ್ಲ; ಸರ್ವ... ನ್ನೂ ಗ್ರಹಣಮಾಡಿ ಸ್ವಾದವನ್ನು ತೆಗೆದುಕೊಳ್ಳುವದಿಲ್ಲ; ತ್ವಚೆಯಿಂದ... ರ್ಶಮಾಡಿದರೂ ಸ್ಪರ್ಶಮಾಡುವದಿಲ್ಲ; ಸುವಾಸನೆಯನ್ನು ಅವಘ್ರಾಣ... ಡಿದರೂ ಸುವಾಸನೆಯನ್ನು ತೆಗೆದುಕೊಳ್ಳುವದಿಲ್ಲ; ಮಾತನಾಡಿಯೂ ಮಾ... ನಾಡುವದಿಲ್ಲ; ಗ್ರಹಣಮಾಡಿದರೂ ಗ್ರಹಣಮಾಡುವದಿಲ್ಲ; ಮಲವನ್ನು ... ಗಮಾಡಿದರೂ ತ್ಯಜನವಾಗುವದಿಲ್ಲ; ಚರಣಗಳಿಂದ ಓಡುತ್ತಿದ್ದರೂ... ಯುವದಿಲ್ಲ; ಯುವತಿ ಸುಖವನ್ನು ಸರ್ವದಾ ಉಪಭೋಗಿಸುತ್ತಿ... ಅವನು ಅಭೋಕ್ತೃವಾಗಿರುವನು. ಎಂಬ ಸಿದ್ಧಾಂತವನ್ನು ಮನಸ್ಸಿನಲ್ಲಿ... ದುಕೊಳ್ಳೈ— ಶಿಷ್ಯನೇ? ಇದಕ್ಕೇ ಅದ್ಭುತಸಂವಾದವೆಂದು ಅನ್ನಬೇಕು.

ಟಿಪ್ಪಣಿ—[೧] ಇಲ್ಲಿ ಗೀತೆಯ ಪಂಚಮ ಅಧ್ಯಾಯಗತ ೭-ನೇ ಶ್ಲೋಕದಿಂದ... ಶ್ಲೋಕಪರ್ಯಂತವಿರುವ ಶ್ಲೋಕಗಳ ಅಭಿಪ್ರಾಯವನ್ನು ತೆಗೆದುಕೊಂಡು ಗ್ರಂಥಕರ್ತನು ಈ ಸವೈಯಾ ಛಂದದ ಯುಗಲವನ್ನು ಬರೆದಿರುವನು... ಮೂರು ಶ್ಲೋಕಗಳ ಅರ್ಥವು ಮುಮುಕ್ಷುಗಳ ಬುದ್ಧಿಗೆ ಸಮ್ಯಕ್ ಬೋಧ... ವಾಗುವದರ ಸಲುವಾಗಿ ಅರ್ಥಸಹಿತ ಬರೆದಿರುವನು,

ಶ್ಲೋಕ|| ಯೋಗಯುಕ್ತೋ ವಿಶುದ್ಧಾತ್ಮಾ | ವಿಜಿತಾತ್ಮಾ ಜಿತೇಂದ್ರಿಯಃ |
ಸರ್ವಭೂತಾತ್ಮ ಭೂತಾತ್ಮಾ | ಕುರ್ವನ್ನಪಿ ನ ಲಿಪ್ಯತೆ ||೭||

ಅರ್ಥ || [೧] ಯಾವನು ಕರ್ಮರೂಪ ಯೋಗದಿಂದ, ಅಥವಾ ಬ್ರಹ್ಮನಿಷ್ಠಾ... ಸನ್ಯಾಸಯೋಗದಿಂದ ಯುಕ್ತನಿರುವನೋ, ಮತ್ತು ಇವುಗಳಿಂದ ... [ರಾಗದ್ವೇಷರಹಿತ] ಆತ್ಮಾ ಅಂದರೆ ಮನಸ್ಸು ಯಾವನದಿರುವದೋ,... ತ್ತು [೩] ಇವುಗಳಿಂದ ಗೆಲ್ಲಲ್ಪಟ್ಟ [ವಿಷಯಗಳ ಗ್ರಹಣದಿಂದ ವಿಮು... ತ್ತವನ್ನು ಪ್ರಾಪ್ತಮಾಡಿಕೊಂಡಿರುವನೋ] ವಸಿರುವನೋ ಉಭಯಪ್ರಕಾ... ರದ ಇಂದ್ರಿಯಗಳು ಯಾವನಿಂದ ೩ ಗೆಲ್ಲಲ್ಪಟ್ಟಿರುವವೋ ಆತ್ಮಾ ... ವಾಸನಾರೂಪ ಸ್ವಭಾವವು ಯಾವನದಿರುವದೋ, ೪ ಯಾವನು ಬ್ರಹ್ಮ... ನಿಂದ ಆರಂಭವಾಗಿ ಸ್ತಂಭಪರಿಯಂತ ಸರ್ವಭೂತಗಳ ಆತ್ಮಭೂತ ಸ್ವರೂ... ಪಭೂತವನ್ನು ಹೊಂದಿರುವನೋ ಪ್ರತ್ಯಕ ರೂಪ ಆತ್ಮಾ ಯಾವನದಿ... ವದೋ ಇಂಥ ಸರ್ವಾತ್ಮ ಭಾವವನ್ನು ಪ್ರಾಪ್ತ ಮಾಡಿಕೊಂಡಿರು... ಯಾವ ಬ್ರಹ್ಮವೇತ್ತ್ಯವಿರುವನೋ ಅವನು ಶರೀರದ ಯಾತ್ರಾ ನಿರ್ವಾಹ... ಅರ್ಥವಾಗಿ ಕಿಂಚಿತ್ ವಿಧಿಪೂರ್ವಕ ಅಥವಾ ಅವಿಧಿ ಪೂರ್ವಕ ಕರ್ಮ...



ಕಿಂಚಿತ್ ವಿಧಿಪೂರ್ವಕ ಅಥವಾ ಅವಿಧಿಪೂರ್ವಕ ಕರ್ಮಗಳನ್ನು ಮಾಡಿದರೂ ಸಹ ಈ ಪುಣ್ಯ ಅಥವಾ ಆ ಪುಣ್ಯರೂಪ ಕರ್ಮದ ಲೇಪವನ್ನು ಹೊಂದುವದಿಲ್ಲ. ಅಂದರೆ ಕರ್ಮ ವಿಷಯದಲ್ಲಿ ಅಕರ್ಮತೆಯ ದೃಷ್ಟಿಯಿಂದ ಸಂಬಂಧವನ್ನು ಹೊಂದುವದಿಲ್ಲ. ಎಂಬುದೇ ಈಶ್ಲೋಕಗಳ ಅರ್ಥವು. ಯೋಗಯುಕ್ತರಾದ ವಿದ್ವಾನರ ಪಂಚಲಕ್ಷಣ ವಿಶಿಷ್ಟ ಮತ್ತು ಆಹಾರಾದಿ ವಿಷಯಗಳಲ್ಲಿ ಪ್ರವೃತ್ತರಾದ ಬ್ರಹ್ಮವೇತ್ತರಿಗೆ ದರ್ಶನ ಮೊದಲಾದ ಇಂದ್ರಿಯಗಳ ವ್ಯಾಪಾರದ ವಿಷಯದಲ್ಲಿ "ನಾನು ಕರ್ತಾ ಅಲ್ಲ." ಎಂಬ ಬುದ್ಧಿಯಿಂದ ಸ್ಥಿತವಾಗುವದು, ಯೋಗ್ಯವಧೆ. ಹೀಗೆ ಎರಡು ಶ್ಲೋಕಗಳಿಂದ ಹೇಳಿದ್ದಾರೆ.

|| ಶ್ಲೋಕಃ ||

ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತತತ್ವವಿತ್ |
ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ ಅಶ್ನನ್ ಗಚ್ಛನ್ ಸ್ವಪನ್‌ಶ್ವಸನ್ ||೮||
ಪ್ರಲಪನ್ವಿಸೃಜನ್ಗೃಣ್ಹನ್ನುನ್ಮಿಷನ್ನಿಮಿಷನ್ನಪಿ |
ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ||೯||

ಅರ್ಥ|| ಆತ್ಮದ ಸ್ವಭಾವವನ್ನು ತಿಳಿದಂಥ ತತ್ವವಿದನು (ಬ್ರಹ್ಮವಿದನು) ತನ್ನ ಕೂಟಸ್ಥತಾ ಅಸಂಗತಾ ಮತ್ತು ಅಂತರ್ಬಹಿಃಪೂರ್ಣತೆಯ ದರ್ಶನರೂಪ ಪ್ರಜ್ಞೆಯಿಂದ ಯುಕ್ತನಾದರೂ ತಾನು ಹೊರಗೆ ನೋಡುತ್ತಿದ್ದರೂ ಕೇಳುತ್ತಿದ್ದರೂ ಸ್ಪರ್ಶಮಾಡುತ್ತಿದ್ದರೂ ಆಘ್ರಾಣಿಸುತ್ತಿದ್ದರೂ ಭಕ್ಷಿಸುತ್ತಿದ್ದರೂ ನಡೆಯುತ್ತಿದ್ದರೂ, ನಿದ್ರೆಯನ್ನು ಮಾಡುತ್ತಿದ್ದರೂ, ಉಚ್ಛ್ವಾಸನಿಃಶ್ವಾಸಗಳನ್ನು ಬಿಡುತ್ತಿದ್ದರೂ, ಮಾತಾಡುತ್ತಿದ್ದರೂ ಮಲತ್ಯಾಗ ಮಾಡುತ್ತಿದ್ದರೂ ಕೊಟ್ಟುಕೊಳುವದನ್ನು ಮಾಡುತ್ತಿದ್ದರೂ, ನಿಮೇಷ ಮತ್ತು ಉನ್ಮೇಷಗಳನ್ನು ಮಾಡುತ್ತಿದ್ದರೂ ಸಹ "ಶಬ್ದಾದಿ ವಿಷಯರೂಪ ಇಂದ್ರಿಯಗಳ ಅರ್ಥದ ವಿಷಯದಲ್ಲಿ ಇಂದ್ರಿಯಗಳೇ ವರ್ತಿಸುತ್ತಿರುವವು. ನಾನು ದ್ರಷ್ಟಾ, ಶ್ರೋತಾ, ಸ್ಪ್ರಷ್ಟಾ, ಘ್ರಾತಾ, ಭೋಕ್ತಾ ಮತ್ತು ಗಂತಾ ಇರುವದಿಲ್ಲ.,, ಈ ಪ್ರಕಾರದ ಲಕ್ಷಣಗಳುಳ್ಳ ವೃತ್ತಿಯನ್ನು ಸರ್ವದಾ ಧಾರಣ ಮಾಡುತ್ತಿರುವನು. "ಆಕರ್ಮಗಳನ್ನು ಇಂದ್ರಿಯಗಳೇಮಾಡುತ್ತಿರುವವು ನಾನು ಅಕ್ರಿಯನಾಗಿರುವದರಿಂದ ಏನನ್ನು ಸಹಾ ಮಾಡುವದಿಲ್ಲ. ಅದರೆ ಆ ಕ್ರಿಯೆಗಳ ಸಾಕ್ಷಿಯಾಗಿ ನಿಷ್ಕ್ರಿಯರೂಪದಿಂದ ತೂಷ್ಣಿಯಿಂದ ಸ್ಥಿತನಾಗಿರುವೆನು ,, ಎಂದು ತಿಳಿಯುವನು. ಅಂದರೆ ತನ್ನನ್ನು ಆ ಕ್ರಿಯೆಗಳ ವಿಷಯದಲ್ಲಿ ನಿಷ್ಕ್ರಿಯನಾಗಿಯೇ ನೋಡುವನು.

ಈ ಎರಡು ಶ್ಲೋಕಗಳ ಭಾವಾರ್ಥವೇನೆಂದರೆ,—ದೇಹೇಂದ್ರಿಯಗಳ ವ್ಯಾಪಾರ ವಿಷಯದಲ್ಲಿ ' ನಾನು ಮತ್ತು ನನ್ನ ಎಂಬಭಾವನೆಯನ್ನು ಬಿಟ್ಟ ವಿದ್ವಾಂಸನು ತೂಷ್ಣೀಭಾವದಿಂದ ಸ್ಥಿತನಾಗಿರುವದು ಯೋಗ್ಯವದೆ ||೮೯||

ಇದರಲ್ಲಿಯ ರಹಸ್ಯವೇನೆಂದರೆ;—ಜ್ಞಾನಿಗೆ ನಾನು 'ನಾನು ಅಸಂಗ ಮತ್ತು ನಿರ್ವಿಕಾರ, (ಅಕ್ರಿಯ) ಬ್ರಹ್ಮಚೈತನ್ಯನಿರುವೆನು. ಎಂಬನಿಶ್ಚಯವಿರುವ ಈ ಕಾರಣದಿಂದ ಜ್ಞಾನಿಯು ಸತ್ಯವಾಗಿ ಯಾವ ಕ್ರಿಯೆಯನ್ನು ಮಾಡುವದಿಲ್ಲ. ಮತ್ತು ಪ್ರಾರಬ್ಧಬಲದಿಂದ ಜ್ಞಾನಿಗೆ ದೇಹೇಂದ್ರಿಯ ಮೊದಲಾದವುಗಳಿಂದ ದರ್ಶನಾದಿ ವ್ಯಾಪಾರರೂಪ ಕ್ರಿಯೆಯು ನಡೆಸುವದು. ಇದು ಪ್ರಾರಬ್ಧದ ಫಲದ ಭೋಗವದೆ. ಪರಂತು ಈಭೋಗ ವಿಷಯದಲ್ಲಿ ದೃಢಾಸಕ್ತಿರೂಪ ಅನುರಾಗವು ಆಗುವದು.

೧. ಈ ಅನುರಾಗವು ಇಂದ್ರಿಯಗಳ ಕ್ರಿಯೆಯು ಆಗಲಾರದು, ಕಾರಣವೇನೆಂದರೆ—ಇಂದ್ರಿಯಗಳಿಗೆ ದರ್ಶನಾದಿ ಕ್ರಿಯಾ ಮಾತ್ರದಿಂದ ಕೃತಾರ್ಥತೆಯು ಉಂಟಾಗುವದರಿಂದ-

೨. ಅನುರಾಗವು ಆತ್ಮದ ಕ್ರಿಯೆಯು ಸಹ ಆಗುವದಿಲ್ಲ. ಏಕೆಂದರೆ—:ಆತ್ಮನಿಗೆ ಸದಾ ಸರ್ವ ಪದಾರ್ಥಗಳ ಸಾಧಾರಣ ನಿರ್ವಿಕಾರ ಪ್ರಕಾಶತ್ವವು ಉಂಟಾಗುವದರಿಂದ=

೩. ಪರಿಶೇಷದಿಂದ ವಿಷಯಗಳ ಗುಣದೋಷಗಳ ವಿಚಾರವಿರುವಕಾರಣ ಮನಸ್ಸಿಗೆ ಸಹಾ ಅನುಕೂಲತೆಯು ಜ್ಞಾನದಿಂದ ಅನುರಾಗವುಂಟಾಗುವದು.

೪. ಈ ಅನುರಾಗವು ಜ್ಞಾನಿಗಳ ಅಂತಃಕರಣದಲ್ಲಿ ಆಗುವದಿಲ್ಲ. ಕಾರಣವೇನೆಂದರೆ:—ಜ್ಞಾನಿಯ ಅಂತಃಕರಣವು ಶಾಂತ (ಅಂತರ್ಮುಖ) ವಾಗಿರುವದರಿಂದ ಈ ಸಂಗತಿಯು "ರಾಗವು ಅಬೋಧದ ಚಿನ್ಹವದೆ.,, ಇತ್ಯಾದಿರೂಪ ಶಾಸ್ತ್ರದ ವಾಕ್ಯಗಳಲ್ಲಿ ಸ್ಪಷ್ಟವದೆ.

ಯದ್ಯಪಿ ಸರ್ವಥಾ ಅನುರಾಗದ ಅಭಾವವಾಗಿ ಭೋಜನಾದಿ,ರೂಪ ಶರೀರಯಾತ್ರೆಯ ಉದ್ದಿಶ್ಯವಾಗಿ ವ್ಯಾಪಾರವಿಷಯದಲ್ಲಿ ಸಹಾ ಪ್ರವೃತ್ತಿಯ ಅಭಾವದಿಂದ ಜ್ಞಾನಿಗೆ ಪ್ರಾರಬ್ಧದ ಭೋಗವು ಸಹ ಆಗುವದಿಲ್ಲ. ಮತ್ತು ಈಶ್ವರ ಸಂಕಲ್ಪದ ವಿಷಯವಾದ ಪ್ರಾರಬ್ಧದ ಭೋಗದ ಅಭಾವವು ಜ್ಞಾನಿಗೂ ಸಹ ಸಂಭವಿಸುವದಿಲ್ಲ.

೧. ತಥಾಪಿ ಪ್ರಾರಬ್ಧಫಲದ ಭೋಗವಿಷಯದಲ್ಲಿ ವಿಚಾರದಿಂದ ನಿವೃತ್ತವಾಗುವದಕ್ಕೆ ಯೋಗ್ಯವಲ್ಲದಿದ್ದ ರೋಗಾದಿಗಳಂತೆ ಪ್ರಾರಬ್ಧಜನಿತ ಅದೃಢ (ಅಹಂಕಾರ ಮತ್ತು ಚಿದಾತ್ಮದ ಭ್ರಮೋತ್ಪಾದಕ ತಾದಾತ್ಮ್ಯದ ಅಭಾವದಿಂದ ಆಭಾಸರೂಪ) ಅನುರಾಗವು ಜ್ಞಾನಿಗೂ ಸಹ ಆಗುವದು. ಪರಂತು ಈ ಅನುರಾಗವು ಸ್ವಾಧೀನವಾಗುವದರಿಂದ ಮತ್ತು ದಗ್ಧಬೀಜದಂತೆ ನಿರ್ಬೀಜವಾಗಿರುವದರಿಂದ ದೇಹ ನಿರ್ವಾಹದ ಹೇತುವು ಶಾಸ್ತ್ರವಿಹಿತ ಭೋಗದ ಹೇತುವದೆ. ವ್ಯಸನೋತ್ಪಾದಕ ಶಾಸ್ತ್ರನಿಷಿದ್ಧ ಭೋಗದ ಹೇತುವಲ್ಲ.

೨. ಅಥವಾ—ಜ್ಞಾನಿಗೆ ವಿಷಯಗಳ ವಿಷಯದಲ್ಲಿ ಸತ್ಯತೆಯ ಭ್ರಾಂತಿಯ ಅಭಾವದಿಂದ ಮತ್ತು ಮಿಥ್ಯತ್ವದ ಬುದ್ಧಿಯಿಂದ ಜನಿತವಾದ ದೃಢವೈರಾಗ್ಯದ



ಸದ್ಭಾವದಿಂದ ದೃಢರಾಗವು ಉಂಟಾಗುವದಿಲ್ಲ.ಇದೇ ಅರ್ಥವನ್ನು ಮುಂದೆ ಷಷ್ಟತರಂಗದಲ್ಲಿ ಗ್ರಂಥಕಾರನಿಂದ ನಿರೂಪಣ ಮಾಡಲ್ಪಟ್ಟಿದೆ.

೩. ಅಥವಾ ರಜ್ಜುವಿನಮೇಲೆ, ಆಡತಕ್ಕ ನಟನಮೇಲೆ, ಸಲ್ಲಗ್ನಚಿತ್ತವಾಗಿರುವಂತೆ ಅಥವಾ ಪರಸ್ಪರ ವಾರ್ತಾಲಾಪ ಮಾಡತಕ್ಕ ಪಣ್ಯಾಂಗನೆಯು ಬಿಂದಾರದಲ್ಲಿ ಸಲ್ಲಗ್ನಚಿತ್ತನಾದವನಂತೆ ಜ್ಞಾನಿಯ ಅಂತಃಕರಣವು ಅಪಾತಮಾಡತಕ್ಕ ವಿಷಯಗಳಲ್ಲಿ ಪ್ರವೃತ್ತವಾಗುವದರಿಂದ ಮತ್ತು ವಿಶೇಷವಾಗಿ ಸ್ವರೂಪದಲ್ಲಿ ಸಲ್ಲಗ್ನ [ಅಂತರ್ಮುಖ] ವಾಗುವದರಿಂದ ಮತ್ತು ಅಪನ ಜಡ (ಚಿದಾಭಾಸ ರಹಿತ) ದೇಹ ಮತ್ತು ಇಂದ್ರಿಯಗಳಿಗೆ ಅನುರಾಗದಹೊರ್ತು ಪ್ರಾರಬ್ಧದ ಫಲಭೂತ ದರ್ಶನಾದಿ ಕ್ರಿಯೆಗಳಿಂದ ಕೃತಾರ್ಥತೆಯುಂಟಾಗುವದರಿಂದ ಸಹ ನಿಷ್ಕ್ರಿಯುಕ್ತ ಸಾಭಾಸ ಅಂತಃಕರಣರೂಪ ಜ್ಞಾನಿಗೆ ವಿಷಯಭೋಗದಲ್ಲಿ ದೃಢರಾಗವು ಸಂಭವಿಸುವದಿಲ್ಲ.

೪. ಯದ್ಯಪಿ ಯಾವದೋ ಒಂದು ಪ್ರವೃತ್ತಿಯ ಸಾಧನ ಪ್ರಾರಬ್ಧವುಳ್ಳ ಜ್ಞಾನಿಯ ಮನರೂಪ ಗಜವು ವಿಷಯಗಳ ವಿಷಯದಲ್ಲಿ ಕಿಂಚಿತ್ ಪಕ್ಷಿಪ್ತ (ಪ್ರಮಾದಕ್ಕೆ ಸ್ರಾಪ್ತ)ವಾಗುವದು ತಥಾಪಿ ವಿವೇಕ [ದೋಷದೃಷ್ಟಿ ಮತ್ತು ಮಿಥ್ಯತ್ವ ಬುದ್ಧಿ] ರೂಪಕೇಸರಿ [ಸಿಂಹ) ಯ ಜಾಗರಣದಿಂದ ಮನರೂಪ ಗಜವು ಪ್ರಮಾದರೂಪ ವಿಕ್ಷೇಪವನ್ನು ಬಿಟ್ಟು ಶಾಂತವಾಗುವದು.

ಈ ಕಾರಣದಿಂದ ಜ್ಞಾನಿಯ ಚಿತ್ತದಲ್ಲಿ ದೃಢರಾಗವು ಇಲ್ಲ. ಇದರಿಂದ—

೧. ಭೋಗದ ಹೇತುವು ಪ್ರಾರಬ್ಧದ್ದಾದ್ದರಿಂದ ಕಾಕಾಕ್ಷಿಯಂತೆ, ಮತ್ತು ಗಂಗಾದಲ್ಲಿ ಮಗ್ನವಾದ ಅರ್ಧ ಶರೀರದಂತೆ ಮುಖ್ಯತ್ವದಿಂದ ಸ್ವರೂಪಸುಖದಿಂದ ರಮಿಸುವುದು.

೨. ಅಮುಖ್ಯತ್ವದಿಂದ ವಿಷಗೃಹೀತನಂತೆ ಕ್ಲೇಶವನ್ನು ಹೊಂದುವದಾದ್ದರಿಂದ ತೀವ್ರಪ್ರಾರಬ್ಧದ ಫಲವನ್ನು ಭೋಗಿಸುವದು-

೩ ಸನುಶಿಥಿಲಪ್ರಾರಬ್ಧದ ಫಲರೂಪ ನಿಷಿದ್ಧ ವಿಷಯವನ್ನು ಪ್ರಯತ್ನದಿಂದ ಬಿಡುವನು. ಆದರೂ ಈ ಭೋಗ ಅಥವಾ ತ್ಯಾಗ ವಿಷಯದಲ್ಲಿ ವಿಕಲಚಿತ್ತನಾದ ಪುರುಷನಂತೆ ಜ್ಞಾನಿಯು ಚಿತ್ತದ ಅಮುಖ್ಯತೆಯ ಅಭಿಪ್ರಾಯದಿಂದ ಜಡ ಇಂದ್ರಿಯಗಳಿಂದ ಭೋಗ ಮತ್ತು ತ್ಯಾಗಗಳ ಅಭಿಪ್ರಾಯದಿಂದ ಮೇಲೆ ಹೇಳಿದ ಗೀತೆಯ ಶ್ಲೋಕದಲ್ಲಿ "ಇಂದ್ರಿಯಗಳ ಅರ್ಥವಿಷಯದಲ್ಲಿ ಇಂದ್ರಿಯಗಳು ವರ್ತಿಸುವವು ,, ಹೀಗೆ ಹೇಳಲ್ಪಟ್ಟಿತು.

ಇದೇ ಗ್ರಂಥದ ೧೬೬ನೇ ಸಮ್ಖ್ಯೆಯಾದಲ್ಲಿ ಸಹಾ "ತ್ಯಾಗತು ವಿಷಯಕೀಭೋಗಹು ಇಂದ್ರಿಯ,, ಎಂಬ ವಚನದಿಂದ ನಿಷಿದ್ಧ ಅಥವಾ ದೃಷ್ಟದೋಷವಿಷಯಗಳ ಬಿಡುವಿಕೆಯಿಂದ ಅದೃಢರಾಗದಿಂದ ಪ್ರಾಪ್ತವಾದ ವಿಹಿತವಿಷಯಗಳ ಭೋಕ್ತೃವೆಂದು ಇಂದ್ರಿಯಗಳಿಗೆ ಹೇಳಿದೆ. ಅಂತಃಕರಣಕ್ಕೆ ಇಲ್ಲ ಇದೇ ಗ್ರಂಥದ ೧೬೫ನೇ ಸಮ್ಖ್ಯೆಯಾದ ನಾಲ್ಕನೇ ಚರಣದಲ್ಲಿ "ಭೋಗ್ಯೆ ಯುವತಿ ಸದಾ ಸನ್ಯಾಸೀ,, ಎಂದು ಹೇಳಿದೆ. ಇದರ ಅಭಿಪ್ರಾಯವೇನೆಂದರೆ;—

೧. ತ್ಯಾಗಿಯಾದ ಜ್ಞಾನಿ ಸ್ತ್ರೀಭೋಗಪ್ರಾಪ್ತಿಯೇ ಇಲ್ಲಿವೆಂದಮೇಲೆ ಸನ್ಯಾ
ಸ್ತ್ರೀಭೋಗಪಾಗುವ ಸಂಭವವು ಹೇಗೆ ಉಂಟಾಗುರದು ? ಯಾವನು ತ್ಯಾ
ಯಾಗಿ ಸ್ತ್ರೀಭೋಗ ವಿಷಯದಲ್ಲಿ ಪ್ರವೃತ್ತನಾಗುವನೋ, ಅವನು ತ್ಯಾ
ಯಲ್ಲ. ಅಂದರೆ, ತ್ಯಾಗಿಯ ವೇಷವನ್ನು ಧಾರಣ ಮಾಡಿದ ನಟ
ಡಾಂಭಿಕನಾಗಿರುವದರಿಂದ ಗೃಹಸ್ಥನಿಗಿಂತಲೂ ಅಧಮನಾಗಿರು
ಅದ್ದರಿಂದಲೇ ಅವನು ಪೂಜೆಗೆ ಯೋಗ್ಯನಲ್ಲ

ಹೀಗೆ ಹೇಳಿದುದರಿಂದ ಲಬ್ಧವಾದ ಅರ್ಥವೇನೆಂದರೆ=ಪರಿಶೇಷದಿಂದ ಗೃಹಸ್ಥ
ಜ್ಞಾನ್ನಿಯ ವಿಷಯದಲ್ಲಿ ಸ್ತ್ರೀಭೋಗವು ಪ್ರಾಪ್ತವದೆ,ಈ ಗೃಹಸ್ಥ ಜ್ಞಾ
ಯ ವಿಷಯದಲ್ಲಿ ಸ್ತ್ರೀಭೋಗವು ಪ್ರಾಪ್ತವದೆ. ಈ ಗೃಹಸ್ಥ ಜ್ಞಾ
ಸಹ ಘೃತಭಕ್ಷಣ ಮಾಡುವ ಅಭ್ಯಾಸವುಳ್ಳವನು ತೈಲಭಕ್ಷಣ ಮಾಡು
ಶಾಸ್ತ್ರರೀತಿಯಿಂದ ಸಂತತಿಯ ನಿಮಿತ್ತ ರುತು ಆದಿಕಾಲದಲ್ಲಿ
ಸ್ತ್ರೀಯ ಸಂಗ ಮಾಡುವನು. ವಿಷಯಾಸಕ್ತಿಯಿಂದ ಅಲ್ಲ. ವಿಷಯ
ಆಸಕ್ತಿಯುಳ್ಳ ವೇದಾಂತವಾರ್ತಾ ನಿಪುಣ ಗೃಹಸ್ಥನಿದ್ದರೂ ಅವನು
ರಾಗರೂಪ ಅಜ್ಞಾನದ ಚಿನ್ಹದಿಂದ ಯುಕ್ತನಾಗಿರುವದರಿಂದ ಜ್ಞಾನಿ
ಅಜ್ಞಾನಿಯಿರುವನು,

ಇಲ್ಲಿ ಸ್ತ್ರೀರೂಪ ವಿಷಯದ ವಿಚಾರವಿರುವಂತೆ ಬೇರೆಯಾದ ಸರ್ವವಿಷಯಗಳ
ರದ ಉಪಲಕ್ಷಣವದೆ,ಮತ್ತು ಅನುರಾಗದ ದೃಢತೆಯ ಅಭಾವ ಹೇಳಿ
ದ್ವೇಷ ಮೊದಲಾದವುಗಳ ದೃಢತೆಯ ಅಭಾವದ ಉಪಲಕ್ಷಣವು

॥ ಸವೈಯಾ ಛಂದ ॥

ನಿಜವಿಷಯನಮ್ಯೆ ಇಂದ್ರಿಯ ವಾರ್ತೆ ।
ತಿನತ್ಯೆ ಮೇರೊ ನಾಹಿ ಸಂಗ ॥
ಮೈ ಇಂದ್ರಿಯ ನಹಿ ಮಮ ಇಂದ್ರಿಯನಹಿ ।
ಮೈಸಾಖೀ ಕೂಟಸ್ಥ ಅಸಂಗ ॥
ತ್ಯಾಗಹು ವಿಷಯ ಕಿ ಭೋಗಹು ಇಂದ್ರಿಯ ।
ಮೋಕೂ ಲಗ್ನೆನ ರಂಜಕ ರಂಗ ॥
ಯಹನಿಶ್ಚಯಜ್ಞಾನೀಕೊ ಜಾತ್ಯೆ ।
ಕರ್ತಾದೇಖ್ಯೆ ಕರ್ಮೆನ ಲಂಗ ॥ ೧೬೬ ॥

ಅರ್ಥ॥ ನಿಜವಾದ ವಿಷಯುಗಳಲ್ಲಿ ಇಂದ್ರಿಯಗಳು ವರ್ತಿಸು
ಅವುಗಳೊಡನೆ ನನ್ನ ಸಂಗವು ಇಲ್ಲ;ನಾನು ಇಂದ್ರಿಯುವಲ್ಲ, ಇಂದ್ರಿಯ
ನನ್ನವಲ್ಲ. ಇಂದ್ರಿಯುಗಳು ವಿಷಯುಗಳನ್ನು ಬಿಡಲಿ ! ಅಥವಾ ಅನುಭ
ಸಲಿ ? ನನಗೆ ಕಿಂಚಿತ್ತಾದರೂ ಅವುಗಳ ಸಂಗವಿಲ್ಲ. ನಾನು ಕೇವಲ ಸಾ
ಕೂಟಸ್ಥ, ಅಸಂಗನಾಗಿರುವೆನು. ಎಂಬ ಜ್ಞಾನವು ಜ್ಞಾನಿಗಳಿಗೆ



ಯವಾಗಿ ಇರುವದು, ಯದ್ಯಪಿ ಜ್ಞಾನಿಗಳು ಕ್ರಿಯೆಯ ಕರ್ತರಾಗಿ ಕಂ
ದರೂ, ಅವರು ನಿಶ್ಚಯವಾಗಿ ಅಕರ್ತರಾಗಿರುವರು.

(ಲಯಚಿಂತನ) ೨೬೭—೨೮೦ ॥

॥೨೬೭॥ ಸರ್ವಪ್ರಪಂಚದ ಈಶ್ವರ ರೂಪತೆಯು.

ಈ ರೀತಿಯಿಂದ ಆಚಾರ್ಯನು ಶಿಷ್ಯನಿಗೆ ಗೌಪ್ಯತತ್ವದ ಉಪದೇಶ
ವನ್ನು ಮಾಡಿದರೂ ಸಹ ಶಿಷ್ಯನ ಮುಖವು ಪ್ರಸನ್ನವಾಗದಿರುವದನ್ನು ಕಂ
ಡು ಶಿಷ್ಯನು ಕೃತಾರ್ಥನಾಗಲಿಲ್ಲ ವೆಂದು ಗುರುವು ತಿಳಿದನು. ಶಿಷ್ಯನು
ಯಾವುದುವೇಳೆ ಕೃತಾರ್ಥನಾಗಿದ್ದರೆ ಅವನ ಮುಖವು ಪ್ರಸನ್ನವಾಗುತ್ತಿತ್ತು
ಎಂದುತಿಳಿದು ಪುನಃ ಸ್ಥೂಲರೀತಿಯಿಂದ ಉಪದೇಶ ಮಾಡುವದರ ಸಲು
ವಾಗಿಲಯ ಚಿಂತನವನ್ನು ಹೇಳುವನು.

॥ ಸವೈಯಾ ಛಂದಾ ॥

ಮಾಟೀಕೂ ಕಾರಜ ಘಟ ಜೈಸ್ಯೆ ।
ಮಾಟೀ ತಾಕೆ ಬಾಹರಿ ನಾಂಹಿ ॥
ಜಲತೈ ಫೇನ ತರಂಗ ಬುದ ಬುದಾ ।
ಉಪಜತ ಜಲತ್ಯೆ ಜುದೆ ಸು ನಾಹಿ ॥
ಐಸ್ಯೆ ಜೊ ಜಾಕೋ ಹೈ ಕಾರಜ ।
ಕಾರನ ರೂಪ ಪಿಛಾನಹು ತಾಹಿ ॥
ಕಾರನ ಈಸ ಸಕಲಕೊ ‘ ಸೋಮ್ಯೆ, ।
ಲಯ ಚಿಂತನ ಜಾನಹು ವಿಧ ಯಾಹಿ ॥ ೧೬೭ ॥

ಟೀಕಾ—ಮೃತ್ತಿಕಾ ಕಾರ್ಯದ ಒಳಹೊರಗೆ ಮೃತ್ತಿಕೆಯೇ ಇರುವುದು
ಆದ್ದರಿಂದ ಮೃತ್ತಿಕೆಯ ಸರ್ವಕಾರ್ಯವು ಮೃತ್ತಿಕಾ ಸ್ವರೂಪವೇ ಅದೆ.
ಫೇನ (ನೀರಿನ ಬುರುಗು) ಮೊದಲಾದ ಜಲದ ಕಾರ್ಯಗಳು ಜಲಸ್ವರೂಪ
ವೇ ಆಗಿವೆ ಹೀಗೆ ಯಾವ ಕಾರ್ಯವು ಇರುವದೋ ಅದು, ತತ್ಕಾರಣಸ್ವ
ರೂಪದಿಂದ ಭಿನ್ನವಿಲ್ಲ, ಆದರೆ ಕಾರಣಸ್ವರೂಪವೇನು ಕಾರ್ಯವದೆ.
ಸಕಲ ಪ್ರಪಂಚದ ಮೂಲಕಾರಣ ಈಶ್ವರನಾಗಿದ್ದಾನೆ. ಈ ಕಾರಣ

ದಿಂದ ಸರ್ವಕಾರ್ಯಪ್ರಪಂಚವು ಈಶ್ವರ ಸ್ವರೂಪದಿಂದ ಭಿನ್ನವಿಲ್ಲ. ಪ್ರಪಂಚದ ಸ್ವರೂಪವೂ ಈಶ್ವರನೇ ಆಗಿದ್ದಾನೆ.

ಆ ಈಶ್ವರನು ನಾನು ಇದ್ದೇನೆ. ಈ ರೀತಿಯಿಂದ ಲಯಚಿಂತನ... ತಿಳಿದುಕೊಂಡು ನೀನು ಮಾಡು.

**ಟಿಪ್ಪಣಿ**— ೧ ವಾಂಛಿತ ಪದಾರ್ಥದ ಪ್ರಾಪ್ತಿಯಿಂದ, ಚಿತ್ತದ ಚಂಚಲತೆ...

ವಾದ ಇಚ್ಛಾರೂಪ ವೃತ್ತಿಯನಾಶರೂಪ ನಿಮಿತ್ತದಿಂದ ಸ್ಥಿರದ... ಅಂತರ್ಮುಖದಲ್ಲಿ ಉದಯವಾದ ಸಾತ್ವಿಕೀ ವೃತ್ತಿಯಲ್ಲಿ ಸ್ವರೂಪಭೂತ... ದದ ಪ್ರತಿಬಿಂಬ ಉಂಟಾಗುವದು, ಆ ಆನಂದದ ಅನುಭವದಿಂದ ಮು... ಪ್ರಸನ್ನತೆಯುಂಟಾಗುವದು.

ಶಿಷ್ಯನಿಗೆ ಜ್ಞಾನದ್ವಾರಾ ವಾಂಛಿತ ಕಾರ್ಯಸಹಿತ ಅವಿದ್ಯೆಯ... ಯೂ ಮತ್ತು ಪರಮಾನಂದ ಪ್ರಾಪ್ತಿರೂಪ ಮೋಕ್ಷವೂ ಸಿದ್ಧವಾಗಲಿ... ಕಾರಣದಿಂದ ಇಚ್ಛೆಯ ನಿವೃತ್ತಿಯು ಆಗಲಿಲ್ಲ ಆದ್ದರಿಂದ ಅಂತರ್ಮುಖ... ಅನುದಯದಿಂದ ಸ್ವರೂಪಾನಂದದ ಪ್ರತಿಬಿಂಬದ ಅಭಾವವದೆ. ಇದ... ಪ್ರತಿಬಿಂಬ ಗೋಚರವಾದ ಅನುಭವದ ಅಭಾವದಿಂದ ಮುಖದಲ್ಲಿ ಪ್ರಸನ್ನ... ಉಂಟಾಗಲಿಲ್ಲ, ಈ ಮುಖದ ಅಪ್ರಸನ್ನತಾರೂಪ ಚಿನ್ಹದಿಂದ ಇಷ್ಟ... ಅಪ್ರಾಪ್ತಿರೂಪ ಅಕೃತಾರ್ಥತೆಯ ಅನುಮತಿಯಾಗುವದು.

೨ ಕಾರ್ಯಕ್ಕೆ ಕಾರಣರೂಪವನ್ನು ತಿಳಿದುಕೊಂಡು ಮಾಡುವ ಚಿಂತನಕ್ಕೆ... ಚಿಂತನ ವೆನ್ನುತ್ತಾರೆ.

## ೨೭೮॥ ಸರ್ವ ಸೂಕ್ಷ್ಮ ಸೃಷ್ಟಿಯ ಅಪಂಚೀಕೃತ ಭೂತ ರೂಪತೆಯು.

ಲಯಚಿಂತನದ ಸಂಕ್ಷೇಪ ಕ್ರಮವು ಈ ವಿಧವಾಗಿರುವದು.

೧. ಸ್ಥೂಲ ಬ್ರಹ್ಮಾಂಡವೆಲ್ಲವೂ ಪಂಚೀಕೃತ ಭೂತಗಳ ಕಾ... ಅದರಲ್ಲಿ ಯಾವುದು ಪೃಥ್ವಿಯ ಕಾರ್ಯವೋ ಅದು ಪೃಥ್ವಿಯ ಸ್ವ... ಮತ್ತು ಜಲಕಾರ್ಯವು ಜಲಸ್ವರೂಪ ಈ ರೀತಿಯಿಂದ ಯಾವ... ಕಾರ್ಯವೊ ಆಭೂತ ಸ್ವರೂಪವದೆ. ಈ ರೀತಿಯಿಂದ ಸರ್ವಸ್ಥೂ... ಹ್ಮಾಂಡವು ಪಂಚೀಕೃತ ಭೂತ ಸ್ವರೂಪವದೆ.

೨. ಇದರಂತೆ ಪಂಚೀಕೃತ ಭೂತಗಳು ಸಹಾ ಅಪಂಚೀಕೃತ ಭೂ... ಕಾರ್ಯವದೆ. ಇದರಿಂದ ಅಪಂಚೀಕೃತ ಸ್ವರೂಪವೇ ಪಂಚೀಕೃತ... ವಿರುವವು ಆದರೆ ಭಿನ್ನವಲ್ಲ.

೩. ಅಂತಃಕರಣಾದಿ ಸೂಕ್ಷ್ಮ ಸೃಷ್ಟಿಯು ಸಹ ಅಪಂಚೀಕೃತ... ತಗಳ ಕಾರ್ಯವಾಗಿರುವದರಿಂದ ಅಪಂಚೀಕೃತ ಭೂತಗಳ ಕಾರ್ಯ...



...ವದರಿಂದ ಅಪಂಚೀಕೃತ ಭೂತಸ್ವರೂಪವಾಗಿವೆ. ಇವುಗಳಲ್ಲಿ—

(೧-೨) ಅಂತಃಕರಣ ಸರ್ವವು ಭೂತಗಳ ಸತ್ವಗುಣದ ಕಾರ್ಯವ... ಕಾರಣದಿಂದ ಸತ್ವಗುಣ ಸ್ವರೂಪವಾಗಿ ಇದೆ.

(೩-೭) ಭೂತಗಳ ರಜೋಗುಣಾಂಶದ ಕಾರ್ಯವಾದ ಪ್ರಾಣವು ...ಗುಣ ಸ್ವರೂಪವದೆ.

(೮-೯) ಗುದೇಂದ್ರಿಯವು ಪೃಥ್ವಿಯ ರಜೋಗುಣಾಂಶದ ಕಾರ್ಯ... ಪೃಥ್ವಿಯ ರಜೋಗುಣ ಸ್ವರೂಪವು ಘ್ರಾಣೇಂದ್ರಿಯವು. ಪೃಥ್ವಿಯ ...ಣದ ಕಾರ್ಯವು ಸತ್ವಗುಣ ಸ್ವರೂಪವು.

(೧೦-೧೧) ಇದರಂತೆ ರಸನೆ, ಮತ್ತು ಉಪಸ್ಥ ಜಲದ ಸತ್ವಗುಣ ರಜೋ... ಸ್ವರೂಪ.

(೧೨-೧೩) ನೇತ್ರ ಮತ್ತು ಪಾದ ತೇಜದ ಸತ್ವಗುಣ ರಜೋಗುಣ ...ಪ.

(೧೪-೧೫) ತ್ವಕ್ ಮತ್ತು ಪಾಣಿ ವಾಯುವಿನ ರಜೋಗುಣ ಸ್ವರೂಪ.

(೧೬-೧೭) ಶ್ರೋತ್ರ ಮತ್ತು ವಾಕ್ ಆಕಾಶದ ಸತ್ವಗುಣ, ರಜೋ... ಸ್ವರೂಪ.

ಈ ರೀತಿಯಿಂದ ಸರ್ವ ಸೂಕ್ಷ್ಮ ಸೃಷ್ಟಿಯು ಅಪಂಚೀಕೃತ ಭೂತ ...ಪವದೆ.

## ॥೨೭೯॥ ಸರ್ವ ಅನಾತ್ಮ ಪದಾರ್ಥಗಳ ಕ್ರಮದಿಂದ ಬ್ರಹ್ಮ ವಿಷಯದಲ್ಲಿ ಲಯಚಿಂತನ.

ಇದನ್ನು ಚಿಂತನೆಮಾಡಿ ಅಪಂಚೀಕೃತ ಭೂತಗಳ ಲಯಚಿಂತನ ಸಹಾ ಮಾಡಬೇಕು.

. ಪೃಥ್ವಿಯು ಜಲದ ಕಾರ್ಯವದೆ. ಇದರಿಂದ ಜಲಸ್ವರೂಪವದೆ.

. ತೇಜದ ಕಾರ್ಯಜಲ ತೇಜಸ್ವರೂಪವದೆ.

. ತೇಜವು ವಾಯುವಿನ ಕಾರ್ಯವಾಗಿರುವದರಿಂದ ವಾಯು ಸ್ವರೂಪವದೆ.

. ಆಕಾಶದ ಕಾರ್ಯವು ವಾಯು, ಇದು ಆಕಾಶ ಸ್ವರೂಪವದೆ.

. ತಮೋಗುಣ ಪ್ರಧಾನ ಪ್ರಕೃತಿಯ ಕಾರ್ಯ ಆಕಾಶ ಪ್ರಕೃತಿ ಸ್ವರೂಪವದೆ.

೬. ಮಾಯೆಯ ಅವಸ್ಥಾ ವಿಶೇಷವೇ ಪ್ರಕೃತಿಯು. ಇದರಿಂದ ಪ್ರಕೃತಿಯು ಮಾಯಾ ಸ್ವರೂಪವದೆ.

ಒಂದೇ ವಸ್ತುವಿಗೆ (೧) ಪ್ರಧಾನ, (೨) ಪ್ರಕೃತಿ, (೩) ಮಾಯಾ (೪) ಅವಿದ್ಯಾ (೫) ಅಜ್ಞಾನ (೬) ಶಕ್ತಿ, ಎಂಬ ನಾಮಗಳು ಅವೆ.

(೧) ಸರ್ವಕಾರ್ಯಗಳನ್ನು ತನ್ನಲ್ಲಿಯೇ ಲೀನಮಾಡಿಕೊಂಡು ಪ್ರಳ ಯದಲ್ಲಿ ಸ್ಥಿತ ಉದಾಸೀನ ಸ್ವರೂಪಕ್ಕೆ ಪ್ರಧಾನವೆನ್ನುತ್ತಾರೆ.

(೨) ಸೃಷ್ಟಿಯ ಉಪಾದಾನಯೋಗ್ಯ ತಮೋಗುಣ ಪ್ರಧಾನಸ್ವರೂ
೧
ಪಕ್ಕೆ ಪ್ರಕೃತಿ ಅನ್ನುತ್ತಾರೆ.

(೩) ದೇಶಕಾಲಾದಿ ಸಾಮಗ್ರಿಯ ಹೊರ್ತು ಇಂದ್ರಜಾಲದಿಂದ ದುರ್ಘಟ ಪದಾರ್ಥಗಳ ಉತ್ಪತ್ತಿಯಾಗುವದು. ಈ ಇಂದ್ರಜಾಲಕ್ಕೆ ಮಾಯಾ ಅನ್ನುತ್ತಾರೆ, ಇದರಂತೆ ಅಸಂಗ ಅದ್ವಿತೀಯ ಬ್ರಹ್ಮನಲ್ಲಿ ಜಗ ದಿಕ ದುರ್ಘಟನೆಗಳು ಉತ್ಪತ್ತಿಯಾಗಿದ್ದರಿಂದ ಮಾಯಾ ಅನ್ನುತ್ತಾರೆ

(೪) ಸ್ವರೂಪಕ್ಕೆ ಆಚ್ಛಾದನ ಮಾಡಿರುವದು. ಇದರಿಂದ ಅವಿದ್ಯಾ ಅನ್ನುತ್ತಾರೆ

(೫) ಬ್ರಹ್ಮ ವಿದ್ಯೆಯಿಂದ ನಾಶವಾಗುವದು. ಇದರಿಂದ ಅಜ್ಞಾನ ಅನ್ನುತ್ತಾರೆ.

(೬) ಸ್ವತಂತ್ರವಾಗಿ ಎಂದೂ ಇರುವದಿಲ್ಲ. ಚೇತನಾಶ್ರಿತವಾಗಿ ಇರುವದು. ಇದರಿಂದ ಶಕ್ತಿಯೆಂದೂ ಅನ್ನುತ್ತಾರೆ.

ಈ ರೀತಿಯಿಂದ ಪ್ರಕೃತ್ಯಾದಿ ಪ್ರಧಾನದಲ್ಲಿಯೇ ಭೇದವಿಲ್ಲದ್ದ ರಿಂದ ಪ್ರಧಾನ ರೂಪವದೆ.

೭. ಈ ಪ್ರಧಾನವು ಬ್ರಹ್ಮಚೇತನದ ಶಕ್ತಿಯದೆ. ಪುರುಷನ ಸಾಮರ್ಥ್ಯರೂಪ ಶಕ್ತಿಯು ಪುರುಷನಿಂದ ಭಿನ್ನವಿಲ್ಲವೋ ಹಾಗೆ ಪ್ರಳಯ
೧
ದಲ್ಲಿಯ ಪ್ರಧಾನರೂಪಶಕ್ತಿಯು ಬ್ರಹ್ಮಚೈತನ್ಯದಿಂದ ಭಿನ್ನವಾಗಿರುವ

ಈ ಪ್ರಕಾರದಿಂದ ಸರ್ವ ಅನಾತ್ಮ ಪದಾರ್ಥಗಳನ್ನು ಬ್ರಹ್ಮನ ದಲ್ಲಿ ಲಯಚಿಂತನಮಾಡಿ, "ಆ ಅದ್ವಿತೀಯ ಬ್ರಹ್ಮನು ನಾನು ಇದ್ದೇನೆ" ಎಂಬದನ್ನು ಚಿಂತನ ಮಾಡಬೇಕು.

ಟಿಪ್ಪಣಿ. ಯದ್ಯಪಿ ಬ್ರಹ್ಮಶಕ್ತಿಯು ಬ್ರಹ್ಮದಿಂದ ಭಿನ್ನವೆಂದು ಹೇಳಿದರೆ ಅದ್ವೈತ ಶ್ರುತಿ ವಿರುದ್ಧವಾದೀತು. ಮತ್ತು ಅಭಿನ್ನವೆಂದು ಹೇಳಿದರೆ ಶಕ್ತಿಗೆ ಬ್ರಹ್ಮರೂಪ ಉಂಟಾಗುವದರಿಂದ ಬ್ರಹ್ಮನಿಂದ ಭಿನ್ನವಾದ ಶಕ್ತಿ



ದಿಂದ ಕಥನಮಾಡಿದ್ದು ವ್ಯರ್ಥವಾದೀತು! ಇದರಿಂದ ಶಕ್ತಿಗೆ ಬ್ರಹ್ಮನಿಂದ ಭೇದ ಅಭೇದ ಎರಡನ್ನೂ ಹೇಳಬೇಕಾಗುವದು. ಮತ್ತು ಭೇದ ಅಭೇದ ಇವರಡೂ ಧರ್ಮಗಳು ತಮ ಮತ್ತು ಪ್ರಕಾಶದಂತೆ ಒಂದೇ ಆಶ್ರಯದಲ್ಲಿ ಇರುವುದಿಲ್ಲ, ಪರಂತು ಶಕ್ತಿಗೂ ಬ್ರಹ್ಮಕ್ಕೂ ಇರುವ ಸಂಬಂಧವು ರಜ್ಜು ಸರ್ಪ ಸಂಬಂಧವತ್ ಕಲ್ಪಿತಭೇದ ಮತ್ತು ವಾಸ್ತವಿಕ ಅಭೇದ ರೂಪ ಮತ್ತು ಅನಿರ್ವಚನೀಯ ತಾದಾತ್ಮ್ಯ ಸಂಬಂಧವವೆ, ಇದರಿಂದ ಶಕ್ತಿಗೆ ತನ್ನ ಶಕ್ತಿ [ಆಶ್ರಯಯಿಂದ ವಾಸ್ತವಭೇದದ ಅಭಾವದಿಂದ ಮತ್ತು ಬೇರೆ ಪ್ರಮಾಣದಿಂದ ಭಿನ್ನ ಪ್ರತೀತಿಯ ಅಭಾವದಿಂದ ಈ ಶಕ್ತಿಯು ಬ್ರಹ್ಮನಿಂದ ಭಿನ್ನವಲ್ಲ, ಆದರೆ ಕಲ್ಪಿತ ಸರ್ಪವು ಪರಮಾರ್ಥದಿಂದ ರಜ್ಜು ರೂಪವಿರುವಂತೆ ಶಕ್ತಿಯು ಪರಮಾರ್ಥದಿಂದಬ್ರಹ್ಮರೂಪವೇ ಆಗಿರುವದು.

॥೨೮೦॥ ಧ್ಯಾನ ಮತ್ತು ಜ್ಞಾನದಭೇದ, ಅಹಂಗ್ರಹಧ್ಯಾನ,
೧

ಯಾವನಿಗೆ ಮಹಾವಾಕ್ಯವಿಚಾರಮಾಡಿದರೂ ಸಹ ಬುದ್ಧಿಮಾಂದ್ಯ ಮೊದಲಾದ ಪ್ರತಿಬಂಧದ ಅಪರೋಕ್ಷ ಜ್ಞಾನವಾಗುವದಿಲ್ಲವೋ ಅವನಿಗೆ ಲಯಚಿಂತನರೂಪಧ್ಯಾನವನ್ನು ಹೇಳಿದ್ದಾರೆ.

ಧ್ಯಾನ, ಮತ್ತು ಜ್ಞಾನ ಇವುಗಳಲ್ಲಿ ಇಷ್ಟೇ ಭೇದವಿರುವದು.

೧. ಜ್ಞಾನವು ಪ್ರಮಾಣ ಮತ್ತು ಪ್ರಮೇಯದ ಅಧೀನವದೆ. ವಿಧಿ ಅಥವಾ ಪುರುಷೇಚ್ಛಾಧೀನವಲ್ಲ.

೨. ಧ್ಯಾನವು ವಿಧಿಯ ಮತ್ತು ಪುರುಷನ ಇಚ್ಛೆಯ ಮತ್ತು ವಿಶ್ವಾಸದ ಮತ್ತ ಘಟದ ಅಧೀನವಾಗಿರುತ್ತದೆ.

೧. ಪ್ರಮಾಣ ನೇತ್ರ,ಮತ್ತು ಪ್ರಮೇಯ ಘಟಾದಿ ಇವುಗಳ ಸಂಬಂಧವಾದ ಕೂಡಲೆ ಪುರುಷೇಚ್ಛೆಯ ಹೊರ್ತು ಘಟದ ಪ್ರತ್ಯಕ್ಷ ಜ್ಞಾನವಾಗುತ್ತದೆ. ಭಾದ್ರಪದ ಶುದ್ಧ ಚತುರ್ಥಿಯ ಚಂದ್ರದರ್ಶನವು ನಿಷಿದ್ಧವದೆ ಎಂಬುದೂ ಮತ್ತು ಪುರುಷನಿಗೆ "ನನಗೆ ಚಂದ್ರದರ್ಶನವು ಆಗ ಬಾರದು" ಎಂಬ ಇಚ್ಛೆಯು ಇರುತ್ತದೆ. ಆದರೂ ಯಾವದೊ ಒಂದು ನಿಮಿತ್ತದಿಂದ ನೇತ್ರಕ್ಕೂ ಚಂದ್ರನಿಗೂ ಸಂಬಂಧವಾದ ಕೂಡಲೇ ಚಂದ್ರನ ಪ್ರತ್ಯಕ್ಷಜ್ಞಾನವು ಅವಶ್ಯವಾಗಿ ಆಗುತ್ತದೆ. ಈ ರೀತಿಯಿಂದ ಜ್ಞಾನವು ಪ್ರಮಾಣ ಪ್ರಮೇಯಗಳಿಗೆ ಅಧೀನವಾಗಿವೆ. ವಿಧಿ, ಮತ್ತು ಇಚ್ಛೆಯ ಅಧೀನವಾಗಿರುವದಿಲ್ಲ.

೨. "ಸಾಲಿಗ್ರಾಮವು ವಿಷ್ಣುರೂಪವದೆ" ಎಂಬುದನ್ನು ಧ್ಯಾನಮಾಡಿ

ದರೆ ಅವನಿಗೆ ಉತ್ತಮಫಲವು ಪ್ರಾಪ್ತವಾಗುತ್ತದೆ. ಇಲ್ಲಿ ಶಾಸ್ತ್ರಪ್ರಮಾ ದಿಂದ ವಿಷ್ಣುವಿನ ಚತುರ್ಭುಜ ಮೂರ್ತಿಯನ್ನು ಶಂಖ, ಚಕ್ರ, ಗದಾ ಪದ್ಮ ಲಕ್ಷ್ಮೀಸಹಿತವಾಗಿ ತಿಳಿಯುತ್ತೇವೆ. ಮತ್ತು ನೇತ್ರಪ್ರಮಾಣದಿ ಸಾಲಿಗ್ರಾಮಶಿಲೆಯೆಂದು ತಿಳಿಯುತ್ತೇವೆ. ತಥಾಪಿ ವಿಧಿ, ವಿಶ್ವಾಸ ಗಳಿಂದ ಸಾಲಿಗ್ರಾಮವು ವಿಷ್ಣುಮೂರ್ತಿಯದೆ. ಎಂಬ ಧ್ಯಾನವಾಗು ಆದರೆ ಈ ಧ್ಯಾನವು ಅನೇಕ ಪ್ರಕಾರವಾಗಿದೆ.

(೧) ಒಂದೆಡೆಯಲ್ಲಿ ಅನ್ಯವಸ್ತುವಿನಲ್ಲಿ ಅನ್ಯರೂಪದಿಂದ ಧ್ಯಾನವಾ ತ್ತದೆ. ಹೇಗೆಂದರೆ, ಸಾಲಿಗ್ರಾಮವನ್ನು ವಿಷ್ಣುರೂಪದಿಂದ ಧ್ಯಾನಿಸುತ್ತ

೪

ಈ ಧ್ಯಾನಕ್ಕೆ ಪ್ರತೀಕಧ್ಯಾನವೆನ್ನುತ್ತಾರೆ.

(೨) ವೈಕುಂಠವಾಸಿಯಾದ ವಿಷ್ಣುವಿನ ಶಂಖ, ಚಕ್ರ, ಗದಾಸಹ ಚತುರ್ಭುಜ ಮೂರ್ತಿಯ ಧ್ಯಾನಕ್ಕೆ ಧ್ಯೇಯದ ಅನುಸಾರ ಧ್ಯಾನ ತ್ತಾರೆ. ಇಲ್ಲಿ ಅನ್ಯರೂಪದಿಂದ ಧ್ಯಾನವಿಲ್ಲ, ಕೇವಲ ಶಾಸ್ತ್ರದಿಂದ ತಿ ಕೊಂಡದ್ದದೆ. ಶಾಸ್ತ್ರಗಳು ಶಂಖ ಚಕ್ರಾದಿ ಸಹಿತವಾಗಿ ವಿಷ್ಣುಸ್ವರೂ

೫

ಪನ್ನು ಹೇಳುತ್ತವೆ. ಇದರಿಂದ ಧ್ಯೇಯಾನುಸಾರಧ್ಯಾನವದೆ.

ವಿಧಿ, ವಿಶ್ವಾಸ, ಇಚ್ಛೆಯ ಹೊರ್ತು ಧ್ಯಾನವುಂಟಾಗುವದಿಲ್ಲ.

(೧) "ಇದನ್ನು ಉಪಾಸನೆ ಮಾಡಬೇಕು," ಎಂದು ಪ್ರ ಪ್ರೇರೇಪಿಸುವ ವಚನಕ್ಕೇ ವಿಧಿಯೆನ್ನಬೇಕು

(೨) ಆ ವಚನದಲ್ಲಿ ಯಾವ ಶ್ರದ್ಧೆಯು ಇರುವದೋ ಅದಕ್ಕೆ ವಿಶ್ವಾ ವೆನ್ನಬೇಕು.

(೩) ಅಂತಃಕರಣದ ಕಾಮನಾರೂಪ ರಜೋಗುಣವೃತ್ತಿಗೆ ಇಚ್ಛೆ ಎನ್ನಬೇಕು.

ಧ್ಯಾನಕ್ಕೆ ಈ ಮೂರು ಹೇತುಗಳು ಇರುವವು, ಜ್ಞಾನಕ್ಕೆ ಇಲ್ಲ.

(೪) ಧ್ಯಾನವು ಹಟದಿಂದ ಆಗುವದು. ಜ್ಞಾನದಲ್ಲಿ ಹಟದ ಅಪೇ ಯು ಇರುವದಿಲ್ಲ. ಕಾರಣವೇನೆಂದರೆ, ನಿರಂತರ ಧ್ಯೇಯಾಧಿಕಾರ ವೃತ್ತಿ ಧ್ಯಾನವೆನ್ನಬೇಕು. ಈ ವೃತ್ತಿಯಲ್ಲಿ ವಿಕ್ಷೇಪವಿದ್ದರೆ ಹಟದಿ ವೃತ್ತಿಯನ್ನು ನೆಲೆಗೊಳಿಸಬೇಕು. ಮತ್ತು ಜ್ಞಾನರೂಪ ಅಂತಃಕ ವೃತ್ತಿಯಿಂದ ತಾತ್ಕಾಲಿಕ ಆವರಣ ಭಂಗವಾದರೆ ಆಮೇಲೆ ವೃತ್ತಿಯ ತಿಯ ಉಪಯೋಗವಿಲ್ಲ, ಇದರಿಂದ ಹಟದ ಅಪೇಕ್ಷೆಯಿಲ್ಲ.



ವೈಕುಂಠವಾಸಿಯಾದ ಚತುರ್ಭುಜ ವಿಷ್ಣುವಿನ ಧ್ಯಾನದಂತೆ "ನಾ ನು ಬ್ರಹ್ಮನಿದ್ದೇನೆ" ಎಂಬ ಧ್ಯಾನವೂ ಸಹ ಧ್ಯೇಯಾನುಸಾರ ಆದೆ. ಪ್ರತೀ ಕವಲ್ಲ. ಆದರೂ ಇದು ಅಹಂಗ್ರಹ ಧ್ಯಾನವದೆ.

ಧ್ಯೇಯಸ್ವರೂಪವನ್ನು ತನ್ನಿಂದ ಅಭೇದಮಾಡಿ ಚಿಂತನಮಾಡುವದೇ ಅಹಂಗ್ರಹ ಧ್ಯಾನವೆನಿಸಿಕೊಳ್ಳುತ್ತದೆ.

ಯಾವ ಪುರುಷನಿಗೆ ಅಪರೋಕ್ಷಜ್ಞಾನವಾಗುವದಿಲ್ಲವೋ, ಅವನು ವಿಧಿ, ವಿಶ್ವಾಸ, ಹಟಗಳಿಂದ ನಿರಂತರವಾಗಿ "ನಾನು ಬ್ರಹ್ಮನಿರುವೆನು" ಈ ವೃತ್ತಿಯ ಸ್ಥಿತಿರೂಪ ಅಹಂಗ್ರಹಧ್ಯಾನಮಾಡಲು, ಅವನಿಗೆ ಜ್ಞಾನವುಂ ಟಾಗಿ ತನ್ಮೂಲಕ ಮೋಕ್ಷಪ್ರಾಪ್ತಿಯಾಗುತ್ತದೆ. ||೧೬೭||

ಟಿಪ್ಪಣಿ, ೧, ಇಲ್ಲಿ ಆದಿಶಬ್ದದಿಂದ ೧. ಬುದ್ಧಿಮಾಂದ್ಯ ಸಹವರ್ತಿಯಾದ ವಿಷಯಾ ಸಕ್ತಿ, ಕುತರ್ಕ, ಮತ್ತು ವಿಪರ್ಯಯ ದುರಾಗ್ರಹರೂಪ ತ್ರಿವಿಧವರ್ತಮಾನ ಪ್ರತಿಬಂಧದ ಗ್ರಹಣಮಾಡಬೇಕು, ಮತ್ತು ೨. ಧನ ಪುತ್ರಾದಿರೂಪ ಪ್ರಿ ಯವಸ್ತುಗಳ ನಾಶವಾದಮೇಲೆಯೂ ಇವುಗಳ ಅನುಸಂಧಾನ (ಅವಿಸ್ಮ ರಣ) ರೂಪ ಭೂತ ಪ್ರತಿಬಂಧದ ಗ್ರಹಣಮಾಡಬೇಕು. ೩. ಬ್ರಹ್ಮಲೋ ಕಾದಿಗಳ ಇಚ್ಛೆ ಅಥವಾ ಜನ್ಮಾಂತರದ ಹೇತು, ಶೇಷಪ್ರಾರಬ್ಧರೂಪಭವಿ ಷ್ಯ (ಆಗಾಮಿ) ಪ್ರತಿಬಂಧದ ಗ್ರಹಣಮಾಡಬೇಕು.

ಈ ಜ್ಞಾನೋತ್ಪತ್ತಿಯ ಪ್ರತಿಬಂಧಗಳ ನಿರೂಪಣೆಯನ್ನು ಪಂಚದಶಿಯಲ್ಲಿಯ ಧ್ಯಾನದೀಪನಾಮಕ ಒಂಭತ್ತನೇ ಪ್ರಕರಣದ ೩೭ನೇ ಶ್ಲೋಕದಿಂದ ೭೫ನೇ ಶ್ಲೋಕಪರಿಯಂತ ಮತ್ತು ವೇದಾಂತಾರ್ಥ ಮಂಜೂಷಾದಲ್ಲಿ ಪಂಡಿತ ಪೀ ತಾಂಬರಜಿಯವರು ಸವಿಸ್ತಾರವಾಗಿ ಮಾಡಿದ್ದಾರೆ. ಜಿಜ್ಞಾಸುಗಳಾದ ವರು ಅಲ್ಲಿ ನೋಡಿಕೊಳ್ಳಬೇಕು.

(೨) ಲ್ಲಿ ಈ ಕೆಳಗಿನ ರಹಸ್ಯವದೆ. ೧ ಭ್ರಾಂತಿಜ್ಞಾನ ೨. ಸ್ಮೃತಿಜ್ಞಾನ ೩. ಪ್ರಮಾ ಜ್ಞಾನ, ಎಂಬ ಭೇದಗಳಿಂದ ಜ್ಞಾನವು ಮೂರು ಇವು ಭ್ರಾಂತಿಯುಕ್ತವಾ ಗಿವೆ, ಇದರಲ್ಲಿ ೧. ಭ್ರಾಂತಿಜ್ಞಾನವು ಕೇವಲ ವಸು (ಭ್ರಮರೂಪ ವಿಷ ಯ] ವಿನ ಅಧೀನವಾಗಿದೆ' ಮತ್ತು ೨ ಸ್ಮೃತಿಜ್ಞಾನವು ತನ್ನ ವಿಷಯದ ಸದೃಶ ಅಥವಾ ತತ್ಸಂಬಂಧೀ ವಸ್ತುವಿನ ಜ್ಞಾನದಿಂದ ಅಥವಾ ತನ್ನ ವಿಷ ಯ (ಪೂರ್ವದೃಷ್ಟವಸ್ತು) ದ ಚಿಂತನದಿಂದ ಉದಯವಾದ ಪೂರ್ವದೃಷ್ಟ ಸ್ತುದ ಚಿಂತನದಿಂದ ಉದಯವಾದ ಪೂರ್ವದೃಷ್ಟ ಉದಯವಾದ ಪೂರ್ವ ವಸ್ತುವಿನ ಮನೋಮಯ ಆಕಾರದ ಅಧೀನವದೆ ಮತ್ತು ೩ ಪ್ರಮಾಜ್ಞಾ ನದ ಅಂತರ್ಗತವಾದ ಸುಖಾದಿಗಳ ಜ್ಞಾನವು ನ್ಯಾಯಮತದಲ್ಲಿ ಮತ್ತು ವಾಚಸ್ಪತಿಮಿಶ್ರನ ಮತದ ಮನೋರೂಪ ಪ್ರಮಾಣ ಮತ್ತು ಸುಖಾದಿ ರೂಪ ಪ್ರಮೇಯದ ಅಧೀನವದೆ;

ಪರಂತು ಸಿದ್ಧಾಂತದಲ್ಲಿ ಮನದಲ್ಲಿ ಪ್ರಮಾಣದ ಅನಂಗೀಕಾರದಿಂದ ಸುಖಾ

ಗಳ ಜ್ಞಾನವು ಕೇವಲ ಪ್ರಮೇಯ (ಸುಖಾದಿ ರೂಪವಸ್ತು)ದ [illegible] ವದೆ ಮತ್ತು ಅನ್ಯವಾದ ಯಾವ ಪ್ರಮಾಜ್ಞಾನವಿರುವದೋ ಅದು [illegible] ದ್ರಿಯ ಅನುಮಾನಾದಿರೂಪ ಪ್ರಮಾಣದ ಅಪ್ರಮೇಯರೂಪ ವಸ್ತುವಿನ [illegible] ಸಂಬಂಧವಾಗಿರುವದು ಅದರ ಅಧೀನವೂ ಆಗಿ [illegible]ವದು. ಇವುಗಳಲ್ಲಿ [illegible] ಶಬ್ದಪ್ರಮಾಣದಿಂದ ಜನ್ಯವಾದ ಬ್ರಹ್ಮಜ್ಞಾನರೂಪ ಶಾಬ್ದೀಪ್ರಮಾ[illegible] ಈಮಹಾವಾಕ್ಯರೂಪ ಶಬ್ದಪ್ರಮಾಣದ ಮತ್ತು ಪ್ರತ್ಯಕ್ ಅಭಿನ್ನ [illegible] ರೂಪ ಪ್ರಮೇಯದ ಲಕ್ಷಣರವೃತ್ತಿರೂಪ ಪರಂಪರಾ ಸಂಬಂಧವದೆ, [illegible] ಜ್ಞಾನದ ಅಧೀನವದೆ. ಮತ್ತು ೨. ಅನ್ಯಲೌಕಿಕ ಪದಾರ್ಥಗಳ ಶಾಬ್[illegible] ಮಾರೂಪಜ್ಞಾನವಿರುವದಲ್ಲಾ. ಇದು ೧. ಕೆಲವೆಡೆಯಲ್ಲಿ ಶಕ್ತಿವೃತ್ತಿ[illegible] ಸಂಬಂಧದ ಜ್ಞಾನದ ಅಧೀನವದೆ, ಈ ರೀತಿಯಿಂದ ೨. ಕೆಲವೆಡೆ[illegible] ಲಕ್ಷಣವೃತ್ತಿರೂಪ ಸಂಬಂಧದ ಜ್ಞಾನದ ಅಧೀನವದೆ, ಈ ರೀತಿಯಿ[illegible]

ಒಂದು ಜ್ಞಾನವು ಜ್ಞೇಯರೂಪ ವಸ್ತುಮಾತ್ರದ ಅಧೀನವದೆ ಒಂದು ಜ್ಞಾ[illegible] ಮಾಪ್ರಮೇಯರೂಪ ವಸ್ತುವಿನ ಸಂಬಂಧ ಅಥವಾ ತತ್ಸಂಬಂಧದ [illegible] ಅಧೀನವದೆ.

ಭ್ರಮ ಪ್ರಮಾ ಇದು ಸಾಧಾರಣ ಜ್ಞಾನದ ವಿಷಯಕ್ಕೆ ಜ್ಞೇಯ [illegible] ತ್ತಾರೆ, ಇದರಲ್ಲಿ ಪ್ರಮೇಯತ್ವವು ಇರುವದಿಲ್ಲ,

ಕೇವಲ ಪ್ರಮಾಜ್ಞಾನದ ವಿಷಯಕ್ಕೆ ಪ್ರಮೇಯ ಅನ್ನುತ್ತಾರೆ, ಇದ[illegible] ಜ್ಞೇಯತ್ವವು ಸಹ ಅದೆ. ಈ ಪ್ರಕಾರವು ಸರ್ವಜ್ಞಾನ ವಸ್ತುಗಳ[illegible] ವದೆ,

[೧] ಇಲ್ಲಿ "ವಸ್ತು,, ಶಬ್ದದಿಂದ ಈಶ್ವರಂತೆ ಅಥವಾ ಮನೋಮಯ [illegible] ಕ್ಷಜ್ಞಾನದ ವಿಷಯ ಅಥವಾ ಭ್ರಮರೂಪ ವಸ್ತುವಿನೊಡನೆ ಪ್ರ[illegible] ದ್ವಾರಾ ಅಥವಾ ಸಾಕ್ಷಾತ್ ವೃತ್ತಿಯ ಸಂಬಂಧದ ಗ್ರಹಣವದೆ, [illegible] ದಿಂದ ಜ್ಞಾನವು ವಿಧಿ ಮೊದಲಾದವುಗಳ ಅಧೀನವಲ್ಲ, ಮತ್ತು ೨. [illegible] ಉಪಾಸನಾ ಇದು ವಸ್ತುವಿನ ಅಧೀನವಲ್ಲ, ಆದರೆ ಕರ್ತೃವಿನ ಅಧೀ[illegible]

ಯದ್ಯಪಿ ಧ್ಯಾನವು ಸಹ ಮನದ ವೃತ್ತಿರೂಪವದೆ, ತಥಾಪಿ ಇದು [illegible] ನಿಂದ ಮಾಡಲ್ಪಟ್ಟ ಇಚ್ಛಾ ಮೊದಲಾದವುಗಳ ಅಧೀನವದೆ, ವಸ್ತು[illegible] ಧೀನವಲ್ಲ, ಇದರಿಂದ ಇದು ಮಾನಸಜ್ಞಾನವಲ್ಲ, ಆದರೆ ಮಾನಸ[illegible] ಯಾಗಿರುವದು.

೩, ಅಲ್ಲಿ ವಿಧಿ, ಮತ್ತು ಪುರುಷನ ಇಚ್ಛಾ ವಿಶ್ವಾಸ ಮತ್ತು ಹಠದ [illegible] ಸೂಚಕವದೆ ಯಾವ ಪ್ರಕಾರದಿಂದಲೂ ವಿಧಿ ಮೊದಲಾದವುಗಳ [illegible] ನವಾಗಿ ಜ್ಞಾನವಿಲ್ಲ ಈ ಪ್ರಕಾರವನ್ನು ಪಂಚದಶಿಯಲ್ಲಿಯ ಧ್ಯಾನ[illegible] ಕೆಯ ೭೪ ನೇ ಶ್ಲೋಕದ ಟಿಪ್ಪಣಿಯಲ್ಲಿ ಪಂಡಿತ ಪೀತಾಂಬರಜಿಯ[illegible] ಉಲ್ಲೇಖಿಸಿರುವರು ಅದ್ದರಿಂದ ಇಲ್ಲಿ ಬರೆದಿರುವದಿಲ್ಲ.

೪ ಯಾವನ ವೃತ್ತಿಯು ಶಾಸ್ತ್ರದ್ವಾರಾ ಪರೋಕ್ಷಧ್ಯೇಯದಲ್ಲಿ ಸ್ಥಿತ[illegible] ವದಿಲ್ಲವೋ ಆ ಪುರುಷನು ಪುರುಷಪ್ರೇರಕ ಶಾಸ್ತ್ರದ ವಚನರೂ[illegible] ಯಿಂದ ಬೋಧಿತ (ಅನಧ್ಯೇಯದ ಪ್ರತಿನಿಧಿರೂಪ ವಸ್ತು ವಿಷಯದಲ್ಲಿ[illegible]



ಯ)ದ ಬುದ್ಧಿಯಿಂದ ಉಪಾಸನೆ (ಧ್ಯಾನ)ಗೆ ಪ್ರತೀಕಧ್ಯಾನ ಅನ್ನುತ್ತಾರೆ

೫. "ನಾನು ಬ್ರಹ್ಮನಿದ್ದೇನೆ,, ಈ ಆಕಾರದ ನಿರ್ಗುಣ ಉಪಾಸನಾರೂಪವೇ ಅಹಂಗ್ರಹ ಧ್ಯಾನವದೆ ಇದು ಸಹಾ ಧ್ಯೇಯಾನುಸಾರ ಧ್ಯಾನವದೆ.

೬. ಹೇಗೆ ಸಂವಾದಿಯ ಭ್ರಾಂತಿಯಿಂದ ಪ್ರವೃತ್ತನಾದ ಪುರುಷನಿಗೆ ಯಥಾರ್ಥಜ್ಞಾನದ್ವಾರಾ ಇಷ್ಟವಸ್ತುವಿನ ಲಾಭವಾಗುತ್ತದೆಯೋ ಹಾಗೆ ನಾನು ಬ್ರಹ್ಮನಿದ್ದೇನೆ. ಈ ವೃತ್ತಿಯ ಸ್ಥಿತಿರೂಪ ಅಹಂಗ್ರಹ ಧ್ಯಾನಮಾಡಲು ಅವನಿಗೆ [illegible]ಮಾ ಜ್ಞಾನದ್ವಾರಾ ಮೋಕ್ಷದ ಪ್ರಾಪ್ತಿಯಾಗುವದು.

ಯದ್ಯಪಿ ಧ್ಯಾನದ ವಿಷಯವಾದ ಬ್ರಹ್ಮವು ಪರಮಾರ್ಥರೂಪನಲ್ಲ. ಆದರೆ [illegible]ನಃ ಕಲ್ಪಿತವಾದದ್ದು ಇದರಿಂದ ಭ್ರಮರೂಪವದೆ. ಇದರಿಂದ ಇದನ್ನು ವಿಷ[illegible]ಯವನ್ನಾಗಿ ಮಾಡತಕ್ಕ ವೃತ್ತಿರೂಪ ಧ್ಯಾನವು ಸಹ ಭ್ರಾಂತಿಜ್ಞಾನವೇ ಅದೆ. [illegible]ಯಥಾರ್ಥಜ್ಞಾನವಲ್ಲ. ತಥಾಪಿ ಮಣಿಯ ಪ್ರಭಾವಿಷಯದಲ್ಲಿ ಮಣಿಬುದ್ಧಿ[illegible]ರೂಪ ಸಂವಾದೀ ಭ್ರಾಂತಿಯಿಂದ ಓಡತಕ್ಕ ಪುರುಷನಿಗೆ ಮಣಿಯ ಜ್ಞಾನದ್ವಾರ [illegible]ಮಣಿಯ ಪ್ರಾಪ್ತವಶ, ಉಕ್ತಜ್ಞಾನದಿಂದ ಬ್ರಹ್ಮಜ್ಞಾನವುಂಟಾಗಿ ಮೋಕ್ಷದ [illegible]ಪ್ರಾಪ್ತಿಯೂ ಸಂಭವಿಸುವದು.

ಸಂವಾದೀ ಭ್ರಮಯ ವರ್ಣನೆಯು ಪಂಚದಶಿಯ ಧ್ಯಾನ ದೀಪಿಕೆಯ ಆರಂಭದಲ್ಲಿ ಉಲ್ಲೇಖಿಸಲ್ಪಟ್ಟದೆ.

॥ ಪ್ರಣವದ ಉಪಾಸನಾ ॥೨೮೦—೩೦೩ ॥

॥೨೮೧॥ ಪ್ರಣವದ ಅಹಂಗ್ರಹಧ್ಯಾನ ॥

ಬೇರೆ ರೀತಿಯಿಂದ ಅಹಂಗ್ರಹದ ಉಪಾಸನೆಯನ್ನುಹೇಳುತ್ತೇನೆ

॥ಸನೈಯಾ ಛಂದ ॥

ಧ್ಯಾನ ಅಹಂಗ್ರಹ ಪ್ರನವರೂಪಕೊ ।<br>
ಕಹ್ಯೊ ಸುರೇಶ್ವರ ಶ್ರುತಿ ಅನುಸಾರ ॥<br>
ಅಚ್ಛರ ಪ್ರನವ ಬ್ರಹ್ಮಮುಮರೂಪ ಸು ।<br>
ಯೂ ಅನುಲವ ನಿಜಮತಿ ಗತಿಧಾರ ॥<br>
ಧ್ಯಾನಸಮಾನ ಆನ ನಹಿ ಯಾಕೆ ।<br>
ಪಂಚೀಕರನ ಪ್ರಕಾರ ವಿಚಾರ ॥<br>
ಜೊ ಯಹ ಕರತ ಉಪಾಸನುಸೊ ಮುನಿ ।<br>
ತುರಿತ ನಸೈ ಸಂಸಾರ ಅಪಾರ ॥೧೬೮॥

ಟೀಕಾ—ಎಲೈ ಶಿಷ್ಯನೇ ? ಪ್ರಣವರೂಪದ ಅಂದರೆ ಓಂಕಾರ ಸ್ವರೂ

೧

ಪದ ಅಹಂಗ್ರಹಧ್ಯಾನವನ್ನು ಮಾಂಡೂಕ್ಯ ಪ್ರಶ್ನ ಮೊದಲಾದಶ್ರುತಿಗಳ ಸಾರವಾಗಿ ಸುರೇಶ್ವರಾಚಾರ್ಯನಿಂದ ಹೇಳಲ್ಪಟ್ಟದೆ. ಅದನ್ನು ನೋಡು. ಅದರ ಸಂಕ್ಷೇಪ ಪ್ರಕಾರವು ಈ ವಿಧವಾಗಿರುವದು. "ಅ ರೂಪ ಬ್ರಹ್ಮನು ನಾನೇ ಇದ್ದೇನೆ. ಈ ರೀತಿಯಿಂದ ಅನುಭವ ಮಾತ್ರ ಅಂತರಾಯ ರಹಿತ ನಿಜಮತಿಯ ಗತಿ ಅಂದರೆ ವೃತ್ತಿಯು ರಮಾತ್ರ ಅಂತರಾಯ ರಹಿತ ನಿಜಮತಿಯ ಗತಿ ಅಂದರೆ ವೃತ್ತಿ ಧಾರ ಅಂದರೆ ಸ್ಥಿರಮಾಡು ಇದರ ಸಮಾನವಾದ ಧ್ಯಾನವಿಲ್ಲ. ಈ ಧ್ಯಾನದ ಪ್ರಕಾರವನ್ನು ಅಂದರೆ ವಿಶೇಷರೀತಿಯನ್ನು ಸುರೇಶ್ವ ರ್ಯಕೃತ ಪಂಚೀಕರಣ ನಾಮಕಗ್ರಂಥದಲ್ಲಿ ನೋಡಿಕೋ! ಯಾವನು ಉಪಾಸನೆಯನ್ನು ಮಾಡುವನೋ ಅವನು ಮುಮುಕ್ಷು ಅಪಾರವಾದ ಸಂಸಾರವನ್ನು ಸತ್ವರವಾಗಿ ನಾಶಪಡಿಸುವನು.

॥೨೮೨॥ ನಿರ್ಗುಣ ಮತ್ತು ಸಗುಣ ಪ್ರಣವದ ಉಪಾಸ ಫಲ ಸಹಿತ ಕಥನವು.

ಯದ್ಯಪಿ ಪ್ರಣವದ ಉಪಾಸನೆಯು ಅನೇಕ ಉಪನಿಷತ್ತುಗಳಲ್ಲಿ
೧
ತಥಾಪಿ ಮಾಂಡೂಕ್ಯ ಉಪನಿಷತ್ತಿನಲ್ಲಿ ವಿಶೇಷವದೆ; ಅದರ ವ್ಯಾ ದಲ್ಲಿ ಭಾಷ್ಯಕಾರನಾದ ಆನಂದಗಿರಿಯಿಂದ ; ಅದರ ರೀತಿಯು ವಾಗಿ ಬರೆಯಲ್ಪಟ್ಟದೆ. ಸುಲಭ ರೀತಿಯನ್ನು ವಾರ್ತಿಕಕಾರನು ಕರಣದಲ್ಲಿ ಉಲ್ಲೇಖಿಸಿರುವನು. ತಥಾಪಿ ಈ ಗ್ರಂಥಗಳನ್ನು ತಿಳಿ ಳ್ಳಲು ಯಾವನ ಬುದ್ಧಿಯು ಅಸಮರ್ಥವಾಗಿರುವದೋ ಅಂಥವ ವಾಗಿ ಪ್ರಣವದ ಉಪಾಸನಾ ರೀತಿಯನ್ನು ನಾವು ಬರೆಯುವೆವು. ವದ ಚಿಂತನೆಯನ್ನು ಎರಡು ವಿಧವಾಗಿ ಉಪನಿಷತ್ತುಗಳಲ್ಲಿ ಹೇಳ ಡೆ. ಅವು ಯಾವವೆಂದರೆ (೧) ಪರಬ್ರಹ್ಮರೂಪದಿಂದ ಪ್ರಣವದ (೨) ಅಪರ ಬ್ರಹ್ಮರೂಪದಿಂದ ಬ್ರಹ್ಮದ ಚಿಂತನೆ.

(೧) ನಿರ್ಗುಣ ಬ್ರಹ್ಮಕ್ಕೆ ಪರಬ್ರಹ್ಮ ಅನ್ನುತ್ತಾರೆ, (೨) ಸ ಬ್ರಹ್ಮಕ್ಕೆ ಅಪರ ಬ್ರಹ್ಮ ಅನ್ನುತ್ತಾರೆ (೧) ಪರಬ್ರಹ್ಮ ರೂಪದಿಂದ ವದ ಚಿಂತನೆಯನ್ನು ಮಾಡಲು ಅವನು ಮೋಕ್ಷವನ್ನು ಹೊಂದು (೨) ಅಪರಬ್ರಹ್ಮರೂಪದಿಂದ ಚಿಂತನ ಮಾಡಿದವನು ಬ್ರಹ್ಮಲೋಕ ಹೊಂದುವನು.



ಹೀಗೆ ನಿರ್ಗುಣ ಸಗುಣ ಭೇದದಿಂದ ಪ್ರಣವದ ಉಪಾಸನೆಯು ಎರಡು ಪ್ರಕಾರವಾಗಿದೆ ಅದರಲ್ಲಿ.

ಟಿಪ್ಪಣಿ—೧. ಇಲ್ಲಿ 'ಮಾಂಡೂಕ್ಯ' ಶಬ್ದದಿಂದ ಗೌಡ ಪಾದಾಚಾರ್ಯಕೃತ ಮಾಂಡೂಕ್ಯ ಉಪನಿಷತ್ತಿನ ಕಾರಿಕೆಯೂ ಸಹ ಗ್ರಹಣವದೆ,

॥೨೮೩॥ ನಿರ್ಗುಣ ರೂಪ ಪ್ರಣವ ಉಪಾಸನೆಯ ಪ್ರಕಾರದ ಪ್ರಾರಂಭವು.

ನಿರ್ಗುಣ ಉಪಾಸನೆಯ ರೀತಿಯನ್ನೇ ಬರೆದಿರುತ್ತಾರೆ. ಸಗುಣದ ರೀತಿಯನ್ನು ಹೇಳಿರುವದಿಲ್ಲ. ಕಾರಣವೇನಂದರೆ.

೧. ಯಾವನಿಗೆ ಬ್ರಹ್ಮಲೋಕದ ಇಚ್ಛೆಯು ಉಂಟಾಗುವದೋ ಅವ ನಿಗೆ ನಿರ್ಗುಣ ಉಪಾಸನೆಯಿಂದ ಸಹ ಕಾಮನಾರೂಪ ಪ್ರತಿಬಂಧದಿಂದ ಜ್ಞಾನದ್ವಾರಾ ತತ್ಕಾಲ ಮೋಕ್ಷವಾಗುವದಿಲ್ಲ. ಆದರೆ ಬ್ರಹ್ಮಲೋಕವೇ ಪ್ರಾಪ್ತವಾಗುತ್ತದೆ. ಅಲ್ಲಿ ಹಿರಣ್ಯಗರ್ಭ ಅಂದರೆ ಬ್ರಹ್ಮನಿಗೆ ಸಮಾನವಾಗಿ ಭೋಗವನ್ನು ಭೋಗಿಸಿ ಜ್ಞಾನವುಂಟಾಗಲು ಆಗ ಮೋಕ್ಷವಾಗುವದು.

೨. ಯಾವನಿಗೆ ಬ್ರಹ್ಮಲೋಕದ ಇಚ್ಛೆಯು ಉಂಟಾಗುವದಿಲ್ಲವೋ ಅವನಿಗೆ ಇಹಲೋಕದಲ್ಲಿಯೇ ಜ್ಞಾನವುಂಟಾಗಿ ಮೋಕ್ಷವಾಗುವದು.

ಈ ರೀತಿಯಿಂದ ಸಗುಣ ಉಪಾಸನೆಯ ಫಲವು ಸಹ ನಿರ್ಗುಣ ಉಪಾ ಸನೆಯು ಅಂತರ್ಭೂತವದೆ. ಈ ಕಾರಣದಿಂದ ನಿರ್ಗುಣ ಉಪಾಸನೆಯ ಪ್ರಕಾರವನ್ನು ಹೇಳಿರುವೆವು.

ಯಾವದು ಕಿಂಚಿತ್ ಕಾರಣ ಕಾರ್ಯವಸ್ತುವು ಅದೆಯೋ, ಅದು ಓಂಕಾರಸ್ವರೂಪವದೆ. ಈ ಕಾರಣದಿಂದ ಸರ್ವರೂಪ ಓಂಕಾರವದೆ.

೧. ಸರ್ವ ಪದಾರ್ಥಗಳಲ್ಲಿ ನಾಮ ಮತ್ತು ರೂಪ ಎಂಬ ಎರಡು ಭಾಗಗಳಿರುವವು, ಇವುಗಳಲ್ಲಿ ರೂಪಭಾಗವು ತಮ್ಮತಮ್ಮ ನಾಮ ಭೇದ ದಿಂದ ಪೃಥಕ್ ಆಗಿರುವುದು ಇಲ್ಲಿ ನಾಮ ಸ್ವರೂಪವೇ ರೂಪಭಾಗವದೆ. ಕಾರಣವೇನಂದರೆ, ಪದಾರ್ಥಗಳ ರೂಪ ಅಂದರೆ ಆಕಾರ. ಇದರ ನಾಮದಿಂ ದ ನಿರೂಪಣ ಮಾಡಲು, ಗ್ರಹಣ ಅಥವಾ ತ್ಯಾಗವಾಗುವದು ಇದು ತಿಳಿ ಯದ ಹೊರತು ಕೇವಲ ಆಕಾರದಿಂದ ವ್ಯವಹಾರವು ಸಿದ್ಧವಾಗುವದಿಲ್ಲ. ಇದರಿಂದ ನಾಮವೇ ಸಾರವದೆ. ಮತ್ತು ಆಕಾರದ ನಾಶವುಂಟಾದರೂ ಸಹ ನಾಮವು ಶೇಷವಾಗಿ ಉಳಿಯುವದು, ಹೇಗೆ ಘಟವು ನಾಶವಾದರೂ ಅದ ವ್ಯುತ್ಪತ್ತಿಯು ಶೇಷವಾಗಿ ಉಳಿಯುತ್ತದೆ. ಕಾರಣವೇನಂದರೆ ಘಟವು

ವೃತ್ತಿಕೆಯಿಂದ ಪೃಥಕ್‌ವಸ್ತುವು. ಅಲ್ಲ ವೃತ್ತಿಕಾ ಸ್ವರೂಪವೇ
ಇದರಂತೆ ಆಕಾರದನಾಶವಾದರೂ ಸಹ ವೃತ್ತಿಕಾವತ್ ಶೇಷವಾಗಿ
ದ ನಾಮದಿಂದ ಆಕಾರವು ಪೃಥಕ್ ಇಲ್ಲ.ನಾಮ ಸ್ವರೂಪವೇ ಆಕಾ

ಅಥವಾ ಹೇಗೆ ಘಟ ಮತ್ತು ಕುಂಡಗಳಿಂದ ವೃತ್ತಿಕೆಯು ಅ
ತವದೆಯೋ, ಮತ್ತು ಘಟಿ, ಕುಂಡ, ಮೊದಲಾದವುಗಳು ಪರಸ್ಪ
ಚಾರಿಗಳು ಅವೆ. ಇದರಿಂದ ಘಟ, ಕುಂಡಗಳು ಮಿಥ್ಯಾ, ಇವುಗಳಲ್ಲಿ

೧

ಗತವಾದ ವೃತ್ತಿಕೆಯು ಸತ್ಯವದೆ. ಇದರಂತೆ ಘಟದ ಆಕಾರವು
ವಿಧವಾಗಿವೆ, ಇದ್ದರೂ ಅವುಗಳಿಗೆಲ್ಲ ಒಂದೇ "ಘಟ" ಎಂಬ ಎರಡು
ರದ ನಾಮವು ಒಂದೇ ಅದೆ. ಈ ಆಕಾರಗಳು ಪರಸ್ಪರ ವ್ಯಭಿಚಾರಿ
ಮತ್ತು ಸರ್ವ ಘಟಗಳ ಆಕಾರಗಳಲ್ಲಿ ನಾಮವು ಒಂದೇ ಅನುಗತ

೨

ಇದರಿಂದ ಮಿಥ್ಯಾ ಆಕಾರವು ಸತ್ಯನಾಮದಿಂದ ಪೃಥಕ್ ಇರುವದಿ

ಈ ರೀತಿಯಿಂದ ಸರ್ವ ಪದಾರ್ಥಗಳ ಆಕಾರವು ತಮ್ಮ
ನಾಮದಿಂದ ಭಿನ್ನವಿಲ್ಲ, ಆದರೆ ನಾಮ ಸ್ವರೂಪವೇ ಆಕಾರವದೆ.

೨. ಈ ಸರ್ವ ನಾಮಗಳು ಓಂಕಾರದಿಂದ ಭಿನ್ನವಿಲ್ಲ, ಆದ
ಕಾರ ಸ್ವರೂಪವೇ ನಾಮವಾಗಿವೆ. ಕಾರಣವೇನಂದರೆ ವಾಚಕ
ನಾಮ ಅನ್ನುತ್ತಾರೆ. ಮತ್ತು ಲೌಕಿಕ, ವೈದಿಕ ಸರ್ವಶಬ್ದಗಳು ಓಂ
ದಿಂದಲೇ ಉತ್ಪನ್ನವಾಗಿರುತ್ತವೆ.ಇದು ಶ್ರುತಿಯಲ್ಲಿ ಪ್ರಸಿದ್ಧವದೆ. ಸ
ರ್ವಕಾರ್ಯವು. ಕಾರಣ ಸ್ವರೂಪ ಅದೆ. ಇದರಿಂದ ಓಂಕಾರದ ಕಾ
ವಾದ ಯಾವ ವಾಚಕ ಶಬ್ದರೂಪ ನಾಮವಿರುವುದೋ ಇದು ಓಂ
ಸ್ವರೂಪವದೆ.

ಈ ರೀತಿಯಿಂದ ರೂಪಭಾಗವು ನಾಮಸ್ವರೂಪ ಅದೆ, ಸರ್ವ ನಾ
ಗಳು ಓಂಕಾಸ್ವರೂಪ ಅವೆ.ಇದರಿಂದ ಸರ್ವ ಸ್ವರೂಪಗಳು ಓಂಕಾ

ಟಿಪ್ಪಣಿ—೧ ಘಟ, ಕುಂಡ, ಮೊದಲಾದವುಗಳ ಅಪೇಕ್ಷೆಯಿಂದ ವೃತ್ತಿ
ಬಹುಕಾಲ ಸ್ಥಾಯಿಾ ಅದೆ, ಇದರಿಂದ ಈ ಆಪೇಕ್ಷಿಕ ಸತ್ಯವೆಂದು ಹೇಳ್ಪ
೨ ಘಟದ ಅಪೇಕ್ಷೆಯಿಂದ 'ಘಟ' ಎಂಬ ಎರಡು ಅಕ್ಷರವುಳ್ಳ ನಾಮವು
ಕಾಲಪರ್ಯಂತ ಸ್ಥಾಯಿ ಅದೆ ಇದರಿಂದ ಪುಣ್ಯದ ಕ್ಷಯದಿಂದ ಮರಣ
ದತಕ್ಕ ಬಹುಕಾಲ ಸ್ಥಾಯಿಗಳಾದ ದೇವತೆಗಳಿಗೆ ಹೇಗೆ ಅಮರರೆಂದು
ಳುವರೋ ಹಾಗೆ ಈ ನಾಮವು ಸಹ ಸತ್ಯ [ನಿತ್ಯ] ಎಂದು ಹೇಳಿರು

||೨೪೪|| ಓಂಕಾರ ಮತ್ತು ಬ್ರಹ್ಮದ ಅಭೇದವು.

೩. ಹೇಗೆ (೧) ಸರ್ವಸ್ವರೂಪವು ಓಂಕಾರವದೆಯೋ ಹಾಗೆ



ರೂಪವು ಬ್ರಹ್ಮವದೆ. ಆದಕಾರಣ ಓಂಕಾರವು ಬ್ರಹ್ಮರೂಪವದೆ. (೨)
ಅಥವಾ ಓಂಕಾರವು ಬ್ರಹ್ಮವಾಚಕವದೆ. ಬ್ರಹ್ಮವು ವಾಚ್ಯವದೆ, ವಾಚ್ಯದ
ಮತ್ತು ವಾಚಕದ ಅಭೇದವದೆ. ಈ ಕಾರಣದಿಂದಲೂ ಸಹ ಓಂಕಾರವು
ಬ್ರಹ್ಮರೂಪವದೆ. ಮತ್ತು (೩) ವಿಚಾರದೃಷ್ಟಿಯಿಂದ ಯಾವ ಅಕ್ಷರವು
ಬ್ರಹ್ಮವಿಷಯದಲ್ಲಿ ಅಧ್ಯಸ್ತವದೆಯೋ, ಆ ಅಕ್ಷರಕ್ಕೆ ಬ್ರಹ್ಮವು ಅಧಿಷ್ಠಾನ
ವಾದೆ. ಅಧ್ಯಸ್ತದ ಸ್ವರೂಪವು ಅಧಿಷ್ಠಾನದಿಂದ ಬೇರೆಯಾಗಿರುವದಿಲ್ಲ.
ಈ ಕಾರಣದಿಂದಲೂ ಓಂಕಾರವು ಬ್ರಹ್ಮಸ್ವರೂಪವದೆ.

||೨೪೫|| ನಾಲ್ಕು ಪಾದಗಳ ಕಥನ ಪೂರ್ವಕ ಆತ್ಮವು ಬ್ರಹ್ಮ
ದಿಂದ ಮತ್ತು ವಿಶ್ವವು ವಿರಾಟದಿಂದ ಅಭೇದವು. ವಿರಾಟ
ವಿಶ್ವದ ಏಳು ಅಂಗಗಳೂ, ಹತ್ತೊಂಭತ್ತು ಮುಖಗಳು.

೪. ಬ್ರಹ್ಮರೂಪ ಓಂಕಾರದ ಆತ್ಮದಿಂದ ಸಹ ಅಭೇದ ಚಿಂತನ
ಮಾಡಬೇಕು. ಕಾರಣವೇನಂದರೆ.ಆತ್ಮವು ಬ್ರಹ್ಮದಿಂದ ಮುಖ್ಯಅಭೇದವದೆ.

೧

ಬ್ರಹ್ಮದ ನಾಲ್ಕುಪಾದಗಳು ಇದ್ದಂತೆ ಆತ್ಮಕ್ಕೂ ಸಹ ನಾಲ್ಕುಪಾದ
ಗಳಿರುವವು. ಪಾದ ಅಂದರೆ, ಭಾಗ, ಇವಕ್ಕೆ ಅಂಶವೆಂದೂ ಎನ್ನುತ್ತಾರೆ.
(೧) ವಿರಾಟ್, ಹಿರಣ್ಯಗರ್ಭ, ಈಶ್ವರ, ಮತ್ತು ತತ್ವದ ಲಕ್ಷ್ಯ, ಈಶ್ವರ
ಸಾಕ್ಷಿ, ಈ ನಾಲ್ಕು ಪಾದಗಳು ಬ್ರಹ್ಮದ್ದವೆ. (೨) ವಿಶ್ವ ತೈಜಸ ಪ್ರಾಜ್ಞ
ಮತ್ತು ತ್ವಂಪದದ ಲಕ್ಷ್ಯವಾದ ಜೀವ ಸಾಕ್ಷಿ ಈ ನಾಲ್ಕು ಪಾದಗಳು
ಆತ್ಮದ್ದವೆ. ಜೀವ ಸಾಕ್ಷಿಗೇ ತುರೀಯ ಅನ್ನುತ್ತಾರೆ.

(೧) ಸಮಷ್ಟಿ ಸ್ಥೂಲ ಪ್ರಪಂಚಸಹಿತ ಚೈತನ್ಯಕ್ಕೆ ವಿರಾಟ್ ಅನ್ನು
ತ್ತಾರೆ.

(೨) ವ್ಯಷ್ಟಿ, ಸ್ಥೂಲ, ಅಭಿಮಾನಿಯನ್ನು ವಿಶ್ವವೆನ್ನುತ್ತಾರೆ.

ವಿರಾಟ್‌ರೂಪ ವಿಶ್ವದ ಏಳು ಅಂಗಗಳು ಅವೆ, ಅವು ಯಾವವೆಂದರೆ;—

(೧) ಸ್ವರ್ಗಲೋಕವು ಶಿರಸ್ಸು, (೨) ಸೂರ್ಯ ನೇತ್ರ, (೩) ವಾಯು,
ಪ್ರಾಣ, (೪) ಆಕಾಶ, ದೇಹ, (೫) ಸಮುದ್ರಾದಿರೂಪ ಜಲ ,ಮೂತ್ರಸ್ಥಾ
ನ (೬) ಪೃಥ್ವಿಯು ಪಾದ, (೭) ಹೋಮಾಗ್ನಿಯು ಮುಖ, ಎಂಬ ಏಳು
ಅಂಗಗಳು ವಿಶ್ವದ ಅಂಗಗಳಾಗಿರುವುವು. ಯದ್ಯಪಿ ಮಾಂಡೂಕ್ಯ ಉಪನಿಷ
ತ್ತಿನಲ್ಲಿ ಸ್ವರ್ಗಲೋಕಾದಿ ಏಳು ಅಂಗಗಳು ವಿಶ್ವದವಲ್ಲ. ತಥಾಪಿ
ವಿರಾಟ್‌ದ ಅಂಗಗಳು ಆಗಿವೆ. ಆ ವಿರಾಟ್‌ದಿಂದ ವಿಶ್ವದ ಅಭೇದವದೆ.
ಈ ಕಾರಣದಿಂದ ವಿಶ್ವದ ಅಂಗಗಳೆನ್ನುತ್ತಾರೆ.

ಹೀಗೆಯೇ ವಿರಾಟ್ ವಿಶ್ವಕ್ಕೂ ಹತ್ತೊಂಭತ್ತು ಮುಖಗಳು ಇರುವವು. ಅವು ಯಾವವೆಂದರೆ, ಪಂಚಪ್ರಾಣಗಳು, ಪಂಚಕರ್ಮೇಂದ್ರಿಯಗಳು, ಪಂಚ ಜ್ಞಾನೇಂದ್ರಿಯಗಳು ಅಂತಃಕರಣ ಚತುಷ್ಟಯಗಳು. ಈ ಹತ್ತೊಂಭತ್ತು ಮುಖಗಳಂತೆ ಭೋಗಸಾಧನಗಳು ಅವೆ. ಈಕಾರಣದಿಂದಲೇ ಮುಖಗಳೆ ನ್ನುತ್ತಾರೆ. ಜಾಗ್ರದವಸ್ಥೆಯಲ್ಲಿ ಈ ಹತ್ತೊಂಭತ್ತು ಮುಖಗಳಿಂದ ಬಾಹ್ಯ ವೃತ್ತಿದ್ವಾರಾ ಶಬ್ದಾದಿಗಳ ಭೋಗವನ್ನು ಅನುಭವಮಾಡಿಕೊಳ್ಳುವದರಿಂದ ವಿರಾಟ್‌ರೂಪ ವಿಶ್ವವು ಸ್ಥೂಲದ ಭೋಕ್ತಾ ಮತ್ತು ಬಾಹ್ಯವೃತ್ತಿ ಉಳ್ಳವನೆಂ ದರೆ, ಜಾಗ್ರತಾವಸ್ಥೆಯುಳ್ಳವನು ಅನ್ನುತ್ತಾರೆ.

ಟಿಪ್ಪಣಿ;—[೧] ಇಲ್ಲಿ ಪಾದವೆಂಬ ಶಬ್ದವು ಧಾನ್ಯದ ಪಾದದಂತೆ ವಿಭಾಗರೂಪ ಅರ್ಥದ ಬೋಧಕವದೆ ಗೋವಿನ ಪಾದದಂತೆ ಅವಯವರೂಪ ಅರ್ಥ ಬೋಧಕವಲ್ಲ.

[೨] ಬಹಿಃಪ್ರಜ್ಞಅಂದರೆ ಹೊರಗಿನ ಎಚ್ಚರುಳ್ಳವ.

## ॥೨೮೬॥ ಚತುರ್ದಶ ತ್ರಿಪುಟೀ.

ಪ್ರಾಣ ಮೊದಲಾದ ಈ ಹತ್ತೊಂಭತ್ತು ಮುಖಗಳು ಭೋಗ ಸಾಧನಗಳಾಗಿವೆ. ಅವುಗಳಲ್ಲಿ ಶ್ರೋತ್ರಾದಿ ದಶೇಂದ್ರಿಯಗಳೂ ಅಂತಃ ಕರಣ ಚತುಷ್ಟಯಗಳೆಂಬ ಹದಿನಾಲ್ಕು ಮುಖಗಳು ತಮ್ಮತಮ್ಮ ವಿಷಯ ಮತ್ತು ತಮ್ಮತಮ್ಮ ದೇವತೆಗಳ ಸಹಾಯವನ್ನು ಅಪೇಕ್ಷಿಸುತ್ತವೆ. ದೇವ ತಾ ವಿಷಯದ ಸಹಾಯದ ಹೊರ್ತು ಕೇವಲ ಇವುಗಳಿಂದಲೇ ಭೋಗ ವುಂಟಾಗುವದಿಲ್ಲ. ಆದಕಾರಣ ಪಂಚಪ್ರಾಣ ಮತ್ತು ಚತುರ್ದಶತ್ರಿಪುಟಿ ವಿರಾಟ್‌ರೂಪ ವಿಶ್ವದಮುಖ ಎಂದು ಹೇಳಿದರು. ಇವುಗಳ ಸಮುದಾಯದ ನಾಮವು ತ್ರಿಪುಟಯು.

ಈ ತ್ರಿಪುಟಗಳನ್ನು ಈ ರೀತಿಯಿಂದ ಹೇಳಿದ್ದಾರೆ.

೧. (೧) ಶ್ರೋತ್ರೇಂದ್ರಿಯವು ಅಧ್ಯಾತ್ಮವದೆ. ಮತ್ತು (೨] ಇದರ ವಿ ಷಯವಾದ ಶಬ್ದವು ಅಧಿಭೂತವದೆ. [೩) ದಿಶಾಭಿಮಾನಿ ದೇವತೆಗಳು ಅಧಿದೈವತಗಳಾಗಿವೆ. (ಕ] ಈ ಪ್ರಕರಣದಲ್ಲಿ ಕ್ರಿಯಾಶಕ್ತಿಯುಳ್ಳ ಮತ್ತು ಜ್ಞಾನಶಕ್ತಿಯುಳ್ಳ ಇಂದ್ರಿಯಗಳು ಮತ್ತು ಅಂತಃಕರಣ ಚತುಷ್ಟಯ ಇವುಗಳಿಗೆ ಅಧ್ಯಾತ್ಮವೆನ್ನಬೇಕು. [ಖ] ಇವುಗಳ ವಿಷಯಗಳಿಗೆ ಅಧಿಭೂತ ವೆನ್ನಬೇಕು. [ಗ]ಇವುಗಳ ಸಹಾಯಕ ದೇವತೆಗಳಿಗೆ ಅಧಿದೈವವೆನ್ನಬೇಕು.



೨ (೧) ತ್ವಗಿಂದ್ರಿಯವು ಅಧ್ಯಾತ್ಮ, (೨) ಇದರ ವಿಷಯವಾದ ಸ್ಪರ್ಶವು ಅಧಿಭೂತವದೆ. (೩) ವಾಯುತತ್ವದ ಅಭಿಮಾನ ದೇವತೆಯು ಅಧಿದೈವವದೆ.

೩. (೧) ನೇತ್ರೇಂದ್ರಿಯವು ಅಧ್ಯಾತ್ಮ (೨) ರೂಪವು ಅಧಿಭೂತ (೩) ಸೂರ್ಯನು ಅಧಿದೈವನು.

೪. (೧) ರಸನೇಂದ್ರಿಯ ಅಧ್ಯಾತ್ಮ (೨) ರಸವು ಅಧಿಭೂತ (೩) ವರುಣನು ಅಧಿದೈವನು.

೫ (೧) ಘ್ರಾಣೇಂದ್ರಿಯವು ಅಧ್ಯಾತ್ಮ, (೨) ಗಂಧವು ಅಧಿಭೂತ (೩ ಅಶ್ವಿನೀಕುಮಾರರು ಅಧಿದೈವ.

ಇಲ್ಲಿ ವಾರ್ತಿಕಕಾರರಾದ ಸುರೇಶ್ವರಾಚಾರ್ಯರು ಪೃಥ್ವಿಯ ಅಭಿಮಾನ ದೇವತೆಯು ಘ್ರಾಣೇಂದ್ರಿಯದ ಅಧಿದೈವ ಎಂದು ಹೇಳಿದ್ದಾರೆ, ಇದಾದರೂ ಯಥಾರ್ಥವದೆ. ಕಾರಣವೇನೆಂದರೆ, ಗಂಧವತ್ವಲಕ್ಷಣಲಕ್ಷಿತವಾದ ಪೃಥ್ವಿಯಿಂದಲೇ ಘ್ರಾಣದ ಉತ್ಪತ್ತಿಯಿರುವುದರಿಂದ ಪೃಥ್ವಿಯು ಅಧಿದೈವವೆಂದು ಹೇಳಿದರು. ಮತ್ತು ಸೂರ್ಯನ ಅಶ್ವದ ನಾಸಿಕದಿಂದ ಅಶ್ವಿನೀ ಕುಮಾರರ ಉತ್ಪತ್ತಿಯೆಂದು ಹೇಳಿದ್ದಾರೆ. ಇದರಿಂದ ನಾಸಿಕದ ಅಧಿದೈವವು ಅಶ್ವಿನೀಕುಮಾರರೆಂದು ಕೆಲವೆಡೆಯಲ್ಲಿ ಹೇಳಿದ್ದಾರೆ.
೧

೬ (೧) ವಾಗಿಂದ್ರಿಯವು ಅಧ್ಯಾತ್ಮ, (೨) ವಕ್ತ್ರವ್ಯವು ಅಧಿಭೂತ, (೩) ಅಗ್ನಿದೇವತೆಯು ಅಧಿದೈವ.

೭ (೧) ಹಸ್ತೇಂದ್ರಿಯ ಅಧ್ಯಾತ್ಮ, (೨) ಪದಾರ್ಥಗಳ ಗ್ರಹಣ, ಅಧಿಭೂತ, (೩) ಇಂದ್ರನು ಅಧಿದೈವವು.

೮ (೧) ಪಾದೇಂದ್ರಿಯ ಅಧ್ಯಾತ್ಮ, (೨) ಗಮನ ಅಧಿಭೂತ (೩) ವಿಷ್ಣುವು ಅಧಿದೈವವು.

೯ [೧) ಗುದೇಂದ್ರಿಯವು ಅಧ್ಯಾತ್ಮ, (೨) ಮಲತ್ಯಾಗವು ಅಧಿಭೂತ, (೩) ಯಮನು ಅಧಿದೈವವು.

೧೦ (೧) ಉಪಸ್ಥೇಂದ್ರಿಯವು ಅಧ್ಯಾತ್ಮ, (೨) ರತಿಸುಖವು ಅಧಿಭೂತ (೩) ಪ್ರಜಾಪತಿಯು ಅಧಿದೈವನು.

೧೧ (೧] ಮನವು ಅಧ್ಯಾತ್ಮ, (೨) ಮನನದ ವಿಷಯವು ಅಧಿಭೂತ,

(೩) ಚಂದ್ರಮನು ಅಧಿದೈವವು.

೧೨ (೧) ಬುದ್ಧಿಯು ಅಧ್ಯಾತ್ಮ (೨) ಬೋದ್ಧವ್ಯವು ಅಧಿಭೂತ, (೩) ಬೃಹಸ್ಪತಿಯು ಅಧಿದೈವವು. ಜ್ಞಾನದ ವಿಷಯಕ್ಕೆ ಬೋದ್ಧವ್ಯವೆಂದು ನ್ನುತ್ತಾರೆ.

೧೩ [೧) ಅಹಂಕಾರ ಅಧ್ಯಾತ್ಮ, (೨) ಅಹಂಕಾರದ ವಿಷಯ ಅಧಿಭೂತ, (೩) ರುದ್ರನು ಅಧಿದೈವವು.

೧೪ (೧) ಚಿತ್ತ ಅಧ್ಯಾತ್ಮ, (೨) ಚಿಂತನದ ವಿಷಯವು ಅಧಿ

(೩) ಕ್ಷೇತ್ರಜ್ಞಕ್ಕೆ ಯಾವದು ಸಾಕ್ಷಿಯೋ ಅದು ಅಧಿದೈವವು.

ಈ ಚತುರ್ದಶ ತ್ರಿಪುಟಗಳೂ, ಮತ್ತು ಪಂಚಪ್ರಾಣಗಳು ತ್ತೊಂಭತ್ತೂ ವಿರಾಟ್‌ರೂಪ ವಿಶ್ವದ ಮುಖಗಳಾಗಿವೆ.

**ಟಿಪ್ಪಣಿ.** [೧] ವಚನಕ್ರಿಯೆಯ ವಿಷಯವಾದ ಪದಾರ್ಥಕ್ಕೆ ವಕ್ತವ್ಯ ಎನ್ನು ಇದು ವಚನಕ್ರಿಯಾದ್ವಾರ ವಾಗೇಂದ್ರಿಯದ ಅಧಿಭೂತವದೆ. ಹೀಗೆ ಎಲ್ಲಾ ಇಂದ್ರಿಯಗಳ ಕ್ರಿಯಾದ್ವಾರ ವಾಗೀಂದ್ರಿಯದ ಅಧಿಭೂತ ಹೀಗೆಯೇ ಎಲ್ಲಾ ಇಂದ್ರಿಯಗಳ ಕ್ರಿಯಾದ್ವಾರವಾಗಿ ಆ ವಿಷಯರೂಪ ಳು ಅಧಿಭೂತವಾಗಿವೆ, ಎಂಬುದನ್ನು ತಿಳಿದುಕೊಳ್ಳಬೇಕು. ಕೆಲವೆಡೆ ವಚನಾದಿ ಕ್ರಿಯೆಗಳಿಗೆ ಅಧಿಭೂತವೆಂದು ಹೇಳಿದ್ದಾರೆ. ಹೀಗೆ ಹೇಳ ಸ್ಥೂಲದೃಷ್ಟಿಯುಳ್ಳ ಜನರ ಜ್ಞಾನಾರ್ಥವಾಗಿ ಅದೆ, ಶ್ರುತ್ಯರ್ಥದ ವಿಚಾರದಿಂ

[೨) ಸಾಕ್ಷೀಚೇತನವು ಜಾತ್ಯಾಚಿತ್ತದ ಆಶ್ರಯವಾಗಿರುವದರಿಂದ ಚಿತ್ತದ ಯೇ ಅನುಗ್ರಹ ಮಾಡುವದು, ಇದರಿಂದ ಅದರ ಅಧಿದೈವವೆಂದು ಹೇ ಧ್ದೇವೆ. ಇದರಂತೆಯೇ ಕೆಲವು ಆಚಾರ್ಯರು ಚಿಂತನರೂಪ ಸ್ಮೃತಿ ನವು ಸಾಕ್ಷಿಯ ಆಶ್ರಿತದೆಂದು ಹೇಳಿದ್ದಾರೆ. ಕೆಲವೆಡೆಯಲ್ಲಿ ಚಿತ್ತದ ಅ ದೈದವು ನಾರಾಯಣ (ವಾಸುದೇವ)ನೆಂದು ಹೇಳಿದ್ದಾರೆ.

॥೨೮೭॥ ವಿಶ್ವವಿರಾಟ್ ಮತ್ತು ಅಕಾರದ ಅಭೇದಚಿಂತನ

೧. ಹೇಗೆ ವಿರಾಟ್‌ದಿಂದ ವಿಶ್ವದ ಅಭೇದವದೆಯೋ, ಹಾಗೆಯೇ ಓಂ ರದ ಪ್ರಥಮಮಾತ್ರೆಯಾದ ಅಕಾರಕ್ಕೂ ವಿರಾಟ್‌ರೂಪವಿಶ್ವಕ್ಕೂ ಅಭೇ ದದೆ. ಕಾರಣವೇನೆಂದರೆ, (೧) ಬ್ರಹ್ಮದ ನಾಲ್ಕು ಪಾದಗಳಲ್ಲಿ ಪ್ರಥ ಪಾದವು ವಿರಾಟ್ ಅದೆ. ಮತ್ತು ೨. ಆತ್ಮದ ನಾಲ್ಕು ಪಾದಗಳಲ್ಲಿ ಪ್ರ ಮ ಪಾದವು ವಿಶ್ವವದೆ. ೩. ಇದರಂತೆ ಓಂಕಾರದ ನಾಲ್ಕು ಮಾತ್ರ ರೂಪ ಪಾದಗಳಲ್ಲಿ ಪ್ರಥಮ ಪಾದವು ಅಕಾರವದೆ.

ಇದರಿಂದ ಪ್ರಥಮಸ್ವರವು ಈ ಮೂರರಲ್ಲಿ ಸಮಾನ ಧರ್ಮವಾಗಿರು



ರುವ ವಿಶ್ವ, ವಿರಾಟ್, ಅಕಾರದ ಅಭೇದಚಿಂತನವನ್ನು ಮಾಡು. ಯಾವ ಏಳು ಅಂಗಗಳೂ ಹತ್ತೊಂಭತ್ತು ಮುಖಗಳೂ ವಿಶ್ವದವು ಎಂದು ಹೇಳಿದೆ ಯೋ ಆ ಕಾರಣದಿಂದ ಎಂದು ತಿಳಿ.

॥೨೮೮॥ ವಿಶ್ವ ಮತ್ತು ತೈಜಸಗಳ ವಿಲಕ್ಷಣತೆಯು.

ಈ ಏಳು ಅಂಗಗಳೂ, ಮತ್ತು ಹತ್ತೊಂಭತ್ತು ಮುಖಗಳೂ ತೈಜ ಸಕ್ಕೆ ಸಹಾ ಇರುವವೆಂದು ತಿಳಿದುಕೊಳ್ಳುವದಕ್ಕೆ ಯೋಗ್ಯವಾಗಿವೆ. ಆದ ರೂ ಇಷ್ಟೇ ಭೇದವಿರುವದು.

೧ ವಿಶ್ವಕ್ಕೆಯಾವ ಅಂಗಗಳೂ, ಮತ್ತು ಮುಖಗಳೂ ಇರುವವೋ ಅವು ಈಶ್ವರ ರಚಿತವಾಗಿವೆ.

೨ ತೈಜಸದ ಯಾವ ಇಂದ್ರಿಯಗಳು, ದೇವತೆಗಳು, ವಿಷಯರೂಪ ತ್ರಿಪುಟಗಳು, ಮತ್ತು ಮೂರ್ಧಾವೊದಲಾದ ಅಂಗಗಳಿರುವವೋ ಅವು ಮನೋಮಯವಾಗಿ ಅವೆ. ತೈಜಸದ ಭೋಗವು ಸೂಕ್ಷ್ಮ ಅದೆ.

೧ ಯದ್ಯಪಿ ಭೋಗ ಆದರೆ ಸುಖ ಅಥವಾ ದುಃಖದ ಜ್ಞಾನವು, ಇದರವಿಷಯದಲ್ಲಿ ಸ್ಥೂಲತ್ವ ಮತ್ತು ಸೂಕ್ಷ್ಮತ್ವಗಳನ್ನು ಹೇಳುವದು ಯ ಥಾರ್ಥವಲ್ಲ. ತಥಾಪಿ ಬಾಹ್ಯಾಶಬ್ದಾದಿ ವಿಷಯಗಳ ಸಂಬಂಧದಿಂದ ಯಾವ ಸುಖ ಅಥವಾ ದುಃಖದ ಸಾಕ್ಷಾತ್ಕಾರಕ್ಕೆ ಸ್ಥೂಲವೆನ್ನುತ್ತಾರೆ.

೨ ಮಾನಸಿಕವಾದ ಯಾವ ಶಬ್ದಾದಿಗಳ ಸಂಬಂಧದಿಂದ ಭೋಗ ವುಂಟಾಗುತ್ತದೆಯೊ, ಅದಕ್ಕೆ ಸೂಕ್ಷ್ಮವೆನ್ನುತ್ತಾರೆ.

ಈ ಕಾರಣದಿಂದಲೇ ೧ ವಿಶ್ವವು ಸ್ಥೂಲದ ಭೋಕ್ತೃವೆಂದು ಶ್ರುತಿ ಯಲ್ಲಿ ಹೇಳಲ್ಪಟ್ಟದೆ. ೨ ತೈಜಸವು ಸೂಕ್ಷ್ಮದ ಭೋಕ್ತೃವೆಂದು ಹೇಳ ಲ್ಪಟ್ಟದೆ. ಕಾರಣವೇನಂದರೆ ೧ ತೈಜಸದ ಭೋಗ್ಯವಾದ ಶಬ್ದಾದಿಗಳು ಮಾ ನಸದ್ದಾಗಿರುವುದರಿಂದ ಸೂಕ್ಷ್ಮ ಮತ್ತು ೨ ಇವುಗಳ ಅಪೇಕ್ಷೆ ಯಿಂದ ವಿಶ್ವದ ಭೋಗವಾದ ಬಾಹ್ಯಶಬ್ದಾದಿಗಳಂತೆ, ಇವೂ ಸ್ಥೂಲವವೆ. ಮತ್ತು ವಿಶ್ವವು ಬಹಿಃಪ್ರಜ್ಞವುಳ್ಳದ್ದು ತೈಜಸವು ಅಂತಃಪ್ರಜ್ಞೆಯುಳ್ಳದ್ದು ಅದೆ ಯಾಕಂದರೆ ವಿಶ್ವದ ಅಂತಃಕರಣವೃತ್ತಿರೂಪ ಪ್ರಜ್ಞಾ ಅದೆ, ಇದು ಹೊರಗೆ ಹೋಗುತ್ತದೆ; ಮತ್ತು ತೈಜಸದ್ದು ಹೋಗುವದಿಲ್ಲ.

॥೨೮೯॥ ತೈಜಸ ಹಿರಣ್ಯಗರ್ಭ ಮತ್ತು ಉಕಾರದ

ಅಭೇದ ಚಿಂತನ.

೨. ಹೇಗ ವಿಶ್ವದ ಮತ್ತು ವಿರಾಟ್‌ದ ಅಭೇದವಿರುವದೋ ಹಾಗೆ

ತೈಜಸದ ಮತ್ತು ಹಿರಣ್ಯಗರ್ಭದ ಅಭೇದವನ್ನು ತಿಳಿದುಕೋ; ಕಾ... ನಂದರೆ ಸೂಕ್ಷ್ಮ ಉಪಾಧಿಯುತ್ತೈಜಸದ್ದು ಅದೆ ಮತ್ತು ಸೂಕ್ಷ್ಮ ಹಿ... ಗರ್ಭದ್ದು ಆಗಿರುವುದು ಇದರಿಂದ ಇವೆರಡರಲ್ಲಿ ಐಕ್ಯತ್ವವೆಂದು ತಿಳಿ.

ತೈಜಸ, ಹಿರಣ್ಯಗರ್ಭದ ಐಕ್ಯತ್ವವನ್ನು ತಿಳಿದುಕೊಂಡು ಓಂ... ದ್ವಿತೀಯಮಾತ್ರಾ ಆದ ಉಕಾರದಿಂದ ಇವುಗಳ ಅಭೇದಚಿಂತನವನ್ನು... ಡು; ಕಾರಣವೇನಂದರೆ

(೧) ಆತ್ಮದ ನಾಲ್ಕುಪಾದಗಳಲ್ಲಿ ದ್ವಿತೀಯ ಪಾದವು ತೈಜಸ... ಬ್ರಹ್ಮದ ನಾಲ್ಕುಪಾದಗಳಲ್ಲಿ ಹಿರಣ್ಯಗರ್ಭವು ದ್ವಿತೀಯಪಾದವದೆ. ... ಕಾರದ ಮಾತ್ರೆಗಳಲ್ಲಿ ದ್ವಿತೀಯ ಮಾತ್ರೆಯು ಉಕಾರವದೆ.

ದ್ವಿತೀಯತ್ವವು ಈಮೂರರಲ್ಲಿ ಸಮಾನ ಧರ್ಮವದೆ. ಇದರಿಂ... ರರ ಐಕ್ಯತ್ವವನ್ನು ಚಿಂತನಮಾಡು.

## ||೨೯೦|| ಪ್ರಾಜ್ಞ, ಈಶ್ವರ ಮತ್ತು ಮಕಾರದ ಅಭೇ... ಪ್ರಾಜ್ಞದ ವಿಶೇಷಣ.

೩. ಪ್ರಾಜ್ಞವು ಈಶ್ವರ ರೂಪವೆಂದು ತಿಳಿ, ಯಾಕಂದರೆ (೧)... ಜ್ಞಕ್ಕೆ ಕಾರಣ ಉಪಾಧಿಯದೆ, ಮತ್ತು (೨) ಈಶ್ವರನಿಗೂ ಸಹ ... ಉಪಾದಿಯದೆ.

೩ ಈಶ್ವರ ಮತ್ತು ಪ್ರಾಜ್ಞ ಇವೆರಡು ಪಾದಗಳಲ್ಲಿ ತೃತೀಯ...

(೩) ಓಂಕಾರದ ತೃತೀಯ ಮಾತ್ರೆಯು ಮಕಾರವದೆ. ತೃತೀ... ವು ಈ ಮೂರರಲ್ಲಿ ಸಮಾನ ಧರ್ಮವದೆ. ಈ ಕಾರಣದಿಂದ ಮೂ... ತ್ವವನ್ನು ತಿಳಿ.

೧. ಈಪ್ರಾಜ್ಞವು ಪ್ರಜ್ಞಾನಘನವದೆ. ಕಾರಣವೇನಂದರೆ, ಜಾ... ಮತ್ತು, ಸ್ವಪ್ನದ ಎಷ್ಟು ಜ್ಞಾನವದೆಯೋ, ಅದು ಎಲ್ಲ ಸುಷುಪ್ತಿ... ೧ ಘನಅಂದರೆ ಒಂದೇ ಅವಿದ್ಯಾರೂಪವಾಗಿ ಹೋಗುವದು ಇಂದರಿಂ... ನಘನ ಅನ್ನುತ್ತಾರೆ.

೨. ಆನಂದ ಭುಕ್ ಇದು ಸಹ ಪ್ರಾಜ್ಞವೆಂದು ಶ್ರುತಿಯಿಂದ... ಲ್ಪಡುತ್ತದೆ. ಕಾರಣವೇನಂದರೆ ಅವಿದ್ಯೆಯಿಂದ ಆವೃತವಾದ ಯಾವ... ವಿಸುವದೋ, ಅದನ್ನು ಈ ಪ್ರಾಜ್ಞವು ಭೋಗಿಸುತ್ತದೆ. ಇದರಿಂದ ... ಭುಕ್ ಅನ್ನುತ್ತಾರೆ.



ತೈಜಸ ಮತ್ತು ವಿಶ್ವದ ಭೋಗವು ಹೇಗೆ ತ್ರಿಪುಟಿಯಿಂದ ಆಗಿರುವ ...ಹಾಗೆ ಪ್ರಾಜ್ಞದ ಭೋಗಕ್ಕೂ ಸಹ ತ್ರಿಪುಟಿಯನ್ನು ಹೇಳಿದ್ದಾರೆ. ೧ ಚೇತನದ ಪ್ರತಿಬಿಂಬ ಸಹಿತವಾದ ಅವಿದ್ಯೆಯ ವೃತ್ತಿಯುಅಧ್ಯಾ... ...೨ ಅಜ್ಞಾನದಿಂದ ಆವೃತವಾದ ಸ್ವರೂಪಾನಂದವೇ ಅಧಿಭೂತವು ಈಶ್ವರನು ಅಧಿದೈವವು, ಈ ರೀತಿಯಿಂದ ೧ ವಿಶ್ವವು ಬಹಿಃ ಪ್ರಜ್ಞವ ಮತ್ತು ೨ ತೈಜಸವು ಅಂತಃಪ್ರಜ್ಞವದೆ. ೩ ಪ್ರಾಜ್ಞವುಪ್ರಜ್ಞಾನಘನವದೆ.

...೧ ಪಿಷ್ಟದಲ್ಲಿ ಜಲವನ್ನು ಹಾಕಿ ಕಲಿಸಲು, ಉಂಡೆಯಾಗಿ ಒಂದೇರೂಪವುಳ್ಳದ್ದಾಗುವದೋ ಮತ್ತು ಪರ್ಜನ್ಯದ ಅನೇಕ ಬಿಂದುಗಳುಕೂಡಿ ಕಟಾಕವೇದು ಒಂದೇ ರೂಪವುಳ್ಳದ್ದಾಗುವದೋ ಹಾಗೆಯೇ ಜಾಗ್ರತ್ ಸ್ವಪ್ನದ ಜ್ಞಾನವು ಸುಷುಪ್ತಿಯಲ್ಲಿ ಒಂದೇ ಅವಿದ್ಯಾರೂಪ ವಾಗುವದು. ಈ ಅವಿದ್ಯೆಯಲ್ಲಿ ಸ್ಥಿತವಾದ ಅಧಿಷ್ಠಾನ ಕೂಟಸ್ಥ ಸಹಿತ ಚೇತನದ ಪ್ರತಿಬಿಂಬ ರೂಪ ಪ್ರಾಜ್ಞಜೀವವೇ, ಪ್ರಜ್ಞಾನಜೀವ, ಎನ್ನಿಸಿಕೊಳ್ಳುವದು.

## ೨೯೧ || ವಿಶ್ವಾದಿ ತ್ರಯದ ನಿಜವಾದ ಐಕ್ಯತ್ವವೂ ಈಶ್ವರ ಸಾಕ್ಷಿಯಿಂದ ತುರೀಯದ ಅಭೇದವೂ.

೪. ಇಂಥ ಈ ತ್ರಯದಲ್ಲಿಯಾವ ಭೇದವದಯೋ, ಅದು ಉಪಾಧಿ ...ಂದಮುಳಿತವಾಗಿದೆ.

ವಿಶ್ವಕ್ಕೆ ಸ್ಥೂಲ, ಸೂಕ್ಷ್ಮ, ಅಜ್ಞಾನ ಎಂಬ ಮೂರು ಉಪಾದಿಗಳು ...ಟು ೨ ತೈಜಸಕ್ಕೆ ಸೂಕ್ಷ್ಮಅಜ್ಞಾನ ಎಂಬ ಎರಡು ಉಪಾಧಿಗಳುಅವೆ. ೩ ಪ್ರಾಜ್ಞಕ್ಕೆ ಅಜ್ಞಾನವೆಂದು ಒಂದೇ ಉಪಾಧಿಯಿರುವದು.

ಈ ರೀತಿಯಿಂದ ಉಪಾಧಿಗಳ ನ್ಯೂನತ್ವಾಧಿಕತ್ವದಿಂದ ಈ ತ್ರಯ...ಲ್ಲಿ ಭೇದವದೆ. ಆದರೆ ಯಥಾರ್ಥವಾದ ಸ್ವರೂಪದಿಂದ ಭೇದವಿಲ್ಲ.

ವಿಶ್ವ, ತೈಜಸ, ಪ್ರಾಜ್ಞ ಎಂಬ ಈ ತ್ರಯದಲ್ಲಿ ಅನುಗತವಾದ ಯಾವ ...ಚೇತನವು ಇರುವದೋ ಅದು ನಿಜವಾದ ಮೂರೂ ಉಪಾಧಿಗಳ ಸಂಬಂಧ...ದ ರಹಿತವಾಗಿದೆ. ಈ ಮೂರು ಉಪಾಧಿಗಳ ಅಧಿಷ್ಠಾನವುತುರೀಯವದೆ. (೧) ಇದು ಬಹಿಃಪ್ರಜ್ಞವಲ್ಲ; ಮತ್ತು (೨) ಅಂತಃಪ್ರಜ್ಞವೂ ಅಲ್ಲ ಮತ್ತು (೩) ಪ್ರಜ್ಞಾನಘನ ಸಹ ಅಲ್ಲ (೪) ಕರ್ಮೇಂದ್ರಿಯಗಳ ಮತ್ತು ಜ್ಞಾನೇಂದ್ರಿಯಗಳ ವಿಷಯವಲ್ಲ (೫) ಬುದ್ಧಿಯ ವಿಷಯವಲ್ಲ (೬) ಯಾವ ಶಬ್ದದ ವಿಷಯವೂ ಅಲ್ಲ. ಇಂಥಯಾವ ತುರೀಯವಿರುವದೋ, ಅದನ್ನು ಪರಮಾ...ನಂದಚತುರ್ಥವಾದ ಈಶ್ವರ ಸಾಕ್ಷೀ ಶುದ್ಧಬ್ರಹ್ಮರೂಪವೆಂದು ತಿಳಿ.

||೨೯೩|| ಎರಡು ಸ್ವರೂಪವುಳ್ಳ 'ಓಂಕಾರ, ಮತ್ತು ಆತ್ಮ
ಮಾತ್ರಾ ಮತ್ತು ಪಾದ ರೂಪದಿಂದ ಅಭೇದಚಿಂತನ.

೧. ಈ ರೀತಿಯಿಂದ ಎರಡು ಪ್ರಕಾರವಾಗಿ ಆತ್ಮದ ಸ್ವರೂಪ ಕಥನ ಮಾಡಿದೆವು. ಒಂದು ಪರಮಾರ್ಥರೂಪ ಮತ್ತೊಂದು ಅಪರಮಾ ರೂಪ (೧) ಮೂರು ಪಾದ ಅಪರಮಾರ್ಥರೂಪ ಮತ್ತು (೨) ಒಂದು ಪಾ ತುರೀಯ ಪರಮಾರ್ಥರೂಪ ಅದೆ.

ಆತ್ಮದ ಎರಡು ಸ್ವರೂಪಗಳಿದ್ದಂತೆ ಓಂಕಾರಕ್ಕೂ ಎರಡು ಸ್ವರೂ ಪಗಳು ಇವೆ. (೧) ಅಕಾರ, ಉಕಾರ, ಮಕಾರ, ಎಂಬ ಯಾವ ಮೂ ಮಾತ್ರಾರೂಪಗಳಾದ ವರ್ಣಗಳಿರುವವೋ. ಅವು ಅಪರಮಾರ್ಥರೂಪ ಮತ್ತು (೨) ಈ ಮೂರು ಮಾತ್ರೆಗಳಲ್ಲಿ ವ್ಯಾಪಕವಾದ ಅಸ್ತಿ ಭಾತಿ ಪ್ರಿ ರೂಪ ಅಧಿಷ್ಠಾನ ಚೇತನವದೆಯೋ ಅದು ಪರಮಾರ್ಥರೂಪವದೆ.

ಓಂಕಾರದ ಯಾವ ಪರಮಾರ್ಥ ರೂಪವದೆಯೋ ಅದಕ್ಕೆ ಶ್ರು ಯಲ್ಲಿ ಅಮಾತ್ರ ಶಬ್ದದಿಂದ ಕಥನವದೆ, ಕಾರಣವೇನಂದರೆ ಆ ಪರಮಾ ಸ್ವರೂಪದಲ್ಲಿ ಮಾತ್ರಾ ವಿಭಾಗ ವಿರುವದಿಲ್ಲ. ಇದರಿಂದ ಅಮಾತ್ರವೆ ಹೇಳಲ್ಪಟ್ಟದೆ.

ಈ ಪ್ರಕಾರವಾಗಿ ಯಾವ ಎರಡು ಸ್ವರೂಪವುಳ್ಳ ಓಂಕಾರವಿರು ಇದು ಎರಡು ಸ್ವರೂಪವುಳ್ಳ ಆತ್ಮಾದಿಂದ ಅಭೇದವನ್ನು ತಿಳಿಯಬೇಕು

೧. ವ್ಯಷ್ಟಿ, ಮತ್ತು ಸಮಷ್ಟಿ ಸ್ಥೂಲ ಪ್ರಪಂಚ ಸಹಿತವಾದ ವಿ ನ್ನು, ವಿರಾಟ್‌ದ ಅಕಾರದಿಂದ ಅಭೇದವನ್ನು ತಿಳಿ. ಆತ್ಮದ ಪಾ (೧) ವಿಶ್ವವು ಆದಿಯದೆ (೨) ಓಂಕಾರದ ಮಾತ್ರೆಗಳಲ್ಲಿ ಅಕಾರವು ಯದೆ. ಈ ಕಾರಣದಿಂದ ಈ ಎರಡೂ ಒಂದೇ ಎಂದು ಭಾವಿಸು.

೨. ಸೂಕ್ಷ್ಮ ಪ್ರಪಂಚ ಸಹಿತ ಹಿರಣ್ಯ ಗರ್ಭರೂಪ ತೈಜಸ ಉಕಾರರೂಪವೆಂದು ತಿಳಿ. (೧) ತೈಜಸವೂ ದ್ವಿತೀಯವಾಗಿದೆ. ಮ (೨) ಉಕಾರವೂ ದ್ವಿತೀಯವಾಗಿದೆ. ಈ ಕಾರಣದಿಂದ ಈ ಎರಡೂ ಎಂದು ಭಾವಿಸು,

೩. ಕಾರಣ ಉಪಾಧಿ ಸಹಿತ ಈಶ್ವರ ರೂಪ ಪ್ರಾಜ್ಞವನ್ನು ಮ ರೂಪವೆಂದು ತಿಳಿ. (೧) ಹೇಗೆ ಈಶ್ವರರೂಪ ಪ್ರಾಜ್ಞವು ತೃತೀಯವದೆ ಹಾಗೆ (೨) ಮಕಾರವೂ ಸಹ ತೃತೀಯವಾಗಿದೆ. ಈ ಕಾರಣದಿಂದ ಈ ರೂಪ ಪ್ರಾಜ್ಞ ಮತ್ತು ಮಕಾರವನ್ನು ಒಂದೇ ಎಂದು ತಿಳಿ.



೪. ಈ ಮೂರರಲ್ಲಿ ಅನುಗತವಾದ ಪರಮಾರ್ಥದ ಯಾವ ರೂಪವು ತುರೀಯವದೆಯೋ, ಇದಕ್ಕೂ ಓಂಕಾರ ವರ್ಣದ ಮೂರು ಮಾತ್ರೆಗಳಲ್ಲಿ ಅನುಗತವಾದ ಪರಮಾರ್ಥರೂಪ ಅಮಾತ್ರಕ್ಕೂ ಅಭೇದವನ್ನು ತಿಳಿ ೧ ವಿಶ್ವಾದಿ ವಿಷಯದಲ್ಲಿ ತುರೀಯವು ಹೇಗೆ ಅನುಗತವಾಗಿದೆಯೋ ೨ ಹಾಗೆ ಅಕಾರಾದಿ ಮೂರು ಮಾತ್ರೆಗಳಲ್ಲಿ ಆ ಮಾತ್ರವು ಅನುಗತವಾಗಿದೆ. ಈ ಕಾರಣದಿಂದ ಓಂಕಾರದ ಅ ಮಾತ್ರ ರೂಪಕ್ಕೂ ಮತ್ತು ತುರೀಯಕ್ಕೂ ಏಕತ್ವವನ್ನು ತಿಳಿ. ಈ ರೀತಿಯಿಂದ ಆತ್ಮದ ಪಾದ, ಮತ್ತು ಓಂಕಾರದ ಮಾತ್ರಾ ಇವುಗಳಲ್ಲಿ ಏಕತ್ವವನ್ನು ತಿಳಿದುಕೊಂಡು ಲಯಚಿಂತನಮಾಡು.

||೨೯೪|| ಲಯ ಚಿಂತನೆಯ ಅನುವಾದ || (ಒಂದೊಂದು ಮಾ
ತ್ರಾ) ರೂಪಗಳ ಅನ್ಯಮಾತ್ರಾ ರೂಪತ್ವವು.

ಈ ಲಯ ಚಿಂತನವನ್ನು ಹೇಳುವೆನು.

೧. ವಿಶ್ವರೂಪವಾದ ಯಾವ ಅಕಾರವದೆಯೋ, ಅದು ತೈಜಸರೂಪ ದ ಉಕಾರದಿಂದ ಭಿನ್ನವಾಗಿದ್ದರೂ ಉಕಾರರೂಪವದೆ. ಎಂದು ಚಿಂತ ಮಾಡಬೇಕು ಎಂಬ ಚಿಂತನೆಗೇ ಇಲ್ಲಿ ಲಯಚಿಂತನೆಯೆಂದು ಅನ್ನಬೇಕು ಹಾಗೆಯೇ ಅನ್ಯಮಾತ್ರೆಗಳ ವಿಷಯದಲ್ಲಿ ಸಹಾ ತಿಳಿಯತಕ್ಕದ್ದು.

೨. ಯಾವ ಉಕಾರದಲ್ಲಿ ಅಕಾರದ ಲಯವನ್ನು ಮಾಡಿರುವೆವೋ, ತೈಜಸರೂಪ ಉಕಾರದ ಪ್ರಾಜ್ಞರೂಪವಾದ ಯಾವ ಮಕಾರವಿರುವ ಅದರಲ್ಲಿ ಲಯ ಮಾಡಬೇಕು.

೩. ಪ್ರಾಜ್ಞರೂಪವಾದ ಯಾವ ಮಕಾರವಿರುವದೋ ಅದು ತುರೀಯರೂಪ ಓಂಕಾರದ ಪರಮಾರ್ಥರೂಪ ಅ ಮಾತ್ರವದೆ. ಇದರಲ್ಲಿ ಲೀನ ಮಾಡಬೇಕು. ಯಾಕೆಂದರೆ ಸ್ಥೂಲದ ಉತ್ಪತ್ತಿ ಮತ್ತು ಲಯಗಳು ಸೂಕ್ಷ್ಮದಲ್ಲಿ ಆಗುವವು. ಇದರಿಂದ ಪರಮಾರ್ಥರೂಪ ಅಕಾರದಲ್ಲಿ ಲೀನ ಮಾಡಬೇಕು.

೧. ವಿಶ್ವರೂಪವಾದ ಅಕಾರಕ್ಕೆ, ತೈಜಸರೂಪ ಉಕಾರದಲ್ಲಿ ಲಯವು ಸಂಭವಿಸುತ್ತದೆ.

೨. ಸೂಕ್ಷ್ಮದ ಉತ್ಪತ್ತಿ ಮತ್ತು ಲಯವು ಕಾರಣದಲ್ಲಿ ಆಗುವದು. ಇದರಿಂದ ತೈಜಸರೂಪ ಉಕಾರಕ್ಕೆ, ಕಾರಣವಾದ ಪ್ರಾಜ್ಞರೂಪ ಮಕಾರದಲ್ಲಿ ಲಯವು ಸಂಭವಿಸುತ್ತದೆ.

ಇಲ್ಲಿ ವಿಶ್ವಾದಿಗಳ ಗ್ರಹಣದಿಂದ ಸಮಷ್ಟಿಗಳಾದ ವಿರಾಟಾದಿಗಳು

ಮತ್ತು ತಮ್ಮ ತಮ್ಮ ತ್ರಿಪುಟಿಗಳು ಇವೆಲ್ಲವೂ ಗ್ರಹಮಾಡಲ್ಪಟ್ಟವೆ, ... ತಿಳಿಯಬೇಕು.

೩. ಯಾವ ಪ್ರಾಜ್ಞರೂಪ ಮಕಾರದಲ್ಲಿ ಉಕಾರವನ್ನು ಲಯ... ಡಿರುವೆವೋ ಆ ಮಕಾರದ ತುರೀಯರೂಪವಾದ ಓಂಕಾರದ ಪ... ರೂಪವು ಆ ಮಾತ್ರವಡೆ. ಇದರಲ್ಲಿ ಲಯಮಾಡಬೇಕು ಕಾರಣವೇ... ಓಂಕಾರದ ಪರಮಾರ್ಥಸ್ವರೂಪಕ್ಕೂ ತುರೀಯಕ್ಕೂ ಅಭೇದವದೆ. ತುರೀಯವು ಬ್ರಹ್ಮರೂಪವವೆ, ಮತ್ತು ಶುದ್ಧ ವಿಷಯದಲ್ಲಿ ಈಶ್ವರ ಪ್ರಾ... ಇವೆರಡೂ ಕಲ್ಪಿತವವೆ. ಯಾವದು ಯಾವದರ ವಿಷಯದಲ್ಲಿ ಕ... ವಾಗುವದೋ ಅದು ಅದರ ಸ್ವರೂಪವಾಗಿರುತ್ತದೆ. ಈಶ್ವರ ಸ... ಪ್ರಾಜ್ಞರೂಪ ಮಕಾರದ ಲಯವು ಸಂಭವಿಸುತ್ತದೆ.

ಈ ರೀತಿಯಿಂದ ಯಾವ ಓಂಕಾರದ ಪರಮಾರ್ಥಸ್ವರೂಪ ಅ... ದಲ್ಲಿ ಸರ್ವದ ಲಯಮಾಡಿ "ಅವನೇ ನಾನು ಇದ್ದೇನೆ" ಎಂದು ... ಚಿತ್ತದಿಂದ ಚಿಂತನಮಾಡಬೇಕು.

ಸ್ಥಾವರ ಜಂಗಮರೂಪ, ಮತ್ತು ಅಸಂಗ, ಅದ್ವಯ, ಅಸಂ... ನಿತ್ಯಮುಕ್ತ, ನಿರ್ಭಯ, ಬ್ರಹ್ಮರೂಪ ಓಂಕಾರ ಪರಮಾರ್ಥ ಸ್ವ... ವೇ "ನಾನು ಇದ್ದೇನೆ,, ಎಂದು ಚಿಂತನೆ ಮಾಡುವದರಿಂದ ಜ್ಞಾನೋ... ವಾಗುವದು ಇದರಿಂದ ಜ್ಞಾನದ್ವಾರ ಮುಕ್ತಿರೂಪ ಫಲವನ್ನು ... ತಕ್ಕ ಈ ಓಂಕಾರದ ನಿರ್ಗುಣ ಉಪಾಸನೆಯಗಿಂತಲೂ ಎಲ್ಲ... ಮವಾದದ್ದು.

॥ ೨೯೪ ॥ ಓಂಕಾರ ಚಿಂತನದಲ್ಲಿ ಪರಮಹಂಸರ ಅಧಿ...

ಈ ಪೂರ್ವರೀತಿಯಿಂದ ಓಂಕಾರದ ಸ್ವರೂಪವನ್ನು ತಿಳಿದ... ಮುನಿ ಎನ್ನಬೇಕು. ಯಾವನು ತಿಳಿದಿರುವದಿಲ್ಲವೋ ಅವನು ಮುನಿ... ಕಾರಣವೇನಂದರೆ ಮುನಿ ಎಂಬ ನಾಮವು ಮನನಮಾಡುವವನಿಗೆ ಇರು... ಈ ಓಂಕಾರದ ಚಿಂತನವು ಮನನರೂಪವದೆ. ಯಾವನಿಗೆ ಓಂಕಾ... ಚಿಂತನಾರೂಪ ಮನನವಿರುವದಿಲ್ಲವೋ ಅವನು ಮುನಿಯಲ್ಲ.

ಇದು ಮಾಂಡೂಕ್ಯ ಉಪನಿಷತ್ತಿನ ಅನುಸಾರವಾಗಿ ಸಂಕ್ಷೇಪ... ಓಂಕಾರದ ಚಿಂತನವನ್ನು ಹೇಳಿದೆವು. ಮತ್ತು ನೃಸಿಂಹತಾಪಿನೀ ಮೊದ... ಉಪನಿಷತ್ತುಗಳಲ್ಲಿ ಇದರ ಪ್ರಕಾರವನ್ನು ವರ್ಣಿಸಿರುವರು. ಈ ಓಂ... ಚಿಂತನವು ಪರಮಹಂಸರ ಗೋಪ್ಯಧನವದೆ. ಬಹಿರ್ಮುಖ ಪುರು...



...ವಿಷಯದಲ್ಲಿ ಅಧಿಕಾರವಿಲ್ಲ. ಅತ್ಯಂತ ಅಂತರ್ಮುಖಿಗಳ ಅಧಿಕಾರವದೆ. ಗೃಹ... ಸ್ಥರಿಗೆ ಇದರಲ್ಲಿ ಅಧಿಕಾರವಿಲ್ಲ. ಧನ, ಪುತ್ರ, ಸ್ತ್ರೀಸಂಗ ಮೊದಲಾದವುಗಳ... ತ್ಯಾಜ್ಯಮಾಡಿದಂಥ ಪರಮಹಂಸರಿಗೆ ಅಧಿಕಾರವದೆ.

॥೨೯೫॥ ಓಂಕಾರದ ಧ್ಯಾನಮಾಡುವವರಿಗೆ ಫಲ ॥೨೯೫-೨೯೬

೧. ಪೂರ್ವಪ್ರಕಾರದಿಂದ ಓಂಕಾರವನ್ನು ಬ್ರಹ್ಮರೂಪದಿಂದ ಧ್ಯಾನ... ಮಾಡಲು ಜ್ಞಾನದ್ವಾರಾ ಮೋಕ್ಷವಾಗುವದು.

೨. ಪರಂತು ಯಾವಪುರುಷನಿಗೆ ಇಹಲೋಕದ ಅಥವಾ ಬ್ರಹ್ಮಲೋ... ಕದ ಭೋಗಗಳಲ್ಲಿ ಕಾಮನಾ ಇದ್ದರೆ, ಮತ್ತು ತೀವ್ರವೈರಾಗ್ಯವು ನಾಶವಾಗಿ... ಕಟದಿಂದ ಕಾಮನಾದಿಗಳನ್ನು ಪ್ರತಿಬಂಧನಮಾಡಿ, ಧನಪುತ್ರಾದಿಗಳನ್ನು ತ್ಯಾ... ಗಮಾಡಿ, ಪರಮಹಂಸ ಗುರುವಿನ ಉಪದೇಶದಿಂದ ಓಂಕಾರರೂಪ ಬ್ರಹ್ಮದ... ಧ್ಯಾನಮಾಡಲು, ಅವನಿಗೆ ಭೋಗಕಾಮನೆಯು ಜ್ಞಾನವಿಷಯದಲ್ಲಿ ಪ್ರತಿ... ಬಂಧವದೆ ಇದರಿಂದ ಜ್ಞಾನವುಂಟಾಗುವದಿಲ್ಲ. ಆದರೆ ಧ್ಯಾನಮಾಡುತ್ತಿದ್ದ... ಶರೀರ ತ್ಯಾಗಾನಂತರ ಅನ್ಯಶರೀರದ ಪ್ರಾಪ್ತಿಯಾಗುವದು.

(೧) ಯಾವನು ಇಹಲೋಕ ಭೋಗಗಳ ಕಾಮನೆಯನ್ನು ಪ್ರತಿ... ಬಂಧಮಾಡಿ ಧ್ಯಾನಾಸಕ್ತನಾಗಿರಲು, ಅವನು ಇಹಲೋಕದಲ್ಲಿ ಅತ್ಯಂತ... ಐಶ್ವರ್ಯವಂತನಾಗಿ ಸತ್ಕುಲದಲ್ಲಿ ಜನ್ಮವನ್ನೂ ಹೊಂದುವನು. ಅಲ್ಲಿ ಪೂ... ರ್ವಕಾಮನಾನುಸಾರವಾಗಿ ಸರ್ವಭೋಗಗಳು ಪ್ರಾಪ್ತವಾಗಿ, ಪೂರ್ವಜನ್ಮದ... ಧ್ಯಾನಸಂಸ್ಕಾರದಿಂದ ಪುನಃ ವಿಚಾರದಲ್ಲಿ ಅಥವಾ ಧ್ಯಾನದಲ್ಲಿ ಪ್ರವೃತ್ತಿ... ಯುಂಟಾಗುವದು, ಅದರಿಂದ ಜ್ಞಾನವುಂಟಾಗಿ ಮೋಕ್ಷಪ್ರಾಪ್ತಿಯಾಗು... ತ್ತದೆ.

॥೨೯೬॥ (೨) ಬ್ರಹ್ಮಲೋಕದ ಭೋಗಗಳ ಕಾಮನೆಯನ್ನು ಪ್ರತಿ... ಬಂಧಿಸಿ ಓಂಕಾರರೂಪ ಬ್ರಹ್ಮದ ಧ್ಯಾನದಲ್ಲಿ ಆಸಕ್ತನಾಗಲು, ಅವನು... ಶರೀರವನ್ನು ಬಿಟ್ಟು ಬ್ರಹ್ಮಲೋಕವನ್ನು ಕುರಿತು ಹೋಗುವನು. ಅಲ್ಲಿ... ಮನುಷ್ಯರಿಗೆ, ಪಿತೃಗಳಿಗೆ ಮತ್ತು ದೇವತೆಗಳಿಗೆ ದುರ್ಲಭವಾದ ಸ್ವತಂತ್ರ... ತೆಯದೆ. ಅದರ ಆನಂದದ ಭೋಗ, ಮತ್ತು ಹಿರಣ್ಯಗರ್ಭನ ಸಮಗ್ರ... ಐಶ್ವರ್ಯ, ಸತ್ಯ ಸಂಕಲ್ಪಾದಿಗಳು ಅವನಿಗೆ ಪ್ರಾಪ್ತವಾಗುತ್ತವೆ.

॥೨೯೭॥ ಬ್ರಹ್ಮಲೋಕದ ಮಾರ್ಗ ಕ್ರಮ.

ಯಾವ ಮಾರ್ಗದಿಂದ ಬ್ರಹ್ಮಲೋಕಕ್ಕೆ ಹೋಗತಕ್ಕದ್ದದೆಯೋ

೧

ಆ ಕ್ರಮವನ್ನು ಹೇಳುವೆನು. ಯಾವ ಪುರುಷನು ಬ್ರಹ್ಮೋಪಾಸನಾ ವಿಷಯ... ದಲ್ಲಿ ತತ್ಪರನಿರುವನೋ ಅವನಿಗೆ ಮರಣಕಾಲದಲ್ಲಿ ಇಂದ್ರಿಯಗಳು, ಅಂತಃ...

೨

ಕರಣ ಮೊದಲಾದ ಸರ್ವವೂ ಮೂರ್ಛಿತವಾಗಿರುತ್ತವೆ. ಇವು [illegible] ತಿಳಿಯಲೂ ಅಸಮರ್ಥವಾಗಿರುತ್ತವೆ. ಮತ್ತು ಅವನ ಲಿಂಗ[illegible] ಒಯ್ಯುವದಕ್ಕೆ ಯಮದೂತರು ಅವನ ಹತ್ತಿರ ಬರುವದಿಲ್ಲ. ತ[illegible] ಅಗ್ನ್ಯಭಿಮಾನ ದೇವತೆಯು ಅವನ ಲಿಂಗಶರೀರವನ್ನು ತೆ[illegible] ಕೊಂಡು ತನ್ನ ಲೋಕವನ್ನು ಕುರಿತು ಗಮನಮಾಡುವನು. (೨) [illegible] ಲೋಕದಿಂದ [illegible]ಭಿಮಾನ ದೇವತೆಯು ತೆಗೆದುಕೊಂಡು ಹೋ[illegible] (೩) ಅಲ್ಲಿಂದ ಶುಕ್ಲಪಕ್ಷದ ಅಭಿಮಾನ ದೇವತೆಯು ತನ್ನ ಲೋ[illegible] ದುಕೊಂಡು ಹೋಗುವನು. (೪) ಆಮೇಲೆ ಉತ್ತರಾಯಣ ಪ[illegible] ಮಾನದೇವತೆಯು ತೆಗೆದುಕೊಂಡು ಹೋಗುವನು. (೫) ಅಲ್ಲಿಂದ[illegible] ಸಂವತ್ಸರಾಭಿಮಾನ ದೇವತೆಯು ತನ್ನ ವಶಕ್ಕೆ ತೆಗೆದುಕೊಳ್ಳುವ[illegible] ಆಮೇಲೆ ದೇವಲೋಕದ ಅಭಿಮಾನದೇವತೆಯು ಕರೆದೊಯ್ಯುವ[illegible] ಆಮೇಲೆ ವಾಯ್ವಾಭಿಮಾನ ದೇವತೆಯು, (೮) ಮುಂದೆ ಸೂ[illegible] (೯) ಚಂದ್ರದೇವತಾ, (೧೦) ವಿದ್ಯುಲ್ಲತಾಭಿಮಾನ ದೇವತಾ, [illegible] ಮವಾಗಿ ಕರೆದೊಯ್ಯುವರು. (೧೧) ಆಮೇಲೆ ಆ ವಿದ್ಯುಲ್ಲತಾ ಲೋ[illegible] ಆ ಉಪಾಸಕನಮುಂದೆ ಹಿರಣ್ಯಗರ್ಭನ ಆಜ್ಞೆಯಿಂದ ಹಿರಣ್ಯ[illegible] ಕವಾಸಿಯೂ, ಹಿರಣ್ಯಗರ್ಭಸರೂಪಕ್ಕೆ ಸಮಾನವಾಗಿಯೂ ಇ[illegible] ಪುರುಷನು ಕರೆದೊಯ್ಯಲು ಬರುವನು. ಅವನು ವಿದ್ಯುಲ್ಲತಾ ಲೋ[illegible] ವರುಣಲೋಕಕ್ಕೆ ಕರೆದೊಯ್ಯುವನು. ವಿದ್ಯುಲ್ಲತಾಭಿಮಾನ ದೇ[illegible] ಉಪಾಸಕನೊಡನೆ ಬರುವನು. (೧೨) ವರುಣಲೋಕದಿಂದ ಇಂದ್ರ[illegible] ಕ್ಕೆ ಕರೆದುಕೊಂಡು ಹೋಗುವರು, ಈ ವರುಣದೇವತೆಯಾದರೂ [illegible] ಗರ್ಭಲೋಕವಾಸಿಯಾದ ಪುರುಷನೊಡನೆ ಇರುವನು. [೧೩) [illegible] ಮುಂದೆ ಇಂದ್ರದೇವತಾ ಪ್ರಜಾಪತಿ ಲೋಕಪರ್ಯಂತರ ಸಂ[illegible] ರುವನು. (೧೪) ಆಮೇಲೆ ಅಲ್ಲಿ ಪ್ರಜಾಪತಿಯು ಆ ಉಭಯತ್ರ[illegible] ಬ್ರಹ್ಮಲೋಕಕ್ಕೆ ಕರೆದೊಯ್ಯುವ ವಿಷಯದಲ್ಲಿ ಸಮರ್ಥನಾ[illegible] ಅದರಿಂದ [illegible]ನೊಡನೆ ಉಪಾಸಕನು ಬ್ರಹ್ಮಲೋಕಕ್ಕೆ [illegible] ನಾಗುವನು, ಬ್ರಹ್ಮಲೋಕದ ಅಧಿಪತಿಯು ಹಿರಣ್ಯಗರ್ಭನು. ಸೂಕ್ಷ್ಮ[illegible] ಷ್ಟಿಯ ಅಭಿಮಾನ ಚೇತನ ಹಿರಣ್ಯಗರ್ಭ ಎನ್ನುತ್ತಾರೆ. [illegible] ಬ್ರಹ್ಮನೆಂದೂ ಅನ್ನುತ್ತಾರೆ. ಕಾರ್ಯಬ್ರಹ್ಮನ ನಿವಾಸಸ್ಥಾ[illegible] ಲೋಕವೆನ್ನುತ್ತಾರೆ.



ಟಿಪ್ಪಣಿ—[೧] ಈ ವರ್ಗದ ಕ್ರಮವನ್ನು ಯಜುರ್ವೇದದ ಈಶಾವಾಸ್ಯ ಉಪನಿಷತ್ತಿನಲ್ಲಿಯೂ ಮತ್ತು ಛಾಂದೋಗ್ಯದಲ್ಲಿಯೂ ವಿವರಿಸಲ್ಪಟ್ಟಿರುವದು.

(೨) ಮರಣ ಸಮಯದಲ್ಲಿ ಸ್ಥೂಲ ಶರೀರದಿಂದ ಲಿಂಗಶರೀರವು ವಿಯೋಗವಾಗುವದರಿಂದಲೂ, ಚೇತನದ ಅಭಾವದಿಂದಲೂ ಉಪಾಸಕನ ಇಂದ್ರಿಯಗಳು ಮತ್ತು ಅಂತಃಕರಣಗಳು ಅನ್ಯ ಪ್ರಾಣಿಗಳಂತೆ ಮೂರ್ಛಿತವಾಗುವವು. ಇದರಿಂದ ಅವು ಸ್ವತಃ ಎಲ್ಲಿಯೂ ಹೋಗಲು ಅಸಮರ್ಥವಾಗಿರುವವು. ಮತ್ತು ಕ್ರಿಯಾಶಕ್ತಿಯುಳ್ಳ ಪ್ರಾಣವು ಸ್ವರೂಪದಿಂದ ಅಚೇತವಾಗುವದರಿಂದ ಇಚ್ಛೆಯ ಅಭಾವದಿಂದ ಅವುಗಳೊಡನೆ ಪ್ರಾಣದ ಗಮನವು ಸಂಭವಿಸುವದಿಲ್ಲ.

## ||೨೯೩|| ಸಾಯುಜ್ಯ ಮೋಕ್ಷದ ವರ್ಣನ.

ಯದ್ಯಪಿ ಪೂರ್ವರೀತಿಯಿಂದ ಓಂಕಾರದ ಉಪಾಸನೆಯು ಶುದ್ಧ ಬ್ರಹ್ಮರೂಪದಿಂದ ಹೇಳಲ್ಪಟ್ಟದೆ. ಶುದ್ಧಬ್ರಹ್ಮ ಉಪಾಸಕನಿಗೆ ಶುದ್ಧಬ್ರಹ್ಮದ ಪ್ರಾಪ್ತಿಯು ಬೇಕಾಗಿರುತ್ತದೆ. ತಥಾಪಿ ಶುದ್ಧಬ್ರಹ್ಮನ ಪ್ರಾಪ್ತಿಯು ಜ್ಞಾನದಿಂದಲೇ ಆಗುತ್ತದೆ. ಮತ್ತು ಕಾಮನಾರೂಪ ಪ್ರತಿಬಂಧದಿಂದ ಅವನಿಗೆ ಜ್ಞಾನವಾಗುವದಿಲ್ಲ. ಅವನಿಗೆ ಕಾರ್ಯ ಬ್ರಹ್ಮನ ಪ್ರಾಪ್ತಿರೂಪವಾದ ಸಾಯುಜ್ಯರೂಪ ಮೋಕ್ಷವಾಗುವದು.

೧. ಬ್ರಹ್ಮಲೋಕದಲ್ಲಿ ಪ್ರಾಪ್ತನಾದ ಉಪಾಸಕನಿಗೆ ಹಿರಣ್ಯಗರ್ಭನ ಸಮಾನವಾಗಿ ಐಶ್ವರ್ಯವು ಪ್ರಾಪ್ತವಾಗುತ್ತದೆ. ೨. ಸತ್ಯಸಂಕಲ್ಪನಾಗುತ್ತಾನೆ. ೩. ಯಾವ ಪ್ರಕಾರದ ಶರೀರದ ಇಚ್ಛೆಯನ್ನು ಮಾಡುವನೋ ಅಂಥ ಶರೀರವು ಆಗುವದು. ೪. ಯಾವ ಭೋಗಗಳ ಅಪೇಕ್ಷೆಯನ್ನು ಮಾಡುವನೋ, ಆ ಸರ್ವ ಭೋಗಗಳು ಸಂಕಲ್ಪದಿಂದಲೇ ಪ್ರಾಪ್ತವಾಗುವವು. ೫. ಒಂದೇ ಸಮಯದಲ್ಲಿ ಸಹಸ್ರ ಶರೀರಗಳಲ್ಲಿಯ ಪ್ರತ್ಯೇಕ ಭೋಗಗಳ ಇಚ್ಛೆಯನ್ನು ಮಾಡಿದರೂ ಸಹ ಅದೇ ಸಮಯದಲ್ಲಿ ಸಹಸ್ರ ಶರೀರಗಳೂ ಮತ್ತು ಅವುಗಳ ಭೋಗಗಳೂ ಪ್ರತ್ಯೇಕ ಪ್ರತ್ಯೇಕವಾಗಿ ಉತ್ಪನ್ನವಾಗುತ್ತವೆ. ಬಹಳ ಹೇಳುವದೇನು ? ಯಾವ ಸಂಕಲ್ಪವನ್ನು ಮಾಡುವನೋ, ಅದು ತತ್ಕಾಲಕ್ಕೇ ಸಿದ್ಧವಾಗುವದು. ಪರಂತು ಜಗತ್ತಿನ ಉತ್ಪತ್ತಿ ಪಾಲನ ಸಂಹಾರ ಈ ಮೂರು ಕ್ರಿಯೆಗಳನ್ನು ಬಿಟ್ಟು, ಉಳಿದ ಸರ್ವೈ

೧

ಶ್ವರ್ಯಗಳೂ ಈಶ್ವರನ ಸಮಾನವಾಗಿ ಪ್ರಾಪ್ತವಾಗುವವು. ಇದಕ್ಕೇ ಸಾಯುಜ್ಯ ಮೋಕ್ಷಮೋಕ್ಷವೆನ್ನುತ್ತಾರೆ.

ಹೀಗೆ ಹಿರಣ್ಯಗರ್ಭನ ಸಮಾನವಾಗಿ ಬಹುಕಾಲ ಸಂಕಲ್ಪಸಿದ್ಧಿ ದಿವ್ಯ

ಪದಾರ್ಥಗಳ ಉಪಭೋಗವನ್ನು ಅನುಭೋಗಿಸಿ, ಪ್ರಳಯ ಕಾಲ
ಯಾವಾಗ ಹಿರಣ್ಯಗರ್ಭನ ಲೋಕದ ನಾಶವಾಗುವದೋ, ಆಗ ಜ್ಞಾ
ವುಂಟಾಗಿ ಉಪಾಸಕನಿಗೆ ವಿದೇಹ ಮೋಕ್ಷದ ಪ್ರಾಪ್ತಿಯಾಗುವದು.

ಟಿಪ್ಪಣಿ ೧ ರಾಜ್ಯದಲ್ಲಿಯ ಪ್ರಜೆಗಳಂತೆ ಈಶ್ವರಲೋಕದಲ್ಲಿ ವಾಸಮಾಡುವದು ಸಾಲೋಕ್ಯ ಮುಕ್ತಿ ಅನ್ನುತ್ತಾರೆ.

ಪ್ರಜೆಗಳಿಗಿಂತಲೂ ಶ್ರೇಷ್ಠರಾದ ರಾಜಕಿಂಕರರಂತೆ ಈಶ್ವರನ ಸಮೀಪದ ವಾಸಮಾಡುವದಕ್ಕೆ ಸಾಮೀಪ್ಯಮುಕ್ತಿ ಅನ್ನುತ್ತಾರೆ.

ಈ ಕಿಂಕರರಿಗಿಂತಲೂ ಶ್ರೇಷ್ಠನಾದ ರಾಜಸಹೋದರನಂತೆ ಈಶ್ವರನ ಸಮಾ ವಾಗಿ ರೂಪ ಪ್ರಾಪ್ತಿಯಾಗುವದೇ ಸಾರೂಪ್ಯ ಮುಕ್ತಿಯು.

ರಾಜಸಹೋದರನಿಗಿಂತಲೂ ಶ್ರೇಷ್ಠನಾದ ರಾಜನ ಜ್ಯೇಷ್ಠಪುತ್ರನಂತೆ ಈ ಸಮಾನವಾಗಿ ಸತ್ಯಸಂಕಲ್ಪಾದಿ ಐಶ್ವರ್ಯ ಪ್ರಾಪ್ತಿಯಾಗುವದೇ ಸಾ ಮುಕ್ತಿಯು.

ಈ ರೀತಿಯಿಂದ ಶಾಸ್ತ್ರಗಳಲ್ಲಿ ಫಲರೂಪವಾದ ನಾಲ್ಕು ಪ್ರಕಾರದ ಮು ಗಳು ಹೇಳಲ್ಪಟ್ಟಿವೆ. ಇವುಗಳಲ್ಲಿ ಕಡೆಯದಾದ ಸಾರ್ಷ್ಟಿಮುಕ್ತಿಯು ಶ್ರೇಷ್ಠವಾದದ್ದು. ಈ ಸಾರ್ಷ್ಟಿಮುಕ್ತಿಗೆ ಸಾಯುಜ್ಯ ಮೋಕ್ಷವೆಂದೂ ಅ ತ್ತಾರೆ.

॥೨೯೯॥ ಓಂಕಾರದ ಅಹಂಗ್ರಹ ಧ್ಯಾನದಿಂದ ಬ್ರಹ್ಮಲೋಕ ಪ್ರಾಪ್ತಿ ನಿಯಮವು.

ಹೇಗೆ ಓಂಕಾರರೂಪ ಬ್ರಹ್ಮೋಪಾಸನೆಯನ್ನು ಮಾಡುವ ಉಪಾ ಸಕನಿಗೆ ಬ್ರಹ್ಮಲೋಕ ಪ್ರಾಪ್ತಿದ್ವಾರಾ ಮೋಕ್ಷವು ಪ್ರಾಪ್ತಿಯಾಗುವದು ಹಾಗೆ ಅನ್ಯ ಉಪನಿಷತ್ತುಗಳಲ್ಲಿ ಹೇಳಿದ ಬ್ರಹ್ಮೋಪಾಸನೆಯಂತೆ ಉಪಾ ಸನೆಯನ್ನು ಮಾಡಿದರೂ ಸಹ, ಇದೇ ಫಲವು ಪ್ರಾಪ್ತವಾಗುತ್ತದೆ. ಪ ಅಹಂಗ್ರಹದ ಉಪಾಸನೆಯ ಹೊರ್ತು ಅನ್ಯ ಉಪಾಸನೆಗಳಿಂದ ಬ್ರ ಲೋಕ ಪ್ರಾಪ್ತಿ ಯುಂಟಾಗುವದಿಲ್ಲ, ಎಂಬ ಪ್ರಸಂಗವನ್ನು ಸೂ ಕಾರನು ಮತ್ತು ಭಾಷ್ಯಕಾರನು ಚತುರ್ಥಾಧ್ಯಾಯದಲ್ಲಿ ಪ್ರತಿಪಾ ಮಾಡಿರುವರು. ೧. ಹೇಗೆ ನರ್ಮದೇಶ್ವರನನ್ನು ಶಿವರೂಪದಿಂದಲೂ ಸಾ ಗ್ರಾಮವನ್ನು ವಿಷ್ಣುರೂಪದಿಂದಲೂ ಧ್ಯಾನಮಾಡುವದಕ್ಕೆ ಪ್ರತೀಕಧ್ಯಾ ವೆನ್ನುತ್ತಾರೆ. ಅಹಂಗ್ರಹ ಧ್ಯಾನವಲ್ಲ. ೨. ಮನಸ್ಸನ್ನು ಬ್ರಹ್ಮರೂಪ ದಿಂದ ಅಥವಾ ಆದಿತ್ಯನನ್ನು ಬ್ರಹ್ಮರೂಪದಿಂದ ಧ್ಯಾನಮಾಡುವದಕ್ಕೆ ಹಾ ಪ್ರತೀಕ ಧ್ಯಾನವೆನ್ನುತ್ತಾರೆ. ಅಹಂಗ್ರಹ ಧ್ಯಾನವಲ್ಲ.

ಈ ಪ್ರತೀಕ ಧ್ಯಾನದಿಂದ ಬ್ರಹ್ಮಲೋಕದ ಪ್ರಾಪ್ತಿಯು ಆಗುವ



ಸಗುಣ ಅಥವಾ ನಿರ್ಗುಣ ಬ್ರಹ್ಮನನ್ನು ತಮ್ಮಿಂದ ಅಭೇದವನ್ನು ಕಲ್ಪಿಸಿ ಚಿಂತನ ಮಾಡಬೇಕು-ಇದಕ್ಕೆ ಅಹಂಗ್ರಹಧ್ಯಾನವೆನ್ನುತ್ತಾರೆ. ಇದರಿಂದ ಈ ಬ್ರಹ್ಮಲೋಕದ ಪ್ರಾಪ್ತಿಯಾಗುವದು.

॥೩೦೦॥ ಉತ್ತರಾಯಣ ಮಾರ್ಗದಿಂದ ಬ್ರಹ್ಮಲೋಕವನ್ನು ಪ್ರವೇಶಿಸಿದ ಉಪಾಸಕನಿಗೆ ಪುನಃ ಸಂಸಾರದ ಅಪ್ರಾಪ್ತಿಯೂ ಮತ್ತು ಜ್ಞಾನದ್ವಾರಾ ಮೋಕ್ಷಪ್ರಾಪ್ತಿಯೂ

ಈ ಪೂರ್ವದಲ್ಲಿ ಹೇಳಿದ ಮಾರ್ಗಕ್ಕೆ ಉತ್ತರಾಯಣ ಮಾರ್ಗವೆನ್ನುತ್ತಾರೆ. ಮತ್ತು ದೇವ ಮಾರ್ಗವೆಂದೂ ಅನ್ನುತ್ತಾರೆ.

ಈ ದೇವ ಮಾರ್ಗದಿಂದ ಯಾವ ಉಪಾಸಕನು ಬ್ರಹ್ಮಲೋಕವನ್ನು ಕುರಿತು, ಗಮನಮಾಡುವನೋ, ಅವನಿಗೆ ಪುನಃ ಸಂಸಾರವು ಇಲ್ಲ. ಆದರೆ ಜ್ಞಾನ ಪ್ರಾಪ್ತಿಯಾಗಿ ಮುಕ್ತಿಯನ್ನು ಹೊಂದುತ್ತಾನೆ. ಅಲ್ಲಿ ಜ್ಞಾನಕ್ಕೆ ಸಾಧನವಾದ ಗುರೂಪದೇಶ ಮೊದಲಾದವುಗಳ ಅಪೇಕ್ಷೆಯು ಇಲ್ಲ. ಆದರೆ ಬ್ರಹ್ಮಲೋಕದಲ್ಲಿ ಗುರೂಪದೇಶ ಮೊದಲಾದ ಸಾಧನಗಳಿಲ್ಲದೆಯೇ ಜ್ಞಾನವುಂಟಾಗುತ್ತದೆ. ಕಾರಣವೇನೆಂದರೆ, ಬ್ರಹ್ಮಲೋಕದಲ್ಲಿ ರಜೋಗುಣ ತಮೋಗುಣಗಳ ಲೇಶವಾದರೂ ಇರುವದಿಲ್ಲ. ಕೇವಲ ಸತ್ವಗುಣ ಪ್ರಾಧಾನ್ಯ ಲೋಕವದೆ. ೧. ತಮೋಗುಣವಿಲ್ಲದ್ದರಿಂದ ಜಡ, ಆಲಸ್ಯಾದಿಗಳು ಇಲ್ಲ. ೨. ರಜೋಗುಣ ವಿಲ್ಲದ್ದರಿಂದ ಕಾಮಕ್ರೋಧಾದಿರೂಪ ರಜೋಗುಣದ ಕಾರ್ಯವಿಕ್ಷೇಪವಿಲ್ಲ. ೩. ಕೇವಲ ಸತ್ವಗುಣವದೆ, ಇದರಿಂದ ಸತ್ವಗುಣದ ಕಾರ್ಯ ಜ್ಞಾನರೂಪವಾದ ಪ್ರಕಾಶ ಆ ಲೋಕದಲ್ಲಿ ಪ್ರಧಾನವದೆ.

॥೩೦೧॥ ಹಿರಣ್ಯಗರ್ಭವಾಸಿಗಳಿಗೆ ಅಸಂಗ ನಿರ್ವಿಕಾರ ಬ್ರಹ್ಮರೂಪ ಆತ್ಮದ ಭಾನವಾಗುವದು. ಅದರಲ್ಲಿ ಕಾರಣ.

ಓಂಕಾರ ಬ್ರಹ್ಮರೂಪದಿಂದ ಯಾವನು ಪೂರ್ವದಲ್ಲಿ ಉಪಾಸನೆಯನ್ನು ಮಾಡಿರುವನೋ, ಅವನು ಆ ಓಂಕಾರದ ಮಾತ್ರೆಗಳ ಅರ್ಥವನ್ನು ಈ ರೀತಿಯಿಂದ ಚಿಂತನ ಮಾಡಿರುವನು. ೧. ಸ್ಥೂಲ ಉಪಾಧಿ ಸಹಿತ ವಿರಾಟ್ ವಿಶ್ವ ಚೇತನವು ಅಕಾರಪದ ವಾಚ್ಯವದೆ. ೨. ಸೂಕ್ಷ್ಮ ಉಪಾಧಿ ಸಹಿತ ಚೇತನವು ಹಿರಣ್ಯಗರ್ಭ ತೈಜಸ ಉಕಾರದ ವಾಚ್ಯವದೆ. ೩-ಕಾರಣ ಉಪಾಧಿ ಸಹಿತ ಚೇತನವು ಈಶ್ವರಪ್ರಾಜ್ಞ ಮಕಾರದ ವಾಚ್ಯವದೆ.

ಎಂಬ ಅರ್ಥವನ್ನು ಪೂರ್ವದಲ್ಲಿ ಚಿಂತನ ಮಾಡಿರುವನು. ಅದು ಬ್ರಹ್ಮಲೋಕದಲ್ಲಿ ಸ್ಮೃತಿಯಾಗುವದಲ್ಲದೆ ಸತ್ವಗುಣ ಪ್ರಭಾವದಿಂದ ಹೀಗೆ ವಿವೇಚನೆಯುಂಟಾಗುವುದು. (೧) ಸ್ಥೂಲ ಉಪಾಧಿಯಿಂದ ಚೇ

ತನವಲ್ಲಿ ವಿರಾಟತ್ವವೂ ಮತ್ತು ವಿಶ್ವತ್ವವೂ ಪ್ರತೀತವಾಗುವದು. ಸಮಷ್ಟಿಯ ದೃಷ್ಟಿಯಿಂದ ವಿರಾಟತ್ವವು ಅದೆ. ಸ್ಥೂಲವ್ಯಷ್ಟಿಯಿಂದ ತ್ವವೂ ಇರುವದು. ಸಮಷ್ಟಿವ್ಯಷ್ಟಿಸ್ಥೂಲದ ದೃಷ್ಟಿಯ ಹೊರ್ತು ತ್ವವೂ ವಿಶ್ವತ್ವವೂ ಪ್ರತೀತವಾಗುವದಿಲ್ಲ. ಆದರೆ ಚೇತನ ಮಾತ್ರವು ಪ್ರತೀತವಾಗುತ್ತದೆ.

(೨) ಹೀಗೆಯೇ ಸೂಕ್ಷ್ಮಉಪಾಧಿಸಹಿತ ಹಿರಣ್ಯಗರ್ಭ ತೈಜಸಚೇತನ ಉಕಾರ ವಾಚ್ಯವದೆ. ಇಲ್ಲಿ ಸಮಷ್ಟಿ ಸೂಕ್ಷ್ಮ ಉಪಾಧಿಯ ದೃಷ್ಟಿಯಿಂ ಚೇತನವಲ್ಲಿ ಹಿರಣ್ಯಗರ್ಭತ್ವವು ಪ್ರತೀತವಾಗುವದು. ಮತ್ತು ವ್ಯಷ್ಟಿಸೂಕ್ಷ್ಮ ಉಪಾಧಿಯ ದೃಷ್ಟಿಯಿಂದತೈಜಸತ್ವವು ಪ್ರತೀತವಾಗುವದು. ಸೂಕ್ಷ್ಮ ಉಪಾಧಿಯ ಹೊರ್ತು ಹಿರಣ್ಯಗರ್ಭತ್ವವು ಮತ್ತು ತೈಜಸತ್ವವು ಪ್ರತೀತವಾಗುವದಿಲ್ಲ.

(೩) ಇದರಂತೆ ಮಕಾರ ವಾಚ್ಯನಾದ ಈಶ್ವರನು ಪ್ರಾಜ್ಞ ಇಲ್ಲಿ ಸಮಷ್ಟಿ ಅಜ್ಞಾನ ಉಪಾಧಿಯ ದೃಷ್ಟಿಯಿಂದ ಚೇತನದಲ್ಲಿ ಈಶ್ವರತ್ವವು ಪ್ರತೀತವಾಗುದಿಲ್ಲ. ಮತ್ತು ವ್ಯಷ್ಟ್ಯಜ್ಞಾನ ಉಪಾಧಿಯ ದೃಷ್ಟಿಯಿಂದ ಚೇತನವಲ್ಲಿ ಪ್ರಾಜ್ಞತ್ವವು ಪ್ರತೀತವಾಗುತ್ತದೆ. ಅಜ್ಞಾನ ಉಪಾಧಿಯ ದೃಷ್ಟಿಯ ಹೊರ್ತು ಈಶ್ವರತ್ವ ಮತ್ತು ಪ್ರಾಜ್ಞತ್ವವು ಪ್ರತೀತವಾಗುವದಿಲ್ಲ.

ಯಾವ ವಸ್ತುವು ಯಾವದರಲ್ಲಿ ಅನ್ಯದೃಷ್ಟಿಯಿಂದ ಪ್ರತೀತವಾಗುವದೋ, ಅದು ಅದರಲ್ಲಿ ಯಥಾರ್ಥವಾಗಿ ಇರುವದಿಲ್ಲ. ಯಾವ ವಸ್ತುವಿನ ರೂಪವು ಅನ್ಯದೃಷ್ಟಿಯ ಹೊರ್ತುಪ್ರತೀತವಾಗುವದೋ ಅದು ಅದರ ಯಥಾರ್ಥರೂಪವಿರುತ್ತದೆ. ಹೀಗೆ ಒಬ್ಬ ಪುರುಷನಲ್ಲಿ ಪಿತನದೃಷ್ಟಿಯಿಂದ ಪುತ್ರನಾಗಿಯೂ ಪಿತಾಮಹನ ದೃಷ್ಟಿಯಿಂದ ಪೌತ್ರನಾಗಿಯೂ ಭಾನವಾಗುವದು. ಇದು ಯಥಾರ್ಥದಿಂದಲ್ಲ, ಆದರೆ ಪುರುಷನ ಪಿಂಡವು ಪರಮಾರ್ಥ ಇದರಂತೆ ಸ್ಥೂಲಸೂಕ್ಷ್ಮಕಾರಣ ಉಪಾಧಿಯ ದೃಷ್ಟಿಯಿಂದ ಯಾವ ವಿರಾಟ್ ವಿಶ್ವಾದಿ ರೂಪಗಳು ಭಾನವಾಗುವವೋ, ಅವು ಮಿಥ್ಯಾ ಅವೆ, ಚೇತನ ಮಾತ್ರವು ಸತ್ಯವದೆ, ಈ ಚೇತನವು ಸರ್ವಭೇದ ರಹಿತವದೆ. ಯಾಕೆಂದರೆ ೧. ವಿರಾಟ್ ವಿಶ್ವದಲ್ಲಿ ಯಾವ ಭೇದವಿರುವದೋ, ಅದು ಉಪಾಧಿ ಎರಡರದಿದ್ದರೂ ಸಮಷ್ಟಿ, ಉಪಾಧಿ, ವಿರಾಟ್‌ದ ಮತ್ತು ವ್ಯಷ್ಟಿ ಉಪಾಧಿ, ವಿಶ್ವದ ಉಪಾಧಿಯಿಂದ ಇವರ ಬೇದವದೆ. ಇದರಿಂದ ಸ್ವರೂಪ ದಿಂದ ಭೇದವಿಲ್ಲ. ಎಂದು ಹೇಳಿದಂತಾಯಿತು. ೨. ಇದರಂತೆ ಹಿ



ರಣ್ಯಗರ್ಭನ ಭೇದವು ಸಹ ಸಮಷ್ಟಿವ್ಯಷ್ಟಿ ಉಪಾಧಿಯಿಂದ ಇರುವುದು. ಸ್ವರೂಪದಿಂದ ಅಲ್ಲ. ೩. ಇದರಂತೆ ಈಶ್ವರ ಮತ್ತು ಪ್ರಾಜ್ಞನ ಭೇದವು ಸಹ ಸಮಷ್ಟಿವ್ಯಷ್ಟಿ ಉಪಾಧಿಯ ಭೇದದಿಂದದೆ. ಸ್ವರೂಪದಿಂದಲ್ಲ. (೧) ಪ್ರಾಜ್ಞವು ಈಶ್ವರನಿಂದ ಅಭೇದವದೆ. ಮತ್ತು (೨) ತೈಜಸವು ಹಿರಣ್ಯಗರ್ಭನಿಂದ ಅಭೇದವದೆ. (೩) ಹಾಗೆಯೇ ವಿಶ್ವವು ವಿರಾಟ್‌ದಿಂದ ಅಭೇದವದೆ.

ಈಪ್ರಕಾರದಿಂದ ಸ್ಥೂಲೋಪಾಧಿ ಸೂಕ್ಷ್ಮೋಪಾಧಿ ಅಥವಾಕಾರಣೋಪಾಧಿಯೊಡನೆ ಭೇದವಿಲ್ಲ. ಕಾರಣವೇನೆಂದರೆ, ಸ್ಥೂಲ, ಸೂಕ್ಷ್ಮ ಕಾರಣ ಉಪಾಧಿ ವೃಷ್ಟಿಯ ತ್ಯಾಗದಿಂದ ಚೇತನ ಸ್ವರೂಪದಲ್ಲಿ ಯಾವ ಪ್ರಕಾರದ ಭೇದವೂ ಪ್ರತೀತವಾಗುವದಿಲ್ಲ.

ಅನಾತ್ಮದಿಂದ ಸಹ ಚೇತನದ ಭೇದವಿಲ್ಲ. ಕಾರಣವೇನೆಂದರೆ, ಅನಾತ್ಮ ದೇಹಾದಿಗಳು ಅವಿದ್ಯಾಕಾಲದಲ್ಲಿ ಪ್ರತೀತವಾಗುವವು. ಪರಮಾರ್ಥದಿಂದ ಅಲ್ಲ; ಇವಕ್ಕೂ ಚೇತನಕ್ಕೂ ಭೇದವು ಇಲ್ಲ.

ಹೀಗೆ ಸರ್ವಭೇದರಹಿತ ಅಸಂಗ, ನಿರ್ವಿಕಾರ, ನಿತ್ಯಮುಕ್ತ, ಬ್ರಹ್ಮರೂಪನು ಆತ್ಮ ಓಂಕಾರದ ಲಕ್ಷ್ಯವಾದ ಸ್ವಯಂ ಪ್ರಕಾಶ ರೂಪದಿಂದ ಉಪಾಸಕನಿಗೆ ಭಾನವಾಗುತ್ತದೆ. ಇದರಿಂದ ಹಿರಣ್ಯಗರ್ಭ ಲೋಕವಾಸಿಗೆ ಈ ಸಂಸಾರವೇ ಜ್ಞಾನದ್ವಾರಾ ಮೋಕ್ಷರೂಪ ಫಲವಾಗುತ್ತದೆ.

---

೩೦೨ ॥ ಓಂ ಮತ್ತು ಮಹಾವಾಕ್ಯದ ಅರ್ಥಗಳ ಐಕ್ಯತ್ವವು.

ಯದ್ಯಪಿ ಮಹಾ ವಾಕ್ಯದ ವಿವೇಕದ ಹೊರ್ತು ಜ್ಞಾನವಾಗುವದಿಲ್ಲವಾದರೂ ಓಂಕಾರದ ವಿವೇಕವೇ ಮಹಾವಾಕ್ಯದ ವಿವೇಕವದೆ.

೧. (೧) ಸ್ಥೂಲೋಪಾಧಿ ಸಹಿತ ಚೇತನವು ಅಕಾರದ ವಾಚ್ಯವದೆ, (೨) ಸ್ಥೂಲ ಉಪಾಧಿಯನ್ನು ತ್ಯಾಗಮಾಡಿ ಚೇತನ ಮಾತ್ರವು ಅಕಾರದ ಲಕ್ಷ್ಯವು.

೨ (೧) ಇದರಂತೆ ಸೂಕ್ಷ್ಮ ಉಪಾಧಿ ಸಹಿತ ಚೇತನವು ಉಕಾರದ ವಾಚ್ಯವಾಗಿದೆ. (೨) ಸ್ಥೂಲೋಪಾಧಿಯನ್ನು ತ್ಯಾಗ ಮಾಡಿದರೆ ಚೇತನವು ಮಾತ್ರ ಉಕಾರದ ಲಕ್ಷ್ಯವಾಗುತ್ತದೆ.

೩ (೧) ಕಾರಣ ಉಪಾಧಿ ಸಹಿತ ಚೇತನವು ಮಕಾರದ ವಾಚ್ಯವದೆ. (೨) ಕಾರಣ ಉಪಾಧಿಯನ್ನು ತ್ಯಾಗಮಾಡಲು ಚೇತನ ಮಾತ್ರ ಮಕಾರ ಲಕ್ಷ್ಯವದೆ.

ಈರೀತಿ (೧) ಉಪಾಧಿರಹಿತ ವಿಶ್ವಾದಿಗಳು ಅಕಾರಾದಿ ಮಾ... ವಾಚ್ಯವವೆ. (೨) ಉಪಾಧಿರಹಿತ ಚೇತನವು ಸರ್ವ ಮಾತ್ರೆಗ... ವದೆ.

(೧) ಇವರಂತೆ ನಾಮರೂಪಗಳೇ ಮೊದಲಾದ ಸಕಲ ಉ... ಹಿತ ಚೇತನವು ಓಂಕಾರ ವರ್ಣದ ವಾಚ್ಯವಾಗಿರುವದು.

(೨) ನಾಮಪದರೂಪ ಸಕಲ ಉಪಾಧಿರಹಿತ ಚೇತನವು ಓ... ವರ್ಣದ ಲಕ್ಷ್ಯವದೆ.

ಹೀಗೆ ಓಂಕಾರ ಮತ್ತು ಮಹಾವಾಕ್ಯದ ಅರ್ಥವು ಒಂದೇ... ಆದಕಾರಣ ಓಂಕಾರದ ವಿವೇಕದಿಂದ ಅದ್ವೈತ ಜ್ಞಾನವಾಗುವ...

ಆಚಾರ್ಯರ ಮುಖದಿಂದ ಮೇಲೆ ಹೇಳಿದಂತೆ ಶ್ರವಣಮಾ... ...ನಾಮಕ ಮಧ್ಯಮ ಶಿಷ್ಯನು ಉಪಾಸನೆಯಲ್ಲಿ ಪ್ರವೃತ್ತನಾಗಿ ... ದ್ವಾರಾ ಪರಮಪುರುಷಾರ್ಥ ಮೋಕ್ಷವನ್ನು ಹೊಂದುವನಾದನು. ...

---

||೩೦೩|| ನಿರ್ಗುಣಉಪಾಸನೆಯು ಅನಧಿಕಾರಿಗಳಿಗೆ ಕರ್ತ...

ನಿರ್ಗುಣ ಉಪಾಸನಯಲ್ಲಿ ಯಾರಿಗೆ ಅಧಿಕಾರವಿಲ್ಲವೋ ...[೧] ಕರ್ತವ್ಯವನ್ನು ಹೇಳುವೆವು.

||ಸವೈಯಾ ಛಂದ||

ಜೊ ಯುಹ ನಿರ್ಗುನ ಧ್ಯಾನ ನ ಹ್ವೈತೌ।[೨]
ಸಗುನ ಈಸ ಕರಿ ಮನಕೊ ಧಾಮು[೩] ॥
ಸಗುನ ಉಪಾಸಪೂ ನಹಿ ಹ್ವೈತೌ ।
ಕರಿ ನಿಷ್ಕಾಮಕರ್ಮ ಭಜಿ ರಾಮು ॥
ಜೊ ನಿಷ್ಕಾಮ ಕರ್ಮಹೂ ನಹೀ ಹ್ವೈ ।
ತೌ ಕೆರಿಯೆ ಸುಭಕರ್ಮ ಸಕಾಮು ॥
ಜೊ ಸಕಾಮ ಕರ್ಮಹೂ ನಹೀ ಹೋವೈ ।
ತೌ ಸಠ ವಾರವಾರ ಮರಿಜಾಮು ॥೧೬೯॥

ಅರ್ಥ|| ನಿರ್ಗುಣ ಧ್ಯಾನವನ್ನು ಸಾಧಿಸದೆ ಇದ್ದ ಪಕ್ಷದಲ್ಲಿ ಸಗುಣ... ನನ್ನು ಮನಸ್ಸಿನಲ್ಲಿ ಸ್ಥಾಪಿಸು ! ಈ ಸಗುಣೋಪಾಸನೆಯನ್ನು ...



...ದ ಪಕ್ಷದಲ್ಲಿ ನಿಷ್ಕಾಮ ಕರ್ಮವನ್ನು ಮಾಡಿ, ಶ್ರೀರಾಮಚಂದ್ರನ ...ನವನ್ನು ಮಾಡು ! ಈ ನಿಷ್ಕಾಮ ಕರ್ಮವನ್ನು ಸಾಧಿಸಲು, ಆಗದಿ... ...ದೆ ಸಕಾಮ ಶುಭ ಕರ್ಮಗಳನ್ನು ಮಾಡು ! ಈ ಸಕಾಮ ಕರ್ಮವೂ ...ಸದೆ ಹೋದ ಪಕ್ಷದಲ್ಲಿ ಶಠ ಅಂದರೆ ದುಷ್ಟನು ಪುನಃಪುನಃ ಜನನ ...ರಣ ದುಃಖಾನುಭವಿಯಾಗುವನು.

...ಪ್ಪಣಿ. [೧] ಇಲ್ಲಿಯ ಅಭಿಪ್ರಾಯವೇನೆಂದರೆ, ಯಾವ ಜಿಜ್ಞಾಸುವಿಗೆ ವೇದಾಂತ ಶ್ರವಣ ಮನನರೂಪ ವಿಚಾರದಲ್ಲಿ ಪ್ರವೃತ್ತಿಯುಂಟಾಗಿರುವದೋ ಅವನಿಗೆ ವಿಚಾರದ ಹೊರ್ತು ಅನ್ಯಸಾಧನಗಳ ಕರ್ತವ್ಯವಿರುವದಿಲ್ಲ ೧. ಈ ವಿಚಾರ ಶೀಲ ಪುರುಷನು ಕದಾಚಿತ್ ವಿಚಾರವನ್ನು ಬಿಟ್ಟು, ಅನ್ಯಸಾಧನಗಳಲ್ಲಿ ಪ್ರವೃತ್ತನಾದರೆ ಅವನು ಆರೂಢಪತಿತನಾಗುವನು. ೨. ಅಥವಾ ಅವನಿಗೆ (ಅತೋಭ್ರಷ್ಟಃ, ತತೋಭ್ರಷ್ಟಃ, ಎಂಬ ನ್ಯಾಯದಂತೆ ಸ್ಥಿತಿಯುಟಾಗುವ ದು. ಈ ಕಾರಣದಿಂದ ವಿಚಾರೀ ಪುರುಷನು ದೃಢಭೋಗವಾಗುವ ಪರಿ ಯಂತ ವಿಚಾರಮಾಡಬೇಕು. ಮತ್ತು ೧. ಯಾವನಿಗೆ ವಿಚಾರ ವಿಷಯ ದಲ್ಲಿ ಪ್ರವೃತ್ತಿಯುಂಟಾಗಿರುವದಿಲ್ಲವೋ, ಅವನಿಗೆ ನಿರ್ಗುಣ ಉಪಾಸನೆಯು ಕರ್ತವ್ಯವದೆ. ಮತ್ತು ೨. ಯಾವನಿದಿ ನಿರ್ಗುಣ ಉಪಾಸನೆಯಲ್ಲಿ ಅಧಿಕಾ ರವಿಲ್ಲವೋ ಅವನಿಗೆ ಉಪವಾಸಕ್ಕಿಂತ ಭಿಕ್ಷೆಯು ಶ್ರೇಷ್ಠವು, ಎಂಬ ನ್ಯಾಯ ದಂತೆ ಸಗುಣ ಉಪಾಸನಾದಿ ಕರ್ತವ್ಯಗಳನ್ನು ಹೇಳಿದ್ದಾರೆ.

[೨] ೧. ಮಾಯಾ ವಿಶಿಷ್ಟ ಚೇತನರೂಪ ಕಾರಣ ಬ್ರಹ್ಮ ಸಗುಣ ಈಶ ೨. ಇಲ್ಲವೆ ಅವನ ಉಪಲಕ್ಷಣಗಳಾದ ಹಿರಣ್ಯಗರ್ಭ ಹರಿ, ಹರ, ಗೌರಿ, ಗಣೇಶ, ಸೂ ರ್ಯ ಮತ್ತು ಇವರ ಅವತಾರರೂಪ ಕಾರ್ಯಬ್ರಹ್ಮಕ್ಕೆ ಸಗುಣ ಈಶ ಎಂದು ಹೇಳಿತ್ತಾರೆ. ೩. ಅಥವಾ ಈದೇವತೆಗಳ ಪ್ರತಿಮೆಯನ್ನು ಅವರವರ ಸ್ಥಳದಲ್ಲಿ ಯೋಜಿಸುವದಕ್ಕೆ ಸಗುಣ ಈಶ ಎಂದು ಹೇಳಿದ್ದಾರೆ. ಈಗ ಹೇಳಿದ ಮೂಪಾಸನೆಗಳಲ್ಲಿ ಪ್ರಥಮ ಉಪಾಸನೆಯು ಶ್ರೇಷ್ಠವು. ದ್ವಿತೀ ಯ ಉಪಾಸನೆಯು ಅದಕ್ಕಿಂತಲೂ ಕಡಿಮೆ, ಹೀಗೆ ಕ್ರಮದಿಂದ ಯೋಗ್ಯ ತೆಯು ಕಡಿಮೆಯಾಗುತ್ತ ಬರುವದು.

ಯದ್ಯಪಿ ಸಪ್ತಮತರಂಗದಲ್ಲಿ ಹೇಳಿದ ರೀತಿಯಂತೆ ಮಾಯಾವಿಶಿಷ್ಟ ಚೇತನರ ರೂಪ ಕಾರಣ ಬ್ರಹ್ಮನೇ ಈಶಪದದ ಮುಖ್ಯ ಅರ್ಥವದೆ. ಮತ್ತು ಇವನೇ ಉಪಾಸ್ಯವದೆ. ತಥಾಪಿ ಮಾಯೆಗೆ ಪ್ರಕೃತಿ [ಸರ್ವಜಗತ್ತಿನ ಉಪಾದಾನ] ಯೆಂದು ತಿಳಿ. ಮತ್ತು ಬ್ರಹ್ಮನನ್ನು ಮಹೇಶ್ವರನೆಂದು ತಿಳಿ ? ಎಂಬ ಶ್ರುತಿಯಿಂದ ಮಾಯಾವಿಶಿಷ್ಟ ಚೇತನನಿಂದ ಭಿನ್ನವಾದ ವಸ್ತುಗಳ ಅಭಾ ವದಿಂದ ಶ್ರೀ ವಿದ್ಯಾರಣ್ಯಸ್ವಾಮಿಗಳು ಸರ್ವಮತದಿಂದ ಅವಿರುದ್ಧ ಈ ಪ್ರಸ ನಿರೂಪಣೆಯನ್ನು ಚಿತ್ರದೀಪಿಕೆಯಲ್ಲಿ ಮಾಡಿದ್ದಾರೆ. ಆದರ ಅನುಸಾರ

ವಾಗಿ ಹಿರಣ್ಯಗರ್ಭಾದಿ ಸರ್ವ ಉಪಾಸ್ಯವಸ್ತುಗಳಿಗೆ ಸಹ ಈ... ಹೇಳಿದ್ದೇವೆ.

[೩] ಮನಕೊ ಧಾಮ ಅಂದರೆ ಸ್ಥಾನ ಮನಸ್ಸಿನಲ್ಲಿ ಧ್ಯಾನಮಾಡು.

[೪] ಫಲಕಾಮನಾರಹಿತನಾತ ಸ್ವವರ್ಣಾಶ್ರಮಗಳ ಕರ್ಮಗಳನ್ನು ಈಶ್ವರಾ... ಬುದ್ಧಿಯಿಂದ ಮಾಡು? ಅದರೊಡನೆ ಕೀರ್ತನಾದಿಗಳನ್ನು ... ಯನ್ನೂ ಮಾಡು.

ಅಥವಾ ಕಾಮ ನಿಷ್ಕಾಮ ಕರ್ಮಕರಿಕೆ ರಾಮಭಜಿ ಅಂದರೆ ಈ... ಳನ್ನು ಶ್ರೀರಾಮನಿಗೆ ಸಮರ್ಪಿಸು, ಫಲಕಾಮನೆಯಿಂದ ರಹಿ... ರಾಮಾರ್ಪಣ ಪೂರ್ವಕವಾಗಿ ಮಾಡಿದ ಪುಣ್ಯ ಕರ್ಮಗಳು ಸಕ... ಮನ ಪ್ರಸನ್ನತೆಯ ಉದ್ದೇಶ ಪೂರ್ವಕವಾಗಿರುವದರಿಂದ ಶ್ರೀ... ಭಜನೆಯನ್ನೇ ಮಾಡಿದಂತಾಯಿತು.

॥ ದೋಹಾ ॥

ಓಂಕಾರಕೊ ಅರ್ಥಲಖಿ । ಭಯೊ ಕೃತಾರ್ಥ ಅದೃಷ್ಟಿ ।
ಪಢೈ ಜು ಯಾಹಿ ತರಂಗ ತಿಹಿ । ದಾದೂ ಕರಹು ಸುದ...

ಅರ್ಥ॥ ಓಂಕಾರದ ಅರ್ಥವನ್ನು ತಿಳಿದುಕೊಂಡು ಅದೃಷ್ಟಿ... ಕೃತಾರ್ಥನಾದನು ಯಾವ ಮನುಷ್ಯನು ಈ ತರಂಗವನ್ನು ಪಠಿ... ವನೋ ಅವನಿಗೆ ಶ್ರೀ ದಾದೂ ಗುರುವು ಜ್ಞಾನದೃಷ್ಟಿಯನ್ನು ಕೊಡು...

ಇತಿ ಶ್ರೀ ವಿಚಾರಸಾಗರದಲ್ಲಿ ಗುರುವೇದಾದಿ ವ್ಯವಹಾರ...
ಪ್ರತಿಪಾದನ ಮಧ್ಯಮಾಧಿಕಾರೀ ಸಾಧುವರ್ಣನ ನಾಮ
ಪಂಚಮಸ್ತರಂಗಃ ಸಮಾಪ್ತಃ.





ಓಂ

ವಿಘ್ನೇಶಾಯನಮಃ.

# ಸಟೀಕಾ ತಾತ್ಪರ್ಯ ವಿವರಣ ಸಹಿತ

# ವಿಚಾರ ಸಾಗರ

## ಷಷ್ಠ ಮಸ್ತರಂಗಃ

॥ ಅಥ ಶ್ರೀಗುರು ವೇದಾದಿ ಸಾಧನ ಮಿಥ್ಯಾವರ್ಣನಂ॥

॥೩೦೩॥ ॥ ಉಪೋದ್ಘಾತ ॥

॥ ದೋಹಾ ॥

ಚೇತನ ಭಿನ್ನ ಅನಾತ್ಮ ಸಬ । ಮಿಥ್ಯಾ ಸ್ವಪ್ನಸಮಾನ ॥
ಯೂ ಸುನಿ ಬೋಲ್ಯೊ ತೀಸರೊ। ತರ್ಕದೃಷ್ಟಿಮಾನ ॥

ಟೀಕಾ॥ (೧) ಚತುರ್ಥ ತರಂಗದಲ್ಲಿ ಉತ್ತಮ ಅಧಿಕಾರಿಗಳಿಗೆ ಉಪದೇಶದ ಪ್ರಕಾರವನ್ನು ಹೇಳಿದೆವು. (೨) ಪಂಚಮ ತರಂಗದಲ್ಲಿ ಮಧ್ಯಮಾಧಿಕಾರಿಗಳ ಪ್ರಕಾರವನ್ನು ಹೇಳಿದೆವು. (೩) ಈ ಆರನೇ ತರಂಗದಲ್ಲಿ ಕನಿಷ್ಟ ಅಧಿಕಾರಿಗಳಿಗೆ ಉಪದೇಶದ ಪ್ರಕಾರವನ್ನು ಹೇಳುವೆವು.

ಯಾವನಿಗೆ ಅಧಿಕವಾದ ಸಂಶಯುಗಳುತ್ಪನ್ನವಾಗುವವೋ, ಅಂಥವನ ಬುದ್ಧಿಯು ಯದ್ಯಪಿ ತೀವ್ರವಿದ್ದಾಗ್ಯೂ ಅವನಿಗೆ ಕನಿಷ್ಟ ಅಧಿಕಾರಿಯೆನ್ನಬೇಕು.

ಈ ತರಂಗವು ಯುಕ್ತಿಪ್ರಧಾನವಾಗಿರುವದು. ಆದರಿಂದ ಶ್ರವಣ ಮಾಡಿದ ಅರ್ಥದಲ್ಲಿ ಯಾವನಿಗೆ ಕುತರ್ಕ ಎತ್ಪನ್ನವಾಗುವದೋ ಅವನಿಗೆ ಈ ತರಂಗದ ಉಪಯೋಗವದೆ.

ಕುತರ್ಕದಿಂದ ಯಾವನ ಬುದ್ಧಿಯು ದೂಷಿತವಾಗಿರುವದೋ ಅವ
ನಿಗೆ ಕನಿಷ್ಟ ಅಧಿಕಾರಿ ಎನ್ನಬೇಕು. ಅವನಿಗೆ ಉಪದೇಶಮಾಡತಕ್ಕ ಪ್ರಕಾ
ರವನ್ನು ಈ ತರಂಗದಲ್ಲಿ ಹೇಳಿದೆ.

ಪ್ರಥಮ ತರಂಗದಲ್ಲಿ ಪ್ರಣವ ಉಪಾಸನಾ, ಮತ್ತು ಜಗತ್ತಿನ ಉತ್ಪ
ತ್ತಿ ನಿರೂಪಣಾ ಪೂರ್ವದಲ್ಲಿ ಹೀಗೆ ಹೇಳಿರುವದಲ್ಲಾ-"ಚೈತನ್ಯದಿಂದ ಭಿನ್ನ
ವಾದ ಅಜ್ಞಾನ, ಮತ್ತು ಅದರ ಕಾರ್ಯ, ಇದಕ್ಕೆ ಅನಾತ್ಮ ಎನ್ನುತ್ತಾರೆ.
ಈ ಅನಾತ್ಮಪದಾರ್ಥಗಳೆಲ್ಲವೂ ಸ್ವಪ್ನವತ್ ಮಿಥ್ಯವಾಗಿರುವವು."
ಸಂಗತಿಯನ್ನು ಕೇಳಿ, ಉಭಯ ಬಂಧುಗಳ ಪ್ರಶ್ನೆಯು ಉಪರಾಮವಾದದ್ದು
ಕಂಡು ತರ್ಕದೃಷ್ಟಿಯು ಪ್ರಶ್ನೆಮಾಡುತ್ತಾನೆ.

---

ತರ್ಕದೃಷ್ಟಿಯ ಪ್ರಶ್ನೆ. ॥೩೦೫—೩೦೬॥

॥೩೦೫॥ ಪ್ರಶ್ನೆ. ಸ್ವಪ್ನದೃಷ್ಟಾಂತದಿಂದ ಜಾಗ್ರತಪದಾರ್ಥಗಳ
ಮಿಥ್ಯತ್ವವು ಸಂಭವಿಸುವದಿಲ್ಲ ಎಂದು ತರ್ಕ
ದೃಷ್ಟಿಯು ಪ್ರಶ್ನೆಮಾಡಿರುವನು.

॥ ದೋಹಾ ॥

೧
ಪಹಿಲೀ ಜಾನ್ಯೆ ವಸ್ತುಕೀ । ಸ್ಮೃತಿ ಸ್ವಪ್ನಮೈ ಹೋಯ।
ಜಾಗ್ರತಮ್ಯೆ ಅಜ್ಞಾತ ಅತಿ । ತಾಹಿ ಲಖ್ಯೆ ನಹೀ ಹೋಯ॥

ಟೀಕಾ॥ ಪೂರ್ವದಲ್ಲಿ ಯಾವ ಅತ್ಯಂತ ಅಜ್ಞಾತ ಪದಾರ್ಥಗಳಿ
ವವೋ,ಅವುಗಳ ಜ್ಞಾನವು ಸ್ವಪ್ನಾವಸ್ಥೆಯಲ್ಲಿಂದಿಗೂ ಆಗಲಾರವು. ಆದರೆ
ಜಾಗ್ರತಾವಸ್ಥೆಯಲ್ಲಿ ಯಾವದರ ಅನುಭವಜ್ಞಾನವು ಇರುವದೋ, ಅದು
ಸ್ವಪ್ನಾವಸ್ಥೆಯಲ್ಲಿ ಸ್ಮೃತಿಗೆ ಬರುವದು. ಅದರಿಂದ ಸ್ಮೃತಿಜ್ಞಾನದ ವಿಷ
ಯವಾದ ಜಾಗ್ರತಪದಾರ್ಥವು ಸತ್ಯವಾಗಿರುವದರಿಂದ ಸ್ವಪ್ನದಲ್ಲಿ ಆ
ಗುವ ಅದರ ಸ್ಮೃತಿರೂಪ ಜ್ಞಾನವು ಕೂಡ ಸತ್ಯವದೆ. ಇದರಿಂದಲೇ ಸ್ವಪ್ನ
ದೃಷ್ಟಾಂತದಿಂದ ಜಾಗ್ರತಪದಾರ್ಥಗಳಿಗೆ ಮಿಥ್ಯವೆನ್ನುವದು, ಸಂಭವಿ
ಸುವದಿಲ್ಲ.

ಟಿಪ್ಪಣಿ—೧.ನೈಯಾಯಿಕರು ಸ್ವಪ್ನಕ್ಕೆ ಜಾಗ್ರತಾವಸ್ಥೆಯಲ್ಲಿ ಅನುಭವಿಸಿದ
ಪದಾರ್ಥಗಳ ಸ್ಮೃತಿರೂಪ ವಾಸನಾ ವಿಪರ್ಯಾಸವೆಂದು ಅನ್ನುತ್ತಾರೆ.



॥ ೩೦೬ ॥ ಪ್ರಶ್ನೆ. ಸ್ವಪ್ನವು ಮಿಥ್ಯವಲ್ಲ,
ಅನ್ಯಪ್ರಕಾರದಿಂದ ಸ್ವಪ್ನಜ್ಞಾನದ ವಿಷಯದಪದಾರ್ಥಗಳ
ಸತ್ಯತೆಯು ಪ್ರತಿಪಾದನವನ್ನು ಮಾಡುತ್ತಾನೆ.

॥ ದೋಹಾ ॥

ಸ್ವಪನಾ ಸ್ಥೂಲಹಿ ಲಿಂಗ ತಜಿ । ಬಾರಿ ದೇಖತ ಜಾಯ ॥
ಗಿರಿ ಸಮುದ್ರ ವನ ವಾಜಿ ಗಜ । ಸೊ ಮಿಥ್ಯಾ ಕಹಿ ಭಾಯ ॥

ಟೀಕಾ ॥ ಅನ್ಯಪ್ರಕಾರದಿಂದ ಸ್ವಪ್ನಜ್ಞಾನ ಮತ್ತು ಅದರವಿಷಯ
ವಾದ ಪದಾರ್ಥವು ಸತ್ಯವದೆ ಮಿಥ್ಯವಲ್ಲ. ಕಾರಣವೇನಂದರೆ ಸ್ವಪ್ನಾವಸ್ಥೆ
ಯಲ್ಲಿ ಲಿಂಗಶರೀರವು ಸ್ಥೂಲಶರೀರವನ್ನು ತ್ಯಾಗಮಾಡಿ ಹೊರಹೊರಟು
ಸತ್ಯವಾದ ಗಿರಿ ಸಮುದ್ರಾದಿಗಳನ್ನು ನೋಡುವದು, ಇದರಿಂದ ಸ್ವಪ್ನವು
ಮಿಥ್ಯವಲ್ಲ.

---

ಅಂಕ ೩೦೫-೩೦೬ ರಲ್ಲಿಯ ಪ್ರಶ್ನೆಗಳ ಉತ್ತರ. ೩೦೭-೩೨೮

॥ ೩೦೭ ॥ ಜಾಗ್ರತಾವಸ್ಥೆಯಲ್ಲಿ ಕಂಡ ಪದಾರ್ಥಗಳ ಸ್ಮೃತಿ
ಯು ಸ್ವಪ್ನದಲ್ಲಿ ಆಗುವದಿಲ್ಲ.

ದೋಹಾ ॥ಯುದಪುಸ್ತ್ರೀ ಅಗ್ಯೆ ಖರೋ।ಐಸೊ ಹೋಸ್ಯೆ ಜ್ಞಾನ॥
ಸ್ವಪ್ನಮಾಹಿ ಸ್ಮೃತಿರೂಪ ಸೊ। ಕ್ಯೆಸ್ಯೆ ಹೋಯ ಸುಜಾನ ॥ ೪

ಟೀಕಾ॥ ೧ ಪೂರ್ವ ಸಂಬಂಧಿಗಳಾದ ಪದಾರ್ಥಗಳ ಜ್ಞಾನಕ್ಕೇ
ಸ್ಮೃತಿ ಅನ್ನಬೇಕು. ಯಾವಗಲೋ ಹಿಂದೆ ಆನೆಯನ್ನು ನೋಡಿದ್ದ
ಮನುಜನು ಈಗ ಆನೆಯನ್ನು ನೋಡಿದರೆ ಅವನು ಮೊದಲೇ ಆನೆಯನ್ನು
ನೋಡಿದ್ದನಾದುದರಿಂದ ಅವನಿಗೆ ಇದು "ಆನೆ,, ಎಂಬ ಸ್ಮೃತಿಯುಂಟಾ
ಗುವದು. ಜ್ಞಾನವಾಗುವದಿಲ್ಲ .೨ "ಆ ಆನೆಯು ಸಮ್ಮುಖದಲ್ಲಿ ಸ್ಥಿತ
ವಾಗಿದೆ,, ಎಂಬ ಜ್ಞಾನವು ಸ್ಮೃತಿಯಲ್ಲ. ಅದರೆ ಪ್ರತ್ಯಕ್ಷ ಅನ್ನುತ್ತಾರೆ.

ಸ್ವಪ್ನದಲ್ಲಂತೂ "ಆ ಆನೆಯು ಮುಂದೆಯೇ ನಿಂತಿರುವದು. ಇದು
ಪರ್ವತವದೆ ಇದು ನದಿಯುದೆ" ಎಂಬ ಜ್ಞಾನವು ಆಗುವದು. ಅದರಿಂದ
ಜಾಗ್ರತಾವಸ್ಥೆಯಲ್ಲಿ ಕಂಡ ಪದಾರ್ಥಗಳ ಸ್ಮೃತಿಯು ಸ್ವಪ್ನಾವಸ್ಥೆಯಲ್ಲಿ
ಆಗುವದಿಲ್ಲ, ಆದರೆ ಗಜಾದಿಗಳ ಪ್ರತ್ಯಕ್ಷಜ್ಞಾನವಾಗುವದು.

ಒಂದುವೇಳೆ ಹೀಗೆಂದರೆ "ಜಾಗ್ರತಾವಸ್ಥೆಯಲ್ಲಿ ಜ್ಞಾತವಾದ
ಪದಾರ್ಥಗಳೇ ಸ್ವಪ್ನದಲ್ಲಿ ಜ್ಞಾನವಾಗುವವು. ಅಜ್ಞಾತಪದಾರ್ಥಗಳ

ಇದರಿಂದ ಜಾಗ್ರತ ಪದಾರ್ಥಗಳ ಜ್ಞಾನವು ಸಂಸ್ಕಾರದಿಂದ ಸ್ವಪ್ನಜ್ಞಾನದ ಉತ್ಪತ್ತಿಯಾಗುತ್ತದೆ. ಮತ್ತು ಸಂಸ್ಕಾರಜನ್ಯಜ್ಞಾನಕ್ಕೇ ಸ್ಮೃತಿಯೆನ್ನುತ್ತಾರೆ. ಅಥರಿಂದ ಸ್ವಪ್ನಜ್ಞಾನವು ಸ್ಮೃತಿರೂಪವದೆ.,,

ಈ ಆಕ್ಷೇಪಣೆಯು ಸರಿಯಾದದ್ದಲ್ಲ; ಕಾರಣವೇನಂದರೆ ಪ್ರತ್ಯಕ್ಷ ಜ್ಞಾನವು ಎರಡು ವಿಧವಾಗಿರುವದು. (೧) ಅಭಿಜ್ಞಾನರೂಪ ಪ್ರತ್ಯಕ್ಷ (೨) ಪ್ರತ್ಯಭಿಜ್ಞಾನರೂಪ ಪ್ರತ್ಯಕ್ಷ. (೧) ಕೇವಲ ಇಂದ್ರಿಯ ಸಂಬಂಧದಿಂದ ಯಾವ ಜ್ಞಾನವುಂಟಾಗುವದೋ, ಅದು ಅಭಿಜ್ಞಾನ ಪ್ರತ್ಯಕ್ಷ ಎನ್ನಿಸಿಕೊಳ್ಳುವದು. ಹೇಗೆ ನೇತ್ರದ ಸಂಬಂಧದಿಂದ "ಇದು ಗಜವದೆ;" ಎಂಬ ಜ್ಞಾನವುಂಟಾಗುವದಲ್ಲಾ; ಇದಕ್ಕೇನೆ ಅಭಿಜ್ಞಾನ ಪ್ರತ್ಯಕ್ಷ ಅನ್ನುತ್ತಾರೆ. (೨) ಪೂರ್ವಜ್ಞಾನದ ಸಂಸ್ಕಾರದಿಂದ ಮತ್ತು ಇಂದ್ರಿಯಗಳ ಸಂಬಂಧ[೧]ದಿಂದ ಉಂಟಾದ ಜ್ಞಾನಕ್ಕೆ ಪ್ರತ್ಯಭಿಜ್ಞಾನ ಪ್ರತ್ಯಕ್ಷ ಅನ್ನುತ್ತಾರೆ. ಪೂರ್ವದಲ್ಲಿ ನೋಡಿದ ಗಜವನ್ನು ಕಂಡು "ಆ ಗಜವು ಇದೇ ಅದೆ" ಎಂಬ ಜ್ಞಾನ ವುಂಟಾಗುವದಲ್ಲಾ; ಇದಕ್ಕೇನೆ ಪ್ರತ್ಯಭಿಜ್ಞಾನ ಪ್ರತ್ಯಕ್ಷ ಅನ್ನುತ್ತಾರೆ.

ಇದರಲ್ಲಿ ಪೂರ್ವದಲ್ಲಿ ಕಂಡ ಗಜ ಜ್ಞಾನದ ಸಂಸ್ಕಾರ, ಮತ್ತು ಗಜಕ್ಕೂ ನೇತ್ರಕ್ಕೂ ಇರುವ ಸಂಬಂಧವು ಪ್ರತ್ಯಭಿಜ್ಞಾನ ಪ್ರತ್ಯಕ್ಷಕ್ಕೆ ಹೇತುವದೆ. ಇದರಿಂದ "ಸಂಸ್ಕಾರಜನ್ಯ ಜ್ಞಾನವೇ ಸ್ಮೃತಿರೂಪವಾಗುವದು"[೨] ಎಂಬ ನಿಯಮವಿಲ್ಲ. ಆದರೆ ಪ್ರತ್ಯಭಿಜ್ಞಾನ ಪ್ರತ್ಯಕ್ಷವು ಸಹಾ ಸಂಸ್ಕಾರಜನ್ಯವಾಗುವದು, ಆದರೆ ಇಂದ್ರಿಯ ಸಂಬಂಧದ ಹೊರ್ತು ಕೇವಲ ಸಂಸ್ಕಾರಜ್ಞಾನವಾಗುವದು; ಇದಕ್ಕೆ ಸ್ಮೃತಿಜ್ಞಾನವೆನ್ನುತ್ತಾರೆ.

೧. ಸ್ವಪ್ನದಲ್ಲಿ ಗಜ ಮೊದಲಾದವುಗಳ ಜ್ಞಾನವು ಕೇವಲ ಸಂಸ್ಕಾರಜನ್ಯವಲ್ಲ; ಆದರೆ ನಿದ್ರಾರೂಪದೋಷ ಜನ್ಯವಾದದ್ದು. ಗಜ ಮೊದಲಾದವುಗಳಂತೆ ಸ್ವಪ್ನದಲ್ಲಿ ಕಲ್ಪಿತ ಇಂದ್ರಿಯಗಳು ಸಹ ಇರುವವು, ಇದರಿಂದ ಇಂದ್ರಿಯಜನ್ಯವದೆ.

ಯದ್ಯಪಿ ಸ್ವಪ್ನದ ಪದಾರ್ಥಗಳು ಸಾಕ್ಷೀಭಾಸ್ಯ ಅವೆ. ಇಂದ್ರಿಯಜನ್ಯಜ್ಞಾನದ ವಿಷಯವಲ್ಲ; ತಥಾಪಿ ಅವಿವೇಕಿಗಳ ದೃಷ್ಟಿಯಿಂದ ಸ್ವಪ್ನಜ್ಞಾನವು ಇಂದ್ರಿಯಜನ್ಯವೆಂದು ಹೇಳುತ್ತಾರೆ.

ಈ ರೀತಿಯಿಂದ ಸ್ವಪ್ನಜ್ಞಾನವು ಜಾಗ್ರತಪದಾರ್ಥಗಳ ಸ್ಮೃತಿಯು ಅಲ್ಲ.



೨. ನಿದ್ರೆಯಿಂದ ಜಾಗ್ರತನಾದ ಪುರುಷನು "ನಾನು ಸ್ವಪ್ನದಲ್ಲಿ ಗಜ ಮೊದಲಾದವುಗಳನ್ನು ನೋಡುವಂಥವನಾದೆನು." ಎಂದು ಹೇಳುತ್ತಾನೆ ಗಜ ಮೊದಲಾದವುಗಳ ಸ್ಮೃತಿಯು ಸ್ವಪ್ನದಲ್ಲಿ ಆಗುವದು. ಆದರೆ ಆ ಮನುಷ್ಯನು ಜಾಗ್ರತನಾದ ಮೇಲೆ "ನಾನು ಸ್ವಪ್ನದಲ್ಲಿ ಗಜಾದಿಗಳನ್ನು ಸ್ಮರಣ ಮಾಡುವಂಥವನಾದೆನು" ಎಂದು ಹೇಳಬೇಕಾಗಿತ್ತು, ಆದರೆ ಹೀಗೆ ಯಾರೂ ಹೇಳುವದಿಲ್ಲ. ಇದರಿಂದ ಜಾಗ್ರತಕಾಲದಲ್ಲಿಯ ಪದಾರ್ಥಗಳ ಸ್ಮೃತಿಯು ಸ್ವಪ್ನದಲ್ಲಿ ಇಲ್ಲ.

೩. "ಜಾಗ್ರತಾವಸ್ಥೆಯಲ್ಲಿ ಕಂಡ ಮತ್ತು ಕೇಳಿದ ಪದಾರ್ಥಗಳ ಜ್ಞಾನವು ಸ್ವಪ್ನದಲ್ಲಿ ಆಗುವದು." ಎಂಬ ನಿಯಮವೂ ಇಲ್ಲ. ಆದರೆ ಜಾಗ್ರತೆಯಲ್ಲಿಯ ಅಜ್ಞಾತ ಪದಾರ್ಥಗಳ ಜ್ಞಾನವೂ ಸಹ ಸ್ವಪ್ನದಲ್ಲಿ ಆಗುವದು. ಕದಾಚಿತ್ಸ್ವಪ್ನದಒಮ್ಮೊಮ್ಮೆ ಸಂಪೂರ್ಣ ಜನ್ಮದಲ್ಲಿ ನೋಡದೆಯಿದ್ದಲ್ಲಿ ಕೇಳದೆ ಇದ್ದ ವಿಲಕ್ಷಣ ಪದಾರ್ಥಗಳು ಪ್ರತೀತವಾಗುವವು. ಆದ್ದರಿಂದ ಇವುಗಳ ಜ್ಞಾನವು ಸ್ಮೃತಿಯಲ್ಲ.

೪. ಯದ್ಯಪಿ "ಇಹ ಜನ್ಮದ ಪದಾರ್ಥಗಳ ಜ್ಞಾನದ ಸಂಸ್ಕಾರವೇ ಸ್ಮೃತಿಯ ಹೇತುವಾಗಿರುವದು." ಎಂಬ ನಿಯಮವೇನೂ ಇಲ್ಲ. ಆದರೆ ಅನ್ಯಜನ್ಮದ ಸಂಸ್ಕಾರದಿಂದ ಸಹ ಸ್ಮೃತಿಯಾಗುವದು. ಕಾರಣವೇನೆಂದರೆ ಅನುಕೂಲ ಜ್ಞಾನದಿಂದ ಪ್ರವೃತ್ತಿಯುಂಟಾಗುವದು. ಅನುಕೂಲಜ್ಞಾನವಿಲ್ಲದೆ ಪ್ರವೃತ್ತಿಯುಂಟಾಗಲಾರದು. ಇದರಿಂದ ಬಾಲಕನಿಗೆ ಸ್ತನ್ಯಪಾನದಲ್ಲಿ ಪ್ರಥಮ ಪ್ರವೃತ್ತಿಯುಂಟಾಗುವದೋ ಇದರ ಕಾರಣವು ಬಾಲಕನಿಗೆ ಸ್ತನ್ಯಪಾನವು ಅನುಕೂಲವಿದೆ, ಎಂಬ ಜ್ಞಾನವಾಗುತ್ತದೆ. ಆದರೆ ಅನ್ಯಜನ್ಮದಲ್ಲಿ ಯಾವ ಸ್ತನ್ಯಪಾನದ ಅನುಕೂಲತೆಯು ಅನುಭವವಾಗಿರುವದೋ, ಅದರ ಸಂಸ್ಕಾರದಿಂದ ಬಾಲಕನಿಗೆ ಪ್ರಥಮತಃ ಅನುಕೂಲತೆಯ ಸ್ಮೃತಿಯುಂಟಾಗುವದು. ಇದರಿಂದ ಜನ್ಮಾಂತರದ ಜ್ಞಾನಸಂಸ್ಕಾರದಿಂದ ಸ್ಮೃತಿಯುಂಟಾಗುವದೆಂದು ಹೇಳಲಾಯಿತು. ಇದರಂತೆ ಇಹಜನ್ಮದಲ್ಲಿ ಅಜ್ಞಾತಪದಾರ್ಥಗಳ ಸ್ಮೃತಿಯೂ ಸಹ ಅನ್ಯಜನ್ಮಜ್ಞಾನದ ಸಂಸ್ಕಾರದಿಂದ ಸ್ವಪ್ನವಿಷಯದಲ್ಲಿ ಸಂಭವಿಸುವದು.

ತಥಾಪಿ ಜಾಗ್ರತಾವಸ್ಥೆಯಲ್ಲಿ ಮತ್ತು ಅನ್ಯಜನ್ಮದಲ್ಲಿ ಸಹಾ ಯಾವ ಪದಾರ್ಥಗಳ ಜ್ಞಾನವು ಸಂಭವವಿರುವದಿಲ್ಲವೋ, ಅಂಥ ಪದಾರ್ಥಗಳ ಜ್ಞಾನವು ಸ್ವಪ್ನದಲ್ಲಿ ಪ್ರತೀತವಾಗುವದು. ತನ್ನ ಮಸ್ತಕ ಛೇದನವನ್ನು ನೇತ್ರಗಳಿಂದ ಅಥವಾ ಸ್ವಪ್ನದಲ್ಲಿ ಸಹ ನೋಡಿರುವದಿಲ್ಲ. ಆದರೆ ಒಮ್ಮೊಮ್ಮೆ ಸ್ವಪ್ನದಲ್ಲಿ ತನ್ನ ಮಸ್ತಕಛೇದನವು ಪ್ರತೀತಿಗೆ ಬರುವದು. ಇದರಿಂದ

ಆ ಅಪ್ಸರೆಯರೊಡನೆ ಅಧಿಕಕಾಲ ರಮಿಸುವನು.೧೧ ಕದಾಚಿತ್ ...

೧೦

ರೆಯರಿಂದ ದಿವ್ಯಸ್ಥಾನದಲ್ಲಿ ಕ್ರೀಡಿಸುತ್ತಿರಲು ಅಕಸ್ಮಾತ್ ರುಧಿ... ಪೂರಿತ ಕುಂಡದಲ್ಲಿ ಮಜ್ಜನೆ ಮಾಡುತ್ತಿರುವನು.

೧೧

ಒಂದೆಡೆಯಲ್ಲಿ ಸರ್ವರ ಅಧಿಪತಿಯಾದ ಪುರುಷನು ಸ್ಥಿತನಾ...

೧೨

ನು. ಅವನಮುಂದೆ ಅಜ್ಞಾಧಾರಿಗಳಾದ ಸೇವಕರು ಕೈಕಟ್ಟಿ ನಿಂತಿರು...

೧೩

(೧) ಎಷ್ಟೋಜನ ಪುರುಷರಿಗೆ ಅಧಿಪತಿಯು ಮತ್ತು ಅನು... ಚರರು ಸೌಮ್ಯರೂಪಿಗಳಾಗಿ ತೋರುತ್ತಿರುವರು. ಮತ್ತು [೨] ... ಪುರುಷರಿಗೆ ಮಹಾ ಭಯಂಕರ ರೂಪಿಗಳಾಗಿ ತೋರುತ್ತಿರುವರು [... ವನದಲ್ಲಿ ಸ್ಥಿತರಾದ ಪುರುಷರಿಗೆ, ಅವರವರ ಕರ್ಮಾನುಸಾರ ಫಲ... ಕೊಡುತ್ತಿರುವನು.

ಈ ಪ್ರಕಾರ ಅಗೃಧದೇವನು ಸ್ವಪ್ನದಲ್ಲಿ ಅನೇಕ ಬಗೆಯ ... ದುಃಖಸ್ಥಾನಗಳನ್ನು ನೋಡುವಂಥಾವನಾದನು. (೧) ಕೆಲವೆ... ಬ್ರಾಹ್ಮಣರ ವೇದಘೋಷವು ಕೇಳಿ ಬರುತ್ತಲಿತ್ತು, (೨) ಕೆಲವೆ... ಯಜ್ಞಶಾಲೆಗಳಲ್ಲಿ ಉತ್ತಮ ಕರ್ಮಗಳನ್ನು ಮಾಡುತ್ತಿರುವರು. ಕೆಲವೆಡೆಯಲ್ಲಿ ಉತ್ತಮವಾದ ನದಿಗಳು ಪ್ರವಹಿಸುತ್ತಲಿರುವವು ... ಳಲ್ಲಿ ಪುಣ್ಯಪ್ರಾಪ್ತಿಯ ನಿಮಿತ್ತ ಜನರು ಸ್ನಾನಮಾಡುತ್ತಿರುವರು. ಕೆಲವೆಡೆಯಲ್ಲಿ ಜ್ಞಾನವಂತರಾದ ಆಚಾರ್ಯರು ಶಿಷ್ಯರಿಗೆ ಬ್ರಹ್ಮೋ... ಶವನ್ನು ಮಾಡುತ್ತಿರುವರು. ಅವರಿಗೆ ಬ್ರಹ್ಮವಿದ್ಯೆಯು ಪ್ರಾಪ್ತ... ಆ ವನದಿಂದ ಅವರು ಹೊರಟು ಹೋಗುತ್ತಿರುವರು.

ಈ ರೀತಿ ಸ್ವಪ್ನದಲ್ಲಿ ಅಗೃಧನಾಮಕ ದೇವನು ಸ್ವ... ದಲ್ಲಿ ಅನೇಕ ಆಶ್ಚರ್ಯಕರವಾದ ಪದಾರ್ಥಗಳನ್ನು ಆ ವನದಲ್ಲಿ ... ವಂಥವನಾದನು. ಅವನಿಗೆ ಸ್ವಪ್ನದಲ್ಲಿ (೧) ತಾನು ಅನಂತಕಾಲ... ಈ ವನದಲ್ಲಿ ಸ್ಥಿತನಾಗಿರುವೆನೆಂತಲೂ (೨) ಈ ವನದಲ್ಲಿ ಎಂದೂ ... ದವುಂಟಾಗಿರುವದಿಲ್ಲವೆಂಬಂತೆಯೂ ಪ್ರತೀತವಾಯಿತು.(೩)ಅಗ...

೧೭

ತ್ ವನಸ್ವಾಮಿಯು ನಾಲ್ಕೂ ಮುಖಗಳಿಂದ ಅನೇಕ ಬೀಜಗಳನ್ನು ...



೧೮

...ವನದ ಉತ್ಪತ್ತಿಯನ್ನು ಮಾಡುತ್ತಿರುವನು. (೪) ಜಲಸೇಚನದಿಂದ ...ಪಾಲನಮಾಡುತ್ತಿರುವನು.[೫]ಕದಾಚಿತ್ ಭಯಂಕರ ಹಾಸ್ಯವನ್ನು ಮಾಡಿ

೧೯

...ಮುಖದಿಂದ ಅಗ್ನಿಯನ್ನುಂಟುಮಾಡಿ ವನವನ್ನು ದಹನಮಾಡುತ್ತಿರುವನು. (೬)ವನದ ಉತ್ಪತ್ತಿಯೊಡನೆಯೇ ತನ್ನಉತ್ಪತ್ತಿಯೂ ಆಗಿರುವದು ಅದರ ...ದಹನವಾದ ಕೂಡಲೆ ತಾನೂ ದಹನವಾಗಿ ಹೋಗಿರುವನು,(೭) ವನವೆಲ್ಲವ ...ನ್ನು ದಹಿಸಿ,ಆ ಭಗವಂತನು ಒಬ್ಬನೇ ಉಳಿದಿರುವನು. (೮) ಅವನ ಶರೀರ ...ದಲ್ಲಿ ವನದ ಬೀಜವು ಉಳಿದಿರುವುದು. ಈ ಪ್ರತೀತಿಯು ಸ್ವಪ್ನವೇದದ ...ಶ್ರವಣದಿಂದ ಆ ಗೃಧದೇವನಿಗೆ ಸ್ವಪ್ನದಲ್ಲಿಯೇ ಉಂಟಾಯಿತು.

ಟಿಪ್ಪಣಿ- [೧] ಗೃಧಾ ಅಂದರೆ ಇಚ್ಛೆ. ಅದರಿಂದ ರಹಿತ, ಮತ್ತು ದೇವ ಅಂದರೆ. ಸ್ವಯಂಪ್ರಕಾಶ, ಇಂಥ ಯಾವ ಶುದ್ಧಚೇತನವಿರುವದೋ, ಅದು ಇಲ್ಲಿ ಅಗೃಧದೇವಪದದ ಗೂಢಾರ್ಥವದೆ. ಅದಕ್ಕೆ ಜಾಗ್ರತ್ ಸ್ವಪ್ನ ರೂಪವಿಲಕ್ಷಣತ್ವದಿಂದ ರಹಿತವಾದ ಅನಾದಿ ನಿದ್ರೆಯಿಂದ ಕಲ್ಪಿತವಾದ ಈ ಪ್ರತೀಯಮಾನ ಪ್ರಪಂಚರೂಪವೇ ಸ್ವಪ್ನವಾಗಿರುವದು. ಈ ಪ್ರಪಂಚದವಿಲಕ್ಷಣತೆಯ ಅಭಾವದಿಂದ ಜಾಗ್ರದಾದಿ ಅವಸ್ಥಾ ಭೇದಗಳ ಅಭಾವವದೆ, ಅದರಿಂದ ಈ ಒಂದೇ ಪ್ರಪಂಚಕ್ಕೆ ದೃಷ್ಟಾಂತ ರೂಪತಾಮತ್ತು ದಾರ್ಷ್ಟಾಂತರೂಪತಾ, ಯದ್ಯಪಿ ಇವುಗಳುಉಂಟಾಗಿರುವದಿಲ್ಲ. ತಥಾಪಿಗ್ರಂಥಕಾರನು ಇದೇ ಅರ್ಥವನ್ನು ಗೋಪ್ಯವಾಗಿಟ್ಟು, ಒಂದೇಚೇತನದಲ್ಲಿ ದೃಷ್ಟಾಂತ ದಾರ್ಷ್ಟಾಂತದ ಆರೋಪವನ್ನು ಮಾಡಿರುವನು. ಈ ಗೋಪ್ಯಾರ್ಥವನ್ನು ನಾವು ಪ್ರಸಂಗವಶಾತ್ ಟಿಪ್ಪಣಿಯಲ್ಲಿ ಅಲ್ಲಲ್ಲಿ ಪ್ರಕಟಮಾಡುವೆವು .

೨. ಸಂಸಾರವನ್ನು, ೩. ದೇಹದ್ವಯದ ಅಭಿಮಾನಿ ಜೀವನಿದ್ದಾನೆ, ೪ ಸಂಸಾರ, [ಜಗತ್] ೫. ಇಲ್ಲಿಂದ ನರಕಗಳ ವರ್ಣನೆಯು, ೬. ಕೀವು, ೭, ಇಲ್ಲಿಂದ ಲೋಕದ ವರ್ಣನೆಯು ಇರುವದು, ೮, ಕಾವ್ಯ ಅಲಂಕಾರಾದಿ ಸಾಹಿತ್ಯಗ್ರಂಥಗಳಲ್ಲಿ ಸ್ತ್ರೀಯರ ಸೌಂದರ್ಯದ ೩೨ ಗುಣಗಳನ್ನು ಹೇಳಿದ್ದಾರೆ. ಅವುಗಳಿಂದ ಯುಕ್ತರಾದವರು, ೯, ಅಗೃಧದೇವ, ೧೦ ಪುಣ್ಯದ ಕ್ಷೀಣತೆಯುಂಟಾಗಲು, ಮತ್ತು ಪಾಪರೂಪ ಅದೃಷ್ಟದ ಉದಯವಾಗಲು, ೧೧ ಧರ್ಮರಾಜ, ೧೨, ಯಮದೂತರು, ೧೩, ಪುಣ್ಯವಂತರಿಗೆ, ೧೪, ಪಾಪಿಷ್ಟಜನಗಳಿಗೆ, ೧೫, ಇಲ್ಲಿಂದ ಮರ್ತ್ಯಲೋಕದಲ್ಲಿದ್ದ ಭರತಖಂಡದ ವರ್ಣನವದೆ, ೧೬ ಬ್ರಹ್ಮ ವಿಷ್ಣು ಶಿವರೂಪದಿಂದ ಜಗತ್ತಿನ ಉತ್ಪತ್ತಿ, ಪಾಲನ, ಮತ್ತು ಸಂಹಾರಕರ್ತೃ ಈಶ್ವರನು, ೧೭ ಜೀವಗಳ ಪರಿಪಕ್ವವಾದ ಅದೃಷ್ಟ, ೧೮, ಕರ್ಮಾನುಸಾರ ಸುಖದುಃಖಗಳ ಅನುಭವರೂಪ ಭೋಗಗಳನ್ನು ಕೊಡುವದರಿಂದ, ೧೯ ಪ್ರಳಯ ಸಂಹಾರ.

||೩೩೨|| ಸ್ವಪ್ನದಲ್ಲಿ ಅಗೃಥದೇವನಿಗೂ, ಗುರುವಿಗೂ ದರ್ಶನ

ಆಗ ಪುನಃಪುನಃ ತನ್ನ ಜನನ, ಮರಣವನ್ನು ಕೇಳಿ, ಅವನು ಮಾಡಿದ್ದೇನಂದರೆ- (೧) ಯಾವಪ್ರಕಾರ ವನದಿಂದ ಹೊರಗೆ ಹೋಗುವೆನು.(೨)ವನದಿಂದ ಹೊರಬಿದ್ದು ಹೋದರೇ ನನ್ನ ಚಂಡಾಲ[೧]ವವು ದೂರವಾಗಿ, ದೇವಭಾವವು ಸ್ವತಃಸಿದ್ಧವಾಗಿ ನಿಲ್ಲುವದು (೩) ವನದಿಂದ ಹೊರಬಿದ್ದು ಹೋಗಲಿಕ್ಕೆ ಅನ್ಯ ಉಪಾಯವೇ ಇಲ್ಲ, ಬ್ರಹ್ಮೋಪದೇಶವನ್ನು ಮಾಡತಕ್ಕ ಆಚಾರ್ಯರು ತಮ್ಮ ಶಿಷ್ಯರನ್ನು ವನದಿಂದ ಹೊರಡಿಸಲು ಸಮರ್ಥರಿರುವರು, ಎಂಬ ವಿಚಾರದಿಂದ ಸ್ವಪ್ನಕಾಲದಲ್ಲಿ ಆ ಅಗೃಥದೇವನು ಆಚಾರ್ಯರ ಸನ್ನಿಧಿಯಲ್ಲಿ ಪ್ರಾಪ್ತನಾದನು. ಪ್ರೀತಿಪೂರ್ವಕ ಪ್ರಾಪ್ತನಾದ ಶಿಷ್ಯನಿಗೆಆಚಾರ್ಯನು ದೇವವಾಣೀ, ರೂಪವಾದ ಗ್ರಂಥವನ್ನು ಉಪದೇಶಮಾಡುವಂಥವನಾದನು.

ಟಿಪ್ಪಣೆ—೧. ಚಂಡಾಲಭಾವ ಅಂದರೆ ಜೀವಭಾವ, ಮತ್ತು ದೇವಭಾವ ಅಂದರೆ ಬ್ರಹ್ಮಭಾವ.

||೩೩೩|| ಮಿಥ್ಯಾ ಆಚಾರ್ಯನು, ಮಿಥ್ಯಾ ಶಿಷ್ಯನಿಗೆ, ಸಂಸ್ಕೃತ ಗ್ರಂಥದಿಂದ ಉಪದೇಶ ಮಾಡಿದುದು.

ಗ್ರಂಥದ ಮಂಗಳಾಚರಣ. ||೩೩೪—೩೩೮||

ಈ ಸಂಸ್ಕೃತ ಗ್ರಂಥವನ್ನು ಮಿಥ್ಯಾ ಆಚಾರ್ಯನು, ಮಿಥ್ಯಾ ಶಿಷ್ಯನಿಗೆ ಉಪದೇಶಮಾಡಿದನು. ಆಗ್ರಂಥವನ್ನು ಭಾಷಾರೂಪದಿಂದ ಬರೆದಿರುವೆನು. ಸಂಸ್ಕೃತಗ್ರಂಥಕ್ಕೆ ಟೀಕೆಯನ್ನು ಬರೆಯುವದರಲ್ಲಿ ಮಂಗಲವನ್ನು ಮಾಡಿರುವರು. ಕಾರಣವೇನಂದರೆ;- (೧) ಮಂಗಲ ಮಾಡುವದರಿಂದ ಗ್ರಂಥದ ಸಮಾಪ್ತಿಗೆ ಯಾವ ಬಂಧನಗಳೂ, ವಿಘ್ನಗಳೂ ಇರುವವೋ ಅವುಗಳ ನಾಶವಾಗುವದು. ವಿಘ್ನವೆಂದರೆ ಪಾಪದನಾಮವು, ಪಾಪದಿಂದ ಕಾರ್ಯಗಳ ಸಮಾಪ್ತಿಯಾಗುವದಿಲ್ಲ; ಈ ಪಾಪಗಳು ಮಂಗಲದಿಂದ ನಾಶವಾಗುವವು. ಮತ್ತು (೨) ಯಾವದು ಪಾಪರಹಿತವಾಗಿದ್ದರೂ ಸಹ ಗ್ರಂಥದ ಆರಂಭದಲ್ಲಿ ಮಂಗಲವನ್ನು ಮಾಡಲಿಕ್ಕೇ ಬೇಕು. ಕಾರಣವೇನಂದರೆ ಯಾವ ಗ್ರಂಥಾರಂಭದಲ್ಲಿ ಮಂಗಲವನ್ನು ಮಾಡಿರುವದಿಲ್ಲವೋ, ಆ ಗ್ರಂಥದ ವಿಷಯದಲ್ಲಿ ಜನರಿಗೆ ನಾಸ್ತಿಕನೆಂಬ ಭ್ರಾಂತಿಯುಂಟಾಗಿ ಗ್ರಂಥದಲ್ಲಿ ಪ್ರವೃತ್ತಿಯು ಆಗುವದಿಲ್ಲ.



ಈ ಮಂಗಲವು ಮೂರುಪ್ರಕಾರವಾಗಿರುವುದು. ಒಂದು ವಸ್ತುನಿರ್ದೇಶರೂಪವಾಗಿದೆ. ಎರಡನೇದು ನಮಸ್ಕಾರ ರೂಪವಾಗಿದೆ, ಮೂರನೆಯದು ಆಶೀರ್ವಾದ ರೂಪವಾಗಿದೆ.

ಸಗುಣ, ಅಥವಾ ನಿರ್ಗುಣ ಪರಮಾತ್ಮನಿಗೇ ವಸ್ತು ಎನ್ನುತ್ತಾರೆ. ಅವನ ಕೀರ್ತನಮಾಡುವದಕ್ಕೇ ವಸ್ತುನಿರ್ದೇಶವೆನ್ನುತ್ತಾರೆ.

ತನ್ನ ಅಥವಾ ಶಿಷ್ಯನ ವಾಂಛಿತ ವಸ್ತುವಿನ ಪ್ರಾರ್ಥನೆಗೆ ಆಶೀರ್ವಾದರೂಪ ಮಂಗಲವೆನ್ನುತ್ತಾರೆ. ಈ ತನ್ನ ವಾಂಛಿತಪ್ರಾರ್ಥನೆಯು ಸರಸ್ವತಿಯ ಪ್ರಾರ್ಥನೆಯ ದೋಹಾದಲ್ಲಿ ಸ್ಪಷ್ಟವಾಗಿರುವುದು. ಶಿಷ್ಯನ ಇಷ್ಟಪ್ರಾರ್ಥನೆಯು ಅದರ ಮುಂದಿನ ದೋಹಾದಲ್ಲಿ ಅದೆ.

ಟಿಪ್ಪಣೆ—೧. ಇಲ್ಲಿ ಸಂಸ್ಕೃತ ಗ್ರಂಥಗಳಕಥನದಿಂದ ಯಾವನೋ ಒಬ್ಬ ಅಗೃಥ ದೇವನ ದೃಷ್ಟಾಂತದಿಂದಯುಕ್ತ ಸಂಸ್ಕೃತ ಗ್ರಂಥಗಳಗ್ರಹಣವಿಲ್ಲ. ಆದರೆ ಈ ಗ್ರಂಥದಮೂಲರೂಪ ಅನೇಕ ಗ್ರಂಥಗಳನ್ನು [ಸಂಸ್ಕೃತದಲ್ಲಿ ಇದ್ದವುಗಳನ್ನು] ಗ್ರಹಣಮಾಡಬೇಕು.

||೩೩೯|| ಗಣಪತಿ ಮತ್ತು ದೇವಿ ಇವರಿಗೆ ಪುರಾಣದಲ್ಲಿ ಈಶ್ವರತ್ವವು ಪ್ರಸಿದ್ಧವದೆ. ಇದರಿಂದ ಅನೀಶ್ವರನ ಚಿಂತನವು ಇಲ್ಲ. ಮತ್ತು ಪುರಾಣದಲ್ಲಿ ಗಣೇಶನಿಗೆ ಯಾವ ಜನ್ಮವಿರುವದೋ, ಅದು ಜೀವದಂತೆ ಕರ್ಮದ ಫಲವಲ್ಲ. ಆದರೆ ರಾಮಕೃಷ್ಣಾದಿಗಳಂತೆ ಭಕ್ತಜನರ ಅನುಗ್ರಹಾರ್ಥವಾಗಿ ಪರಮಾತ್ಮನ ಆವಿರ್ಭಾವವಿರುವದು. ಇದು ವ್ಯಾಸಮಹರ್ಷಿಯ ಶ್ರೇಷ್ಠವಾದ ಅಭಿಪ್ರಾಯವದೆ.

ಈ ಸ್ಥಾನದಲ್ಲಿ ರಹಸ್ಯವೇನಂದರೆ- ಪರಮಾರ್ಥ ದೃಷ್ಟಿಯಿಂದ ಜೀವವು ಸಹ ಪರಮಾತ್ಮನಿಂದ ಭಿನ್ನವಿರುವದಿಲ್ಲ. ಪರಂತು ಜನನ ಮರಣಾದಿ ಬಂಧಗಳ ಅಧ್ಯಾಸವು ಆತ್ಮವಿಷಯದಲ್ಲಿ ಜೀವತ್ವವು ಅದೆ. ಈ ಜನ್ಮಾದಿ ಬಂಧವು ಗಣಪತ್ಯಾದಿಗಳಿಗೆ ಆತ್ಮಾದಲ್ಲಿ ಪ್ರತೀತವಾಗುವದಿಲ್ಲವಾದುದರಿಂದ ಜೀವವಲ್ಲ, ಈಪ್ರಕಾರವಾಗಿ ಗಣೇಶಾದಿಗಳಿಗೆ ಈಶ್ವರತ್ವವಿರುವುದು ಇದರಿಂದ ಗ್ರಂಥಾರಂಭದಲ್ಲಿ ಇವರ ಚಿಂತನ ಮಾಡುವದು ಯೋಗ್ಯವದೆ.

ಈಶ್ವರನ ಅನೇಕರೂಪ ಕಥನವು, ಸರ್ವರಿಗೆ[೧] ಪ್ರಕಾಶ ಮಾಡುವದಕ್ಕೆ ಅದೆ. ಮತ್ತು ಈಶ್ವರಭಕ್ತಿ, ಗುರುಭಕ್ತಿಗಳು ವಿದ್ಯಾ ಪ್ರಾಪ್ತಿಯ ಮುಖ್ಯ ಸಾಧನಗಳಾಗಿವೆ. ಈ ಅರ್ಥವನ್ನು ಸಹ ಪ್ರಕಾಶಪಡಿಸುವದಕ್ಕಾಗಿಯೇ ಅದೆ.

ಟಿಪ್ಪಣೆ—೧. ಗಣೇಶ, ವಿಷ್ಣು, ಶಿವ, ದೇವಿ, ಮತ್ತು ಆಚಾರ್ಯ ಇವರಿಗೆ.

॥೩೩॥ ಅಥ ನಿರ್ಗುಣವಸ್ತು ನಿರ್ದೇಶರೂಪ ಮಂಗಳ

॥ ದೋಹಾ ॥

ಜಾ ವಿಭು ಸತ್ಯ ಪ್ರಕಾಸತೈ । ಪರಕಾಸತ ರವಿ ಚಂದ।
ಸೋ ಸಾಖೀ ಮೈ ಬುದ್ಧಿಕೋ । ಸುದ್ಧರೂಪ ಆನಂದ ॥

ಅರ್ಥ॥ ಯಾವ ಪರಮಾತ್ಮನ ಸತ್ಯಪ್ರಕಾಶದಿಂದ ಸೂರ್ಯ ಚಂದ್ರ ಗಳು ಪ್ರಕಾಶಿಸುವರೋ, ಅಂಥ ಶುದ್ಧಸ್ವರೂಪನಾದ ಪೂರ್ಣಾನಂದ ಸ್ವರೂಪನಾದಂಥಾ ಪರಮಾತ್ಮನನ್ನು ನಾನು ಸಾಕ್ಷಿಯಾಗಿದ್ದು ಬುದ್ಧಿ ಯಯೋಗದಿಂದ ತಿಳಿಯುವೆನು.

॥ ಅಥ ಸಗುಣವಸ್ತು ನಿರ್ದೇಶರೂಪ ಮಂಗಲವು ॥

॥ ದೋಹಾ ॥

ನಾಸೈ ವಿಘ್ನ ಸಮೂಲತೈ । ಶ್ರೀಗನಪತಿಕೊ ನಾಮ॥
ಜಾ ಚಿಂತನ ಬಿನ ಹ್ವೈ ನಹೀ । ದೇವನ ಹೂಕೆ ಕಾಮ॥

ಅರ್ಥ॥ ಶ್ರೀಗಣಪತಿಯ ನಾಮಸ್ಮರಣೆಯಿಂದ ಸಕಲ ವಿಘ್ನಗಳು ಸಹ ಸಮೂಲವಾಗಿ ನಾಶಹೊಂದುತ್ತವೆ. ಇಷ್ಟೇ ಅಲ್ಲ. ಸಕಲ ದೇವತೆಗಳ ಕಾರ್ಯವೂ ಸಹ ಇವನ ನಾಮಚಿಂತನೆಯಲ್ಲದೆ ಸಂಪೂರ್ಣವಾಗ ೧ ಲಾರವು. ಈ ಸಂಗತಿಯು ತ್ರಿಪುರ ಸಂಹಾರದಲ್ಲಿ ಪ್ರಸಿದ್ಧವದೆ.

ಟಿಪ್ಪಣಿ—೧. ಮಯದಾನವ ರಚಿತವಾದ ತ್ರಿಪುರಗಳ ಸಂಹಾರಕಾಲದಲ್ಲಿ ಮಹಾದೇವನಿಗೆ ಯಾವಾಗ ಜಯವು ದೊರೆಯಲಿಲ್ಲವೋ ಆಗ ಸರ್ವದೇವತೆಗಳ ಡಗೂಡಿದ ಮಹಾದೇವನು ವಿಘ್ನರಾಜನ ಪೂಜೆಯನ್ನು ಮಾಡುವಂಥವನಾದನು. ಅದರಿಂದ ಮಹಾದೇವನ ದ್ವಾರಾ ದೇವತೆಗಳ ಕಾರ್ಯವು ನಿರ್ವಿಘ್ನವಾಯಿತು, ಈ ಸಂಗತಿಯು ಪುರಾಣದಲ್ಲಿ ಪ್ರಸಿದ್ಧವದೆ.

॥ ಅಥ ನಮಸ್ಕಾರರೂಪ ಮಂಗಲವು ॥

॥ ಸೊರಠಾ ॥

ಅಸುರನಕೊ ಸಂಹಾರ । ಲಖಮಿಾ ಪಾರವತೀಪತೀ॥
ತಿನ್ಹೆ ಪ್ರನಾಮ ಹಮಾರ । ಭಜತನಕೂ ಸಂತತ ಭಜೈ ॥೩॥

ಅರ್ಥ॥ ಅಸುರಾದಿಗಳನ್ನು ಸಂಹಾರಮಾಡತಕ್ಕ ಭಕ್ತಜನರನ್ನು ಯಾವಾಗಲೂ ರಕ್ಷಿಸುತ್ತಿರುವಂಥಾ, ಕರುಣಾಸಾಗರನಾದಂಥಾ ಲಕ್ಷ್ಮೀ ಪತಿ ಪಾರ್ವತೀಪತಿಗಳಿಗೆ ನನ್ನ ನಮಸ್ಕಾರವು.



(೫೬)

॥ ಅಥ ಸ್ವವಾಂಛಿತ ಪ್ರಾರ್ಥನಾರೂಪ ಆಶೀರ್ವಾದ ॥

॥ ಮಂಗಲ ॥ ದೋಹಾ ॥

ಜಾ ಸಕ್ತೀಕೀ ಸಕ್ತಿ ಲಹಿ । ಕರೈ ಈಸ ಯಹ ಸಾಜ ॥
ಸೋ ಸೀ ಬಾನೀ ಮೈ ವಸಹು । ಗ್ರಂಥ ಸಿದ್ಧಿಕೆ ಕಾಜ ॥೪॥

ಅರ್ಥ॥ ಯಾವ ಶಕ್ತಿಯ ಶಕ್ತಿಬಲದಿಂದ ಈಶ್ವರನು ಸೃಷ್ಟಿಯನ್ನು ಮಾಡುವನೋ ಅಂಥ ಶಕ್ತಿಯು ನನ್ನ ಜಿಹ್ವೆಯಲ್ಲಿ ನೆಲಸಿ, ಸರ್ವಗ್ರಂಥವ ನ್ನು ಸಂಪೂರ್ಣಗೊಳಿಸಲಿ.

॥ ಅಥ ಶಿಷ್ಯವಾಂಛಿತ ಪ್ರಾರ್ಥನಾರೂಪ ಆಶೀರ್ವಾದ ॥

॥ ದೋಹಾ ॥

ದುಃಖಹರನ ಸುಖ ಕರನ ಶ್ರೀ । ದಾದೂ ದೀನದಯಾಲ ॥
೧
ಪಢೈ ಸುನೈ ಜೊ ಗ್ರಂಥ ಯಹ । ತಾಕ ಹರಹು ಜಂಜಾಲ ॥೫॥

ಅರ್ಥ ॥ ಈ ಗ್ರಂಥವನ್ನು ಯಾರು ಶ್ರವಣ ಮಾಡುವರೋ, ಪಠಣ ಮಾಡುವರೋ ಅವರಿಗೆ ದೀನದಯಾಲುವಾದ ಶ್ರೀದಾದೂಗುರುವು ದುಃಖ ನಿವಾರಣೆಯಾಗುವಂತೆ ಮಾಡಲಿ.

ಟಿಪ್ಪಣಿ—೧. ಜನನ ಮರಣಾದಿ ದುಃಖ.

॥೩೬॥ ಅಥ ವೇದಾಂತ ಶಾಸ್ತ್ರಕರ್ತನಾದ ಆಚಾರ್ಯನ ನಮಸ್ಕಾರವು.

॥ ಕವಿತ್ವ ॥

ವೇದವಾದ ವೃಚ್ಛಬನ ಖೇದವಾದೀವಾ ಯು ಆಯು ।
ಸಕರ ಹಲಾಯ ಕ್ರಿಯಾ ಕಂಟಕ ಪಸಾರಿಕೆ ॥
ಪರಲಿ ಸುಸುದ್ದ ಸಿಷ್ಯಕಂಜ ಪುನಿ ತೋರಿ ಗೇರಿ ।
ಮೂಲನಮೈ ಫೇರತ ಫಿರತ ಫೇರಿ ಫಾರಿಕೆ ॥
ಪೇಖಿ ಸು ಸಖಿಕ ಭಗವಾನ ಜಾನಿ ಅನುಚಿತ ।
ಶಂಕರ್ಮೈ ಉತಾಯು ಧ್ಯಾಯು ವ್ಯಾಸರೂಪ ಧಾರಿಕೆ ॥

ಸೂತ್ರಕೊ ಬನಾಇ ಜಾಲ ಬನಕೊ ಬಿಭಾಗ ಕೀನ |
ಕರತ ಪ್ರನಾಮ ತಾಹಿ ನಿಶ್ಚಲ ಪ್ರಕಾರಿಕೆ ‖೬‖

ಟೀಕಾ ‖ ೧ ವಾಯುವು ಹೇಗೆ ೨ ವನದಲ್ಲಿ ಪ್ರವೇಶಮಾಡಿ, ಗಳನ್ನು ಅಲುಗಾಡಿಸಿ ೩ ಅದರ ಕಂಟಕ ಅಂದರೆ ಮುಳ್ಳುಗಳನ್ನು ಲೂ ಪಸರಿಸಿ, ೪ ಸುಂದರ, ೫ ಕಮಲ ಪುಷ್ಪವನ್ನು, ೬ ಸ್ವಸ್ಥಾನ ಸರ್ಜನಮಾಡಿ, ೭ ಕಂಟಕಗಳಲ್ಲಿಯೇ ಭ್ರಮಣ ಮಾಡಿ

೪

ಆ ಭ್ರಮಿತಪುಷ್ಪವನ್ನು ಕಂಡು, ಪಾಂಥಸ್ಥನ ಲಚಿತ್ತದಲ್ಲಿ ನೆಯುಂಟಾಗುವದಲ್ಲಾ ೯. ಈ ಸುಂದರಕಮಲವು ಈಸ್ಥಾನದಲ್ಲಿ ಯೋಗ್ಯವಲ್ಲ. ೧೦ ಆದರೆ ಉತ್ತಮಸ್ಥಾನದಲ್ಲಿರಲು ಯೋಗ್ಯ ಎಂದು ವಿಚಾರಮಾಡಿ, ೧೧ ಆ ಪುಷ್ಪವನ್ನು ತೆಗೆದುಕೊಳ್ಳುವನು. ಮತ್ತು ಈಪ್ರಕಾರ ವಿಚಾರವನ್ನು ಮಾಡುವನಲ್ಲಾ ! ಇನ್ನು ಮುಂದೆ ರೂ ಈ ವಾಯುವು ಈ ಪುಷ್ಪವನ್ನು ಮುರಿದು, ಕಂಟಕಗಳಲ್ಲಿ ಭ್ರಮಣಮಾಡಿಸಬಹುದು. ಅದರಿಂದ ಈ ಪುಷ್ಪವನ್ನು ಕಂಟಕ ಭ್ರಮಣಗೊಡದಂತೆ ಉಪಾಯವನ್ನು ಮಾಡಬೇಕು. ೧೩ ಎಂದು ಸಿ, ಸೂತ್ರಜಾಲದಿಂದ ಕಂಟಕಯುಕ್ತ ವೃಕ್ಷದಿಂದ ಬೇರೆಮಾಡ ಆ ಜಾಲದಿಂದ ಪುಷ್ಪವು ಕಂಟಕದೊಳಗೆ ಪ್ರವೇಶಮಾಡುವದಿಲ್ಲ.

ಟಿಪ್ಪಣಿ—೧ ವೇದಾಂತ ತಾತ್ಪರ್ಯದ ನಿರ್ಣಾಯಕವಾದ ಉಪನಿಷತ್ತುಗಳ ಸಾರಿಯಾಗಿರುವ ಬ್ರಹ್ಮಸೂತ್ರರೂಪ ಉತ್ತರಮೀಮಾಂಸೆಗೆ ವೇದಾಂತಶಾಸ್ತ್ರವೆನ್ನುತ್ತಾರೆ. ಇದರ ಕರ್ತೃವು ಶ್ರೀ ವೇದವ್ಯಾಸ ರಿಗಳವರು.

೨ ‖ ಶ್ಲೋಕ ‖ ಆಚಿನೋತಿಜ ಶಾಸ್ತ್ರಾರ್ಥಂ ಆಚಾರೆಸ್ಥಾಪಯೇದ್ಯಪಿ ಸ್ವಯಮಾಚರತೇಯಸ್ಮಾದಾ | ಚಾರ್ಯಸ್ತೇನ ಕಥ್ಯತೇ ‖ ೧ ‖ ಇದರ ಯಾವನು ಶಾಸ್ತ್ರಾರ್ಥವನ್ನು ತಿಳಿದುಕೊಂಡು ಜನರನ್ನು ಶಾಸ್ತ್ರ ಆಚಾರದ ವಿಷಯದಲ್ಲಿ ಸ್ಥಾಪಿಸುವನೋ, ಮತ್ತು ತಾನುಸಹ ಶಾಸ್ತ್ರೋಕ್ತ ಆಚಾರದಂತೆ ಆಚರಿಸುತ್ತಿರುವನೋ, ಅಂಥವನಿಗೆ ಆಚಾರ್ಯ ಬೇಕು. ಈ ಶಾಸ್ತ್ರೋಕ್ತ ಲಕ್ಷಣಗಳಿಂದ ಯುಕ್ತರಾದವರು ಶ್ರೀವೇದವ್ಯಾಸರೋರ್ವರೇ ಆಗಿರುವರು. ಇದರಿಂದ ಇವರು ವಾಗಿ [ಸರ್ವ ಆಸ್ತಿಕ ಸಾಂಪ್ರದಾಯಗಳ) ಆಚಾರ್ಯರಾಗಿರುವರು. ಇವರ ನಮಸ್ಕಾರರೂಪ ಮಂಗಲವನ್ನು ಗ್ರಂಥಕಾರನು ಮಾಡಿ

ಇಲ್ಲಿಗುರುಶಿಷ್ಯರಸಂವಾದದ ನಿಮಿತ್ತದಿಂದ ಗ್ರಂಥಕರ್ತನು ಯಾವ ಮಾಡಿರುವನೋ ಇದು ಆದಿ ಅಂತ್ಯದಂತೆ ಶಾಸ್ತ್ರದ ಮಧ್ಯ



ಮಂಗಲವನ್ನು ಮಾಡಲಿಕ್ಕೇಬೇಕು. ಈ ನಿಯಮದ ಅನುಸಾರವಾಗಿ ಅದೆ.

[೩] ಮನಸ್ಸಿನಿಂದ, ಇಲ್ಲವೆ ವಾಣಿಯಿಂದ, ಶರೀರದಿಂದ ತನ್ನ ನಿಕೃಷ್ಟತಾ ಪೂರ್ವಕ ಇಷ್ಟನ. ಉತ್ಕೃಷ್ಟತೆಯ ಕ್ರಮದಿಂದ ಚಿಂತನೆ, ಕಥನ ಮಾಡತಕ್ಕದ್ದೆ ನಮಸ್ಕಾರವೆಂದೆನ್ನಿಸಿಕೊಳ್ಳುತ್ತದೆ. ಈ ಮೂರು ಪ್ರಕಾರದ ನಮಸ್ಕಾರಗಳು ಕ್ರಮದಿಂದ ಉತ್ತಮ, ಮಧ್ಯಮ ಕನಿಷ್ಠ ರೂಪವಾಗಿರುವವು. ಇವುಗಳಲ್ಲಿ ೧. ಮನದ ಸಂಸ್ಕಾರವು ಬೀಜವದೆ. ಮತ್ತು, ೨, ವಾಣಿಯ ನಮಸ್ಕಾರವು ಅಂಕುರವದೆ. ೩. ಶರೀರದಿಂದ ಮಾಡುವ ನಮಸ್ಕರವು ವೃಕ್ಷವದೆ. ೪. ಇವುಗಳಿಂದ ಗುರು ಮೊದಲಾದವರ ಪ್ರಸನ್ನತಾರೂಪ ಫಲವುಂಟಾಗುವದು.

(೪) ಪಥಿಕ ಅಂದರೆ ಹಾದಿಕಾರ, ಇವನಿಗೆ ಪ್ರವಾಸಿಯೆಂದೂ ಅನ್ನುವರು.

೧

‖೩೩೭‖ (೧) ಇದರಂತೆ ಭೇದವಾದೀ ಆಚಾರ್ಯರೂಪವಾದ ವಾಯುವು, (೨) ವೇದರೂಪೀ ವನದಲ್ಲಿ (೩) ವಾದ ಅಂದರೆ ಅರ್ಥವಾದ ರೂಪ ಕಂಟಕ ಸಹಿತವಾದ ವೃಕ್ಷವಿರುವದೋ, ಅದರಿಂದ ಸಕಾಮ ಕರ್ಮ ರೂಪ ಕಂಟಕದಲ್ಲಿ ಪ್ರವರ್ತನಮಾಡಿ, (೪) ಸರಳ ಅಂದರೆ ಕಪಟರಹಿತ ಮತ್ತು ಸುಶುದ್ಧ ಅಂದರೆ ಅತಿಶುದ್ಧ ರಾಗಾದಿ ದೋಷರಹಿತ (೫) ಶಿಷ್ಯ ರೂಪ ಕಮಲ ಪುಷ್ಪವನ್ನು (೬) ಸಮಾಧಿರೂಪ ಸ್ವಸ್ಥಾನದಿಂದ ಅಗಲಿಸಿ, (೭) ಸಕಾಮ ಕರ್ಮರೂಪ ಕಂಟಕವನದಲ್ಲಿ ಭ್ರಮಣಮಾಡಿಸುತ್ತಿರುವದನ್ನು ಕಂಡು (೮) ಪಾಂಥಸ್ಥ ಅಂದರೆ ಸರ್ವದರಲ್ಲಿಯೂ ವ್ಯಾಪಕನಾದ ವಿಷ್ಣುವು ವಿಚಾರಮಾಡಿದ್ದೇನೆಂದರೆ, (೯) ಈ ಸುಂದರ ಕಮಲರೂಪ ಶುದ್ಧಪುರುಷನು ಈ ಸ್ಥಳದಲ್ಲಿರುವದಕ್ಕೆ ಯೋಗ್ಯನಲ್ಲ. (೧೦) ಆದರೆ ನನ್ನ ಸ್ವರೂಪವನ್ನು ಹೊಂದಲಿಕ್ಕೆ ಯೋಗ್ಯನಾಗಿರುವನು. ಎಂದು ನಿಶ್ಚಯಿಸಿ ವ್ಯಾಸರೂಪದಿಂದ ಅವತಾರಮಾಡಿ, (೧೧) ಆ ಶಿಷ್ಯನಿಗೆ ಉಪದೇಶರೂಪ ಅಂಕದಲ್ಲಿ ಸ್ಥಾಪನಮಾಡಿದನು. ಪುರುಷನ ಸ್ವಾಧೀನದಲ್ಲಿದ್ದ ಪುಷ್ಪವನ್ನು ಹಾರಿಸಲಿಕ್ಕೆ ವಾಯುವು ಹೇಗೆ ಸಮರ್ಥನಾಗುವದಿಲ್ಲವೋ, ಹಾಗೆ ಬ್ರಹ್ಮನಿಷ್ಠನಾದ ಆಚಾರ್ಯನ ಉಪದೇಶದಲ್ಲಿ ಸ್ಥಿತನಾದ ಪುರುಷನನ್ನು ಭೇದ

೨

ವಾದಿಯು ಭ್ರಮಣ ಮಾಡಿಸುವದರಲ್ಲಿ ಸಮರ್ಥನಾಗುವದಿಲ್ಲ. ಅದರಿಂದ ಉಪದೇಶವು ಅಂಕ ಅಂದರೆ ಆಶ್ರಯವಾಗಿದೆ. (೧೨) ಪುನಃ ವ್ಯಾಸಮಹರ್ಷಿಯು ವಿಚಾರಮಾಡಿದ್ದೇನೆಂದರೆ, ಈ ಭೇದವಾದಿಗಳು ಮತ್ತೂ ಕೆಲವರನ್ನು ಮುಂದೆಯಾದರೂ ಸಕಾಮ ಕರ್ಮರೂಪ ಕಂಟಕದಲ್ಲಿ ಭ್ರಮಣ ಮಾಡಿಸಬಹುದು; ಎಂದು ಯೋಚಿಸಿ, ಮುಂದಾದರೂ ಶಿಷ್ಯರು ಭ್ರಮಣ ಮಾಡದಂತೆ ಸೂತ್ರರೂಪೀ ಜಾಲದಿಂದ ವೇದಗಳ ವಾಕ್ಯರೂಪ ವೃಕ್ಷಗಳ ವಿಭಾಗವನ್ನು ಮಾಡಿದನು.

ಹೇಗೆ ವನವಲ್ಲಿ (೧) ಸಕಂಟಕ ಮತ್ತು (೨) ನಿಷ್ಕಂಟಕ ಎರಡು ಪ್ರಕಾರದ ವೃಕ್ಷಗಳಿರುವವೋ, ಹಾಗೆ ವೃಕ್ಷರೂಪೀ ವೇದ ಗಳನ್ನು ಸೂತ್ರರೂಪೀ ಜಾಲದಿಂದ ವಿಭಾಗಮಾಡಿದನು. ಈ ಜಾಲ ಪುಷ್ಪಗಳ ಪ್ರವೇಶವು ಕಂಟಕಸಹಿತ ವೃಕ್ಷಗಳಲ್ಲಿ ಆಗುವದಿಲ್ಲ. ವೇದಗಳಲ್ಲಿ ಎರಡು ಪ್ರಕಾರದ ವಾಕ್ಯಗಳಿರುವವು. (೧)ಇವುಗಳಲ್ಲಿ ಬಗೆಯ ವಾಕ್ಯಗಳು ಕರ್ಮವನ್ನೇ ಸ್ತುತಿಸಿ, ಕರ್ಮವಿಷಯದಲ್ಲಿ ನಾದ ಪುರುಷನಿಗೆ ಕರ್ಮದಲ್ಲಿ ಪ್ರವೃತ್ತನಾಗುವಂತೆ ಮಾಡುತ್ತವೆ. ಮತ್ತೊಂದು ಬಗೆಯ ವಾಕ್ಯಗಳು ಕರ್ಮಗಳ ಫಲಗಳು ಅನಿತ್ಯ ವೆಂದು ಬೋಧಿಸಿ, ಪುರುಷನನ್ನು ನಿವೃತ್ತಮಾಡುತ್ತವೆ.

---

ಟಿಪ್ಪಣಿ=(೧) ಇಲ್ಲಿ ಭೇದವಾದಿಗಳಿಗೆ ಆಚಾರ್ಯರು ಹೇಳಿದ್ದಾ "ದೇವದತ್ತ, ಸಿಂಹವದೆ"ಎಂಬವಾಕ್ಯದಂತೆ ಗೌಣವೃತ್ತಿಯಿಂದ ಹೇಳಿವಾ [ಶಕ್ತಿ ವೃತ್ತಿಯಿಂದ] ಅಲ್ಲ. ಇದರಿಂದ ಪೂರ್ವದಲ್ಲಿಯ (ತೃತೀಯ ತರಂ ಮತ್ತು ಉತ್ತರ [ಈ ತರಂಗಕ್ಕೂ] ವಿರೋಧವಿಲ್ಲ.

೨. ಸಂಶಯ ಯುಕ್ತನನ್ನಾಗಿ ಮಾಡಿ,ನಿಷ್ಠೆಯಿಂದ ಚ್ಯುತನನ್ನಾಗಿ ಮಾಡು

‖೩೩೮‖ ಈ ವಾಕ್ಯಗಳನ್ನು ವೇದವ್ಯಾಸರು ವಿಭಾಗಮಾ ಗಳಿಂದ ಬೋಧಮಾಡಿದ್ದೇನಂದರೆ, ಸರ್ವವಾಕ್ಯಗಳ ನಿವೃತ್ತಿಯಲ್ಲಿ ರ್ಯವದೆ. ಪ್ರವೃತ್ತಿಯಲ್ಲಿ ಯಾವ ವಾಕ್ಯಗಳ ತಾತ್ಪರ್ಯವೂ ಇಲ್ಲ

ಪ್ರವೃತ್ತಿ ಬೋಧಕವಾದ ಯಾವ ವಾಕ್ಯಗಳಿರುವವೋ, ಅವು ಸ್ವಾಭಾವಿಕ ಮತ್ತು ನಿಷಿದ್ಧ ಪ್ರವೃತ್ತಿಗಳಿಂದ ನಿವೃತ್ತಮಾಡಿ, ವಿಹಿ ತ್ತಿಯಿಂದ ಅಂತಃಕರಣ ಶುದ್ಧವಾಗಿ ನಿವೃತ್ತಿಯಾಗಿ ಜ್ಞಾನನಿಷ್ಠ ನಾಗಬೇಕು. ಈರೀತಿಯಿಂದ ನಿವೃತ್ತಿಯಲ್ಲಿ ತಾತ್ಪರ್ಯವದೆ.

ಅರ್ಥವಾದ ವಾಕ್ಯಗಳು ಯಾವಕರ್ಮದ ಫಲವನ್ನು ಬೋ ೧ ವೋ, ಅವು ಗುಡಜಿಹ್ವಾ ನ್ಯಾಯದಿಂದ ಮಾಡಿವೆ. ಫಲದಲ್ಲಿ ತಾತ್ಪರ್ಯವಿಲ್ಲ" ಎಂಬ ಅರ್ಥವನ್ನು ವ್ಯಾಸರು ಬೋಧಿಸಿದ್ದಾರೆ ವನ್ನು ಸೂತ್ರಗಳಿಂದ ತಿಳಿದುಕೊಂಡು ಸಕಾಮಕರ್ಮ ವಿಷಯ ಷನ ಪ್ರವೃತ್ತಿಯು ಆಗಬಾರದು.

ಜಾಲವು ಹೇಗೆ ಪುಷ್ಪವನ್ನು ಕಂಟಕದಿಂದ ನಿರೋಧಮಾಡು ಹಾಗೆ ವ್ಯಾಸಮಹರ್ಷಿಯ ಸೂತ್ರಗಳು ಸಕಾಮ ಕರ್ಮಗಳಿಂದ ಮಾಡುವವು. ಅದರಿಂದ ಜಾಲರೂಪವೆಂದು ಹೇಳಿದನು. [೨]



ಟಿಪ್ಪಣಿ ೧. ಒಬ್ಬ ತಾಯಿಯು ತನ್ನ ಬಾಲಕನಿಗೆ ಪ್ರಥಮದಲ್ಲಿ ಬೆರಳಿನಿಂದ ಚಿತ್ ಬೆಲ್ಲವನ್ನು ನಾಲಿಗೆಗೆ ಒರಸಿ, ಕಹಿಯಾದ ಔಷಧದಲ್ಲಿ ಮಧುರ ರಸದ ಬುದ್ಧಿಯನ್ನು ಹುಟ್ಟಿಸಿ, ಕಹಿಯಾದ ಔಷಧವನ್ನು ಕುಡಿಯಲು ಕೊಡುವಳು. ದಕ್ಕೆ ಶಾಸ್ತ್ರದಲ್ಲಿ "ಗುಡಜಿಹ್ವಾನ್ಯಾಯ", ಎಂದು ಹೇಳಿದ್ದಾರೆ. ಇದರಂತೆ ಶ್ರುತಿರೂಪ ತಾಯಿಯು ಪಾಮರ ಜೀವರೂಪ ಬಾಲಕನಿಗೆ ಕರ್ಮ ಫಲದ ಸ್ತಾವಕ ವಚನರೂಪ ಅರ್ಥವಾದ ವಾಕ್ಯರೂಪ, ಬೆಲ್ಲದಬೆರಳನ್ನು ಜಿಹ್ವೆಗೆ ಹಚ್ಚಿ ಕರ್ಮದ ಸ್ವರ್ಗಾದಿ ಪ್ರಾಪ್ತಿರೂಪ ಫಲದ ಬೋಧಮಾಡಿ, ಆ ಕರ್ಮದಲ್ಲಿ ಪ್ರವೃತ್ತಿಯನ್ನುಂಟುಮಾಡುವಳು. ಆದರೆ ಆಕೆಗೆ ಬಾಲಕನ ರೋಗ ನಿವೃತ್ತಿಯಲ್ಲಿ ತಾತ್ಪರ್ಯವದೆಯೇ ಹೊರತು ಬೆರಳಿನ ತುದಿಯಲ್ಲಿದ್ದ ಬೆಲ್ಲದ ಸ್ವಾದದಲ್ಲಿ ಹೇಗೆ ಇಲ್ಲವೋ ಹಾಗೆ ಶ್ರುತಿರೂಪ ಮಾತೆಯ ತಾತ್ಪರ್ಯವು ಪಾಪದ ನಿವೃತ್ತಿದ್ವಾರಾ ಚಿತ್ತದ ಶುದ್ಧಿಯ ಅದೆ. ಸ್ವರ್ಗಾದಿ ಫಲಗಳಲ್ಲಿ ಇಲ್ಲ.

‖೩೩೯‖ ಅಗೃಧ ದೇವನ ಪ್ರಶ್ನೆ ೧. ನಾನು ಯಾರು ? ೨. ಸಂಸಾರದ ಕರ್ತೃವು ಯಾವನು ? ೩. ಮುಕ್ತಿಗೆ ಸಾಧನವಾದದ್ದು ಜ್ಞಾನವೋ ಅಥವಾ ಕರ್ಮವೋ? ಅಥವಾ ಉಪಾಸನೆಯೋ, ಅಥವಾ ಎರಡೂ ಇರುವವೊ.

‖ ದೋಹಾ ‖

ಕೋಉಕ ಸಿಷ್ಯ ಉದಾರಮತಿ । ಗುರುಕೆ ಸರನೈಜಾಇ ।
ಪ್ರಶಕಿಯೊ ಕರ ಜೋರಿಕೆ । ಪಾರದ ಪದ್ಮ ಸಿರ ನಾಇ ‖೭‖

ಅರ್ಥ—ಒಬ್ಬಾನೊಬ್ಬ ಶಿಷ್ಯನು, ಉದಾರಬುದ್ಧಿಯಾದ ಒಬ್ಬ ಗುರುವಿನ ಸನ್ನಿಧಾನಕ್ಕೆ ಹೋಗಿ,ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಮುಕುಳಿತ ಹಸ್ತನಾಗಿ ಈ ಪ್ರಕಾರ ಪ್ರಶ್ನೆಮಾಡಿದನು.

‖ ಶಿಷ್ಯ ಉವಾಚ ‖

‖ ದೋಹಾ ‖

ಹೋ ಭಗವನ್ ಮೈ ಕೌನ ಯಹ । ಸಂಸೃತಿ ಕಾತೈ ಹೋಇ ।
ಹೇತು ಮುಕ್ತಿಕೋ ಜ್ಞಾನವಾ। ಕರ್ಮಉಪಾಸನ ದೋಇ‖೮‖

ಟೀಕಾ‖ ಭಗವನ್ ೧. ನಾನು ಯಾರು ದೇಹಸ್ವರೂಪನಿರುವೆನೋ ? ಅಥವಾ ದೇಹದಿಂದ ಭಿನ್ನನಿರುವೆನೋ ! ನಾನು ಮನುಷ್ಯನಿರುವೆನು, ಮತ್ತು ನನ್ನ ಶರೀರವದೆ. ಇವೆರಡೂ ಪ್ರತೀತಿಯಾಗುವವು. ಇದರಿಂದ ನನಗೆ ಸಂಶಯವುಂಟಾಗಿದೆ. ದೇಹದಿಂದ ಭಿನ್ನನೆಂದು ನೀವು ಹೇಳಿದರೆ, ನಾನು ಕರ್ತಾಭೋಕ್ತಾ ಆಗಿರುವೆನೇ ? ಅಥವಾ ಅಕ್ರಿಯನಾಗಿರು

ವನೇ ! ನೀವು ಅಕ್ರಿಯನೆಂದು ಹೇಳಿದರೆ ಸರ್ವಶರೀರಗಳಲ್ಲಿ ಒಬ್ಬನೆ ರುವೆನೋ ? ಅಥವಾ ಅನೇಕನಾಗಿರುವೆನೋ ? ಇದು ಪ್ರಥನು ... ಅಭಿಪ್ರಾಯವು ಮತ್ತು ೨. ಈ ಸಂಸೃತಿ ಅಂದರೆ ಸಂಸಾರದ ... ಯಾರು ? ಇದರ ಅಭಿಪ್ರಾಯವು ಈ ರೀತಿಯಾಗಿ ಅದೆ, ಈ ಸಂಸಾ... ಕರ್ತನು ಯಾವನಾದರೂ ಇರುವನೋ ! ಅಥವಾ ನಾನೇ ಇರುವೆ... ನೀವು ಕರ್ತಾ ಎಂದು ಹೇಳಿದರೆ. ಜೀವವು ಕರ್ತೃವಾಗಿರುವದೋ, ಅಥ... ಈಶ್ವರನು ಕರ್ತೃವಾಗಿರುವನೋ ? ನೀವು ಈಶ್ವರನೆಂದು ಹೇಳಿದರೆ, ಈ... ರನು ಒಂದೇ ಸ್ಥಳದಲ್ಲಿ ಸ್ಥಿತನಾಗಿರುವನೋ ಅಥವಾ ಸರ್ವವ್ಯಾಪಕ... ರುವನೋ ನೀವು ವ್ಯಾಪಕ ನಿರುವನೆಂದು ಹೇಳಿದರೆ, ವ್ಯಾಪಕ ಈಶ್ವ... ದ ಜೀವವು ಭಿನ್ನವಾಗಿದೆಯೇ ಅಥವಾ ಈಶ್ವರನಿಂದ ಜೀವವು ಅಭಿ... ಗಿದೆಯೋ ಮತ್ತು ೩ ಮುಕ್ತಿಗೆ ಸಾಧನವಾದದ್ದು ಜ್ಞಾನವೋ ಅಥವಾ ... ರ್ಮವೋ ಇಲ್ಲವೆ ಉಪಾಸನೆಯೋ ಅಥವಾ ಎರಡೂ ಆಗಿರುವವೋ ... ಎರಡೂ ಎಂದು ಹೇಳಿದರೆ ಜ್ಞಾನವು ಕರ್ಮವದೆಯೋ ಅಥವಾ ಜ್ಞಾ... ಉಪಾಸನಾ ಅದೆಯೋ! ಅಥವಾ ಕರ್ಮವು ಉಪಾಸನಾ ಅದೆಯೋ ...

(೧"ನಾನು ಯಾರಿರುವೆನು,,ಇದರ ಉತ್ತರ. ೩೪೦—೩೪...

‖೩೪೦‖ ಆತ್ಮಾ ಸಂಘಾತದ ಸಾಕ್ಷೀ ಅದೆ.

‖ ಶ್ರೀಗುರುರುವಾಚ ‖

‖ ಅರ್ಥ ದೋಹಾ ‖

ಸತ್ ಚಿತ್ ಆನಂದ ಏಕ ತೂ । ಬ್ರಹ್ಮ ಅಜನ್ಮ ಅಸಂಗ‖

ಟೀಕಾ‖ ಶಿಷ್ಯನು ಮೊದಲು ಯಾವ ಪ್ರಶ್ನೆಯನ್ನು ಮಾಡಿದನೋ ಅದರ ಉತ್ತರವನ್ನು ಹೇಳುತ್ತಾರೆ. "ನೀನು ಸತ್ ಚಿತ್ ಆನಂದ ಸ್ವ... ನಾಗಿರುವಿ" ಎಂದು ಹೇಳುವದರಿಂದ ದೇಹದಿಂದ ಭಿನ್ನನಾಗಿರುವಿ, ಎಂ... ಹೇಳಿದಂತಾಯಿತು. ಕಾರಣವೇನೆಂದರೆ, ದೇಹವು ಅಸತ್‌ಜಡ... ರೂಪ ಮತ್ತು ದುಃಖರೂಪವದೆ. ನೀನು ಕರ್ತಾಭೋಕ್ತಾ ಸಹ... ಕಾರಣವೇನೆಂದರೆ;— (೧) ಯಾವನಲ್ಲಿ ದುಃಖವಿರುವದೋ, ಅ... ದುಖನಿವೃತ್ತ್ಯರ್ಥವಾಗಿಯೂ, ಸುಖ ಪ್ರಾಪ್ತ್ಯರ್ಥವಾಗಿಯೂ, ... ಯನ್ನು ಮಾಡುವನು. ಕ್ರಿಯೆಯನ್ನು ಮಾಡುವವನಿಗೆ ಕರ್ತೃ ಎನ್ನುತ್ತಾ... ನಿನ್ನಲ್ಲಿ ದುಃಖವಿರುವದಿಲ್ಲ. ಅದರಿಂದ ದುಃಖದ ನಿವೃತ್ತಿಯ ಸಲುವಾ...



...ಯ ಕರ್ತನು ಅಲ್ಲ. ನೀನು ಆನಂದಸ್ವರೂಪನಾಗಿರುವಿ. ಇದರಿಂದ ಸುಖಪ್ರಾಪ್ತಿಯ ನಿಮಿತ್ತವಾದರೂ ಸಹ ನೀನು ಕ್ರಿಯೆಯ ಕರ್ತನು ಅಲ್ಲ ೨ ಯಾವನು ಕರ್ತೃವೋ, ಅವನೇ ಭೋಕ್ತೃವು ನೀನುಕರ್ತನಲ್ಲ ಅದರಿಂದ ಭೋಕ್ತೃವೂ ಅಲ್ಲ.

ಪುಣ್ಯಪಾಪಗಳ ಮೂಲವಾದ ಯಾವ ಕರ್ಮಗಳಿರುವವೋ ಅವುಗಳ ಕರ್ತಾ ಮತ್ತು ಸುಖದುಃಖಗಳ ಭೋಕ್ತಾ, ಸ್ಥೂಲ ಸೂಕ್ಷ್ಮಸಂಘಾತವದೆ. ನೀನು ಅಲ್ಲ ನೀನು ಸಂಘಾತದ ಸಾಕ್ಷೀ ಆಗಿರುವಿ ಇದರಿಂದ

‖೩೪೧‖ ಆತ್ಮನು ಸುಖದುಃಖಾದಿ ಧರ್ಮದಿಂದ ರಹಿತನಾಗಿ ವ್ಯಾಪಕನಾಗಿ ಒಬ್ಬನೇ ಇರುವನು. ಸಾಂಖ್ಯಮತದ ಮತ್ತು ತ್ರಿವಿಧನ್ಯಾಯ ಮತಗಳ ಕಥನವೂ ಮತ್ತು ಖಂಡನವು ‖ ೩೪೧—೩೫೪ ‖

ಆತ್ಮನು ಒಬ್ಬನೇ ಇರುವನು. ಅನೇಕನಾಗಿ ಇಲ್ಲ. ಆತ್ಮನುಕರ್ತೃಭೋಕ್ತೃವು ಆದರೆ, ಅವನಿಗೆ ಅನೇಕತ್ವವು ಬರುವದು. ಕಾರಣವೇನೆಂದರೆ, ಕೆಲವರು ಸುಖಿಗಳಾಗಿರುವರು, ಕೆಲವರು ದುಃಖಿಗಳಾಗಿರುವರು. ಮತ್ತು ಕರ್ತೃಭೋಕ್ತೃವು ಒಬ್ಬನೇ ಆತ್ಮನೆಂದು ತಿಳಿದರೆ, ಒಬ್ಬನಿಗೆ ಸುಖವಾಗುವದರಿಂದಲೂ, ಮತ್ತು ದುಃಖವಾಗುವದರಿಂದಲೂ ಸರ್ವರಿಗೂಸುಖದುಃಖಗಳುಂಟಾಗಬೇಕು. ಅದರಿಂದ ಭೋಕ್ತೃಗಳು ಅನೇಕರಾಗಿರುವರು. ಮತ್ತು ಆತ್ಮನು ಭೋಕ್ತೃವಲ್ಲವಾದ್ದರಿಂದ ಒಬ್ಬನಾಗಿರುವನು.

‖ ೩೪೨ ‖ (ಪೂರ್ವಪಕ್ಷಿ) ಸಾಂಖ್ಯಮತದಲ್ಲಿ ಆತ್ಮನು ಕರ್ತೃಭೋಕ್ತೃವಲ್ಲವೆಂದು ತಿಳಿದು ಅನೇಕತ್ವವನ್ನು ಅಂಗೀಕರಿಸಿದ್ದಾರೆ.ಇದು ಅತ್ಯಂತ ವಿರುದ್ಧವಾದದ್ದು. ಕಾರಣವೇನಂದರೆ, ಸಾಂಖ್ಯಮತದ ಸಿದ್ಧಾಂತವು ಈ ರೀತಿಯಾಗಿದೆ.

೧. ೧ ಸತ್ವ, ರಜ, ತಮುಗುಣಗಳ ಸಮ ಅವಸ್ಥೆಯನಾಮಕ್ಕೆ ಪ್ರಧಾನ ಅನ್ನುತ್ತಾರೆ. ಈ ಪ್ರಧಾನವೇ ಪ್ರಕೃತಿಯದೆ. ವಿಕೃತಿಯಲ್ಲ ೧ ವಿಕೃತಿ ಅಂದರೆ ಕಾರ್ಯ ಅನ್ನಬೇಕು. ೨ ಪ್ರಕೃತಿ ಅಂದರೆ ಉಪಾದಾನ ಕಾರಣವನ್ನೆಬೇಕು ೧ ಈ ಪ್ರಧಾನವು ಮಹತ್ತತ್ವದ ಉಪಾದಾನ ಕಾರಣವದೆ. ಇದರಿಂದ ಪ್ರಕೃತಿ ಅದೆ, ಮತ್ತು ೨ ಅನಾದಿಯದೆ. ಇದರಿಂದ ವಿಕೃತಿಯಲ್ಲ ೨-೮ ಮಹತ್ತತ್ವ, ಅಹಂಕಾರ, ಪಂಚತನ್ಮಾತ್ರಾ ಈ ಏಳು ಪ್ರಕೃತಿಗಳು ವಿಕೃತಿ ಅವೆ. ೧ ಉತ್ತರೋತ್ತರದ ಪ್ರಕೃತಿಯದೆ ಮತ್ತು ೨

ಪೂರ್ವಪೂರ್ವದ ವಿಕೃತಿ ಇದೆ. ತನ್ಮಾತ್ರವೂ ಸಹ ಭೂತಗಳ ಪ್ರಕೃತಿ
ಈ ರೀತಿಯಿಂದ ಏಳು ಪ್ರಕೃತಿಗಳು ವಿಕೃತಿ ಅವೆ. ಮತ್ತು ೯-೨೪
ಭೂತ ಮತ್ತು ದಶೇಂದ್ರಿಯ ಮತ್ತು ಮನ, ಈ ಹದಿನಾರು ವಿಕೃತಿ
ಪ್ರಕೃತಿ ಅಲ್ಲ. ೨೫ ಪುರುಷ ಪ್ರಕೃತಿವಿಕೃತಿ ಅಲ್ಲ. ಕಾರಣವೇನ
೧ ಯಾವದು ಯಾವ ಪದಾರ್ಥದ ಹೇತುವಾಗಿರುವದೋ, ಅದು
ಯಾಗುವದು. ಮತ್ತು ೨ ಯಾವದಕ್ಕೂ ಕಾರ್ಯವಿರುವದೋ, ಅದು
ತಿಯಾಗುತ್ತದೆ. ೧ ಈ ಪುರುಷ ಯಾವದಕ್ಕೂ ಹೇತುವಲ್ಲ. ಇದ
ಕೃತಿ ಅಲ್ಲ ಮತ್ತು ೨ ಕಾರ್ಯವಲ್ಲ ಇದರಿಂದ ವಿಕೃತಿಯೂ ಅಲ್ಲ
ರಿಂದ ಪುರುಷ ಅಸಂಗ ಇದೆ.

ಈ ಪ್ರಕಾರವಾಗಿ ಸಾಂಖ್ಯಮತದಲ್ಲಿ ಇಪ್ಪತ್ತೈದು ತತ್ವಗ
ತತ್ವನಾಮ ಪದಾರ್ಥ.

೧

೨. ಸಾಂಖ್ಯ ಮತದಲ್ಲಿ ಈಶ್ವರನ ಅಂಗೀಕಾರವಿಲ್ಲ.

೩. ಸ್ವತಂತ್ರ ಪ್ರಕೃತಿಯು ಜಗತ್ತಿನ ಕಾರಣವದೆ.

೪. ಪುರುಷನ ಭೋಗ ಮೋಕ್ಷದ ನಿಮಿತ್ತ ಪ್ರಕೃತಿಯು
ವಾಗುವದು ಪುರುಷ ಅಲ್ಲ.

೫. ಪ್ರಕೃತಿಯ ವಿಷಯರೂಪ ಪರಿಣಾಮದಿಂದ ಪುರುಷನಿ
ಗೆ ವುಂಟಾಗುತ್ತದೆ.

೬. ಬುದ್ಧಿದ್ವಾರಾ ವಿವೇಕರೂಪ ಪ್ರಕೃತಿಯ ಪರಿಣಾಮ
ಮೋಕ್ಷವಾಗುತ್ತದೆ.

೭. ಯದ್ಯಪಿ ಪುರುಷನು ಅಸಂಗ ಇದ್ದಾನೆ. ಅವನಲ್ಲಿ ಭೋ
ಮೋಕ್ಷಗಳು ಸಂಭವಿಸುವದಿಲ್ಲವಾದರೂ, ಜ್ಞಾನ, ಸುಖ,ದುಃಖ,
ದ್ವೇಷ, ಮೊದಲಾದ ಬುದ್ಧಿಯ ಪರಿಣಾಮಗಳು ಅವೆ.ಆ ಬುದ್ಧಿಗೆ ಆತ್ಮ
ಅವಿವೇಕವದೆ. ವಿವೇಕವಿಲ್ಲ ಇದರಿಂದ ಆತ್ಮಾದಲ್ಲಿ ಆರೋಪಿತ
ಮೋಕ್ಷವದೆ. ಪರಮಾರ್ಥದಿಂದ ಇಲ್ಲ.

೮. ಆತ್ಮಾದಲ್ಲಿ ಅವಿವೇಕ ಸಿದ್ಧವಾದ ಭೋಗದಿಂದ, ಆ
ಸಾಂಖ್ಯಮತದಲ್ಲಿ ಭೋಕ್ತಾ ಅನ್ನುತ್ತಾರೆ.

೯. ನಿಜವಾಗಿ ನೋಡಿದರೆ, ಆತ್ಮನು ಭೋಕ್ತಾ ಅಲ್ಲ, ಬುದ್ಧಿ
ಭೋಕ್ತಾ ಅದೆ.

೧೦. ಬುದ್ಧಿಯು ಆತ್ಮನಿಂದ ಭಿನ್ನವದೆ.



೧೧. ಈ ಜ್ಞಾನದ ನಾಮವು ವಿವೇಕವದೆ.

೧೨. ಇದರ ಅಭಾವದ ನಾಮವು ಅವಿವೇಕವದೆ.
ಈ ರೀತಿಯಿಂದ ಸಾಂಖ್ಯಮತದಲ್ಲಿ.

೧೩. ಆತ್ಮ ಅಸಂಗವದೆ.

೧೪. ಸುಖಾದಿಗಳು ಬುದ್ಧಿಯ ಪರಿಣಾಮವಾಗಿವೆ. ಇದರಿಂದ ಇವು ಬುದ್ಧಿಯ ಧರ್ಮ ಆಗಿವೆ.

೧೫. ಆತ್ಮಾ ಅನೇಕ ಅವೆ.

(ಸಿದ್ಧಾಂತಿ) ಈ ವಾರ್ತೆಯು ಅತ್ಯಂತ ವಿರುದ್ಧವದೆ. ಈ ಸುಖದುಃಖಗಳು ಧರ್ಮವಾಗಿದ್ದರೆ, ಸುಖದುಃಖಗಳ ಭೇದವು ಪ್ರತಿಶರೀರದಲ್ಲಿಯೂ ಬೇರೆಬೇರೆಯಾಗಿರುವುದರಿಂದ ಇವು ಧರ್ಮವಾಗಿರುವುದಿಲ್ಲ; ಅದರೆ ಬುದ್ಧಿಯ ಧರ್ಮವಗಿವೆ. ಅಂತೆಯೇ ಸುಖದುಃಖಗಳ ಭೇದದಿಂದ ಬುದ್ಧಿಯಲ್ಲಿಯೇ ಭೇದವು ಸಿದ್ಧವಾಗುವುದು. ಆತ್ಮದ ಭೇದವು ಸಿದ್ಧವಾಗುವುದಿಲ್ಲ.

ಒಂದೇವ್ಯಾಪಕವಾದ ಆಕಾಶದಲ್ಲಿ ಅನೇಕ ಉಪಾಧಿಗಳ ಧರ್ಮವು ಪ್ರತೀತವಾಗುತ್ತದೆ. ಈ ಪ್ರತೀತಿಯು ಉಪಾಧಿ, ಮತ್ತು ಆಕಾಶ, ಇವುಗಳ ಅವಿವೇಕದಿಂದ ಪ್ರತೀತವಾಗುತ್ತವೆ. ಇದರಂತೆ ಒಂದೇ ವ್ಯಾಪಕ ಆತ್ಮಾದಲ್ಲಿ ಅನೇಕ ಬುದ್ಧಿಯ ಧರ್ಮಗಳು ಅವಿವೇಕದಿಂದ ಪ್ರತೀತವಾಗುತ್ತವೆ. ಈ ಸಂಗತಿಯನ್ನು ಸಾಂಖ್ಯಮತದಲ್ಲಿ ಅಂಗೀಕಾರಮಾಡುವದು ಉಚಿತವದೆ.

ಆತ್ಮಾವನ್ನು ಅಸಂಗನೆಂದು ತಿಳಿದು, ಅನೇಕತ್ವವನ್ನು ಒಪ್ಪಿಕೊಳ್ಳುವದು ಯೋಗ್ಯವಲ್ಲ.

ಒಂದು ಆತ್ಮಾ ಮುಕ್ತವದೆ, ಮತ್ತೊಂದಕ್ಕೆ ಬಂಧವದೆ. ಈರೀತಿಯಿಂದ ಬಂಧಮೋಕ್ಷಗಳ ಭೇದದಿಂದ ಆತ್ಮಾದಭೇದವನ್ನುಅಂಗೀಕರಿಸಿದರೆ ಇದು ಸಹ ಸಮಂಜಸವಾದದ್ದಲ್ಲ. ಕಾರಣವೇನಂದರೆ, ಈ ಬಂಧಮೋಕ್ಷಗಳನ್ನು ಆತ್ಮಾದಲ್ಲಿ ಅಂಗೀಕರಿಸಿದರೆ,ಬಂಧಮೋಕ್ಷಗಳಿಂದ ಆತ್ಮಾದ ಭೇದವು ಸಿದ್ಧವಾಗುವದು. ಈ ಬಂಧ, ಮೋಕ್ಷಗಳನ್ನು ಸಾಂಖ್ಯಮತದಲ್ಲಿ ಅಸಂಗ ಆತ್ಮಾದಲ್ಲಿಅಂಗೀಕರಿಸಿರುವದಿಲ್ಲ. ಆದರೆ ಬುದ್ಧಿಯ ಅವಿವೇಕದಿಂದ ಬಂಧವನ್ನೂ,ಬುದ್ಧಿಯವಿವೇಕದಿಂದ ಮೋಕ್ಷವನ್ನೂ ಅಂಗೀಕಾರಮಾಡಿರುವರು.

ಯಾವ ವಸ್ತುವು ಅವಿವೇಕದಿಂದ ಪ್ರತೀತಿಗೆ ಬರುವದೋ,ಅದು ವಿವೇಕದಿಂದ ದೂರವಾಗುವದು. ಈ ವಸ್ತುವು ರಜ್ಜುಸರ್ಪವತ್ ಮಿಥ್ಯಾಅದೆ.

ಆತ್ಮಾದಲ್ಲಿ ಸಹ ಬುದ್ಧಿಯು ಅವಿವೇಕದಿಂದ ಬಂಧವದೆ. ಈಬಂಧವು ವಿ
ದಿಂದ ದೂರವಾಗುವದು. ಇದರಿಂದ ಬಂಧವು ಮಿಥ್ಯವದೆ.

ಬಂಧವು ಹೇಗೆ ಮಿಥ್ಯವೋ, ಹಾಗೆ ಆತ್ಮಾದಮೋಕ್ಷವು ಸಹ ಮಿ
ಅದೆ. ಯಾವದರಲ್ಲಿ ಬಂಧವು ಸತ್ಯವಾಗುವದೋ, ಅದರ ಮೋಕ್ಷವು
ವಾಗುವದು. ಮತ್ತು ಆತ್ಮಾದಲ್ಲಿ ಬಂಧವು ಮಿಥ್ಯಾ ಅದೆ, ಇದ
ಮೋಕ್ಷವು ಸಹ ಮಿಥ್ಯವೇ ಅದೆ.

ಈ ಪ್ರಕಾರವಾಗಿ ಆಕಾಶವತ್ ಏಕವಾಗಿದ್ದ ಆತ್ಮಾದಲ್ಲಿ ಮಿಥ್ಯಾ ಬಂ
ಮೋಕ್ಷಗಳು ಸಂಭವಿಸುವದಿಲ್ಲವಲ್ಲದೆ ಇವರ ಭೇದದಿಂದ ಆತ್ಮಾದಭೇದ
ಸಿದ್ಧವಾಗುವದಿಲ್ಲ, ಇದರಿಂದ ಸಾಂಖ್ಯಮತದಲ್ಲಿಯು ಆತ್ಮಾದ ಭೇ
ಅಸಂಗತವದೆ.

ಟಿಪ್ಪಣಿ-- ಸೇಶ್ವರೀ ಸಾಂಖ್ಯ, ಮತ್ತು ನಿರೀಶ್ವರೀ ಸಾಂಖ್ಯ ಎಂಬ ಭೇದಗ
ಸಾಂಖ್ಯಮತವು ದ್ವಿವಿಧವಾಗಿದೆ. ೧ ಕರ್ಮ ಮತ್ತು ದೇವಹೂ
ಪುತ್ರನೂ, ಭಗವಂತನ ಅವತಾರನಾದವನೂ ಆದ ಕಪಿಲದೇವನು
ರೀ ಸಾಂಖ್ಯಮತವನ್ನುಂಟುಮಾಡಿರುವನು. ೨ ಇವನನ್ನು ಬಿಟ್ಟು
ಕಪಿಲರಾದವರು ನಿರೀಶ್ವರೀಸಾಂಖ್ಯವನ್ನುಂಟುಮಾಡಿದರು. ಇವರ ಮ
ಈಶ್ವರನ ಅಂಗೀಕಾರವಿಲ್ಲ. ಆದರೆಪ್ರಧಾನವನ್ನು (ಪ್ರಕೃತಿ) ಜಗತ್ತಿನ
ವೆಂದು ತಿಳಿದು ಪುರುಷನ ಭೋಗ, ಮೋಕ್ಷಗಳ ಕಾರಣವನ್ನು ಹೇ
ಇದು ಸಮಂಜಸವಾದದ್ದಲ್ಲ. ಕಾರಣವೇನಂದರೆ, ಪ್ರಳಯಕಾಲ
ತ್ವಾದಿ ಗುಣಗಳ ಸಾಮ್ಯ [ಮಿಲಿತ] ಅವಸ್ಥೆಗೆ ಪ್ರಧಾನ ಎಂದುಹೇ
ರೆ. ಇವು ಯಾವಾಗ ಸೃಷ್ಟಿಕಾಲದಲ್ಲಿ ಸಾಮ್ಯ ಅವಸ್ಥೆಯನ್ನು ತ್ಯಾಗ
ಮಾಡುವವೋ ಆಗ ಜಗತ್ತಿನ ಉತ್ಪತ್ತಿಯಾಗುವದು. ಈ ಪ್ರಧಾ
ಜಡವದೆ. ಇದರಿಂದ ಸ್ವತಃ ಸಾಮ್ಯ ಅವಸ್ಥೆಯನ್ನು ತ್ಯಾಗಮಾಡಲಿಕ್ಕೆ
ರ್ಥವಿರುವದಿಲ್ಲ. ಮತ್ತು ಚೇತನ ಪುರುಷನಿಗೆ ಇವರ ಮತದಲ್ಲಿ ಅ
ನೆಂದು ಹೇಳಿರುವದರಿಂದ ಇವನ ಸಂಬಂಧವು ಪ್ರಧಾನದೊಡನೆ ಇ
ದಿಲ್ಲ. ಮತ್ತು ಚೇತನದ ಸಂಬಂಧದ ಹೊರ್ತು ಜಡದಿಂದ ಕಾ
ಉತ್ಪತ್ತಿಯು ಆಗುವದಿಲ್ಲ. ಆದರಿಂದ ಪ್ರಧಾನರೂಪ ಮಾಯಾದಿಂದ
ವಾದ ಚೇತನದ ಅಂತರ್ಯಾಮಿಯು ಈಶ್ವರನಿದ್ದಾನೆ, ಇವನೇ ಜಗತ್ತಿ
ನೆಂದು ತಿಳಿಯುವದು ಯೋಗ್ಯವದೆ.

ಸಾಂಖ್ಯಮತದಲ್ಲಿ ಆತ್ಮಾದ ಅನೇಕತ್ವದ ಮತ್ತು ಪ್ರಕೃತಿಯ ನಿತ್ಯ
ಅಂಗೀಕಾರದಿಂದ ಆತ್ಮಾದಲ್ಲಿ ಸಜಾತೀಯಸಂಬಂಧ ಮತ್ತು ವಿಜಾತೀ
ಸಂಬಂಧದ ಪ್ರಾಪ್ತಿಯಿಂದ ಅನೇಕ ಆತ್ಮಾದ ಅಸಂಗತ್ವ ಕಥನವು
ವ್ಯಾಘಾತದೋಷಯುಕ್ತವದೆ. ಏಕವಾ ಏಕ ಆತ್ಮಾದ ಅಂಗೀಕಾರ
ಮಾಡಿದರೆ, ಅನೇಕ ಅಂತಃಕರಣಗಳಿಂದ ಭೋಗ ಮೊದಲಾದವು



ಕರದ ವ್ಯವಸ್ಥೆಯು ಆಗುವದು. ಪುನಃ ಆತ್ಮಾದ ಅನೇಕತ್ವದ ಅಂಗೀಕಾರ
ದಿಂದ ಅಸ್ವೀಕೃತ ಕೃತಿ, ಮತ್ತು ಈಗ ಹೇಳಿದ ಟಿಪ್ಪಣಿಯಲ್ಲಿಯು ಭೇದಬಾ
ಧಕ ಯುಕ್ತಿ, ಇವೆರಡರಲ್ಲಿ ವಿರೋಧದ ಹೊರ್ತು ಅನ್ಯಫಲವು ಸಿಕ್ಕುವ
ದಿಲ್ಲ. ಈ ರೀತಿ ಸಾಂಖ್ಯಮತವು ಅಸಂಗತವದೆ.

(೨) ಇಲ್ಲಿ ಈ ಭೇದದ ಬಾಧಕ ಅದೆ, ಒಂದು ಆತ್ಮಾದ ಭೇದವು ಅನ್ಯಎಂ
ದು ಆತ್ಮಾದಲ್ಲಿ ವರ್ತಿಸುವದು. ಹೇಳತಕ್ಕ ಪ್ರತಿವಾದಿಯನ್ನು ಕುರಿತು
ಈ ಪ್ರಕಾರ ಪ್ರಶ್ನೆ ಮಾಡಬೇಕಲ್ಲಾ ! ೧. ಈ ಭೇದವು ಭೇದರಹಿತ ಆತ್ಮಾ
ದಲ್ಲವರ್ತಿಸುವದೋ ಅಥವಾ ಭೇದ ಸಹಿತ ಆತ್ಮಾದಲ್ಲಿಯೋ | ಇವುಗ
ಗಳಲ್ಲಿ ಪ್ರಥಮ ಪಕ್ಷವನ್ನು ಹೇಳಿದರೆ ವ್ಯಾಘಾತ ದೋಷವಾಗುವದು. ಕಾ
ರಣವೇನಂದರೆ, ಈ ಭೇದಗಳ ಆಶ್ರಯವಾದ ಆತ್ಮಾಕ್ಕೆ ಭೇದರಹಿತವೆಂದೂ
ಅನ್ನುತ್ತಾರೆ, ಮತ್ತು ಇದರ ವಿಷಯದಲ್ಲಿ ಭೇದವು ವರ್ತಿಸುವದೆಂದೂ ಹೇ
ಳುತ್ತಾರೆ. ಮತ್ತು ನನ್ನ ಪಿತನು ಬಾಲ ಬ್ರಹ್ಮಚಾರಿ ಇರುವನು. ಎಂಬ
ವಾಕ್ಯದಂತೆ. ಈ ನಿನ್ನ ವಚನವು ವ್ಯಾಘ್ಯಾತ ದೋಷಯುಕ್ತವಾಗುವದು.
ಭೇದ ಸಹಿತ ಆತ್ಮಾದ ಭೇದವು ವರ್ತಿಸುವದೆಂದು ಈ ದ್ವಿತೀಯ ಪಕ್ಷವ
ವನ್ನು ಹೇಳಿದರೆ. ಯಾವ ಭೇದದಿಂದ ಸಹಿತವಾಗಿ ಆತ್ಮಾ ಅದೆಯೋ,
ಆಭೇದವೂ ಪರಸ್ಪರ ಏಕವಾಗಿರುವವೋ ? ಅಥವಾ ಭಿನ್ನವಾಗಿರುವವೋ?
ಅವನು ಒಂದೇ ಎಂದು ಹೇಳಿದರೆ, ತನ್ನಿಂದ ಯುಕ್ತವಾದ ಆತ್ಮಾದಲ್ಲಿ ತಾ
ನೇ ವರ್ತಿಸುವದರಿಂದ ಆತ್ಮಾಶ್ರಯ ದೋಷವಾಗುವದು.

ಯಾವ ಭೇದ ಯುಕ್ತವಾಗಿ ಆತ್ಮಾ ಅದೆಯೋ, ಅದು ಆತ್ಮಾದ ವಿಶೇಷಣ
ರೂಪ ಭೇದವು, ಇವೆರಡೂ ಪರಸ್ಪರ ಭಿನ್ನ ಅವೆ, ಎಂದು ಹೇಳಿದರೆ.
ಈ ಆತ್ಮಾದ ವಿಶೇಷಣ ರೂಪ ಭೇದಕ್ಕೆ ಸಹ ಭೇದರಹಿತ ಆತ್ಮಾದಲ್ಲಿ ಇರು
ವದು ಸಂಭವಿಸುವದಿಲ್ಲ ಆದರೆ ಭೇದಸಹಿತ ಆತ್ಮಾದಲ್ಲಿ ಇರುವದೆಂದು
ಹೇಳಲೇಬೇಕು. ಇದರಿಂದ ಆತ್ಮಾದಲ್ಲಿ ಪ್ರಥಮಭೇದದ ಸ್ಥಿತಿ ಅರ್ಥವಾಗಿ
ದ್ವಿತೀಯ ಭೇದಕ್ಕೆ ವಿಶೇಷಣವೆಂದು ಹೇಳಿದೆ. ಮತ್ತು ಪುನಃ ದ್ವಿತೀಯ
ಭೇದದ ಸ್ಥಿತಿ ಅರ್ಥವಾಗಿ ಪ್ರಥಮ ಭೇದಕ್ಕೆ ವಿಶೇಷಣವೆಂದು ಹೇಳಿದೆ.
ಈ ಪರಸ್ಪರಸ್ಥಿತಿ ಅರ್ಥವಾಗಿ ಪರಸ್ಪರ ಅಪೇಕ್ಷೆ ಯುಂಟಾಗಿರುವದರಿಂದ
ಅನ್ಯೋನ್ಯಾಶ್ರಯ ದೋಷವಾಗುವದು.

ಯಾವ ಆತ್ಮಾದ ವಿಷಯದಲ್ಲಿ ದ್ವಿತೀಯ ಭೇದದ ಸ್ಥಿತಿ, ಅರ್ಥವಾಗಿ,
ಅದರ ಆಶ್ರಯವಾದ ಆತ್ಮಾಕ್ಕೆ ಭೇದ ಸಹಿತ ಮಾಡಲಿಕ್ಕೆ, ಅದರ ವಿಶೇಷ
ಣರೂಪ ತೃತೀಯ ಭೇದವನ್ನು ತಿಳಿಯಬೇಕು. ಈ ತೃತೀಯ ಭೇದದ ಸ್ಥಿತಿ
ಅರ್ಥವಾಗಿ ಪೂರ್ವದಂತೆ ಆತ್ಮಾವನ್ನು ಭೇದ ಸಹಿತ ಮಾಡಲಿಕ್ಕೆ ಬೇಕು,
ಈ ತೃತೀಯ ಭೇದದ ಸ್ಥಿತಿ ಅರ್ಥವಾಗಿ ಅದರ ಆಶ್ರಯ ಆತ್ಮಾದ ವಿಶೇಷ
ಣಪ್ರಥಮ ಭೇದವನ್ನು ಹೇಳಿದರೆ, ಪ್ರಥಮ ಭೇದಕ್ಕೆ ದ್ವಿತೀಯದ ಮತ್ತು
ದ್ವಿತೀಯಕ್ಕೆ ತೃತೀಯದ ಪುನಃ ತೃತೀಯಕ್ಕೆ ಪ್ರಥಮಭೇದದ ಅಪೇಕ್ಷೆಯುಂ
ಟಾಗುವದರಿಂದ ಚಕ್ರವತ್ ಭ್ರಮಣರೂಪ ಚಕ್ರಿಕಾ ದೋಷವಾಗುವದು.

ಯಾವ ತೃತೀಯ ಭೇದದ ಸ್ಥಿತಿ ಅರ್ಥವಾಗಿ ಭೇದದ ಆಶ್ರಯವಾದ ವನ್ನು ಭೇದ ಸಹಿತ ಮಾಡುವದಕ್ಕೆ ಅದರ ವಿಶೇಷಣರೂಪ, ಅನ್ಯ ಭೇದವನ್ನು ಹೇಳಿದರೆ ಪುನಃ ಚತುರ್ಥ ಭೇದದ ಸ್ಥಿತಿ, ಅರ್ಥ ಭೇದ ಹೇಳಲು ಪ್ರಮಾಣರಹಿತ ಭೇದದ ಧಾರಣರೂಪ ಅನವಸ್ಥಾ ವಾಗುವದು.

ಈ ಕಾರಣದಿಂದ ಆತ್ಮಾದ ಪರಸ್ಪರ ಭೇದ (ಅನೇಕತ್ವವು) ಅಸಂಗತ ದ್ದು. ಈ ಭೇದ ಬಾಧಕ ಯುಕ್ತಿಯು ನೈಯಾಯಿಕ ಮೊದಲಾದ ವಾದಿಗಳಿಂದ ಸಮ್ಮತವಾದ ಭೇದದ ಖಂಡನವದೆ.

||೩೪೩|| [ಪೂರ್ವಪಕ್ಷಿ] ಇದರಂತೆ ನ್ಯಾಯಮತದಲ್ಲಿ ಸಹಾ ಆತ್ಮ ಭೇದವು ಅಸಂಗತವದೆ. ಕಾರಣವೇನಂದರೆ, ನ್ಯಾಯದ ಸಿದ್ಧಾಂತವು ರೀತಿಯಾಗಿದೆ:—

೧. ಸುಖ, ದುಃಖ, ಜ್ಞಾನ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ ಅಧರ್ಮ,ಜ್ಞಾನದ ಸಂಸ್ಕಾರ,ಸಂಖ್ಯಾ,ಪರಿಮಾಣ, ಪೃಥಕ್ತ್ವ,ಸಂಯೋಗ ವಿಭಾಗ, ಈ ಹದಿನಾಲ್ಕು ಗುಣಗಳು ಜೀವರೂಪ ಆತ್ಮಾದಲ್ಲಿ ಅವೆ.

೨. ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ, ಇಚ್ಛಾ, ಪ್ರಯತ್ನ ಈ ಎಂಟು ಗುಣಗಳು ಈಶ್ವರನಲ್ಲಿ ಅವೆ.

ಇದರಲ್ಲಿಯ ಭೇದವಿಷ್ಟೆ ! (೧) ಈಶ್ವರನ ಜ್ಞಾನ, ಇಚ್ಛಾ, ಪ್ರಯತ್ನ, ನಿತ್ಯ ಅವೆ. (೨) ಈ ಮೂರು ಜೀವನಲ್ಲಿ ಅನಿತ್ಯ ಅವೆ.(೧) ಈಶ್ವ ವ್ಯಾಪಕನಿದ್ದಾನೆ. ಮತ್ತು ನಿತ್ಯಯಿದ್ದಾನೆ. (೨) ಅನೇಕಜೀವ ಮತ್ತು ಸಂಪೂರ್ಣ ವ್ಯಾಪಕ ಅವೆ.ನಿತ್ಯ ಅವೆ. ಮತ್ತು ಜೀವದ ಜ್ಞಾ ಅನಿತ್ಯವದೆ. ಅದರಿಂದ ಯಾವಾಗ ಜ್ಞಾನಗುಣವಿರುವದೋ, ಆಗ ಜೀವವು ಚೇತನರೂಪವಾಗುತ್ತದೆ. ಮತ್ತು ಜ್ಞಾನಗುಣದ ನಾಶವಿರುವ ದೋ, ಆಗ ಜಡರೂಪ ಉಳಿಯುತ್ತದೆ.

೩. ಈಶ್ವರ ಜೀವಗಳಂತೆ ಆಕಾಶ, ಕಾಲ, ದಿಕ್ಕು, ಮನ, ಇವು ನಿತ್ಯ ಅವೆ.

೪. ಪೃಥಿವೀ,ಜಲ, ತೇಜ, ವಾಯುಗಳ ಪರಮಾಣುಗಳು ನಿತ್ಯ ಗವಾಕ್ಷದ ಬೆಳಕಿನಲ್ಲಿ ಪ್ರತೀತವಾಗುವ ರಜಗಳಲ್ಲಿಯ, ಒಂದು ಆರನೇ ಭಾಗಕ್ಕೆ ಪರಮಾಣು ಅನ್ನುತ್ತಾರೆ. ಈ ಪರಮಾಣುಗಳು ವತ್ ನಿತ್ಯ ಅವೆ.

೫. ಮತ್ತೂ ಜಾತಿ ಮೊದಲಾದ ಎಷ್ಟೋ ಪದಾರ್ಥಗಳು ನ್ಯಾ ಮತದಲ್ಲಿ ನಿತ್ಯ ಅವೆ.



ವೇದವಿರುದ್ಧ ಸಿದ್ಧಾಂತಗಳನ್ನು ಬಹಳ ಬರೆಯುವದರಿಂದ ಜಿಜ್ಞಾಸು ಗೆ ಉಪಯೋಗವಿಲ್ಲವೆಂದು ಬರೆದಿರುವದಿಲ್ಲ.

೬. "ನಾನು ಮನುಷ್ಯನಿದ್ದೇನೆ; ಬ್ರಾಹ್ಮಣನಿದ್ದೇನೆ" ಎಂದು ದೇಹ ವಿಷಯದಲ್ಲಿ ಇರುವ ಆತ್ಮಭ್ರಾಂತಿಯಿಂದ ರಾಗ ದ್ವೇಷಗಳು ಉಂಟಾಗುವ ವು. ಈ ರಾಗ ದ್ವೇಷಗಳಿಂದ ಧರ್ಮಾಧರ್ಮದಲ್ಲಿ ಪ್ರವೃತ್ತಿಯಾಗುತ್ತದೆ. ಇವು ಗಳಿಂದ ಶರೀರಸಂಬಂಧ ದ್ವಾರಾ ಸುಖದುಃಖಗಳು ಉತ್ಪನ್ನವಾಗುತ್ತವೆ. ಈರೀತಿ ನ್ಯಾಯಮತದಲ್ಲಿ ಆತ್ಮನಿಗೆ ಸಂಸಾರದಹೇತುವು ಭ್ರಾಂತಿಜ್ಞಾನ ವದೆ. ೭, ಈ ಭ್ರಾಂತಿಜ್ಞಾನವು ತತ್ವಜ್ಞಾನದಿಂದ ದೂರವಾಗುವದು.

೮. ದೇಹಾದಿ ಸಂಪೂರ್ಣ ಪದಾರ್ಥಗಳಿಂದ ಆತ್ಮಾ ಭಿನ್ನವದೆ ಎಂಬ ನಿಶ್ಚಯದ ನಾಮವೇ ತತ್ವಜ್ಞಾನವು. (೧) ಈ ತತ್ವಜ್ಞಾನದಿಂದ "ನಾನು ಬ್ರಾಹ್ಮಣನಿದ್ದೇನೆ, ಮನುಷ್ಯನಿದ್ದೇನೆ" ಎಂಬ ಭ್ರಾಂತಿಯು ದೂರವಾಗುವದು.(೨) ಭ್ರಾಂತಿಯ ನಾಶದಿಂದ ರಾಗ ದ್ವೇಷಗಳ ಅಭಾವವಾಗುವದು. (೩)ಇವುಗಳ ಅಭಾವದಿಂದ ಧರ್ಮಾಧರ್ಮಗಳ ನಿಮಿತ್ತ ಉಂಟಾಗುವ ಪ್ರವೃತ್ತಿಯ ಅಭಾವವಾಗುವದು.(೪)ಪ್ರವೃತ್ತಿಯ ಅಭಾವದಿಂದ ಶರೀರಸಂಬಂಧರೂಪ ಜನ್ಮದ ಅಭಾವವಾಗುವದು. ಮತ್ತು ಪ್ರಾರಬ್ಧದ ಭೋಗದಿಂದ ನಾಶವಾಗುವದು. (೫) ಶರೀರಸಂಬಂಧದ ಅಭಾವದಿಂದ ಇಪ್ಪತ್ತೊಂದು ದುಃಖಗಳು ನಾಶವಾಗುವವು.

೯. ಈ ದುಃಖಗಳ ನಾಶವೇ ನ್ಯಾಯಮತದಲ್ಲಿ ಮೋಕ್ಷ ಅದೆ.

ಒಂದು ಶರೀರ, ಶ್ರೋತ್ರ, ತ್ವಕ್, ನೇತ್ರ, ರಸನಾ,ಘ್ರಾಣ, ಮನ ಈ ಆರು ಇಂದ್ರಿಯಗಳ, ಇವುಗಳು ಆರುವಿಷಯಗಳು, ಮತ್ತು ಈ ಇಂದ್ರಿಯಗಳ ಜ್ಞಾನಗಳು, ಮತ್ತು ಸುಖ, ದುಃಖ, ಈ ಇಪ್ಪತ್ತೊಂದು ದುಃಖಗಳು ಅವೆ.

ಶರೀರಾದಿಗಳು ಸಹ ದುಃಖದಜನಕವಾಗಿವೆ. ಇದರಿಂದ ದುಃಖ ಅನ್ನುತ್ತಾರೆ.

ಸ್ವರ್ಗಾದಿಗಳ ಸುಖಗಳು ಸಹ, ನಾಶದಭಯದಿಂದ ದುಃಖದಸಾಧನ ವಾಗಿವೆ, ಅದರಿಂದ ದುಃಖ ಅನ್ನುತ್ತಾರೆ.

ನ್ಯಾಯಮತದಲ್ಲಿ ಶ್ರೋತ್ರ, ಮತ್ತು ಮನ, ಇವುಗಳು ನಿತ್ಯವೆಂದೂ, ಇವುಗಳಿಗೆ ನಾಶವಿಲ್ಲವೆಂದೂ ಯದ್ಯಪಿ ಹೇಳಿದಾಗ್ಯೂ, ಯಾವರೂಪದಿಂದ ಶ್ರೋತ್ರ,ಮನಗಳು ದುಃಖದ ಹೇತುವಾಗಿರುವವೋ, ಆ ರೂಪದ ನಾಶವು ಆಗುವದು.

ಪದಾರ್ಥಗಳ ಜ್ಞಾನೋತ್ಪತ್ತಿದ್ವಾರಾ ದುಃಖಹೇತುವದೆ. ಕಾಲದಲ್ಲಿ ಶ್ರೋತ್ರ, ಮುನಿಗಳು ಪದಾರ್ಥಜ್ಞಾನ ಮಾಡುವದಿಲ್ಲ; ವೇನಂದರೆ, ಕರ್ಣಗೋಲಕದಲ್ಲಿ ಸ್ಥಿತವಾದ ಆಕಾಶಕ್ಕೇ ಶ್ರೋತ್ರ ತ್ತಾರೆ. ಈ ಕರ್ಣಗೋಲಕವು ಮೋಕ್ಷಕಾಲದಲ್ಲಿ ಅಭಾವವದೆ; ಆಕಾಶರೂಪ ಶ್ರೋತ್ರೇಂದ್ರಿಯುವಿದ್ದಾಗ್ಯೂ ಗೋಲಕದ ಅಭಾ ಜ್ಞಾನವಾಗುವದಿಲ್ಲ.

ಈ ರೀತಿಯಿಂದ ಜ್ಞಾನದ ಉತ್ಪತ್ತಿಗೆ ಮೂಲವಾದ ಶ್ರೋತ್ರಿ ಯದ ಸ್ವರೂಪವು ಸಹ ದುಃಖವದೆ.ಮತ್ತು ಇದಾಪರೂ ನಾಶವಾಗು

೧೦. ಆತ್ಮಾದೊಡನೆ ಮನದ ಸಂಯೋಗವಾಗುವದರಿಂದ ಜ್ಞಾ ಗುವದು. ಈ ಮನದ ಸಂಯೋಗವು ನ್ಯಾಯಸಿದ್ಧಾಂತದಲ್ಲಿ (೧) ಕ್ರಿಯೆಯಿಂದ (೨) ಅಥವಾ ಎರಡರ ಕ್ರಿಯೆಯಿಂದ ಆಗುವದು.

(೧) ಹೇಗೆ ಬೀಜವೃಕ್ಷದ ಸಂಯೋಗವು, ಒಂದು ಬೀಜದ ಯಿಂದ ಆಗುವದೋ, ಮತ್ತು (೨) ಎರಡು ಮೇಷಗಳ ಸಂಯೋ ಡರ ಕ್ರಿಯೆಯಿಂದ ಆಗುವದೋ,ಹಾಗೆ ವಿಭುವಾದ ಆತ್ಮಾದಲ್ಲಿ ಕ್ರಿ ಎಂದೂ ಆಗುವದಿಲ್ಲ.ಮತ್ತು ಮೋಕ್ಷಕಾಲದಲ್ಲಿ ಮನದಲ್ಲಿ ಸಹಾ ಯು ಆಗುವದಿಲ್ಲವಾದ್ದರಿಂದ ಸಂಯೋಗವಾಗುವ ಮನಸ್ಸಿನ ಅಭಾ ಮೋಕ್ಷಕಾಲದಲ್ಲಿ ಆಗುವದು.

ಟಿಪ್ಪಣಿ—[೧] ಇಲ್ಲಿ ಇರುವ ವಿಶೇಷವೇನಂದರೆ,-ನೈಯಾಯಿಕ ಮತದಲ್ಲಿ ಜ್ಞಾನದ ಹೇತುವು ಮನನವೆಂದು ಹೇಳಿದ್ದಾರೆ. ಆತ್ಮಾ ಇತರ ಪ ಳಿಂದಭಿನ್ನವದೆ. ಆತ್ಮಾ ಉಂಟಾಗುವದರಿಂದ ಅದು ಇತರ ಪದಾರ್ಥ ಭಿನ್ನವಿಲ್ಲ. ಆದರೆ ಇತರ ಪದಾರ್ಥರೂಪವದೆ. ಅದು ಆತ್ಮಾ ಅಲ್ಲ ಘಟವದೆ! ಈ ವ್ಯತಿರೇಕ ಅನುಮಾನದಿಂದ ಆತ್ಮಾದಲ್ಲಿ ಇತರ ಪದಾ ಭೇದದ ಅನುಮತಿ ಜ್ಞಾನಆಗುವದು. ಇದು ಮನನ ಎಂದು ಹೇ ಇತರ ಪದಾರ್ಥಗಳ ಜ್ಞಾನದ ಹೊರ್ತು ಆತ್ಮಾದಲ್ಲಿ ಇತರ ಪದಾ ಭೇದದ ಜ್ಞಾನವು ಸಂಭವಿಸುವದಿಲ್ಲ. ಕಾರಣವೇನಂದರೆ-ಯಾವದು ವಿಷಯದಲ್ಲಿ ಭೇದವಾಗುವದೋ,ಇದು ಭೇದದಪ್ರತಿಯೋಗೀ ಅದ ತಿಯೋಗದ ಜ್ಞಾನದ ಹೊರ್ತು ಭೇದ ಜ್ಞಾನವುಂಟಾಗುವದಿಲ್ಲ, ಇದ ಆತ್ಮಾದಲ್ಲಿಇತರಪದಾರ್ಥಗಳಭೇದದಅನುಮತಿರೂಪಮನನದ



ವಾದ ಇತರ ಪದಾರ್ಥಗಳ ನಿರೂಪಣವು ಸಹಾ ತತ್ವಜ್ಞಾನದ ಉಪಯೋಗವದೆ. ಎಂದು ತಿಳಿಯುವರು.

ಇದು ಸಂಭವಿಸುವದಿಲ್ಲ-ಕಾರಣವೇನಂದರೆ, ಶ್ರವಣಮಾಡಿದ ಅರ್ಥದ ನಿಶ್ಚಯಕ್ಕೆ ಅನುಕೂಲವಾದ ಯಾವ ಪ್ರಮೇಯ ಮತಸಂದೇಹದ ನಿವರ್ತಕವಾದ ಯುಕ್ತಿಗಳಿರುವವೋ, ಅವುಗಳ ಚಿಂತನೆಗೆ ಮನನ ಅನ್ನುತ್ತಾರೆ. ಮತ್ತುಭೇದ ಜ್ಞಾನದಿಂದ ಅನರ್ಥವಾಗುವದು 'ಸರ್ವಂ ಖಲ್ವಿದಂ ಬ್ರಹ್ಮ, ಇತ್ಯಾದಿ, ಶ್ರುತಿ ವಾಕ್ಯಗಳಿಂದ ಅಭೇದದಲ್ಲಿ ಸಕಲ ವೇದಗಳ ತಾತ್ಪರ್ಯವದೆ. 'ದ್ವಿತೀಯಾದ್ವೈ ಭಯಂ ಭವತಿ, 'ಮೃತ್ಯೋಃ ಸ ಮೃತ್ಯುಮಾಪ್ನೋತಿ, ಯ ಇಹನಾನೇವಪಶ್ಯತಿ,' ಇತ್ಯಾದಿ ವಾಕ್ಯಗಳಿಂದ ಭೇದಜ್ಞಾನದ ನಿಂದ್ಯೆಯನ್ನು ಮಾಡಿರುವದು. ಇದರಿಂದ ಭೇದಜ್ಞಾನಕ್ಕೆ ಸಾಕ್ಷಾತ್-ಅಥವಾ ತತ್ವಜ್ಞಾನದ್ವಾರಾ ಪುರುಷಾರ್ಥಜನಕತ್ವವು ಸಂಭವಿಸುವದಿಲ್ಲ. ಮನನ ಪದದಿಂದ ಸಹ ಆತ್ಮಾಕ್ಕೆ ಇತರ ಪದಾರ್ಥಗಳಿಗೂ ಭೇದದ ಪ್ರತಿರೂಪ ಅರ್ಥವು ಆಗುವದಿಲ್ಲ. ಆದರೆ ಮನನ ಪದದ ಚಿಂತನೆ ಮಾತ್ರ ಅರ್ಥವದೆ. ವಾಕ್ಯಾಂತರಗಳ ಅನುಸಾರದಿಂದ ಅಭೇದಚಿಂತನದಲ್ಲಿ ಮನನಶಬ್ದದ ಪರ್ಯವಸಾನ (ಪರಿಸಮಾಪ್ತಿ)ವು ಆಗುವದು. ಯಾವ ಪ್ರಕಾರದಿಂದಲೂ, ಆತ್ಮಾಕ್ಕೂ ಇತರ ಪದಾರ್ಥಗಳಿಗೂ, ಭೇದ ಮನನ ಶಬ್ದದ ಅರ್ಥವು ಸಂಭವಿಸುವದಿಲ್ಲ.

ಅಥವಾ ೧ ಇತರ ಪದಾರ್ಥಗಳ ಜ್ಞಾನದಿಂದ ಯಾವ ಪುರುಷಾರ್ಥ (ಮೋಕ್ಷ)ದ ಸಾಧನವಾದ ತತ್ವಜ್ಞಾನದ ಪ್ರಾಪ್ತಿಯು ಆಗುವದೋ, ಅದು ಸಕಲ ಪುರುಷಾರ್ಥಗಳಿಗೆ, ತತ್ವಜ್ಞಾನದ ಪ್ರಾಪ್ತಿಯು ಆಗಲಿಕ್ಕೆಬೇಕು. ೨ ಅಥವಾ ಯಾ ದಕ್ಕೂ ಆಗಲೇ ಬಾರದು, ಇದನ್ನು ತೋರಿಸಿರುವದು.

೧. ಇತರ ಪದಾರ್ಥಗಳ ಯಾವ ಸಾಮಾನ್ಯ ಜ್ಞಾನವು ತತ್ವಜ್ಞಾನ [ಆತ್ಮಜ್ಞಾನ] ದಲ್ಲಿ ಅಪೇಕ್ಷಿತವಾಗಿರುವದೋ, ಆ ಸಾಮಾನ್ಯಜ್ಞಾನವು ಸರ್ವಪುರುಷರಿಗೂ ಅದೆ. ಇದರಿಂದ ಇತರ ಪದಾರ್ಥಗಳ ಜ್ಞಾನಪೂರ್ವಕವಾಗಿ ಇತರ ಪದಾರ್ಥಗಳ ಭೇದಜ್ಞಾನದಿಂದ ಸರ್ವರಿಗೂ ತತ್ವಜ್ಞಾನವು ಆಗಲಿಕ್ಕೆಬೇಕು. ಮತ್ತು, ೨. ಸರ್ವಪದಾರ್ಥಗಳಲ್ಲಿ ಅಸಾಧಾರಣ ಧರ್ಮವು [ಧರ್ಮದಲ್ಲಿ ಧರ್ಮಸ್ವರೂಪ, ಯಾವ ವಿಶೇಷರೂಪದಿಂದ ಇತರ ಪದಾರ್ಥಗಳ ಜ್ಞಾನವು ತತ್ವಜ್ಞಾನ ವಿಷಯದಲ್ಲಿ ಅಪೇಕ್ಷಿತವಾಗಲು, ಸರ್ವಜ್ಞ ಈಶ್ವರನೇ ಹೊರತು ಅಸಾಧಾರಣ ಧರ್ಮದಿಂದ ಸರ್ವ ಇತರ ಪದಾರ್ಥಗಳ ಜ್ಞಾನವು ಯಾರಿಗೂ ಸಹ ಆಗುವದಿಲ್ಲ ಇದರ ಸರ್ವ ಇತರ ಪದಾರ್ಥಗಳ ಜ್ಞಾನದಿಂದ, ಆತ್ಮಾಕ್ಕೆ ಇತರ ಪದಾರ್ಥಗಳಿಗೂ ಇರುವ ಭೇದ ಜ್ಞಾನದ ಅಭಾವದಿಂದ ಸಕಲ ಅನಾತ್ಮ ಪದಾರ್ಥಗಳಿಂದ ಭಿನ್ನವಾಗಿದ್ದಆತ್ಮಾದಜ್ಞಾನರೂಪತತ್ವಜ್ಞಾನವು ಯಾರಿಗೂಆಗುವದಿಲ್ಲ.

ಇದರಿಂದ ನೈಯಾಯಿಕ ಮತದಲ್ಲಿ ಮಾನ್ಯವಾದ ಯಾವ ಆತ್ಮಾದ, ಭೇದ

ಜ್ಞಾನವು ಅನ್ಯ ಆತ್ಮಾದಿಂದ, ಮತ್ತು ಅನಾತ್ಮಾದಿಂದ ಸಂಭವಿಸ
ಇದರಿಂದಲೇ ದೇಹಾದಿ ವಿಷಯದಲ್ಲಿ ಆತ್ಮಭ್ರಾಂತಿಯು ರಾಗ
ಧರ್ಮಾಧರ್ಮದ ನಿಮಿತ್ತವಾದ ಪ್ರವೃತ್ತಿಯು, ಶರೀರಸಂಬಂಧ
ಜನ್ಮ ಇವೇ ಮೊದಲಾದ ಇಪ್ಪತ್ತೊಂದು ಪ್ರಕಾರದ ಅಭಾವಗಳ
ದ ನಾಶರೂಪ ಮೋಕ್ಷವು ನೈಯಾಯಿಕಾನುಸಾರಗಳಿಗೆ ಆಗುವದಿಲ್ಲ
ರೆ ಮಹಾವಾಕ್ಯರೂಪ ಶ್ರುತ್ಯರ್ಥದ ಗೋಚರ ಅಭೇದ ಜ್ಞಾನದ
ಸಹಿತ ಅನರ್ಥದ ನಿವೃತ್ತಿಪೂರ್ವಕ ಪರಮಾನಂದದ ಪ್ರಾಪ್ತಿರೂಪ
ಕ್ಷಕ್ಕೆ ಸಾಧನವಾಗಿರುವದು

[೨] ನ್ಯಾಯಮತದಲ್ಲಿ ಶ್ರೋತ್ರೇಂದ್ರಿಯವನ್ನು ಆಕಾಶರೂಪವೆಂ
ದು, ನಿತ್ಯವೆಂದು ನಿಶ್ಚಯಿಸಿರುವರು. ಇದು ಸರಿಯಾದದ್ದಲ್ಲ ಯಾಕ
ಶೃತಿಯಲ್ಲಿ ನೇತ್ರಾದಿಗಳಂತೆ ಆಕಾಶದಿಂದ ಶ್ರೋತ್ರದ ಉತ್ಪತ್ತಿ
ಹೇಳಿರುವದು. ಯಾವ ವಸ್ತುವು ಉತ್ಪತ್ತಿಯುಳ್ಳದ್ದಿರುವದೋ, ಅ
ನಿತ್ಯತ್ವವು ಇಲ್ಲ.

೨. ಶ್ರೋತ್ರಕ್ಕೆ ಆಕಾಶರೂಪವೆಂದು ಹೇಳುವದು ಸಹಾ ಸಂಭವ
ದಿಲ್ಲ. ಕಾರಣವೇನಂದರೆ, ಕರ್ಣಗೋಲಕ ವೃತ್ತಿಯುಳ್ಳ ಯಾವ
ವಿರುವದೋ ಅದಕ್ಕೆ ನ್ಯಾಯ ಮತದಲ್ಲಿ ಶ್ರೋತ್ರವೆಂದು ಅನ್ನು
ಇದು ಅಯುಕ್ತವಾಗಿದ್ದರೂ ಸಹ. ಕದಾಚಿತ್ ಶ್ರವಣ ಕ್ರಿಯೆಯು
ದತ್ತ, ಇಲ್ಲವೆ. ಅಭಾವವು ಆಗುವದು. ಇದು ಆಗಬಾರದಿತ್ತು
ರಿಂದ ಪಂಚೀಕೃತ ಭೂತರೂಪವಾದ ಕರ್ಣಗೋಲಕ ವೃತ್ತಿಯು
ವದೆ ಇದರಿಂದ ಭಿನ್ನವಾದ ಅಪಂಚೀಕೃತ ಭೂತರೂಪ ಆಕಾಶದ
ವಾದ ಶ್ರೋತ್ರೇಂದ್ರಿಯವು ಉತ್ಪತ್ತಿನಾಶವುಳ್ಳದ್ದು, ಆದ್ದರಿಂದ ಅ

೩. ಇಲ್ಲವೆ ದುರ್ಜನ ತೋಷನ್ಯಾಯದಂತೆ ಅದಕ್ಕೆ ಆಕಾಶರೂ
ತಿಳಿದರೂ ಸಹ, ಅದಕ್ಕೆ ನಿತ್ಯತ್ವವು ಸಂಭವಿಸುವದಿಲ್ಲ, ಕಾರಣವೇ
ಆತ್ಮನ ಆಕಾಶಃ ಸಂಭೂತಃ [ಆತ್ಮಾದಿಂದ ಆಕಾಶ ಉಂಟಾಯಿತು
ತೈತ್ತರೀಯದ ವಾಕ್ಯದಲ್ಲಿ ಆಕಾಶದ ಉತ್ಪತ್ತಿಯನ್ನು ಹೇಳಿ, ಅ
ನ್ನು ಸೂಚನೆಮಾಡಿರುತ್ತದೆ. ಯಾವಾಗ ಆಕಾಶದ ಅನಿತ್ಯತ್ವವು
ಸಿದ್ಧವಾಯಿತೋ, ಆಗ ಅದರ ಏಕದೇಶ ರೂಪವಾದ ಶ್ರೋತ್ರದ
ವು ಸಂಭವಿಸುವದಿಲ್ಲ.

ಇದರಂತೆ ಮನದ ನಿತ್ಯತ್ವವಾದರೂ ಸಂಭವಿಸುವದಿಲ್ಲ. ಕಾರಣವೇ

೧. ಮನಸ್ಸನ್ನು ಪರಮಾಣು ರೂಪವೆಂದು ತಿಳಿದು ನಿತ್ಯವೆಂದು ಹೇಳುವ
ಹೀಗೆ ಪ್ರಶ್ನೆ ಮಾಡಬೇಕಲ್ಲಾ [೧] ಮನಸ್ಸು ನಿರವಯುವ ಅದೆಯೋ
ಅಥವಾ ಸಾವಯುವ ಅದೆಯೋ ?

೧ ನಿರವಯುವವೆಂದು ಹೇಳಿದರೆ ಇದರಲ್ಲಿ ಅವಯುವರೂಪಲೇಶದ ಅಭಾ



ಇದಕ್ಕೆ ಆತ್ಮಾದೊಡನೆ ಸಂಯೋಗವು ಉಂಟಾಗುವದಿಲ್ಲ. ಇದರಿಂದ ಸ್ವತಃ ಜಡ ಆತ್ಮಾವಿಷಯದಲ್ಲಿ ಮನಸ್ಸಂಯೋಗದಿಂದ ಜನ್ಯವಾದ ಜ್ಞಾನ ಗುಣದ ಉತ್ಪತ್ತಿಯು ಅಭಾವದಿಂದ ಜಗತ್ತಿಗೆ ಅಂಧತ್ವದ ಪ್ರಸಂಗವು ಆಗುವದು.

[೨] ಮನಸ್ಸು ಸಾವಯುವವಾಗಿದ್ದರೆ, ಇದರ ವಿಷಯದಲ್ಲಿ ಘಟಪಟಾದಿಗ ಳಂತೆ ಅನಿತ್ಯತ್ವವು ನಿರ್ವಿವಾದದಿಂದ ಸಿದ್ಧವಾಗುವದು.

೨. ಇಲ್ಲವೆ ಮನಸ್ಸು ನಿತ್ಯವೆಂದು ಹೇಳಿದರೆ, ಇದರ ಸುಷುಪ್ತಿಯಲ್ಲಿ ವಿಶೇಷಜ್ಞಾನದ ಜನಕರೂಪ ಲಿಂಗದ ಅಭಾವದಿಂದ ಗನ್ಯವಾದ, ತನ್ನ ಉಪಾದಾನ ಅಜ್ಞಾನದಲ್ಲಿ ಲಯವಾಗುವದು. ಇದು ಆಗಲಿಕ್ಕೆ ಬಾರದು ಇದರಿಂದ ಸಹ ಮನಸ್ಸು ಅನಿತ್ಯವದೆ.

೩. ನೈಯಾಯಿಕರು ಹೇಳುವದೇನಂದರೆ, ಆತ್ಮಾ ಮತ್ತು ಮನಸ್ಸಿನ ಸಂಯೋಗವು ಜ್ಞಾನದ ಸಾಧನವಾಗಿದೆ. ಈ ಸಂಯೋಗವು ಒಂದರ ಕ್ರಿಯೆಯಿಂದ, ಅಥವಾ ಎರಡರ ಕ್ರಿಯೆಯಿಂದ ಆಗುವದು. ವಿಭು ಆತ್ಮಾದಲ್ಲಿ ಈ ಕ್ರಿಯೆಯು ಎಂದೂ ಸಹ ಆಗುವದಿಲ್ಲ. ಮೋಕ್ಷಕಾಲದಲ್ಲಿ ಇಲ್ಲವೆ ಸುಷುಪ್ತಿಕಾಲದಲ್ಲಿ ಭೋಗದ ಸನ್ಮುಖ ಅದೃಷ್ಟದ ಅಭಾವದಿಂದ ಮನದಲ್ಲಿ ಸಹಾ ಕ್ರಿಯೆಯು ಆಗುವದಿಲ್ಲ. ಇದರಿಂದ ಮನಸ್ಸಂಯೋಗದ ಅಭಾವದಿಂದ ಸುಷುಪ್ತ್ಯಾದಿಗಳಲ್ಲಿ ವಿಶೇಷಜ್ಞಾನವು ಆಗುವದಿಲ್ಲ.

ಈ ಕಥನವು ಸರಿಯಲ್ಲ, ಕಾರಣವೇನಂದರೆ, ವ್ಯಾಪಕವಾದ ವಸ್ತುವಿರುವದೋ, ಇದರೊಡನೆ ಸರ್ವ ವಸ್ತುಗಳ ಕ್ರಿಯೆಯಿಂದ ಹೊರ್ತು ಸಹಾ ಸದಾ ಸಂಯೋಗವಿರುವದು. ವ್ಯಾಪಕವಾದ ಆಕಾಶದೊಡನೆ ಹೇಗೆ ಕ್ರಿಯಾರಹಿತ ಪರ್ವತದ ಇಲ್ಲವೆ ವೃಕ್ಷಪಾಷಾಣಾದಿಗಳ ಸಂಯೋಗವು ಸರ್ವದಾ ಇರುವದೋ ಹಾಗೆಯೇ ಮೋಕ್ಷಕಾಲದಲ್ಲಿ ಇಲ್ಲವೆ ಸುಷುಪ್ತಿಯಲ್ಲಿ ಯಾವ ಕ್ರಿಯಾರಹಿತ ಮನದ ವಿದ್ಯಮಾನವು ಸಹಾ ಇದ್ದರೂ ಇದರ ವಿಭು ಆತ್ಮಾದೊಡನೆ ಸಂಯೋಗದ ಸಿದ್ಧಿಯಿಂದ ವಿಶೇಷ ಜ್ಞಾನವು ಆಗಲಿಕ್ಕೇಬೇಕು. ಇದು ಆಗುವದಿಲ್ಲ, ಇದರಿಂದ ಸುಷುಪ್ತಿ ಮೊದಲಾದ ಕಾಲಗಳಲ್ಲಿ ಮನದ ವಿಲಯ. ಅವಶ್ಯವಾಗುವದು ಪುನಃ ಜಾಗ್ರತ ಕಾಲದಲ್ಲಿ ಇದರ ಉತ್ಪತ್ತಿಯು ಆಗುವದು.

ಈ ರೀತಿಯಿಂದ ಉತ್ಪತ್ತಿ ನಾಶವುಳ್ಳದ್ದಾಗಿರುವದರಿಂದ ಮನಸ್ಸು ಅನಿತ್ಯವದೆ. ಇದರ ನಿತ್ಯತೆಯ ಕಥನವು ಪ್ರಲಾಪ ಮಾತ್ರ ಅದೆ.

೪. ೧ ಆತ್ಮಾದೊಡನೆ ಮನಸ್ಸಿನ ಸಂಯೋಗದಿಂದ ಜ್ಞಾನವಾಗಲು ಸುಷುಪ್ತಿಯಲ್ಲಿ ಇದರ ಸಂಯೋಗದ ಅಭಾವ ವುಂಟಾಗಲು ಜಾಗರಣ ಕಾಲದಲ್ಲಿ ಉತ್ಥಾನ ಸಮಯದಲ್ಲಿ ಉಂಟಾಗತಕ್ಕ ಸುಖವು ಮತ್ತು ಅಜ್ಞಾನದ ಸ್ಮೃತಿಯ ಮೂಲಭೂತ ಅನುಭವವು ಸಿದ್ಧವಾಗುವದು. ಇದು ಆಗಲಿಕ್ಕೇ ಬಾರದು.

೨. ಅಥವಾ—ಆತ್ಮಾದೊಡನೆ ಮನದ ಸಂಯೋಗದಿಂದ ಯಾವ ಜ್ಞಾ ವಾಗುವದೋ, ಅದು ನ್ಯಾಯಮತದಲ್ಲಿ ಮನಸ್ಸನ್ನು ಅಣುರೂಪವೆಂದು ಹೇ ದೆ. ಇದರಿಂದ ಇದರ ಸಂಯೋಗದಿಂದ ಜನ್ಯವಾದ ಜ್ಞಾನವು ಸಹಾ, ಶರೀ ಏಕದೇಶದಲ್ಲಿಯೇ ಆಗುವದು. ಸರ್ವಶರೀರದಲ್ಲಿ ಆಗುವದಿಲ್ಲ. ಇದರಿಂದ ಸ ಶರೀರದಲ್ಲಿ ಉಂಟಾದ ಕಂಟಕ ವೇಧದ ಪೀಡೆಯು ಭಾವವು ಆಗಲಿಕ್ಕೇ ಬಾರ

೩. ಯಾವ ಮನವನ್ನು ಸಿದ್ಧಾಂತದಂತೆ ಸರ್ವಶರೀರದಲ್ಲಿ ವರ್ತಿಸುವ ದ್ದೆಂದು ತಿಳಿದರೆ, ಯದ್ಯಪಿ ಸರ್ವಶರೀರದಲ್ಲಿ ಪೀಡೆಯು ಅಸಂಭವವಿಲ್ಲ. ಆ ಸುಷುಪ್ತಿಯಲ್ಲಿ ಸುಖ ಮತ್ತು ಅಜ್ಞಾನದ ಸಾಮಾನ್ಯ ಜ್ಞಾನವದೆ. ಇದರ ಭವ ವಾಗುವದು.

ಇದರಿಂದ ಆತ್ಮದೊಡನೆ ಮನಸ್ಸಂಯೋಗದಿಂದ ಜ್ಞಾನವಾಗುವದಿಲ್ಲ ಆತ್ಮದ ಸ್ವರೂಪಭೂತ ಉತ್ಪತ್ತಿನಾಶದಿಂದ ರಹಿತವಾದ ಜ್ಞಾನವು ಇ ಎಂದು ತಿಳಿಯಬೇಕು.

೧

‖ ೪೪೪ ‖ ಕೆಲವು ಏಕದೇಶೀಯರು, ತ್ವಚೆಯೊಡನೆ ಮನದ ಸಂಯೋ ಗವಾಗುವದು ಜ್ಞಾನಕ್ಕೆ ಹೇತುವದೆ; ಆತ್ಮದ ಸಂಯೋಗವು ಜ್ಞಾ ಹೇತುವಲ್ಲ. ಸುಷುಪ್ತಿಯಲ್ಲಿ ಮನಸ್ಸು ಪುರೀತ ನಾಮಕ ನಾಡಿಯಲ್ಲಿ ವೇಶಮಾಡುತ್ತದೆ. ಆದರಿಂದ ತ್ವಚೆಗೂ ಮನಸ್ಸಿಗೂ ಸಂಯೋಗವಾ ದಿಲ್ಲ. ಈ ಕಾರಣದಿಂದ ಸುಷುಪ್ತಿಯಲ್ಲಿ ಜ್ಞಾನವಾಗುವದಿಲ್ಲ. ಎಂ ಹೇಳುವ ಇವರ ಮತದಲ್ಲಿ ತ್ವಚೆಗೆ ಸಂಯೋಗವಾದ ಮನಸ್ಸೇ ಜ್ಞಾ ದ್ವಾರಾ ದುಃಖಕ್ಕೆ ಕಾರಣವಾಗಿರುವದರಿಂದ ದುಃಖ ಆದೆ, ಕೇವಲ ಸ್ಸು ಅಲ್ಲ. ಮೋಕ್ಷದಲ್ಲಿ ತ್ವಚೆಯನಾಶವಾಗುವದರಿಂದ, ಅದ ಸಂಯೋಗವಿರುವದಿಲ್ಲ., ಈ ಕಾರಣದಿಂದಜ್ಞಾನವಾಗುವದಿಲ್ಲ. ಇದ ಮೋಕ್ಷಕಾಲದಲ್ಲಿ ಮನಸ್ಸು ಇದ್ದರೂ ಸಹ ದುಃಖಕ್ಕೆ ಕಾರಣವಾದ ಜ್ಞಾನವು ತ್ವಚೆಯೊಡನೆ ಸಂಯೋಗವುಳ್ಳ ಮನಸ್ಸಿನ ನಾಶವಾಗುವದ ದಿಂದ ಅದರ ನಾಶವಾಗುತ್ತದೆ.

ಈರೀತಿ ಮೋಕ್ಷಕಾಲದಲ್ಲಿ ಪರಮಾತ್ಮನೊಡನೆ ಭಿನ್ನವಿಲ್ಲ

೨

ದುಃಖರಹಿತವಾಗಿ ವ್ಯಾಪಕವಾಗಿ ಆತ್ಮವು ಜಡರೂಪವಾ ವಾಗುತ್ತದೆ. ಕಾರಣವೇನಂದರೆ-ಜ್ಞಾನಗುಣದಿಂದ ಆತ್ಮದ ಪ್ರ ವಾಗುವದು. ಈ ಇಂದ್ರಿಯ ಜನ್ಯಜ್ಞಾನದ ನಾಶವು ಮೋಕ್ಷ ಆಗುತ್ತದೆ. ಇದರಿಂದ ಪ್ರಕಾಶರಹಿತ ಜಡರೂಪವುಳ್ಳದ್ದಾಗಿ ಆ ಮೋಕ್ಷಕಾಲದಲ್ಲಿ ಸ್ಥಿತವಾಗುವದು.

ಇದು ನ್ಯಾಯಮತೀಯರ ಸಿದ್ಧಾಂತವದೆ.



ಟಿಪ್ಪಣಿ—೧ ನ್ಯಾಯಮತದ ಏಕದೇಶಿಯರು ತ್ವಕ್ಕಿನೊಡನೆ ಮನಸ್ಸಂಯೋಗಕ್ಕೆ ಜ್ಞಾನದ ಕಾರಣವೆಂದು ಹೇಳುವರು. ಇದು ಅಸಂಗತವಾದದ್ದು. ಕಾ ರಣವಾಗುವುದೇನಂದರೆ;=ಅ ಮನದೊಡನೆ ಆತ್ಮದ ಸಂಯೋಗವು ಜ್ಞಾನ ಕ್ಕೆ ಕಾರಣವಾದದ್ದು ತಿಳಿಯುವದಕ್ಕೆ ಹೇಗೆ ಪ್ರಮಾಣವಿರುವದಿಲ್ಲವೋ, ಹಾಗೆ ತ್ವಕ್ಕಿನೊಡನೆ ಮನದಸಂಯೋಗವು ಜ್ಞಾನಕ್ಕೆ ಸಾಧನವಲ್ಲ, ಎಂದು ತಿಳಿದುಕೊ ಳ್ಳುವದಕ್ಕೂ ಶ್ರುತ್ಯಾದಿ ಪ್ರಮಾಣಗಳಿಲ್ಲ ಬ ಯಾವದು ಪ್ರಮಾಣದಿಂದ ಅಸಿದ ವಾದದಿದ್ದು, ಸ್ವಕಪೋಲಕಲ್ಪಿತ ಅರ್ಥವನ್ನು ವ್ಯಾಸಮಾಡಲಿಕ್ಕೆ ಯೋಗ್ಯವಾ ದದ್ದಾದರೆ ಅದನ್ನು ಪ್ರಮಾಣವೆನ್ನಲಿಕ್ಕೆಲ್ಲ ಒಬ್ಬನು ಈರೀತಿಯಾಗಿ ಹೇಳುತ್ತಿರು ವನು, "ನಾನು, ಮೃಗತೃಷ್ಣಾಜಲದಲ್ಲಿ ಸ್ನಾನಮಾಡಿ ಆಕಾಶ ಪುಷ್ಪ ಮಕುಟ ವನ್ನು ಧಾರಣಮಾಡಿಕೊಂಡು ಶಶಶೃಂಗದ ಧನುಸ್ಸನ್ನು ಕೈಯಲ್ಲಿ ಹಿಡಿದು ಕೊಂಡು ವಂಧ್ಯಾಪುತ್ರನು ಸಂಗ್ರಾಮದಲ್ಲಿ ಹೋಗುತ್ತಿರುವದನ್ನು ನೋಡಿದೆನು. ಎಂಬ ಈ ಮಾತಿನ ಅರ್ಥವನ್ನು ಸಹ ಸತ್ಯವೆಂದು ತಿಳಿಯಲು ಯೋಗ್ಯವಿ ರುವ ಈದರಿಂದ ತ್ವಕ್ಕಿನೊಡನೆ ಮನದ ಸಂಯೋಗವು ಜ್ಞಾನದ ಹೇತುವಲ್ಲ ಆ ಅಥವಾ ಸುಷುಪ್ತಿಯಲ್ಲಿ ತ್ವಕ್ಕು ಮತ್ತು ಮನಸ್ಸಿನ ಸಂಯೋಗದ ಅಭಾವ ವಿದ್ದ ರೂ ಬುದ್ಧಿವಂತರ ಬುದ್ಧಿಗೆ ಗಮ್ಯವಾದ ಸುಖವೂ, ಮತ್ತು ಅಜ್ಞಾನದ ಸಾಮಾ ನ್ಯಜ್ಞಾನವೂ ಆಗುವದು. ಇದು ಆಗಲಿಕ್ಕೇ ಬಾರದು ಈ ಕಾರಣದಿಂದ ತ್ವ ಚಾ ಮತು ಮನದ ಸಂಯೋಗವು ಜ್ಞಾನದ ಸಾಧನವಲ್ಲವಾದರೂ ಆತ್ಮದಸ್ವರೂ ಪಭೂತವೇ ಜ್ಞಾನವು ಎಂದು ತಿಳಿಯುವದು, ಯೋಗ್ಯವದೆ.

೨. ನ್ಯಾಯ ಮತದಲ್ಲಿ ಆತ್ಮವನ್ನು ವ್ಯಾಪಕವೆಂದು ತಿಳಿದು, ಜಡವೆಂದು ನಿರ್ಧರಿಸಿರುವರು. ಇದು ಶ್ರುತಿ ವಿರುದ್ಧವದೆ. ಕಾರಣವೇನಂದರೆ ಅ ಇಲ್ಲಿ ಸ್ವ ಪ್ನದಲ್ಲಿ ಆ ಪುರುಷನು ಸ್ವಯಂಜ್ಯೋತಿ ಸ್ವಪ್ರಕಾಶಕ ಆಗುವನು ಅಲ್ಲಿ ಸೂರ್ಯಾ ದಿಜ್ಯೋತಿಗಳ ಅಭಾವದಿಂದ ಸ್ಪಷ್ಟವಾಗಿ ತಿಳಿಯಲ್ಪಡುವನು ಮತು ಬ ಯಾವ ಪುರುಷನು ಅಲ್ಲಿ ಪ್ರಾಣ ಹೃದಯದಲ್ಲಿ ಅಂತರ್ಜ್ಯೋತಿ, ಪ್ರಕಾಶ ರೂಪ ನಿತ್ಯ ವಸ್ತೋ ಮತ್ತು ಕ ಸತ್ಯ ಜ್ಞಾನ ಅನಂತರೂಪ ಬ್ರಹ್ಮನು ಪರಿಪೂರ್ಣವಸ್ತು ಇದ್ದಾನೆ. ಇತ್ಯಾದಿ ಅನೇಕ ಶ್ರುತಿವಾಕ್ಯಗಳಲ್ಲಿ ವ್ಯಾಪಕನಾದ ಆತ್ಮನ ಚೇತನರೂ ಪತ್ವವು ಕೇಳಬರುವದು. ಮತ್ತು ಇದರಲ್ಲಿ ಯುಕ್ತಿ ಅದೆ. ಇದು ಮುಂದೆ ೪೫೬-ರಿಂದ ೪೫೮-ರ ಪರಿಯಂತ ಇದ್ದ ಅಂಕೆಗಳವಾಕ್ಯಗಳಲ್ಲಿ ಗ್ರಂಥಕಾರನು ಹೇಳಿರುವನು. ಈ ಕಾರಣದಿಂದ ಆತ್ಮವು ಸ್ವರೂಪದಿಂದ ಜಡವದೆ. ಈ ನ್ಯಾ ಯದ ಉಕ್ತಿಯು ಅಸಂಗತವದೆ.

‖೪೪೫‖ ನ್ಯಾಯಮತದಲ್ಲಿ ಪೂರ್ವೋಕ್ತಪ್ರಕಾರದಿಂದ ಸುಖದುಃಖ ಗಳು, ಮತ್ತು ಬಂಧಮೋಕ್ಷಗಳು ಆತ್ಮನಿಗೆ ಆಗುವವು ಈ ಕಾರಣದಿಂದ ಆತ್ಮವು ಅನೇಕವಾಗಿದೆ, ಮತ್ತು ಸಂಪೂರ್ಣವ್ಯಾಪಕವದೆ.

ಸರ್ವ ಅಲ್ಪಪದಾರ್ಥಗಳಿಂದ ಯಾವ ಸಂಯೋಗವು, ಇದು ನ್ಯಾಯ

ಮತದಲ್ಲಿ ವ್ಯಾಪಕತ್ವದ ಲಕ್ಷಣವದೆ ಯಲ್ಲದೆ ಸ್ವಜಾತೀಯ ವಿಜಾ
ಸ್ವಗತಭೇದಗಳ ಅಭಾವವು ವ್ಯಾಪಕತ್ವದ ಲಕ್ಷಣವಲ್ಲ. ಕಾ
ದರೆ-ನ್ಯಾಯಮತದಲ್ಲಿ ಆತ್ಮವು ನಿರವಯವವಾಗಿದ್ದರೂ ಇದ
ತಭೇದಗಳ ಅಭಾವವು ಅದರಲ್ಲಿ ಅದೆ. ಆದರೂ ಸಹ ಸಜಾತೀಯ
ವಿಜಾತೀಯಭೇದಗಳ ಅಭಾವವಿಲ್ಲ. ಆದರೆ (೧) ಸಜಾತೀಯ
ಆತ್ಮವೂ ಅದರಭೇದವೂ, ಆತ್ಮಾದಲ್ಲಿ ಅದೆ. ಮತ್ತು
ವಿಜಾತೀಯ ಘಟಾದಿಗಳ ಭೇದವೂ ಸಹಾ ಆತ್ಮಾದಲ್ಲಿ ಅದೆ. ಈ
ಗಳಿಂದ ಸಜಾತೀಯ ಸ್ವಗತಭೇದಗಳ ಅಭಾವವು ವ್ಯಾಪಕತ್ವದ
ವಲ್ಲ. ಆದರೆ ಸರ್ವ ಅಲ್ಪಪದಾರ್ಥಗಳೊಡನೆ ಸಂಯೋಗವೇ ವ್ಯಾಪಕ
ಲಕ್ಷಣವದೆ ಈ ವಿಷಯದಲ್ಲಿ ಕೆಲವರು ಆಕ್ಷೇಪಣೆಯನ್ನು ಮಾಡು
ನ್ಯಾಯಮತದಲ್ಲಿ ಆತ್ಮಾದಂತೆ ಆಕಾಶ, ಕಾಲ, ದಿಕ್ಕುಗಳು ಸ
ಪಕವಾಗಿವೆ. ಮತ್ತು ಪರಮಾಣುಗಳು ಸೂಕ್ಷ್ಮವಿವೆ. ನಿರವಯ
ಗಿವೆ. ಇವುಗಳಿಗೂ ಸರ್ವವ್ಯಾಪಕ ಪದಾರ್ಥಗಳಿಗೂ ಸಂಯೋಗವು
ಗುವದಿಲ್ಲ. ಕಾರಣವೇನಂದರೆ;-ಒಂದು ಕಾರಣದಿಂದ ಪರಮಾಣು
ಸಾವಯವವಿದ್ದರೆ. ಅವುಗಳ ಸಂಯೋಗವು ಅನೇಕ ಕಾರಣದಲ್ಲಿ ಕೆ
ದೇಶಗಳಲ್ಲಿ ಆತ್ಮದೊಡನೆಯೂ, ಕೆಲವು ದೇಶಗಳಲ್ಲಿ ಅನ್ಯವ್ಯಾಪಕ
ರ್ಥಗಳೊಡನೆಯೂ ಆಗುತ್ತಿತ್ತು. ಈ ಪರಮಾಣುಗಳು ಸಾವಯ
ರುವದಿಲ್ಲ; ಆದರೆ ನಿರವಯವ, ಮತ್ತು ಅತಿಸೂಕ್ಷ್ಮ ಅದೆ.
ಳೊಡನೆ ಒಂದು ದೇಶದಲ್ಲಿ ಯಾವರೂ ಸರ್ವವ್ಯಾಪಕ ಪದಾರ್ಥಗಳ
ಯೋಗದಿಂದ ಯಾವಸ್ಥಾನವು ಆಕ್ರಮಿಸಲ್ಪಟ್ಟಿರುವದೋ, ಆ ಸ್ಥಾ
ಅನ್ಯಪದಾರ್ಥಗಳ ಸಂಯೋಗವು ಸಂಭವಿಸುವದಿಲ್ಲ. ಆದರಿಂದ ಅನೇ
ಪದಾರ್ಥಗಳ ವ್ಯಾಪಕತ್ವವು ಸಂಭವಿಸುವದಿಲ್ಲ. ಯಾವದಾದರೊ
ಪದಾರ್ಥದ ವ್ಯಾಪಕತ್ವವು ಉಂಟಾಗುತ್ತದೆ; ಆಕ್ಷೇಪವು ಸಂಭವಿಸು
ದಿಲ್ಲ.ಕಾರಣವೇನಂದರೆ ಯಾವ ಸಾವಯವ ವಸ್ತುವಿನ ಸಂಯೋಗವಿರು
ದೊ ಇದು ಅನ್ಯಸಂಯೋಗದ ವಿರೋಧಿಯದೆ (೧) ಯಾವ ಪೃಥಿವಿದೇಶ
ದಲ್ಲಿ ಹಸ್ತದ ಸಂಯೋಗವಿರುವದೋ, ಆ ದೇಶದಲ್ಲಿ ಪಾದದ ಸಂಯೋ
ಗವಾಗುವದಿಲ್ಲ.ಮತ್ತು ನಿರವಯವಗಳ ಸಂಯೋಗವು ಸ್ಥಾನವನ್ನು ನಿರೋ
ಧಿಸುವದಿಲ್ಲ; ಇದರಿಂದ ಅನ್ಯಸಂಯೋಗಕ್ಕೆ ವಿರೋಧವಿಲ್ಲವೆಂಬ
ಸಿದ್ಧವಾದದ್ದು.(೨)ಘಟದೊಡನೆ ಯಾವದೇಶದಲ್ಲಿಆಕಾಶ ಸಂಯೋಗ



ದೋ, ಆ ದೇಶದಲ್ಲಿಯೇ ಕಾಲದ ಮತ್ತು ದಿಕ್ಕಿನ ಸಂಯೋಗವಾದರೂ
ದೆ. ಒಂದು ಪ್ರಸಂಗದಲ್ಲಿ ಘಟದ ದೇಶವು, ಆಕಾಲ, ಕಾಲದಿಶೆಗಳಿಂದ
ರ್ಶಾಗಿ ಇದ್ದರೆ, ಆ ದೇಶದಲ್ಲಿ ಆಕಾಶ, ಕಾಲ, ದಿಶೆಗಳ ಸಂಯೋಗವು
ಗಲಾರದು. ಆದರೆ ಹೊರಗಂತೂ ಯಾವ ದೇಶವೂ ಇಲ್ಲ. ಆದರೆ
ಸ್ವಪದಾರ್ಥಗಳ ಸರ್ವ ದೇಶವು, ಆಕಾಶ, ಕಾಲ, ದಿಶೆಗಳ ಮಧ್ಯದಲ್ಲಿಯೇ
ರುವದು. ಆದ್ದರಿಂದ ಸರ್ವಪದಾರ್ಥಗಳ ಸಂಯೋಗವು ಸರ್ವದೇಶದಲ್ಲಿ
ಕಾಶ, ಕಾಲ, ದಿಶೆಗಳೊಡನೆ ಇರುವದು.

ಈ ಪ್ರಕಾರದಿಂದ ಪರಮಾಣುಗಳಲ್ಲಿ ಸಹಾ ಒಂದೇ ದೇಶದಲ್ಲಿ ಅನೇಕ
ನಯವ ವಿಭುಗಳ ಸಂಯೋಗವುಂಟಾಗುವದು. ಯಾವ ದೋಷವಿಲ್ಲ.

೩

ರಿಂದ.ಆತ್ಮಾ ಅನೇಕ ಅದೆ, ಮತ್ತು ಸಂಪೂರ್ಣವ್ಯಾಪಕ ಅದೆ.

ಟಿಪ್ಪಣಿ. ೧. ಸಿದ್ಧಾಂತದಲ್ಲಿ ಸಜಾತೀಯ ವಿಜಾತೀ ಸ್ವಗತ ಭೇದಗಳ ಅಭಾವ
ವ್ಯಾಪಕತ್ವದ ಲಕ್ಷಣವೆಂದು ತಿಳಿಯುವರು. ಇದು "ಏಕಮೇವಾದ್ವಿತೀಯಂ
ಹ್ಮ ಒಂದೇ ಅದ್ವಿತೀಯ ಬ್ರಹ್ಮವದೆ. ಈ ಛಾಂದೋಗ್ಯದ ಷಷ್ಠಾಧ್ಯಾಯದ
ಚನಾನುಸಾರವದೆ. ಇಲ್ಲಿ ಅ. "ಏಕಂ,, ಎಂಬ ಪದದಿಂದ ಸ್ವಗತ ಭೇದದ ನಿಷೇ
ವದೆ. ಬ. "ಏವ,, ಎಂಬ ಪದದಿಂದ ಸಜಾತೀಯ ಭೇದದ ನಿಷೇಧವದೆ. ಈಲಕ್ಷ
ಗಳ ಅನುಸಾರವಾಗಿ ದೇಶಕಾಲ ವಸ್ತುಕೃತ ಅಂತರಹಿತದಿಂದ ರಹಿತವಾಗಿಯು
ದ ವ್ಯಾಪಕತ್ವದ ಲಕ್ಷಣವದೆ. ಅ. "ಏಕಂ,, ಎಂಬ ಪದದಿಂದ ದೇಶಕೃತ ಅಂತ
ದ ನಿಷೇಧವದೆ. ಕಾರಣವೇನಂದರೆ, ಯಾವ ವಸ್ತುವು ಪರಿಚ್ಛಿನ್ನವದೆಯೋ,ಅದು
ನೇಕತ್ವವುಳ್ಳದ್ದಾಗುವದಲ್ಲದೆ ಯಾವದು ವ್ಯಾಪಕವಿರುವದೊಂ ಅದು ಅನೇಕತ್ವ
ಲ್ಲದ್ದಿರುವದು. ಆದರೆ ಆಕಾಶದಂತೆ ಒಂದೇ ಅದೆ. ಆತ್ಮಾ ಪ್ರಥಮತಃ ಏಕವದೆ.
ದರಿಂದ ಪರಿಚ್ಛಿನ್ನವಿಲ್ಲ. ಆದರ ವ್ಯಾಪಕವದೆ. ಈ ಕಾರಣದಿಂದಲೇ ಆತ್ಮಾ ದೇಶ
ಕೃತ ಅಂತದಿಂದ ರಹಿತವದೆ. ಮತ್ತು ನ್ಯಾಯಮತದಲ್ಲಿ ಅನೇಕತ್ವವು ವ್ಯಾಪಕವೆಂ
ದು ಹೇಳಿದ್ದಾರೆ. ಈ ಅದ್ವೈತ ಶ್ರುತಿಯೂ ಮತ್ತು ಈಗ ಹೇಳಿದ ಯುಕ್ತಿಯೂ
ಲೋಕಾನುಭವದಿಂದ ವಿರುದ್ಧವದೆ. ಉಕ್ತಶ್ರುತಿಯಲ್ಲಿ ಇದ್ದ "ಏಕ,, ಎಂಬ ಪದ
ದ ಆತ್ಮಾದಲ್ಲಿ ದೇಶಕೃತ ಅಂತದ ನಿಷೇಧವು ಮಾಡಲ್ಪಟ್ಟಿತು. ಮತ್ತು ಬ.
ಶ್ಚಯವಾಚಕ, "ಏವಂ,, ಎಂಬ ಪದದಿಂದ ಆತ್ಮಾದ ನಿರಪೇಕ್ಷ ವ್ಯಾಪಕತ್ವದ
ಥನದಿಂದ ಆತ್ಮಾದಲ್ಲಿ ಕಾಲಕೃತ ಅಂತದ ನಿಷೇಧವು ಮಾಡಲ್ಪಟ್ಟಿತು. ಮತ್ತು
ಕ. "ದ್ವಿತೀಯ,, ಎಂಬ ಪದದಿಂದ ಭೇದದ ಪ್ರತಿಯೋಗೀ ನಿರೂಪಕ ಅನ್ಯವಸ್ತು
ನ ನಿಷೇಧದಿಂದ ಆತ್ಮಾದಲ್ಲಿ ವಸ್ತುಕೃತ ಅಂತದ ನಿಷೇಧವು ಮಾಡಲ್ಪಟ್ಟಿತು.

ಈ ಪ್ರಕಾರದಿಂದ ಸಿದ್ಧಾಂತೋಕ್ತ ಉಭಯವಿಧ ವ್ಯಾಪಕತ್ವದ ಲಕ್ಷಣವು
ಶ್ರುತ್ಯನುಸಾರವದೆ.

೨. ಇದು ನ್ಯಾಯಮತ ಉಕ್ತ ವ್ಯಾಪಕತ್ವದ ಲಕ್ಷಣವು ಶ್ರುತಿ ...
ಮತ್ತು ಲೋಕಾನುಭವಗಳಿಂದ ವಿರುದ್ಧವದೆ.

೩. ಸರ್ವವ್ಯಾಪಕ.

೧

‖೩೪೬‖ (ಸಿದ್ಧಾಂತಿ) ಸರ್ವ ವಸ್ತುಗಳಲ್ಲಿ ಪರಸ್ಪರ ಸಂಯೋ... ಎಂದು ನ್ಯಾಯಮತದ ಸಿದ್ಧಾಂತವದೆ. ಇದು ಸಮೀಚೀನವಾ... ಕಾರಣವೇನೆಂದರೆ, ಒಂದು ಪಕ್ಷದಲ್ಲಿ ವ್ಯಾಪಕವಾದ ಆತ್ಮನ... ವೆಂದು ಅಂಗೀಕರಿಸಿದರೆ ಸರ್ವಶರೀರಗಳಲ್ಲಿ ಸರ್ವ ಆತ್ಮಗಳ ಸಂ... ಅಂಗೀಕರಿಸಬೇಕಾದೀತು. ಇದರಿಂದ ಯಾವಶರೀರವು ಯಾವ... ದೆಂಬುದು ನಿಶ್ಚಯವಾಗಲಿಕ್ಕಿಲ್ಲ. ಆದರಿಂದ ಒಂದೊಂದೇ ಆತ್ಮ... ಶರೀರಗಳು ಆಗಲಿಕ್ಕೆಬೇಕು.

ಪುನಃ ಹೀಗೆ ಅಂದರೆ-ಯಾವ ಆತ್ಮದ ಯಾವ ಕರ್ಮದಿಂ... ಶರೀರವು ಉತ್ಪನ್ನವಾಗಿರುವದೋ, ಆ ಆತ್ಮದ ಆ ಶರೀರವು ಅ...

ಇದೂ ಸರಿಯಾದದ್ದಲ್ಲ. ಕಾರಣವೇನೆಂದರೆ, ಯಾವ ... ಯಾವ ಕರ್ಮವಾಗಿರುವದೋ, ಆ ಕರ್ಮಕರ್ತೃವಿನ ಸಂಬಂಧ... ಶರೀರದಲ್ಲಿ ಸರ್ವ ಆತ್ಮಗಳೊಡನೆ ಇರುವದು. ಇದರಿಂದ ಕ... ಸರ್ವ ಆತ್ಮಗಳಿಂದ ಸಂಭವಿಸಿದ್ದಾಗುವದು; ಒಂದೇ ಆತ್ಮದ್ದಾಗು...

ಮತ್ತೂ ಹೀಗೇಂದರೆ, ಯಾವ ಆತ್ಮದ ಮನಸಹಿತ ಶರೀರ... ಆತ್ಮದ ಆ ಶರೀರವದೆ. ಇದೂ ಸರಿಯಾದದ್ದಲ್ಲ. ಕಾರಣವೇನೆಂದರೆ ... ರೀರವತ್ ಮನದ ಸಂಬಂಧವಾದರೂ ಸರ್ವ ಆತ್ಮಾದೊಡನೆ ಇರುತ್ತ... ರಲ್ಲಿ ಈ ನಿಶ್ಚಯವಾಗುವದಿಲ್ಲ. ಯಾವ ಮನಸ್ಸು ಯಾವ ಆತ್ಮ... ದೆಂಬುದು ತಿಳಿಯುವದಿಲ್ಲ. ಆದರೆ ಸರ್ವ ಆತ್ಮದ ಸರ್ವಮನಸ್ಸು ... ಬೇಕು. (೨) ಇದರಂತೆ ಇಂದ್ರಿಯಗಳು ಸರ್ವ ಆತ್ಮಗಳ ಸರ್ವವೂ ... (೩) ಹೊರಗಿನ ಪದಾರ್ಥಗಳ ವಿಷಯದಲ್ಲಿ ಇದು ನನ್ನದು ಅದೆ. ಇ... ಯವರದು ಅದೆ" ಎಂಬ ವ್ಯವಹಾರವಾದರೂ ಶರೀರಿಗಳ ನಿಮಿತ್ತ... ಇರುವದು. ಈ ಶರೀರಿಗಳ ಶರೀರಗಳು ಸರ್ವ ಆತ್ಮಾಗಳ ಸರ್ವ... ರಿಂದ ಹೊರಗಿನ ಪದಾರ್ಥಗಳು ಸಹ ಸರ್ವ ಆತ್ಮಗಳ ಸರ್ವವಾ... ಬೇಕು. ಮತ್ತು ಹೀಗೆ ಅಂದರೆ, ಯಾವ ಆತ್ಮಕ್ಕೆ ಯಾವ ... ಅಹಂಬುದ್ಧಿ ಮತ್ತು ಮಮತ್ವ ಬುದ್ಧಿಗಳು ಇರುವವೋ ಆ ಆತ್ಮದ... ರವು ಅದೆ. ಈ ಅಹಂಬುದ್ಧಿ



...ಮತ್ತು ಮಮತ್ವಬುದ್ಧಿ ಇವು ಒಂದೇ ಆಗಿರುವವು. ಇದರಿಂದ ಸರ್ವ ಆತ್ಮಾ... ...ಲ್ಲಿ ಇರುವದಿಲ್ಲ; ಆದರೆ ಒಂದು ಧರ್ಮವು, ಒಂದೇ ಧರ್ಮಿಯಲ್ಲಿರುವದು. ...ರಿಂದ ಒಂದೇ ಆತ್ಮದ ಶರೀರವದೆ. ಯಾವ ಆತ್ಮದ ಯಾವ ಶರೀರ ...ವದೋ, ಆ ಶರೀರದ ಸಂಬಂಧೀ ಮನ ಇಂದ್ರಿಯ,ಮತ್ತು ಹೊರಗಿನ ...ದಾರ್ಥಗಳು ಆ ಆತ್ಮದವಿರುವವು. ಇದರಿಂದ ವ್ಯಾಪಕವಾದ ಅನೇಕ ...ತ್ಮಗಳ ಅಂಗೀಕಾರ ಮಾಡುವದರಲ್ಲಿ ಏನು ದೋಷವಿಲ್ಲ. ಈ ಕಥನವು ...ಸರಿಯಾದದ್ದಲ್ಲ; ಕಾರಣವೇನಂದರೆ ಅಹಂಬುದ್ಧಿಯು, ಒಂದೇ ದೇಹ ...ಲ್ಲಿ ಒಂದೇ ಆತ್ಮಕ್ಕೆ ಯದ್ಯಪಿ ಉಂಟಾದಾಗ್ಯೂ ಇದು ನ್ಯಾಯಮತದಲ್ಲಿ ...ಗುವದಿಲ್ಲ; ಆದರೆ ಸರ್ವ ಆತ್ಮಾಕ್ಕೆ ಒಂದೇ ದೇಹದಲ್ಲಿ ಅಹಂಬು...ಯು ಆಗಲಿಕ್ಕೆಬೇಕು. ಕಾರಣವೇನಂದರೆ ನ್ಯಾಯಮತದಲ್ಲಿ ಬುದ್ಧಿ ...ಎಂಬ ನಾಮವು ಜ್ಞಾನಕ್ಕೆ ಅದೆ. ಈ ಜ್ಞಾನಕ್ಕೆ ಅದೆ. ಈ ಜ್ಞಾನವು ...ತ್ಮ ಮತ್ತು ಮನದ ಸಂಯೋಗದಿಂದ ಉಂಟಾಗುವದು. ಈ ಮನದೊ...ಡನೆ ಸರ್ವ ಆತ್ಮಗಳಿಗೂ ಸಂಯೋಗವದೆಯಾದ್ದರಿಂದ ಮನದ ಸಂಯೋಗ...ದಿಂದ ಹೇಗೆ ಒಂದೇ ದೇಹದಲ್ಲಿ ಒಂದೇ ಆತ್ಮಕ್ಕೆ ಅಹಂಬುದ್ಧಿಯು ಉಂ...ಟಾಗುವದೋ, ಹಾಗೆ ಒಂದೇ ದೇಹದಲ್ಲಿ ಸರ್ವ ಆತ್ಮಗಳಿಗೆ ಅಹಂಬುದ್ಧಿ...ಯು ಆಗಲಿಕ್ಕೇಬೇಕು.

ಮತ್ತೆ ಹೀಗೆ ಅಂದರೆ;-ಯದ್ಯಪಿ ಮನದ ಸಂಯೋಗವು ಸರ್ವ ಆತ್ಮ...ದಲ್ಲಿ ಜ್ಞಾನ ಜನಕವಾದ ಅದೃಷ್ಟವದೆಯೋ, ಆ ಆತ್ಮಕ್ಕೆ ಅಹಂಬುದ್ಧಿ...ಯು ಆಗುವದು.

ಆದರೂ ಸರ್ವರಿಗೂ ಜ್ಞಾನವಾಗಲಿಕ್ಕೇಬೇಕು. ಕಾರಣವೇನಂದರೆ; ...ಯಾವ ವ್ಯಾಪಕವಾದ ಅನೇಕ ಅಂಗೀಕಾರಮಾಡಲು, ಒಂದು ಶರೀರದ ...ಶುಭಾಶುಭಕ್ರಿಯೆಗಳಿಂದ ಶರೀರದಲ್ಲಿ ಸ್ಥಿತ ಸರ್ವ ಆತ್ಮಗಳಲ್ಲಿಯೂ ಅದೃ...ಷ್ಟವಾಗಲಿಕ್ಕೆಬೇಕು; ಈ ಸಂಗತಿಯನ್ನು ಈ ಪೂರ್ವದಲ್ಲಿಯೇ ಹೇಳಿದ್ದೇವೆ. ...ಇದರಿಂದ ವ್ಯಾಪಕವು ಅನೇಕ ಆತ್ಮಾಗಳನ್ನು ಅಂಗೀಕಾರಮಾಡಲು,ಒಂದು ದೇಹದಲ್ಲಿ ಸರ್ವಕ್ಕೂ ಸುಖದುಃಖಗಳ ಭೋಗವು ಆಗಲಿಕ್ಕೆಬೇಕು.

ಇದರಿಂದ ವ್ಯಾಪಕವಾದ ಅನೇಕ ಕರ್ತಾ, ಭೋಕ್ತಾ, ಆತ್ಮವೇ ...ಅದೆ. ಈ ನ್ಯಾಯಮತದ ಸಿದ್ಧಾಂತವು ಸಮೀಚೀನವಾದದ್ದಲ್ಲ;

ಟಿಪ್ಪಣಿ-- [೧] ಸರ್ವ ಆತ್ಮಾದ ಸಂಯೋಗವು ವ್ಯಾಪಕ ವಸ್ತುಗಳಿಗೂ ಭಿನ್ನ ಪರಿಚ್ಛಿನ್ನ ದೇಹ, ಇಂದ್ರಿಯ, ಮನ, ಪರಮಾಣು ಮೊದಲಾದ ವಸ್ತುಗಳಿಗೂ ಇರುವದೆಂದು ಈ ವಾಕ್ಯದ ಅರ್ಥವದೆ.

೨. ಅನೇಕ ಘಟಗಳಿಗೆ ವ್ಯಾಪಕತ್ವವನ್ನು ಹೇಳುವದು ಹೇಗೆ ನಿಷ್ಫಲ... ರುವದೋ, ಹಾಗೆ ದೇಹಿಗಳಲ್ಲಿ ಕರ್ತೃತ್ವ, ಭೋಕ್ತೃತ್ವವುಳ್ಳ ಅನೇಕ ಆತ್ಮ... ವ್ಯಾಪಕತ್ವವನ್ನು ಹೇಳುವದು ನಿಷ್ಫಲವದೆ. ಇಲ್ಲವೆ ಅನೇಕ ಅಂತಃಕರಣ... ಗೀಕಾರ ಮಾಡಿದ ಭೋಗಗಳ ಸಂಕರದಲ್ಲಿ ಸಿದ್ಧಿಯಿಂದ ವ್ಯಾಪಕ ಆತ್ಮಕ್ಕೆ ... ಕತ್ವವನ್ನು ಹೇಳುವದು ನಿಷ್ಪ್ರಯೋಜನವದೆ.

॥೩೪೭॥ ನಮ್ಮ ಸಿದ್ಧಾಂತದಲ್ಲಿ ಅಂತಃಕರಣವು ಕರ್ತಾ ಭೋ... ಆದೆ. ಈ ಅಂತಃಕರಣಗಳು ಅನೇಕವದೆ; ಮತ್ತು ಇವು ವ್ಯಾಪಕ... ಯೂ, ಅಣುವಾಗಿಯೂ ಇಲ್ಲ. ಆದರೆ ಶರೀರಸಮನಾಗಿ ಆ ಅಂತಃಕ... ಪರಿಮಾಣವದೆ. ದೀಪಪ್ರಕಾಶದಂತೆ ದೊಡ್ಡ ಶರೀರಕ್ಕೆ ಪ್ರಾಪ್ತ... ಆದ ಅಂತಃಕರಣದ ಪರಿಮಾಣದ ವಿಕಾಸವಾಗುವದು. ಮತ್ತು ... ಶರೀರದಲ್ಲಿ ಸಂಕೋಚವಾಗುವದು. ಈ ಪ್ರಸಂಗವನ್ನು ಸಿದ್ಧಾಂ... ಎಂಬ ಗ್ರಂಥದ ವ್ಯಾಖ್ಯಾನದಲ್ಲಿ ಮಧುಸೂದನ ಸ್ವಾಮಿಗಳು ... ಪಾದನ ಮಾಡಿದ್ದಾರೆ. ಯಾವ ಅಂತಃಕರಣಕ್ಕೆ ... ಗವಾಗುವದು.

ಈ ಅಂತಃಕರಣವು ವ್ಯಾಪಕವೆಂದು ಅಂಗೀಕರಿಸಿದರೆ ಸರ್ವ... ಗಳು ಸರ್ವರಿಗೂ ಆಗಬೇಕು; ಮತ್ತು ಸರ್ವರಿಗೆ ಭೋಗಗಳು ... ಬೇಕು. ಈ ಅಂತಃಕರಣವು ವ್ಯಾಪಕವಲ್ಲವಾದ್ದರಿಂದ ದೋಷ... ಮತ್ತು ಅಂತಃಕರಣವು ಅಣುವೆಂದು ಅಂಗೀಕರಿಸಿದರೆ ಶರೀರದ ... ದಲ್ಲಿ ಅಂತಃಕರಣವು ಇರುವದೆಂದು ಅಂಗೀಕಾರಮಾಡಬೇಕಾಗು... ಈ ಪ್ರಸಂಗವು ಸಂಭವಿಸುವದಿಲ್ಲ; ಕಾರಣವೇನಂದರೆ, ಒಂದೇಕಾ... ಪಾದ ಮತ್ತು ಮಸ್ತಕದಲ್ಲಿ ಕಂಟಕವೇಧೆಯಾದರೆ ಎರಡೂ ಸ್ಥಾನಗ... ಒಂದೇಕಾಲದಲ್ಲಿ ಪೀಡೆಯುಂಟಾಗುವದು; ಇದು ಆಗಲಿಕ್ಕಿಲ್ಲ... ಕಾರಣವೇನಂದರೆ ಅಂತಃಕರಣವು ಅಣುವಾಗಿದ್ದರೆ ಒಂದೇಸ್ಥಾನದಲ್ಲಿ... ಯುವದಾದ್ದರಿಂದ ಯಾವಸ್ಥಾನದಲ್ಲಿ ಅಂತಃಕರಣವಿರುವದೋ ಆ ... ದಲ್ಲಿಯೇ ಪೀಡೆಯುಂಟಾಗಲಿಕ್ಕೆಬೇಕು, ಎರಡೂ ಸ್ಥಾನಗಳಲ್ಲಿ ...

ಆದ್ದರಿಂದ ಅಂತಃಕರಣವು ಅಣು, ಮತ್ತು ವ್ಯಾಪಕವಲ್ಲ; ... ಶರೀರಸಮಾನ ಅದೆ. ಆದರಿಂದ ಏನೂ ದೋಷವಿಲ್ಲ.

ಅಣು ಮತ್ತು ವ್ಯಾಪಕದಿಂದ ಯಾವದು ವಿಲಕ್ಷಣವಾಗಿ... ಅದಕ್ಕೆ ಮಧ್ಯಮ ಪರಿಮಾಣ ಅನ್ನುತ್ತಾರೆ.

॥೩೪೮॥ [ಪೂರ್ವಪಕ್ಷ]---ನ್ಯಾಯಮತದಲ್ಲಿ ಯಾವನೋ ...



ನೂತನವಾಗಿ ಹೀಗೆ ಅಂಗೀಕಾರಮಾಡಿದ್ದಾನೆ; (೧) ಆತ್ಮಗಳು ಅನೇಕವಾಗಿವೆಯಲ್ಲದೆ ಕರ್ತಾ ಭೋಕ್ತೃವಾಗಿಯೂ ಇವೆ; ವ್ಯಾಪಕವಲ್ಲ. ಅದರಿಂದ ಭೋಗಗಳ ಸಂಕರವು ಇಲ್ಲ. (೨) ಮತ್ತು ಅಣುವಾಗಿಯೂ ಇಲ್ಲ; ಇದರಿಂದ ಎರಡೂ ಸ್ಥಾನಗಳಲ್ಲಿನ ಪೀಡೆಯು ಅಸಂಭವವೂ ಇಲ್ಲ.

ಆದರೆ ಹೇಗೆ ವೇದಾಂತಮತದಲ್ಲಿ ಅಂತಃಕರಣವು ಮಧ್ಯಮ ಪರಿಮಾಣವದೆಯೋ, ಹಾಗೆ ಆತ್ಮವೂ ಸಹ ಮಧ್ಯಮ ಪರಿಣಾಮವದೆ. ಇದರಲ್ಲಿ ಹದಿನಾಲ್ಕು ಗುಣಗಳಿರುವವು.

ಟಿಪ್ಪಣಿ—(೧) ಇಲ್ಲಿರುವ ರಹಸ್ಯವೇನಂದರೆ: ಶರೀರದ ಅಂತರ್ಗತವಾಗಿರುವ ವನು ಮತ್ತು ಇಂದ್ರಿಯವೊದಲಾದ ಅಲ್ಪವಾದ ಸರ್ವ ಪದಾರ್ಥಗಳಿಂದ ಆತ್ಮದ ಸಂಯೋಗವದೆ. ಇದರಿಂದ ಮಧ್ಯಮ ಪರಿಮಾಣವುಳ್ಳ ಆತ್ಮದಲ್ಲಿ ಸಹ ನ್ಯಾಯಸಂಪ್ರದಾಯೋಕ್ತವ್ಯಾಪಕದ ಲಕ್ಷಣವು ಸಂಭವಿಸುವದು.

॥೩೪೯॥ [ಸಿದ್ಧಾಂತಿ] ಇದೂ ಸಮೀಚೀನವಾಗಿಲ್ಲ; ಕಾರಣವೇನಂದರೆ-(೧) ಆತ್ಮವು ಸಂಕೋಚವಿಕಾಸವುಳ್ಳದ್ದೆಂದು ಅಂಗೀಕರಿಸಿದರೆ ದೀಪಪ್ರಭೆಯಂತೆ ಆತ್ಮವು ವಿಕಾರಿಯಾದದ್ದೂ, ಮತ್ತು ವಿನಾಶವುಳ್ಳದ್ದೂ ಆಗುವದು. ಅದರಿಂದ ಮೋಕ್ಷಪ್ರತಿಪಾದಕಶಾಸ್ತ್ರ, ಮತ್ತು ಸಾಧನಗಳು ನಿಷ್ಫಲವಾಗುವವು. (೨) ಮಧ್ಯಮ ಪರಿಮಾಣವುಳ್ಳದ್ದೆಂದು ಅಂಗೀಕರಿಸಿ, ಸಂಕೋಚ ವಿಕಾಸವುಳ್ಳದ್ದಲ್ಲವೆಂದು ಅಂಗೀಕರಿಸದಿದ್ದರೆ ಯಾವ ಶರೀರಕ್ಕೆ ಆತ್ಮವು ಸಮಾನವಾದದ್ದೆಂದು ಅಂಗೀಕರಿಸಲೂ ನಿಶ್ಚಯವಾಗುವದಿಲ್ಲ. (೩) ಮನುಷ್ಯಶರೀರಕ್ಕೆ ಸಮಾನವಾದದ್ದೆಂದು ಅಂಗೀಕರಿಸಿದರೆ, ಯಾವಾಗ ಆತ್ಮವು ಗಜಶರೀರವನ್ನು ಹೊಂದುವದೋ ಆಗ ಗಜದ ಶರೀರದಲ್ಲಿ ಎಲ್ಲಾ ಆತ್ಮವು ಇರಲಿಕ್ಕಿಲ್ಲ. ಇದರಿಂದ ಗಜಶರೀರದ ಯಾವಭಾಗದಲ್ಲಿ ಆತ್ಮಾ ಇಲ್ಲವೋ ಆ ಭಾಗದಲ್ಲಿ ಪೀಡೆಯೂ ಆಗಬಾರದು. (೪) ಆತ್ಮವು ಗಜಶರೀರದ ಸಮಾನವೆಂದು ಅಂಗೀಕರಿಸಿದರೆ, ಅದಕ್ಕಿಂತಲೂ ಬೇರೆ ದೊಡ್ಡಶರೀರಗಳು ಇರುವವು. ಅವುಗಳ ಶರೀರದ ಒಂದು ಭಾಗದಲ್ಲಿ ಪೀಡೆಯು ಆಗಲಿಕ್ಕೆಬಾರದು; ಪ್ರಪಂಚದಲ್ಲಿ ಗಜಶರೀರಕ್ಕಿಂತ ದೊಡ್ಡದಾದ ಶರೀರವೇ ಇಲ್ಲವಾದುದರಿಂದ ಆತ್ಮನನ್ನು ಯಾವ ಶರೀರಕ್ಕೆ ಹೋಲಿಸಬೇಕು? (೫) ಸರ್ವಶರೀರಕ್ಕಿಂತಲೂ ದೊಡ್ಡದಾದದ್ದು ವಿರಾಟ್ ಶರೀರವದೆ ಇದಕ್ಕೆ ಆತ್ಮವು ಸಮಾನವಾದದ್ದೆಂದು ಅಂಗೀಕರಿಸಿದರೆ, ಸರ್ವಶರೀರಗಳು ವಿರಾಟ್ ಶರೀರದಲ್ಲಿಯೇ ಅಂತರ್ಭೂತವಾಗಿರುವವು. ಇದರಿಂದ ಸರ್ವ ದೇಹಾತ್ಮಗಳ ಸಂಬಂಧವು ಸರ್ವ ಶರೀರಗಳೊಡನೆ ಆಗುವದು; ಈ ವಿಷ

ಯಾದಲ್ಲಿ ಪೂರ್ವದಲ್ಲಿಯೇ ದೋಷವನ್ನು ಹೇಳಿದ್ದೇವೆಯಲ್ಲದೆ ಈ
ಮವು ಇರುವದು;- ಯಾವದು ಮಧ್ಯಮಪರಿಮಾಣವುಳ್ಳದ್ದು ಇರು
ಅದು ಶರೀರದಂತೆ ಅನಿತ್ಯವಾದದ್ದಿರುವದು. ಇದರಿಂದ ಆತ್ಮವು ಸಹ
ತ್ಯವಾಗುವದು. ಮತ್ತು ಅಂತಃಕರಣದನಾಶವು ಜ್ಞಾನದಿಂದ
ದೆಂದು ನಮ್ಮ ಮತದಲ್ಲಿ ಇರುವದು, ಇದರಿಂದ ಅನಿತ್ಯವಿದೆ. ಆದ
ಮಧ್ಯಮ ಪರಿಮಾಣವನ್ನು ಅಂಗೀಕರಿಸುವದರಿಂದ ದೋಷವಿಲ್ಲ.

ಈ ರೀತಿಯಿಂದ ನವೀನ ತಾರ್ಕಿಕರ ಮತವು ಸಹಾ ಸ
ನವಲ್ಲ.

---

॥೩೫೦॥ [ಪೂರ್ವಪಕ್ಷಿ] ಕೆಲವರು "ಆತ್ಮವು ಮಹ
ವುಳ್ಳದ್ದೆಂದೂ, ಅಣುವೆಂದೂ" ಅನ್ನುತ್ತಾರೆ.

[ಸಿದ್ಧಾಂತಿ] ಇದು ಸರಿಯಾದದ್ದಲ್ಲ. ಕಾರಣವೇನಂದ
ಆತ್ಮಾವನ್ನು ಕರ್ತಾ, ಭೋಕ್ತಾ ಎಂದು ಅಂಗೀಕರಿಸಿದರೆ ಅಂತಃಕ
ಅಣುಪಕ್ಷವನ್ನು ಅಂಗೀಕರಿಸಿದರೆ ಯಾವದೋಷಗಳನ್ನು ಹೇಳು
ಆ ದೋಷಗಳು ಉಂಟಾಗುವವು. (೨) ಕರ್ತಾ, ಭೋಕ್ತಾ
ಅಂಗೀಕರಿಸದಿದ್ದರೆ ಅನೇಕ ಆತ್ಮಗಳೆಂದು ಅಂಗೀಕರಿಸಿದ್ದು ನಿಷ್ಫ
ವದು.

ಆದ್ದರಿಂದ ಸರ್ವಶರೀರಗಳಲ್ಲಿ ವ್ಯಾಪಕ ಒಂದನ್ನ ಅಂಗೀ
ಮಾಡಲೇಬೇಕು.

ಕರ್ತಾ, ಭೋಕ್ತಾ ಎಂದು ಅಂಗೀಕರಿಸದಿದ್ದರೆ ನಮ್ಮ
ತದ ತ್ಯಾಗವೂ ಸಹ ಆಗುವದು. ಕಾರಣವೇನಂದರೆ- ಜ್ಞಾನ,
ದುಃಖ ಮೊದಲಾದ ಧರ್ಮಗಳು ಆತ್ಮದ ಧರ್ಮಗಳು ಅವೆ.
ಆತ್ಮಾವನ್ನು ಅಣುವೆಂದು ಅಂಗೀಕರಿಸಿದರೆ ಯಾವಶರೀರಭಾಗದಲ್ಲಿ
ಇರುವದಿಲ್ಲವೋ, ಆ ಭಾಗವು ಮೃತಸಮಾನವಾಗುವದು. ಅಲ್ಲಿ
ದಿಗಳು ಉಂಟಾಗಬಾರದು.

---

॥೩೫೧॥ ಬೇರೆ ಕೆಲವರು ಹೀಗೆ ಅನ್ನುತ್ತಾರೆ-ಆತ್ಮವು
ಯಾವಭಾಗದಲ್ಲಿದ್ದರೂ, ಅದರಜ್ಞಾನವು ಕಸ್ತೂರಿಯ ಗಂಧದಂತೆ
ದಲ್ಲೆಲ್ಲಾ ವ್ಯಾಪ್ತವಾಗುತ್ತದೆ. ಇದರಿಂದ ಶರೀರದಲ್ಲಿ ಅನು
ಕೂಲಸಂಬಂಧದ ಅನುಭವವು ಉಂಟಾಗುತ್ತದೆ.



ಇದೂ ಸರಿಯಾದದ್ದಲ್ಲ.- ಕಾರಣವೇನಂದರೆ, ಈ ನಿಯಮವಿ
ದು- ಶರೀರದ ಯಾವಭಾಗದಲ್ಲಿ ಗುಣತ್ವವು ಇರುವದೋ, ಅದನ್ನು
ಬಿಟ್ಟು ಉಳಿದದ್ದರಲ್ಲಿ ಗುಣವಿರುವದಿಲ್ಲ. ಆದರೆ ಗುಣದಲ್ಲಿಯೇ ಗುಣವಿ
ರುವದು. ರೂಪವು ಹೇಗೆ ಘಟಾದಿಗಳಿಂದ ಹೊರಗೆ ಇರುವದಿಲ್ಲವೋ,
ಹಾಗೆ ಆತ್ಮದಿಂದ ಹೊರಗೆ ಜ್ಞಾನವು ಸಹಾ ಇರುವದಿಲ್ಲ. ಕಸ್ತೂರಿಯ
ಸೂಕ್ಷ್ಮಭಾಗವು ಎಷ್ಟುಭಾಗದಲ್ಲಿ ವ್ಯಾಪ್ತವಾಗಿರುವದೋ ಅಷ್ಟುದೇಶದಲ್ಲಿ
ಗಂಧವೂ ವ್ಯಾಪ್ತವಾಗಿರುವದು. ಇದರಿಂದ ಕಸ್ತೂರಿಯ ದೃಷ್ಟಾಂ
ತವೂ ಸರಿಯಾಗಲಿಲ್ಲ. ಈ ಕಾರಣದಿಂದ "ಆತ್ಮಾ ಅಣು ಇದೆ,, ಎಂಬ
ಪಕ್ಷವೂ ಸರಿಯಾದದ್ದಲ್ಲ ಮತ್ತು;

ಕೆಲವು ಶ್ರುತಿಗಳಲ್ಲಿ ಆತ್ಮವು ಅತ್ಯಂತ ಅಣುವಿಗಿಂತಲೂ ಅಣು
ವಾಗಿರುವದೆಂದು ಉಲ್ಲೇಖವುಂಟು; ಇದು ದುರ್ವಿಜ್ಞೇಯವಾದದ್ದದೆ
ಎಂದು ಹೇಳುವರು. ಅತ್ಯಂತ ಅಣುವಸ್ತುವಿನ ಜ್ಞಾನವು ಮಂದದೃಷ್ಟಿ
ಯುಳ್ಳ ಪುರುಷನಿಗೆ ಆಗುವದಿಲ್ಲ. ಇದರಂತೆ ಬಹಿರ್ಮುಖ ಪುರುಷನಿಗೂ
ಸಹ ಆತ್ಮಜ್ಞಾನವು ಆಗುವದಿಲ್ಲ. ಈ ಕಾರಣದಿಂದ ಅಣುಸಮಾನವಾಗಿ
ದೆಯೆಂದು ಶ್ರುತಿಯ ಅಭಿಪ್ರಾಯವುಂಟು. ಆದರೆ, ಆತ್ಮಾ ಅಣು ಇದೆ.
ಎಂಬ ಅಭಿಪ್ರಾಯವಲ್ಲ. ಕಾರಣವೇನೆಂದರೆ ನಮ್ಮ ವೇದಗಳಲ್ಲಿ ಬಹಳ
ಸ್ಥಳಗಳಲ್ಲಿ ಆತ್ಮವು ವ್ಯಾಪಕವೆಂದು ಪ್ರತಿಪಾದನ ಮಾಡಲ್ಪಟ್ಟಿರುವದು
ಈ ಕಾರಣದಿಂದ ಅಣುವಲ್ಲ. ಈ ರೀತಿಯಿಂದ "ಆತ್ಮವು ವ್ಯಾಪಕ, ಮ
ಧ್ಯಮ, ಪರಿಮಾಣ, ಅಥವ ಅಣು, ಮತ್ತು ಅನೇಕವಾಗಿದೆ,, ಎಂದು ಹೇ
ಳುವದು ಸರಿಯಾದದ್ದಲ್ಲ.

ಟಿಪ್ಪಣಿ— (೧) "ಅಣೋರಣೀಯಾನ್ ಮಹತೋಮಹೀಯಾನ್"
ಈ ಶ್ರುತಿಯ ಅರ್ಥವೇನೆಂದರೆ—೧. ಪೃಥ್ವಿಗಿಂತಲೂ ಜಲವು ಸೂಕ್ಷ್ಮವದೆ, ಮತ್ತು
ವ್ಯಾಪಕವದೆ. ೨. ಜಲಕ್ಕಿಂತಲೂ ತೇಜವು ಸೂಕ್ಷ್ಮವದೆ, ಮತ್ತು ವ್ಯಾಪಕವದೆ
೩. ತೇಜಕ್ಕಿಂತಲೂ ವಾಯುವು ಸೂಕ್ಷ್ಮವದೆ, ಮತ್ತು ವ್ಯಾಪಕವದೆ. ೫. ಆಕಾ
ಶಕ್ಕಿಂತಲೂ ಮಾಯಾಸೂಕ್ಷ್ಮವದೆ ಮತ್ತು ವ್ಯಾಪಕವದೆ. ಮಾಯೆಗಿಂತಲೂ
ಆತ್ಮಾ ಸೂಕ್ಷ್ಮವದೆ ಮತ್ತು ವ್ಯಾಪಕವದೆ. ೭. ಶ್ರುತಿಗಳಲ್ಲಿ ಆತ್ಮವು ಸರ್ವಕ್ಕಿಂ
ತಲೂ ಸೂಕ್ಷ್ಮವಾದದ್ದೆಂತಲೂ ವ್ಯಾಪಕವಾದದ್ದೆಂತಲೂ ಉಲ್ಲೇಖವದೆ.

ಇದೇ ಅರ್ಥವನ್ನು ಉಪದೇಶಸಹಸ್ರಿಯಲ್ಲಿ ಭಗವಾನ್ ಭಾಷ್ಯಕಾರನು
ಪ್ರತಿಪಾದನ ಮಾಡಿರುವನು. ಮತ್ತು ಇದರ ಅನುಸಾರವಾಗಿಯೇ ನಾನು
ವಿಚಾರಚಂದ್ರೋದಯದ ದಶಮಕಾಲದಲ್ಲಿ ಯುಕ್ತಿಸಹಿತ ಬರೆದಿರುವೆನು. ಇದ
ರಿಂದ ಆತ್ಮ ಅಣುವದ ಎಂಬ ಕಥನವು ನಿಷ್ಫಲವಾದದ್ದು.

||೩೫೨|| ಪರಿಶೇಷದಿಂದ ವ್ಯಾಪಕವಾದ ಆತ್ಮಾ ಒಂದೇ ಅದ… ರಲ್ಲಿ ಧರ್ಮ, ಅಧರ್ಮ, ಸುಖದುಃಖ, ಮತ್ತು ಬಂಧಮೋಕ್ಷ… ಅಂಗೀಕಾರಮಾಡಿದರೆ ಕೆಲವರಿಗೆ ಸುಖ, ಕೆಲವರಿಗೆ ದುಃಖ, ಕೆಲ… ಬಂಧ, ಕೆಲವರಿಗೆ ಮೋಕ್ಷ, ಹೀಗೆ ವ್ಯವಹಾರವು ಆಗಲಿಕ್ಕಿಲ್ಲ. ಕಾ… ರಣದಿಂದ ಧರ್ಮಾಧರ್ಮಗಳು ಬುದ್ಧಿಯ ಧರ್ಮವಾಗಿವೆ.

ಬುದ್ಧಿಯು ಯದ್ಯಪಿ ಜಡವದೆ; ಇದರಿಂದ ಇದರಲ್ಲಿ… ಧರ್ಮಸುಖಾದಿಗಳು ಉಂಟಾಗುವದಿಲ್ಲ. ತಥಾಪಿ ಆತ್ಮದ ಧ… ವದಿಲ್ಲ. ಈ ಅಭಿಪ್ರಾಯದಿಂದಲೇ ಬುದ್ಧಿಯ ಧರ್ಮವನ್ನು ಹೇ…

ಬುದ್ಧಿ ಮತ್ತು ಸುಖಾದಿಗಳು ಆತ್ಮದಲ್ಲಿ ಅಧ್ಯಸ್ತ… (೧) ಯಾವ ವಸ್ತುವು ಯಾವದರಲ್ಲಿ ಅಧ್ಯಸ್ತವಾಗಿರುವದೋ ಅ… ರಲ್ಲಿ ಸತ್ಯವಲ್ಲ. ಸರ್ಪವು ಹೇಗೆ ರಜ್ಜುವಿನಲ್ಲಿ ಇರುವದಿಲ್ಲವೋ ಹಾ… ಬುದ್ಧಿ ಮತ್ತು ಸುಖಾದಿಗಳು ಆತ್ಮನಲ್ಲಿ ಇರುವದಿಲ್ಲ. ಮತ್ತು ಅಧ್ಯಸ್ತವಸ್ತುವೂ ಸಹ ಯಾವ ಆಶ್ರಯದಲ್ಲಿಯೂ ಇರುವದಿಲ್ಲ. ಈ… ಣದಿಂದ ಬುದ್ಧಿಯು ಸಹ ಸುಖದುಃಖಾದಿಗಳ ಆಶ್ರಯವಾಗಿರುವ… ಆದರೆ (೨) ಅಜ್ಞಾನವು ಶುದ್ಧಚೇತನದಲ್ಲಿ ಅಧ್ಯಸ್ತವದೆ. ಮತ್ತು ಅಂತಃಕರಣವು ಅಜ್ಞಾನ ಉಪಹಿತದಲ್ಲಿ ಅಧ್ಯಸ್ತವದೆ. ಮತ್ತು ಅಂ… ಕರಣ ಉಪಹಿತದಲ್ಲಿ ಧರ್ಮಾಧರ್ಮ, ಸುಖದುಃಖ, ಬಂಧ ಮೋಕ್ಷ… ಅಧ್ಯಸ್ತವಾಗಿವೆ.

ಈ ಪ್ರಕಾರದಿಂದ ಆತ್ಮನಿಗೆ ಧರ್ಮಾದಿಗಳ ಅಧಿಷ್ಠಾನತ್ವವು… ತಃಕರಣವು ಉಪಾಧಿಯದೆ. ಈ ಕಾರಣದಿಂದ ಧರ್ಮಾದಿಗಳ ಅಂ… ರಣದ ಧರ್ಮವೆಂದು ಹೇಳಿದರು.

ಟಿಪ್ಪಣಿ— [೧] ಬಹಳ ಅರ್ಥಗಳು ಪ್ರಾಪ್ತವಾಗಲು ಅನ… ನಿಷೇಧವುಂಟಾಗಿ ಅವಶೇಷವಾಗಿ ನಿಂತು ಒಂದೇ ಅರ್ಥವು ನಿಶ್ಚಯವಾ… ಅದಕ್ಕೆ ಪರಿಶೇಷ ಅನ್ನುತ್ತಾರೆ. ಈ ಪರಿಶೇಷದಿಂದ—

||೩೫೩|| ಒಂದು ಪಕ್ಷದಲ್ಲಿ ಅಂತಃಕರಣ ವಿಶಿಷ್ಟದಲ್ಲಿ ಧ… ದಿಗಳ ಧ್ಯಾನವನ್ನು ಹೇಳಿದರೆ ಅದು ಸಮಂಜಸವಾಗುವದಿಲ್ಲ. ಕಾ… ವೇನಂದರೆ ವಿಶೇಷಣಯುಕ್ತವಾದ ನಾಮವು ವಿಶಿಷ್ಟವಾಗಿ ಅದ… ಧರ್ಮಾದಿಗಳ ಅಧ್ಯಾಸ ಅಧಿಷ್ಠಾನವಾದ ವಿಶೇಷಣವದೆ ಎಂದು ಈ…



…ದರೆ ಅಂತಃಕರಣವು ಸಹಾ ಧರ್ಮಸುಖಾದಿಗಳ ಅಧಿಷ್ಠಾನವಾಗುವದು. ಈ ಪ್ರತಿಪಾದನವು ಸಿದ್ಧವಾಗುವದಿಲ್ಲ. ಕಾರಣವೇನೆಂದರೆ ಮಿಥ್ಯಾವಸ್ತುವು ಅಧಿಷ್ಠಾನವಾಗುವದಿಲ್ಲ. ಇದರಿಂದ ಆತ್ಮದಲ್ಲಿ ಧರ್ಮಾದಿಗಳ ಅಧ್ಯಾಸದ ಅಂತಃಕರಣವು ವಿಶೇಷಣವಲ್ಲ; ಆದರೆ ಉಪಾಧಿಯದೆ. (೧) ಉಪಾಧಿಯ ಸ್ವಭಾವವು ಈ ರೀತಿಯಾಗಿ ಇರುವದು;- ತಾನು ತಟಸ್ಥನಾಗಿ ಎಷ್ಟು ಪ್ರದೇಶದಲ್ಲಿ ತಾನು ಇರುವದೋ, ಅಷ್ಟುಪ್ರದೇಶದಲ್ಲಿ ಇದ್ದವಸ್ತುಗಳನ್ನು ತಿಳಿಸುವದು ಮತ್ತು (೨) ವಿಶೇಷಣದ ಸ್ವಭಾವವು ಈ ರೀತಿಯಾಗಿ ಇರುವದು;=ಎಷ್ಟು ಪ್ರದೇಶದಲ್ಲಿ ತಾನಿರುವದೋ, ಅಷ್ಟುಪ್ರದೇಶಗಳಲ್ಲಿದ್ದ ವಸ್ತುಗಳನ್ನು ತನ್ನ ಸಹಿತವಾಗಿ ತಿಳಿಸುವದು. (೩) ವಿಶೇಷಣವುಳ್ಳದ್ದಕ್ಕೆ ವಿಶಿಷ್ಟವೆನ್ನುತ್ತಾರೆ ಮತ್ತು (೪) ಉಪಾಧಿಯುಳ್ಳದ್ದಕ್ಕೆ ಉಪಹಿತವೆನ್ನುತ್ತಾರೆ.

ಈ ರೀತಿಯಿಂದ ಅಂತಃಕರಣ ವಿಶಿಷ್ಟದಲ್ಲಿ ಧರ್ಮಾದಿಗಳು ಅಧ್ಯಸ್ತವೆಂದು ಅಂದರೆ ಎಷ್ಟುಭಾಗದಲ್ಲಿ ಅಂತಃಕರಣವಿರುವದೋ ಅಷ್ಟುಭಾಗದಲ್ಲಿ ಸ್ಥಿತವಾದ ಚೇತನಭಾಗ, ಮತ್ತು ಅಂತಃಕರಣ ಈ ಎರಡಕ್ಕೂ ಅಧಿಷ್ಠಾನತ್ವವು ಉಂಟಾಗುವದು. ಈ ಅಂತಃಕರಣವು ತಾನು ಸಹ ಅಧ್ಯಸ್ತವದೆ. ಇದರಿಂದ ಅದಕ್ಕೆ ಅಧಿಷ್ಠಾನವು ಪ್ರಾಪ್ತವಾಗುವದಿಲ್ಲ. ಈ ಅಭಿಪ್ರಾಯದಿಂದ ಅಂತಃಕರಣ ಉಪಹಿತದಲ್ಲಿ ಧರ್ಮಾದಿಗಳು ಅಧ್ಯಸ್ತವೆಂದು ಹೇಳಿದೆ.

ಇದರಿಂದ ಎಷ್ಟು ದೇಶದಲ್ಲಿ ಅಂತಃಕರಣವಿದೆಯೋ, ಅಷ್ಟುದೇಶದಲ್ಲಿ ಸ್ಥಿತವಾದ ಚೇತನಭಾಗ ಮಾತ್ರದಲ್ಲಿ ಅಧಿಷ್ಠಾನತ್ವವು ಅದೆ. ಅಂತಃಕರಣದಲ್ಲಿ ಇಲ್ಲ. ಈ ಪ್ರಸಂಗವು ಸಿದ್ಧವದೆ.

||೩೫೪|| ಇದರಂತೆ ಅಂತಃಕರಣವು ಸಹ ಅಜ್ಞಾನ ಉಪಹಿತದಲ್ಲಿ ಅಧ್ಯಸ್ತವದೆ.

ಈ ರೀತಿಯಿಂದ ಅಧ್ಯಸ್ತವಾದ ಧರ್ಮಾದಿಗಳ ಅಧಿಷ್ಠಾನವು ಆತ್ಮಾ ಅದೆ.

೧. ಅಧ್ಯಾಸಾಧಿಷ್ಠಾನತ್ವದ ಅಂತಃಕರಣವು ಆತ್ಮನ ಉಪಾಧಿಯಾಗಿದೆ. ಬುದ್ಧಿಯ ಅಂತಃಕರಣದ ಧರ್ಮವಾಗಿರುವುದರಿಂದ ಬುದ್ಧಿಯ ಧರ್ಮವೆಂದು ಹೇಳಿದೆ.

೨. ಅವಿವೇಕದಿಂದ ಅಂತಃಕರಣ ಮತ್ತು ಆತ್ಮಾ ಈ ಎರಡರಲ್ಲಿಯೂ ಪ್ರತೀತವಾಗುವದು. ಇದರಿಂದ ಅಂತಃಕರಣ ವಿಶಿಷ್ಟ ಪ್ರಮಾತೃತ್ವದ ಧರ್ಮವೆಂದು ಹೇಳಿದೆ.

(೧) ಧರ್ಮಾದಿಗಳು ಅಂತಃಕರಣದ ಧರ್ಮವಾಗಲಿ, ಅಥವಾ

(೨) ಅಂತಃಕರಣ ವಿಶಿಷ್ಟಪ್ರಮಾತೃತ್ವದ ಧರ್ಮವಾಗಲಿ, ಅಥವಾ ಸರ್ಪ, ಸ್ವಪ್ನಪದಾರ್ಥ, ಗಂಧರ್ವ ನಗರ ಆಕಾಶದ ನೀಲತ್ವ, ಇವು ಯಾವದರ ಧರ್ಮವೂ ಆಗುವದಿಲ್ಲ. ಸರ್ಪಪ್ರಕಾರದಿಂದ ಅಧ್ಯ...

ಯದ್ಯಪಿ ಆತ್ಮದಲ್ಲಿ ಅಧ್ಯಸ್ತನಾಗಿದ್ದರೂ, ಯಾವ ವ... ಯಾವದರಲ್ಲಿ ಅಧ್ಯಸ್ತನಾಗುವದೋ ಅದು ಆದರಲ್ಲಿ ಸತ್ಯವಾಗಿ... ಇದರಿಂದ ರಾಗದ್ವೇಷ, ಧರ್ಮ ಅಧರ್ಮ, ಸುಖದುಃಖ, ಬಂಧ... ಗಳಿಂದ ರಹಿತವಾಗಿ ಏಕವ್ಯಾಪಕ ಆತ್ಮಾ ಅದೆ. ಅಧ್ಯಸ್ತ... ವಾದದ್ದು.

||೩೫೫|| ಆತ್ಮಾಸತ್ ಅದೆ.

ಈ ಆತ್ಮವು ಸತ್ ಅದೆ. (೧) ಯಾವ ವಸ್ತುವು ಜ್ಞಾ... ಅಭಾವವನ್ನು ಹೊಂದುತ್ತದೆಯೋ ಅದಕ್ಕೆ ಅಸತ್ ಎನ್ನುತ್ತಾರೆ. ಯಾವದರ ನಿವೃತ್ತಿಯು ಯಾವಕಾಲದಲ್ಲಿಯೂ ಸಹ ಇರುವದಿಲ್ಲ ಅದಕ್ಕೆ ಸತ್ ಎನ್ನುತ್ತಾರೆ.

ಸರ್ಪ ಪದಾರ್ಥಗಳ ನಿವೃತ್ತಿಗೆ ಆತ್ಮಾಅಧಿಷ್ಠಾನ ಅದೆ... ನಿವೃತ್ತಿಯುಂಟಾದರೆ ಅದರ ಅನ್ಯ ಅಧಿಷ್ಠಾನವನ್ನು ಹೇಳಬೇ... ಕಾರಣವೇನೆಂದರೆ ( ೧ ) ಶೂನ್ಯದಲ್ಲಿ ನಿವೃತ್ತಿಯು ಆಗುವದಿಲ್ಲ. ... ಆತ್ಮ ಮತ್ತು ಅದರ ನಿವೃತ್ತಿಯ ಅನ್ಯ ಅಧಿಷ್ಠಾನವನ್ನು ಅಂಗೀಕ... ಅದರ ಅನ್ಯ ಅಧಿಷ್ಠಾನವನ್ನು ಅಂಗೀಕಾರಮಾಡಬೇಕಾಗುವದು. ಇ... ಯಿಂದ ಅನವಸ್ಥೆಯಾಗುವದು. ಮತ್ತು ಆತ್ಮದ ನಿವೃತ್ತಿಯನ್ನು ಅಂ... ಕಾರ ಮಾಡುವವರಿಗೆ ಪ್ರಶ್ನೆ ಮಾಡತಕ್ಕದ್ದೇನೆಂದರೆ (೧) ಆತ್ಮಾದ ನಿವೃ... ತ್ತಿಯನ್ನು ಯಾರು ಅನುಭವಿಸಿರುವರು ? ( ೨ ) ಅಥವಾ ಅನುಭವಿಸಿರು... ವದಿಲ್ಲ ?

೧. ಅವರು " ಅನುಭವ ಮಾಡಿರುವರು ,, ಎಂದು ಹೇ... ಇದು ಸಮಂಜಸವಾಗುವದಿಲ್ಲ. ಕಾರಣವೇನೆಂದರೆ, ಯಾರು ಅ... ಮಾಡಿದವರು ಇರುವರೋ ಅವರೇ ಆತ್ಮಾ ಆಗಿರುವರು. ಮತ್ತು ... ಸ್ವರೂಪರಾಗಿರುವರು. ಇದರ ನಿವೃತ್ತಿಯ ಅನುಭವವು, ಸ್ವಂತ... ಛೇದನದ ಅನುಭವ ಸಮಾನ ಅದೆ. ಇದರಿಂದ ಆತ್ಮಾದ ನಿವೃತ್ತಿ... ಅನುಭವವು ಉಂಟಾಗುವದಿಲ್ಲ, ಮತ್ತು

೨. ಆತ್ಮಾದ ನಿವೃತ್ತಿಯಾಗುವದಂತೂ ನಿಜವೇ. ಆದ... ನಿವೃತ್ತಿಯ ಅನುಭವವು ಯಾರಿಗೂ ಇಲ್ಲ ಎಂದರೆ—

ಇದರ ಮೇಲಿಂದ ಹೀಗೆ ಸಿದ್ಧವಾಯಿತು;— ಆತ್ಮಾ...



ಯಂತೂ ಆಗುವದಿಲ್ಲ. ಕಾರಣವೇನೆಂದರೆ, ಯಾವ ವಸ್ತುವು ಯಾವನಿಂದಲೂ ಅನುಭವಿಸಲ್ಪಟ್ಟಿರುವದಿಲ್ಲವೋ ಅದು ವಂಧ್ಯಾಪುತ್ರನಸಮಾನವಾಗುವದು.

ಇದರಿಂದ ಆತ್ಮಾದ ನಿವೃತ್ತಿಯು ಆಗುವದಿಲ್ಲ. ಈ ಕಾರಣದಿಂದ ಆತ್ಮಾಸತ್ ಅದೆ.

||೩೫೬|| ಆತ್ಮಾಚಿತ್ (ಚೈತನ್ಯ) ಅದೆ. || ೩೫೬—೩೫೯ ||

ಆತಾ ಚಿತ್ ಅದೆ. ಪ್ರಕಾಶರೂಪವಾದ ಜ್ಞಾನಕ್ಕೆ ಚಿತ್ ಎನ್ನುತ್ತಾರೆ. (೧) ಅತ್ಮಾ ಅಪ್ರಕಾಶರೂಪವಾದದ್ದೆಂದು ಅಂಗೀಕರಿಸಿದರೆ, ಅನಾತ್ಮನಾದ ಜಡವಸ್ತುವಿನ ಪ್ರಕಾಶವು ಎಂದೂ ಆಗುವದಿಲ್ಲ. ( ೨ ) ಅಂತಃಕರಣ ಮತ್ತು, ಇಂದ್ರಿಯಗಳಿಂದ ಪದಾರ್ಥಗಳ ಪ್ರಕಾಶವು ಎಂದು ಹೇಳಿದರೆ ಅದು ಸರಿಯಲ್ಲ. ಕಾರಣವೇನೆಂದರೆ— ಅಂತಃಕರಣ ಮತ್ತು ಇಂದ್ರಿಯಗಳು ಪರಿಚ್ಛಿನ್ನವಾಗಿವೆ. (ಅ) ಯಾವದು ಪರಿಚ್ಛಿನ್ನವಾಗಿರುವದೋ ಅದು ಘಟವತ್ ಕಾರ್ಯವಾಗುವದು. ಮತ್ತು ಅಂತಃಕರಣ ಇಂದ್ರಿಯಗಳು ಸಹ ಪರಿಚ್ಛಿನ್ನವಾಗಿರುವದರಿಂದ ಕಾರ್ಯರೂಪಗಳಾಗಿವೆ. (ಬ) ದೇಶಕಾಲಗಳಿಂದ ಯಾವದರ ಅಂತವಾಗುವದೋ, ಅದಕ್ಕೆ ಪರಿಚ್ಛಿನ್ನವೆನ್ನುತ್ತಾರೆ. (ಕ) ಯಾವದು ಕಾರ್ಯವಾಗಿರುವದೋ ಅದು ಜಡವಾಗುವದು.

ಅಂತಃಕರಣ ಮತ್ತು ಇಂದ್ರಿಯಗಳು ಸಹ ಜಡಗಳಾಗಿವೆ. ಇವುಗಳಿಂದ ಯಾವ ವಸ್ತುವಿಗೂ ಪ್ರಕಾಶವುಂಟಾಗುವದಿಲ್ಲ. ಆತ್ಮವು ಸರ್ವವನ್ನೂ ಪ್ರಕಾಶಪಡಿಸುತ್ತದೆ. ಇದು ಪ್ರಕಾಶರೂಪವದೆ.

ಟಿಪ್ಪಣಿ— (೧) ಅಲುಪ್ತ ಪ್ರಕಾಶಕ್ಕೆ ಚಿತ' ಅನ್ನುತ್ತಾರೆ. ಚೇತನರೂಪ ಜ್ಞಾನದಲೋಪವು ಆಗುವದಿಲ್ಲ. ಈ ಅರ್ಥದ ಅಭಿಪ್ರಾಯವುಳ್ಳ ಒಂದು ಶ್ರುತಿಯುಂಟು. ದ್ರಷ್ಟುವಿನ (ಸ್ವರೂಪಭೂತ) ದೃಷ್ಟಿಗೆ ಲೋಪ [ನಾಶ] ಇಲ್ಲ. ಅವಿನಾಶಿಯಾಗಿರುವದು.

||೪೫೭|| ಕೆಲವರು ಹೀಗೆ ಅನ್ನುತ್ತಾರೆ, ಆತ್ಮಾಪ್ರಕಾಶರೂಪವಲ್ಲ ಆದರೆ ಜಡವಾಗಿದೆ ಮತ್ತು ಅದರಲ್ಲಿ ಜ್ಞಾನವಿದೆ. ಈ ಜ್ಞಾನದಿಂದ ಆತ್ಮಾ ಮತ್ತು ಅನಾತ್ಮಗಳ ಪ್ರಕಾಶವಾಗುವದು. ಹೀಗೆ ಅನ್ನುವವರಿಗೆ ಪ್ರಶ್ನೆಯೇನೆಂದರೆ— ಆತ್ಮದ ಜ್ಞಾನಗುಣವು ನಿತ್ಯವದೆಯೋ ಅಥವಾ ಅನಿತ್ಯವದೆಯೋ ? (೧) ನಿತ್ಯವೆಂದು ಹೇಳಿದರೆ, ಆತ್ಮದ ಸ್ವರೂಪವೇ ಜ್ಞಾನವೆಂದು ಸಿದ್ಧವಾಗುವದು. ಕಾರಣವೇನೆಂದರೆ, "ಯಾವದು ಆತ್ಮನಿಂದ

ಭಿನ್ನವಾಗಿರುವದೋ ಅದುಅನಿತ್ಯವು" ಎಂಬ ನಿಯಮವಿರುವದು. ಆತ್ಮಾದಿಂದ ಭಿನ್ನವಿರುವದೆಂದು ಅಂಗೀಕರಿಸಿದರೆ, ಇದು ಅನಿ ಗುವದು ಈ ಕಾರಣದಿಂದ ನಿತ್ಯವೆಂದು ತಿಳಿದ ಆತ್ಮದಿಂದ ಜ್ಞಾ ಭಿನ್ನವಾಗಿದೆ ಎಂದು ಹೇಳುವದೂ ಸಮರ್ಪಕವಾದದ್ದಲ್ಲ ಮತ್ತು ಅನಿತ್ಯವೆಂದು ಅಂಗೀಕರಿಸಲು, ಘಟಾದಿಗಳಂತೆ ಜಡವಾಗುವದು. ದು ಅನಿತ್ಯವಸ್ತುವಿರುವದೋ ಅದು ಜಡವಾಗಿರುವದು. "ಜ್ಞಾನವು ಅನಿತ್ಯವದೆ" ಎಂಬ ಹೇಳುವಿಕೆಯು ಸಮಂಜಸವಲ್ಲ. ಜ್ಞಾನವು ನಿತ್ಯವೇ ಅದೆ. ಈ ನಿತ್ಯಜ್ಞಾನವೇ ಆತ್ಮಸ್ವರೂಪವದೆ. ತ್ಯವೆಂದು ಅಂಗೀಕರಿಸಿದ ಪಕ್ಷದಲ್ಲಿ ಕದಾಚಿತ್ ಆತ್ಮದಲ್ಲಿ ಜ್ಞಾನವು ಬೇಕು, ಅಥವಾ ಇರಬಾರದು, ಇದರಿಂದ ಆತ್ಮಾದಿಂದ ಜ್ಞಾನವು ವದೆ, ಎಂದು ಅಂಗೀಕರಿಸಬೇಕಾದೀತು. ಆದರೆ ನಿತ್ಯವೆಂದು ಸಿದರೆ ಭಿನ್ನವಾಗುವದಿಲ್ಲ.

ಯಾವದು ಗುಣವಿರುವದೋ, ಅದು ಗುಣವಂತನಲ್ಲಿ ಕದಾ ಇರಬಹುದು ಅಥವಾ ಇರಲಿಕ್ಕಿಲ್ಲ. ಹೇಗಂದರೆ ವಸ್ತ್ರದ ನೀಲ, ಗುಣವುಕದಾಚಿತ್ ಇರಬಹುದು ಅಥವಾ ಇರಲಿಕ್ಕಿಲ್ಲ. ಇದರಿಂದಯಾ ಗುಣವಿರುವದೋ ಅದು ಆಗಮಾಪಾಯಿ ಆಗುತ್ತದೆ; ಮತ್ತು ಜ್ಞಾ ನಿತ್ಯವಾಗಿರುವದರಿಂದ ಆಗಮಪಾಯಿಯಲ್ಲ. ಇದರಿಂದ ಆತ್ಮದ ವನೇ ಜ್ಞಾನವದೆ.

---

||೩೫೮|| ಜ್ಞಾನವು ಅನಿತ್ಯವೆಂದು ಹೇಳಿದರೆ, ಇಂದ್ರಿಯ ವಾ ಅಂತಃಕರಣದಿಂದ ಜ್ಞಾನವು ಉತ್ಪನ್ನವಾಗುವದು ಎಂದು ಹೇ ಕಾದೀತು. ಹೀಗೆ ಹೇಳುವದು ಸರಿಯಲ್ಲ; ಕಾರಣವೇನಂದರೆ, ಪ್ತಿಯಲ್ಲಿ ಇಂದ್ರಿಯಾದಿಗಳಕ್ರಿಯೆಯು ಅಭಾವವಿರುವದು, ಮತ್ತು ಜ್ಞಾನವಾಗುವದು ಹೀಗೆ ಆಗಬಾರದು. ಸುಷುಪ್ತಿಯಲ್ಲಿ ಜ್ಞಾನವನ್ನು ಅಂಗೀಕರಿಸದಿದ್ದರೆ, ಜಾಗ್ರತೆಯಲ್ಲಿ "ನಾನು ಸುಖ ಮಲಗಿದ್ದೆನು." ಎಂಬ ಸುಷುಪ್ತಿಯ ಸುಖದಸ್ಮೃತಿಯು ಆಗಬಾ ಪೂರ್ವದಲ್ಲಿ ಯಾವ ವಸ್ತುವಿನ ಜ್ಞಾನವಾಗಿರುವದೋ, ಅದರ ಸ್ಮೃತಿ ಯಾಗುವದು; ಅಜ್ಞಾತವಸ್ತುವಿನ ಸ್ಮೃತಿಯು ಆಗುವದಿಲ್ಲ. ಸುಷುಪ್ತಿಯ ಸುಖದ ಸ್ಮೃತಿಯು ಜಾಗ್ರತಾವಸ್ಥೆಯಲ್ಲಿ ಆಗುವದು ಸುಷುಪ್ತಿಯಲ್ಲಿ ಸುಖದ ಜ್ಞಾನವಾಗುವದು. ಈ ಜ್ಞಾನದ ಕಾರಣವಾದ ಇಂದ್ರಿಯಾದಿಗಳು ಸುಷುಪ್ತಿಯಲ್ಲಿ ಇರುವದಿಲ್ಲ.



ಜ್ಞಾನವು ನಿತ್ಯವದೆ. ಆತ್ಮಜ್ಞಾನವನ್ನು ತ್ಯಾಗಮಾಡಿ ಎಂದೂ ಇರುವದಿಲ್ಲ ಇದರಿಂದಜ್ಞಾನವು ಆತ್ಮದ ಸ್ವರೂಪವದೆ. ಅಗ್ನಿಯುಹೇಗೆ ಉಷ್ಣತ್ವವನ್ನುತ್ಯಾಗಮಾಡದೆ ಇರುವುದರಿಂದ ಉಷ್ಣತ್ವವು ಅಗ್ನಿಯ ಸ್ವರೂಪವದೆಯೋ ಹಾಗೆಜ್ಞಾನವು ಸಹಾ ಆತ್ಮದಸ್ವರೂಪವದೆ ಯಾವದು ಆಗಮಪಾಯಿಯಾಗಿರುವದೋ, ಅದು ಗುಣವಾಗುತ್ತದೆ. ಉಷ್ಣತ್ವ, ಮತ್ತು ಜ್ಞಾನ ಇವು ಆಗಮಪಾಯಿಗಳಲ್ಲ. ಇದರಿಂದ ಉಷ್ಣತ್ವವು ಅಗ್ನಿಯ ಮತ್ತು ಆತ್ಮದಸ್ವರೂಪಗಳಾಗಿವೆ. ಯಾವ ವಸ್ತುವು ಒಂದು ಸಮಯದಲ್ಲಿ ಇರುವದೋ ಮತ್ತು ಒಮ್ಮೊಮ್ಮೆ ಇರುವದಿಲ್ಲವೋ, ಅದಕ್ಕೆ ಆಗಮಪಾಯಿ ಅನ್ನುತ್ತಾರೆ.

---

ಉತ್ಪತ್ತಿ ಮತ್ತು ನಾಶ, ಇವು ಅಂತಃಕರಣದ ವೃತ್ತಿಗಳಾಗಿರುವವು. ಜ್ಞಾನಸಂಬಂಧವಾದವು. (೧) ಆತ್ಮಸ್ವರೂಪದ ಜ್ಞಾನವು ವಿಶೇಷ ವ್ಯಾವಹಾರಿಕ ಸಾಧನವಲ್ಲ. ಆದರೆ ಜ್ಞಾನಸಹಿತ ವೃತ್ತಿ, ಅಥವಾ ವೃತ್ತಿಯಲ್ಲಿ ಆರೂಢವಾದ ಜ್ಞಾನವು ವ್ಯವಹಾರದ ಸಾಧನವಾಗಿದೆ. ಇದು ಅವಚ್ಛೇದವಾದ ರೀತಿಯದೆ. ಮತ್ತು (೨) ಆಭಾಸವಾದದಲ್ಲಿ ಆಭಾಸಸಹಿತ ವೃತ್ತಿಯಿಂದ ವ್ಯವಹಾರವಾಗುವದು. ಆಭಾಸದ್ವಾರಾ ಅಥವಾ ಸಾಕ್ಷಾತ್ ವೃತ್ತಿದ್ವಾರಾ ಆತ್ಮಸ್ವರೂಪ ಜ್ಞಾನದಿಂದಲೇ ಸರ್ವವ್ಯವಹಾರವು ಸಿದ್ಧವಾಗುವದು. ಇಲ್ಲದಿದ್ದರೆ ಆಗುವದಿಲ್ಲ.

ಈ ರೀತಿಯಿಂದ ಆತ್ಮದ ಸರ್ವಪ್ರಕಾಶಕ ಜ್ಞಾನಸ್ವರೂಪವು ಆತ್ಮವದೆ. ಇದರಿಂದ ಚಿತ್ ಅದೆ.

||೩೬೦|| ಆತ್ಮಾ ಆನಂದ ರೂಪವದೆ. ||೩೬೦--೩೬೩||

ಆತ್ಮಾ ಆನಂದರೂಪವದೆ. ಆತ್ಮಾ ಆನಂದರೂಪವಾಗಿದ್ದರೆ ವಿಷಯಸಂಬಂಧದಿಂದ ಸ್ವರೂಪಾನಂದದ ಭಾನವು ಆಗುವದು. ಇದು ಆಗಲಿಕ್ಕೆಬಾರದು. ವಿಷಯದಲ್ಲಿ ಆನಂದವಿಲ್ಲ, ಎಂಬ ಸಂಗತಿಯನ್ನು ಈ ಪೂರ್ವದಲ್ಲಿಯೆ ಹೇಳಿದ್ದೇವೆ.

ವಿಷಯದಲ್ಲಿ ಆನಂದವಿದ್ದರೆ ಆ ವಿಷಯದಿಂದ ಒಬ್ಬನಿಗೆ ಸುಖವಾಗುವದು. ಮತ್ತೊಬ್ಬನಿಗೆ ದುಃಖವಾಗುವದು. ಅಗ್ನಿಯ ಸ್ಪರ್ಶದಿಂದ ಅಗ್ನಿಕೀಟಕ್ಕೂ, ಸರ್ಪಸಿಂಹಗಳ ರೂಪವನ್ನು ನೋಡುವದರಿಂದ ಸರ್ಪಿಣಿ, ಸಿಂಹಿಣಿಗಳಿಗೂ ಆನಂದವಾಗುವದು. ಮತ್ತು ಬೇರೆಪ್ರಾಣಿಗಳಿಗೆ ದುಃಖವಾಗುವದು. ಹೀಗೆ ಆಗಲಿಕ್ಕೆಬಾರದು. ಮತ್ತು ಸಿದ್ಧಾಂತದಲ್ಲಿಯಂತೂ ಅಗ್ನಿಕೀಟಕ್ಕೆ ಅಗ್ನಿಸ್ಪರ್ಶದ ಇಚ್ಛೆಯುಂಟಾದಾಗ ಚಂಚಲಬುದ್ಧಿಯಲ್ಲಿ ಸ್ವರೂ

ಪಾನಂದದ ಭಾನವಾಗುವದಿಲ್ಲ. ಅಗ್ನಿಸಂಬಂಧದಿಂದ ಕ್ಷಣವಾತ್ರ
ಯು ದೂರವಾಗಿ ನಿಶ್ಚಲಬುದ್ಧಿಯಲ್ಲಿಸ್ವರೂಪಾನಂದದ ಭಾನವಾ
ಅನ್ಯಪ್ರಾಣಿಗಳಿಗೆ ಅಗ್ನಿಸಂಬಂಧದ ಇಚ್ಛೆಯು ಇರುವದಿಲ್ಲ. ಆದರೆ
ದಾರ್ಥಗಳ ಇಚ್ಛೆಯಿರುವದು. ಈ ಪದಾರ್ಥಗಳ ಇಚ್ಛೆಯು ಅಗ್ನಿ
ಇಚ್ಛೆಗೆ ದೂರವಾಗುವದಿಲ್ಲ. ಇದರಿಂದ ಚಂಚಲ ಅಂತಃಕರಣದಲ್ಲಿ
ಬಂಧದಿಂದ ಆನಂದವಾಗುವದಿಲ್ಲ. ಮತ್ತು ಆತ್ಮಾನಂದದ ಪ್ರತೀತಿ
ನಿಮಿತ್ತವಿರಕೂಡದು.

ಟಿಪ್ಪಣಿ (೧) ಒಂದು ವಿಷಯದಿಂದ ಕೆಲವರಿಗೆ ಸುಖವೂ ಕೆಲವರಿಗೆ ದುಃ
ಆಗುವದು ಅದರಿಂದ ಈ ವಿಷಯವು ನಿಯಮದಿಂದ ತನ್ನ ಇಚ್ಛೆಯು
ಅಥವಾ ಇಚ್ಛಾಸಹಿತವಾಗಿ ಸರ್ವಪ್ರಾಣಿ ಮಾತ್ರಕ್ಕೆ ಸುಖದ ಸಾಧನ
ವಿಷಯದ ಇಚ್ಛಾಸಹಿತ ಪ್ರಾಣಿಗೆ ಅದರ ಪ್ರಾಪ್ತಿಯಿಂದ ಇಚ್ಛೆಯ
ದ್ವಾರಾ ಅಂತರ್ಮುಖವುಂಟಾಗಿ ವೃತ್ತಿಯಲ್ಲಿ ಮೋದ ಪ್ರಮೋದಗಳ
ಯರೂಪವು ಆತ್ಮಸ್ವರೂಪಾನಂದದ ಪ್ರತಿಬಿಂಬದಲ್ಲಿ ನಿಮಿತ್ತವದೆ.
ವಿಷಯದಲ್ಲಿ ಆನಂದದ ಕಾರಣತ್ವದ ವ್ಯಭಿಚಾರವದೆ. ಮತ್ತು ವಿಷಯದ
ಯಿಂದ ಇಲ್ಲವೆ ಏಕಾಂತ ದೇಶದ ಸೇವೆಗಳಿಂದ ಉಂಟಾಗುವ ಇಚ್ಛೆಯ
ವಾಗುವದೋ ಅದು ಪ್ರತಿಯಂಬರೂಪ ಸುಖದ ನಿಮಿತ್ತಕಾರಣವದೆ.
ಆನಂದರೂಪವಾಗಿರದಿದ್ದರೆ ಅಂತರ್ಮುಖವೃತ್ತಿಯಲ್ಲಿ ಉಂಟಾಗುವ
ಆಗಬಾರದು. ಈ ಕಾರಣದಿಂದ ಆತ್ಮಾ ಆನಂದರೂಪವದೆ. ಇದೇ
ರಣದ ನಿಷ್ಕರ್ಷ (ಸಾರಾಂಶ) ವಾಗಿದೆ.

॥೩೬೧॥ ಈ ಆಕ್ಷೇಪಣೆಯುಂಟಾಗುವದು. ಯಾವ ಇಚ್ಛಾ
ಅಂತಃಕರಣದ ವೃತ್ತಿಯಿರುವದೋ, ಅದು ವಿಷಯಪ್ರಾಪ್ತಿಯಿಂದ
ನ್ನು ಹೊಂದಿದಮೇಲೆ ಬೇರೆ ಯಾವ ಅನ್ಯವೃತ್ತಿಯು ನಿಮಿತ್ತವಾಗಿ
ಇರುವದಿಲ್ಲ. ಆದ್ದರಿಂದ ಉತ್ಪತ್ತಿಯಾಗುವದಿಲ್ಲ, ಮತ್ತು ವೃತ್ತಿಯ
ತು ಸ್ವರೂಪಾನಂದದ ಭಾನವಾಗುವದಿಲ್ಲ. ಈ ಕಾರಣದಿಂದ ವಿಷಯ
ಆನಂದವದೆ."

ಈ ಆಕ್ಷೇಪಣೆಯು ಸರಿಯಲ್ಲ. ಕಾರಣವೇನೆಂದರೆ, '(೧)
ಇಚ್ಛಾರೂಪ ಅಂತಃಕರಣದ ವೃತ್ತಿಯು ಅಭಾವವದೆ. ಈ ಇಚ್ಛಾ
ವೃತ್ತಿಯುಂಟಾಗಲು ಇದರ ವಿಷಯದಲ್ಲಿ ಸಹ ಆನಂದವು ಪ್ರಕಾಶ
ವದಿಲ್ಲ. ಕಾರಣವೇನಂದರೆ, ಇಚ್ಛಾರೂಪ ವೃತ್ತಿಯು ರಾಜಸವದೆ
ಆನಂದದ ಪ್ರಕಾಶವು ಸಾತ್ವಿಕವೃತ್ತಿಯಲ್ಲಿ ಆಗುವದು. ತಥಾಪಿ
ಪದಾರ್ಥದ ಪ್ರಾಪ್ತಿಯು ಸ್ವರೂಪದ ವಿಷಯವನ್ನು ಮಾತ್ರ
ರೂಪ ಅಂತಃಕರಣದ ವೃತ್ತಿಯು ಸಾತ್ವಿಕವದೆ. ಕಾರಣವೇನೆಂದರೆ



ದ ಜ್ಞಾನವಾಗುವದು, ಎಂಬ ನಿಯಮವದೆ. ಈ ಸಾತ್ವಿಕವೃತ್ತಿಯಲ್ಲಿ
ನಂದದ ಭಾನವಾಗುವದು. ಪರಂತು ಈ ಜ್ಞಾನರೂಪ ವೃತ್ತಿಯು ಬಹಿ
ಖವದೆ. ಇದರ ಪೃಷ್ಠಭಾಗದಲ್ಲಿ ಸ್ಥಿತವಾದ ಅಂತಃಕರಣದ ಉಪಹಿತ
ಚೇತನ ಸ್ವರೂಪ ಆನಂದವು ಇದರ ಈ ವೃತ್ತಿಯಿಂದ ಗರ್ಹವಾಗುವದಿಲ್ಲ
ದ್ದರಿಂದ ವಿಷಯ ಉಪಹಿತ ಚೇತನಸ್ವರೂಪಆನಂದದಭಾನವಾಗುವದು.
ಈ ವಿಷಯ ಉಪಹಿತಚೇತನವು ಆತ್ಮದಿಂದ ಭಿನ್ನವಿಲ್ಲ. ಆದ್ದರಿಂದ ಆತ್ಮಾ
ನಂದವೇ ವಿಷಯದಲ್ಲಿ ಭಾನವೆಂದು ಹೇಳಿದ್ದಾರೆ. ಈ ಜ್ಞಾನರೂಪ ವೃತ್ತಿ
ಯಲ್ಲಿ ವಿಷಯದೊಡನೆ ನೇತ್ರಾದಿಗಳ ಸಂಬಂಧವೂ ನಿಮಿತ್ತವದೆ.

೧

(೨) ಅಥವಾ ಜ್ಞಾನರೂಪ ಬಹಿರ್ಮುಖವೃತ್ತಿಯಿಂದ ಅನ್ಯ ಅಂತರ್ಮುಖ
ವೃತ್ತಿಗಳು ಇರುವವು. ಇವುಗಳಲ್ಲಿ ಅಂತಃಕರಣ ಉಪಹಿತ ಚೇತನರೂಪ
ಆನಂದದ ಭಾನವೂ ಆಗುವದು. ಇದು ಉತ್ತಮವಾದ ಸಿದ್ಧಾಂತವದೆ. ಈ
ವೃತ್ತಿಯು ಉತ್ಪತ್ತಿಯಲ್ಲಿ ಇಚ್ಛಾದಿಗಳ ಅಭಾವವೂ ನಿಮಿತ್ತವದೆ. ಏಕಾಂ
ತಸ್ಥಾನದಲ್ಲಿ ಸ್ಥಿತನಾದ ಉದಾಸೀನ ಪುರುಷನಿಗೆ ಬಹಿರ್ಮುಖ ಜ್ಞಾನರೂಪ
ದ ಯಾವ ವೃತ್ತಿಯೂ ಇರುವದಿಲ್ಲ. ಆನಂದದಿಂದ ಭಾನವಿರುತ್ತದೆ.
ದ್ದರಿಂದ ಇಚ್ಛಾದಿಗಳ ಅಭಾವರೂಪ ನಿಮಿತ್ತದಿಂದ ಅಂತರ್ಮುಖ ವೃತ್ತಿ
ಯು ಆನಂದ ಗ್ರಹಣ ಮಾಡತಕ್ಕದ್ದಾಗಿರುತ್ತದೆ. ಇದರಂತೆ ವಾಂಛಿತವಿಷ
ಯಲಾಭದಿಂದ ಇಚ್ಛಾಬಲಗಳ ಅಭಾವವುಂಟಾಗುವದರಿಂದ ಜ್ಞಾನವುಂ
ಟಾದಮೇಲೆ ಅಂತರ್ಮುಖವೃತ್ತಿಯುಂಟಾಗುವದು. ಈ ಅಂತರ್ಮುಖವೃತ್ತಿ
ಯಿಂದ ಅಂತಃಕರಣ ಉಪಹಿತ ಆನಂದದಗ್ರಹಣವಾಗುವದು.

ಈ ಸ್ವರೂಪಾನಂದದ ಗ್ರಹಣವು ಮತ್ತು ವಿಷಯದ ಜ್ಞಾನವು ಅತ್ಯಂತ
ಅವ್ಯವಹಿತಗಳಾಗಿವೆ. ಆದ್ದರಿಂದ ಪುರುಷನಿಗೆ "ನಾನು ವಿಷಯದಲ್ಲಿ ಆನಂ
ದವನ್ನು ಅನುಭವ ಮಾಡಿದೆನು." ಎಂಬ ಭ್ರಾಂತಿಯುಂಟಾಗುವದು,

೧

ಪ್ರಥಮ ಪಕ್ಷಕ್ಕಿಂತಲೂ ಈ ಪಕ್ಷವು ಉತ್ತಮವದೆ. ಕಾರಣವೇನೆಂದರೆ,
ವಿಷಯದ ಜ್ಞಾನರೂಪ ವೃತ್ತಿಯಿಂದ ಅಂತಃಕರಣ ಉಪಹಿತ ಆನಂದದ
ಭಾನವುಂಟಾಗುವದಿಲ್ಲ. ವಿಷಯಉಪಹಿತ ಆನಂದದ ಭಾನವಾಗುವದು.
ಮಾರ್ಗದಲ್ಲಿ ವೃಕ್ಷದ ಜ್ಞಾನರೂಪವೃತ್ತಿಯು ಸಾತ್ವಿಕವದೆ. ಇದರಿಂದ
ಸಹ ವೃಕ್ಷ ಉಪಹಿತ ಚೇತನಸ್ವರೂಪ ಆನಂದದ ಭಾನವು ಆಗಬೇಕು.
ಇದರಂತೆ ಸರ್ವಜ್ಞಾನದಿಂದ ಜ್ಞೇಯ ಉಪಹಿತ ಚೇತನರೂಪ ಆನಂದದ

ಭಾನವು ಆಗಲಿಕ್ಕೆಬೇಕು. ಆದ್ದರಿಂದ ಅನಾತ್ಮವಸ್ತು ವಿನ ಜ್ಞಾನರೂಪ ರ್ಮುಖ ವೃತ್ತಿಯಿಂದ ಜ್ಞೇಯ ಉಪಹಿತ ಚೇತನಸ್ವರೂಪ ಆನಂದ... ಆಗುವದಿಲ್ಲ. ಈ ರೀತಿಯಿಂದ ವಿಷಯ ಸಂಬಂಧದಿಂದ ಆತ್ಮಸ್ವ... ನಂದದ ಭಾನವಾಗುವದು. ಆತ್ಮಾ ಆನಂದರೂಪವಾಗಿರದಿದ್ದರೆ ವಿ... ಸಂಬಂಧದಿಂದ ಆನಂದದ ಭಾನವು ಆಗುವದಿಲ್ಲ. ಆದ್ದರಿಂದ ... ಆನಂದರೂಪವದೆ.

---

ಟಿಪ್ಪಣಿ-[೧] ಏಕಾಗ್ರತಾಯುಕ್ತ ಸಾತ್ವಿಕವೃತ್ತಿ, ಇದಕ್ಕೇ ಪ್ರಿಯ... ಮತ್ತು ಪ್ರಮೋದವೃತ್ತಿ ಎಂದೂ ಅನ್ನುತ್ತಾರೆ.

[೨] ಶ್ವಾನವು ಶುಷ್ಕವಾದ ಅಸ್ಥಿಯನ್ನು ತನ್ನ ದವಡೆಯಿಂದ ಕಡಿಯಲು ಅದರ ದವಡೆಯೊಳಗಿಂದ ರಕ್ತವು ಆ ಅಸ್ಥಿಯಮೇಲೆ ಬೀಳುವದು. ಅದು ಆ ರಕ್ತವನ್ನು ಪ್ರಾಶನಮಾಡುತ್ತದೆ. ಮತ್ತು ಈ ರಕ್ತವು ... ಅಸ್ಥಿಯಿಂದ ಪ್ರಾಪ್ತವಾಯಿತು, ಎಂದು ತಿಳಿದುಕೊಳ್ಳುತ್ತದೆ. ... ವಾಂಛಿತ ವಿಷಯ ಪ್ರಾಪ್ತಿರೂಪ ನಿಮಿತ್ತದಿಂದ ಇಚ್ಛೆಯ ನಿವೃತ್ತಿ ... ಅಂತರ್ಮುಖವಾದ ವೃತ್ತಿಯಲ್ಲಿ ಪ್ರತಿಬಿಂಬಿತ ಸ್ವರೂಪಾನಂದ... ವನ್ನು ತೆಗೆದುಕೊಂಡು "ನಾನು ವಿಷಯದಲ್ಲಿ ಆನಂದವನ್ನು ಅನು... ಡಿದೆನು., ಹೀಗೆ ಅವಿವೇಕ ಪುರುಷನಿಗೆಭ್ರಾಂತಿಯಾಗುವದು.

ಈ ಭ್ರಾಂತಿಯಿಂದ ಅವನು ಪುನಃ ಅಧಿಕಾಧಿಕ ವಿಷಯಪ್ರಾಪ್ತಿಯ ನಿಮಿತ್ತ ಪ್ರಯತ್ನಮಾಡುವನು ಮತ್ತು ವಿವೇಕಿಯಾದ ಪುರುಷನಿಗೆ ಈ ... ಯು ಇರುವದಿಲ್ಲ. ಇದರಿಂದ ಅವನು ನಿರುಪಾಧಿಕ ಆನಂದದ ... ನಿಮಿತ್ತ ವೇದಾಂತವಿಚಾರ ಮೊದಲಾದ ವಿಷಯಗಳಲ್ಲಿ ಪ್ರಯತ್ನಮಾಡು...

೧. ಯದ್ಯಪಿ ವಿಷಯದಲ್ಲಿ ಯಾವ ಆನಂದದ ಭಾನವಾಗುವದೋ ಅದು ... ಪಾನಂದವದೆ. ತಥಾಪಿ ಶ್ವಾನದ ಮೊಲೆಯ ದ ಲಿನಂತೆ ನಿಷಿದ್ಧವಾ... ದರಿಂದ ಈ ವಿಷಯಾನಂದವು ಉಪಾದೇಯವಲ್ಲ. ಆದರೆ ಅನೇಕ... ಕಾರವಾಗಿರುವದರಿಂದ ಹೇಯವದೆ.

೨. ವಿಷಯದ ಅಭಾವಪೂರ್ವಕ ವಿಚಾರ ಮೊದಲಾದ ಸಾಧನಗಳಿಂದ ... ಆನಂದದ ಭಾನವಾಗುವದೋ, ಅದು ಸುವರ್ಣ ಮೊದಲಾದ ... ಪಾತ್ರೆಯಲ್ಲಿದ್ದ ಕ್ಷೀರವತ್ ಶಾಸ್ತ್ರಸಿದ್ಧವಾಗಿರುವದರಿಂದ ಉಪಾದೇ...

[೩] ವಿಷಯಾಕಾರ ವೃತ್ತಿಯಿಂದ ವಿಷಯ ಉಪಹಿತಚೇತನರೂಪ ಆನಂ... ನವಾಗುವದು. ಈ ಪ್ರಥಮ ಪಕ್ಷದಿಂದ "ಅನ್ಯ ಅಂತರ್ಮುಖ ವೃತ್ತಿ ... ಅಂತಃಕರಣ ಉಪಹಿತಚೇತನ ಆನಂದದ ಭಾನವಾಗುವದು.,, ... ತೀಯ ಪಕ್ಷವು ಉತ್ತಮವದೆ. ಇದೇ ಪಕ್ಷವನ್ನು ಈ ಪೂರ್ವದಲ್ಲಿ ... ತರಂಗದಲ್ಲಿ ಸಹಾ ಹೇಳಿರುವದು.



||೩೭೨|| ಆತ್ಮದ ಸಂಬಂಧಿಯಾದ ಯಾವ ವಸ್ತುವು ಇರುವದೋ, ...ದರ ವಿಷಯದಲ್ಲಿ ಪ್ರೇಮವುಂಟಾಗುವದು. ಇದಕ್ಕಿಂತಲೂ ಸನ್ನಿಹಿತ ...ದಾರ್ಥಗಳಲ್ಲಿ ಅಧಿಕ ಪ್ರೇಮವುಂಟಾಗುವದು. ಈ ರೀತಿಯಿಂದ ಇರಲಿ ...ಬಾಹ್ಯ ಪದಾರ್ಥಗಳ ಅಪೇಕ್ಷೆಯಿಂದ, ಅಂತರ ಅಂತರ ಪದಾರ್ಥಗಳಲ್ಲಿ ...ಅಧಿಕ ಪ್ರೀತಿಯು ಉಂಟಾಗುವದು.

೧. ಆತ್ಮ ಸಂಬಂಧಿಯಾದ ಪುತ್ರನ ದ್ವಾರದಿಂದ ಅವನ ಮಿತ್ರನಲ್ಲಿ ಪ್ರೀತಿಯುಂಟಾಗುವದು.

೨. ಪುತ್ರನ ಮಿತ್ರನ ಅಪೇಕ್ಷೆಯಿಂದ ಪುತ್ರನಲ್ಲಿ ಅಧಿಕ ಪ್ರೀತಿಯು ...ರುವದು.

೩. ಪುತ್ರನಿಗಿಂತಲೂ ಸ್ಥೂಲ ಸೂಕ್ಷ್ಮ ಶರೀರಗಳಲ್ಲಿ ಅಧಿಕ ಪ್ರೀತಿ ...ಯು ಇರುವದು.

೪. ಸ್ಥೂಲ ಸೂಕ್ಷ್ಮ ಶರೀರಗಳಲ್ಲಿ ಸಹಾ ಸ್ಥೂಲಕ್ಕಿಂತಲೂ ಸೂಕ್ಷ್ಮ...ದಲ್ಲಿ ಅಧಿಕ ಪ್ರೀತಿಯು ಇರುವದು.

ಪೂರ್ವ ಪೂರ್ವಕ್ಕಿಂತಲೂ, ಉತ್ತರೋತ್ತರಗಳು ಆತ್ಮದ ಸಮೀಪ ಅವೆ.

೧. ಆತ್ಮದ ಆಭಾಸವು ಸೂಕ್ಷ್ಮಶರೀರದಲ್ಲಿ ಅದೆ. ಅನ್ಯದರಲ್ಲಿ ಇಲ್ಲ. ...ದರಿಂದ ಆಭಾಸದ್ವಾರಾ ಆತ್ಮಸಂಬಂಧವು ಸೂಕ್ಷ್ಮಶರೀರಕ್ಕೆ ಇರುವದೇ ಹೊರತು ಅನ್ಯದರಲ್ಲಿ ಇಲ್ಲ.

೨. ಸ್ಥೂಲಶರೀರದಿಂದ ಸೂಕ್ಷ್ಮ ಶರೀರದ ಸಂಬಂಧವದೆ. ಇದರಿಂದ ಸ್ಥೂಲ ಶರೀರದಿಂದ ಸೂಕ್ಷ್ಮಶರೀರದ್ವಾರ ಆತ್ಮದ ಸಂಬಂಧವದೆ. ಮತ್ತು.

೩. ಸ್ಥೂಲಶರೀರದಿಂದ ಪುತ್ರನಲ್ಲಿ ಸಂಬಂಧ ವದೆ. ಮತ್ತು.

೪. ಪುತ್ರದ್ವಾರದಿಂದ, ಪುತ್ರನ ಮಿತ್ರನಲ್ಲಿ ಸಂಬಂಧ ವದೆ.

ಈ ರೀತಿಯಿಂದ ಉತ್ತರೋತ್ತರ ಆತ್ಮಾದ ಸಮೀಪ ವರ್ತಿಯಾದ ವಸ್ತುಗಳಲ್ಲಿ ಅಧಿಕ ಪ್ರೀತಿಯು ಇರುವದು.

ಆತ್ಮನ ಸಂಬಂಧವಾಗುವದರಿಂದ ಪದಾರ್ಥಗಳಲ್ಲಿ ಉಂಟಾಗುವ ಪ್ರೀತಿಯು ಆತ್ಮದಲ್ಲಿಯೇ ಮುಖ್ಯ ಪ್ರೀತಿಯಾಗಿರುವದು. ಅನ್ಯವಿಷಯದಲ್ಲಿ ಇಲ್ಲ. ಪುತ್ರನ ಮಿತ್ರನಲ್ಲಿ ಪುತ್ರನ ಸಂಬಂಧದಿಂದ ಪ್ರೀತಿಯದೆ ಇದರಲ್ಲಿ ಪುತ್ರನಲ್ಲಿಯೇ ಮುಖ್ಯಪ್ರೀತಿಯು ಇರುವದು. ಪುತ್ರನ ಮಿತ್ರನಲ್ಲಿ ಇಲ್ಲ. ಇದರಂತೆ ಆತ್ಮಾದ ಅಧಿಕ ಸಮೀಪವಾಗಿರುವ ಪದಾರ್ಥಗಳಲ್ಲಿಯೇ ಅಧಿಕ ಪ್ರೀತಿಯು ಆಗುವದು. ಈ ಕಾರಣದಿಂದ ಆತ್ಮ ವಿಷಯದಲ್ಲಿಯೇ ಸರ್ವದ ಪ್ರೀತಿಯು ಇರುವದು.

ಈ ಪ್ರೀತಿಯು ಆನಂದದಲ್ಲಿ ಮತ್ತು ದುಃಖದ ಅಭಾವದ
ಟಾಗುವದು. ಅನ್ಯದರಲ್ಲಿ ಇಲ್ಲ. ಅನ್ಯಪದಾರ್ಥಗಳ ವಿಷಯದಲ್ಲಿ
ಗುವ ಪ್ರೀತಿಯು ಆನಂದ ಅಥವಾ ದುಃಖಭಾವದ ನಿಮಿತ್ತವಾ
ವದು. ಆದ್ದರಿಂದ ಆನಂದ ಮತ್ತು ದುಃಖಾಭಾವವು ಆತ್ಮದಿಂದ
ರಲ್ಲಿ ಇಲ್ಲ. ಈ ಕಾರಣದಿಂದ ಸರ್ವರ ಪ್ರೀತಿಯ ವಿಷಯವಾದ
ಆನಂದರೂಪ ಅದೆ. ಮತ್ತು ದುಃಖಾಭಾವ ರೂಪವೂ ಅದೇ ಆ
ತದ ಅಭಾವವು ಅಧಿಷ್ಠಾನ ರೂಪವಾಗಿದೆ. ಹೇಗೆ ಸರ್ಪದ
ರಜ್ಜುರೂಪವಾಗಿದೆಯೋ, ಅದರಂತೆ ಕಲ್ಪಿತವಾದ ದುಃಖದ
ಆತ್ಮಾರೂಪ ಅದೆ. ಈ ರೀತಿಯಿಂದ ಆತ್ಮಾ ಆನಂದ ರೂಪವದೆ.

||೩೬೩|| ನ್ಯಾಯಮತದಲ್ಲಿ ಆನಂದವು, ಆತ್ಮದ ಗುಣವ
ಸಮೀಚೀನವಲ್ಲ. ಕಾರಣವೇನೆಂದರೆ;—ಆನಂದಗುಣದ ಅಂಗೀಕಾರ
ಆಗಮಾಪಾಯಿ ಯಾಗುವದಿಲ್ಲ. ಇದರಿಂದ ಆತ್ಮಾದ ಸ್ವರೂಪವೇ
ವೆಂದು ಸಿದ್ಧವಾಗುವದು. ಮತ್ತು ನಿತ್ಯಾನಂದವು ನ್ಯಾಯಮತ
ಇರುವದಿಲ್ಲ. ಅನಿತ್ಯವೆಂದು ತಿಳಿದರೆ ಅನುಕೂಲ ವಿಷಯ ಮತ್ತು
ನಗಳಾದ ಇಂದ್ರಿಯ ಇವುಗಳ ಸಂಬಂಧದಿಂದ ಆನಂದದ ಉತ್ಪ
ದು ಅಂಗೀಕಾರ ಮಾಡಬೇಕಾದೀತು, ಹೀಗೆ ಒಪ್ಪಿಕೊಂಡರೆ, ಸುಷು
ಲ್ಲಿ ಉಂಟಾಗುವ ಆನಂದದ ಭಾನವು ಆಗಲಿಕ್ಕೆ ಬಾರದು ಕಾ
ದರೆ ಸುಷುಪ್ತಿಯಲ್ಲಿ ವಿಷಯದ ಮತ್ತು, ಇಂದ್ರಿಯಗಳ ಸಂಬಂ
ವದಿಲ್ಲ ಆದ್ದರಿಂದ ಆನಂದವು ಆತ್ಮಾದ ಗುಣವಲ್ಲ. ಆದರೆ ಆತ್ಮಾ
ಸ್ವರೂಪವದೆ. ಈ ರೀತಿಯಿಂದ ಆತ್ಮಾ ಸತ್‌ಚಿತ್ ಆನಂದ ಸ್ವರೂ

||೩೬೪|| ಸಚ್ಚಿದಾನಂದವು ಪರಸ್ಪರ ಭಿನ್ನವಾಗಿರುವದಿಲ್ಲ || ೩೬೪-೩

ಈ ಸಚ್ಚಿದಾನಂದವು ಪರಸ್ಪರ ಭಿನ್ನವಿಲ್ಲ, ಆದರೆ ಒಂದೇ ಅದೆ.
ಆತ್ಮಾದ ಗುಣಗಳಾಗಿದ್ದರೆ, ಪರಸ್ಪರ ಭಿನ್ನವಾಗುತ್ತಿದ್ದವು. ಆತ್ಮಸ್ವ
ಅವೆ;ಇದರಿಂದ ಭಿನ್ನವಿಲ್ಲ.(೧)ಒಂದೇ ಆತ್ಮವು ನಿವೃತ್ತಿರಹಿತ ಅದೆ.
ದ ಸತ್ ಅನ್ನುತ್ತಾರೆ ಮತ್ತು(೨)ಜಡದಿಂದ ವಿಲಕ್ಷಣ ಪ್ರಕಾಶರೂಪ
ಅದರಿಂದ ಚಿತ್ ಅನ್ನುತ್ತಾರೆ. ಮತ್ತು (೩) ದುಃಖದಿಂದವಿಲಕ್ಷಣ
ಪ್ರೀತಿಯ ವಿಷಯವದೆ. ಅದರಿಂದ ಆನಂದ ಅನ್ನುತ್ತಾರೆ. ಅಗ್ನಿಯು
ಉಷ್ಣ ಪ್ರಕಾಶರೂಪವದೆಯೋ, ಹಾಗೆಸಚ್ಚಿದಾನಂದರೂಪ ಆತ್ಮಾ



ಸಚ್ಚಿದಾನಂದ ಸ್ವರೂಪಕ್ಕೆ ಶಾಸ್ತ್ರದಲ್ಲಿ ಬ್ರಹ್ಮ ಎಂದು ಹೇಳಿದ್ದಾರೆ.
ಅದರಿಂದ ಬ್ರಹ್ಮಸ್ವರೂಪ ಆತ್ಮಾ ಅದೆ. ಮತ್ತು ಬ್ರಹ್ಮನಾಮವು ವ್ಯಾ
ಪಕತ್ವದ್ವಾಗಿದೆ.

(೧) ದೇಶದಿಂದ ಯಾವದರ ಅಂತವಾಗುವದಿಲ್ಲವೋ, ಅದಕ್ಕೆ ವ್ಯಾಪಕ
ವೆನ್ನುತ್ತಾರೆ. ಈ ವ್ಯಾಪಕದಿಂದ ಆತ್ಮವು ಭಿನ್ನವಾಗಿದ್ದರೆ, ಅದು ದೇಶ
ದಿಂದ ಅಂತವುಳ್ಳದ್ದಾಗುವದು. (೨) ಯಾವದರ ಅಂತವು ದೇಶದಿಂದ ಆ
ಗುವದೋ, ಅದರ ಅಂತವು ಕಾಲದಿಂದ ಸಹ ಆಗುವದು. ಎಂಬ ನಿಯಮ
ವದೆ. ಅದರಿಂದ ಅನಿತ್ಯವಾಗುವದು; ಕಾಲದಿಂದ ಯಾವದರ ಅಂತವಾಗು
ವದೋ ಅದು ಅನಿತ್ಯವೆಂದು ಹೇಳಿದ್ದಾರೆ. ಅದರಿಂದ ಬ್ರಹ್ಮದಿಂದ
ಆತ್ಮವು ಭಿನ್ನವಲ್ಲ. ಮತ್ತು ಘಟಾದಿಗಳು ;ಜಡ ಅವೆ. ಅದರಿಂದ ಆತ್ಮ
ದಿಂದ ಭಿನ್ನವಾದ ಬ್ರಹ್ಮವೂ ಸಹ ಜಡವೇ ಆಗಬಹುದು. ಇದರಿಂದ
ಆತ್ಮದಿಂದ ಭಿನ್ನವಾಗಿ ಬ್ರಹ್ಮವು ಇಲ್ಲ.ಆದರೆ ಬ್ರಹ್ಮಸ್ವರೂಪವೇ ಆತ್ಮಾಅದೆ.

||೩೬೫|| (೧) ಒಂದೇ ಚೇತನವು ಸರ್ವ ಪ್ರಪಂಚದ ಮತ್ತು ಮಾಯೆ
ಯ ಅಧಿಷ್ಠಾನವದೆ. ಅದರಿಂದ ಬ್ರಹ್ಮವೆನ್ನುತ್ತಾರೆ. (೨) ಅವಿದ್ಯಾ ಮತ್ತು
ವ್ಯಷ್ಟಿ ದೇಹಾದಿಗಳ ಅಧಿಷ್ಠಾನವದೆ. ಅದರಿಂದ ಆತ್ಮಾ ಅನ್ನುತ್ತಾರೆ.

(೧) "ತತ್" ಪದದ ಲಕ್ಷ್ಯಕ್ಕೆ ಬ್ರಹ್ಮ ಅನ್ನುತ್ತಾರೆ. (೨) "ತ್ವಂ"
ಪದದ ಲಕ್ಷ್ಯಕ್ಕೆ ಆತ್ಮಾ ಅನ್ನುತ್ತಾರೆ.

(೧) ಈಶ್ವರ ಸಾಕ್ಷಿಯು "ತತ್" ಪದದ ಲಕ್ಷ್ಯವದೆ. ಮತ್ತು (೨)
ಜೀವಸಾಕ್ಷಿಯು "ತ್ವಂ" ಪದದ ಲಕ್ಷ್ಯವದೆ.

(೧) ವ್ಯಷ್ಟಿಸಂಘಾತ ಉಪಹಿತ ಚೇತನವು ಜೀವಸಾಕ್ಷಿ ಅದೆ. ಮತ್ತು
(೨) ಸಮಷ್ಟಿ ಸಂಘಾತ ಉಪಹಿತಚೇತನವು ಈಶ್ವರಸಾಕ್ಷಿ ಅನ್ನುತ್ತಾರೆ.

ಜೀವ ಈಶ್ವರರ ಐಕ್ಯತ್ವವು ಯದ್ಯಪಿ ಉಂಟಾಗುವದಿಲ್ಲ. ತಥಾಪಿ
ಜೀವಸಾಕ್ಷಿ, ಮತ್ತು ಈಶ್ವರಸಾಕ್ಷಿಗಳ ಉಪಾಧಿಯಭೇದದಿಂದ ಭೇದವದೆ
ಮತ್ತು ಸ್ವರೂಪದಿಂದ ಒಂದೇ ಅದೆ. ಮಠಾಕಾಶ, ಘಟಾಕಾಶ ಇವುಗಳಲ್ಲಿ
ಉಪಾಧಿಯ ಭೇದವೇ ಹೊರತು ಸ್ವರೂಪದಿಂದ ಭೇದವಿಲ್ಲ. ಇದರಂತೆ
ಆತ್ಮ ಮತ್ತು ಬ್ರಹ್ಮ ಇವುಗಳಲ್ಲಿ ಉಪಾಧಿಯ ಭೇದದ ಹೊರತು ಅನ್ಯ
ಭೇದವಿಲ್ಲ. ಒಂದೇ ವಸ್ತುವದೆ.

||೩೬೬|| ಬ್ರಹ್ಮರೂಪ, ಆತ್ಮಾ ಅಜನ್ಮವುಳ್ಳದ್ದು ಅದೆ. ||೩೬೬-೩೬೮||

ಈ ಬ್ರಹ್ಮರೂಪ ಆತ್ಮಾ ಅಜನ್ಮ. ಅಂದರೆ ಜನ್ಮರಹಿತವದೆ.
ಆತ್ಮದ ಜನ್ಮವನ್ನು ಅಂಗೀಕಾರ ಮಾಡಿದರೆ ಅಸಿತ್ಯತ್ವವುಂಟಾ
ಈ ಸಂಗತಿಯು ಪರಲೋಕವಾದಿಗಳಾದ ಆಸ್ತಿಕರಿಗೆ ಇಷ್ಟವಲ್ಲ
ನಂದರೆ, ಆತ್ಮ ಉತ್ಪತ್ತಿನಾಶವುಳ್ಳದ್ದು. ಆದರೆ, ಪ್ರಥಮ ಜ
ಪೂರ್ವಕರ್ಮದ ಹೊರತು ಸುಖದುಃಖಗಳ ಭೋಗವು ನಾಶವಾಗ
ಆದರಿಂದ ಆತ್ಮವು ಕರ್ತಾ, ಭೋಕ್ತಾ ಎಂದು ಅಂಗೀಕರಿಸಿದರೆ ಜ
ರಹಿತವೆಂದೂ ಅಂಗೀಕಾರ ಮಾಡಬೇಕಾದೀತು. ಮತ್ತು ಆತ್ಮ
ವನ್ನು ಅಂಗೀಕರಿಸಿದರೆ ಜನ್ಮನಾಶ ರಹಿತವೆಂದೂ ಅಂಗೀಕಾರ
ಕಾದೀತು, ಮತ್ತು ಆತ್ಮದ ಜನ್ಮವನ್ನು ಅಂಗೀಕರಿಸಿದರೆ ಕಾರಣ
ತು ಯಾವ ವಸ್ತುವಿಗೂ ಜನ್ಮವುಂಟಾಗುವದಿಲ್ಲ. ಅದರಿಂದ ಆತ್ಮ
ವಾಗಲಿಕ್ಕೆ ಯಾವದಾದರೂ ಕಾರಣವುಬೇಕು. ಇದಂತೂ ಸ
ವಾದದ್ದಲ್ಲ. ಕಾರಣವೇನೆಂದರೆ ಯಾವ ಕಾರಣವನ್ನು ನೀವು ಸ್ವೀ
ರೋ ಅದು ಆತ್ಮದಿಂದ ಭಿನ್ನವಾಗುವದು. ಯಾವದು ಆತ್ಮದಿ
ವಾಗಿರುವದೋ, ಅದು ಎಲ್ಲವು ಆತ್ಮದಲ್ಲಿ ಕಲ್ಪಿತವಾದದ್ದು.
ಯಾವದು ಕಲ್ಪಿತವಾಗಿರುವದೋ, ಅದು ಆತ್ಮಾದ ಜನ್ಮಕ್ಕೆ ಕಾರ
ವಾಗುವದಿಲ್ಲ. ರಜ್ಜುವಿನಲ್ಲಿ ಕಲ್ಪಿಸಿದ ಸರ್ಪವು ರಜ್ಜುವಿನ ಉತ್ಪ
ಕಾರಣವಾಗಿರುವದಿಲ್ಲವೋ, ಹಾಗೆ ಆತ್ಮಾದಲ್ಲಿಯ ಕಲ್ಪಿತವಸ್ತು
ಆತ್ಮೋತ್ಪತ್ತಿಯ ಕಾರಣವು ಸಂಭವಿಸುವದಿಲ್ಲ.

||೩೬೭|| ಒಂದೇ ರಜ್ಜುವಿನಲ್ಲಿ ಬೇರೆಬೇರೆ ಪುರುಷರಿಗೆ ದಂ
ಪೃಥ್ವಿರೇಷೆ, ಜಲಧಾರೆ ಹೀಗೆ ಭ್ರಾಂತಿಯಾಗುವದು; ಈ ಭ್ರಾಂ
ಎರಡು ಅಂಶಗಳುಂಟು. (೧) ಸಾಮಾನ್ಯ ಇದಂ ಅಂಶ, (೨)
ವಿಶೇಷ ಅಂಶ.

ಈಸಾಮಾನ್ಯ ಇದಂ ಅಂಶವು ಸರ್ಪಾದಿಕ ವಿಶೇಷಾಂಶಗಳಲ್ಲಿ ವ್ಯಾಪ

(೧) "ಇದು ಸರ್ಪ ಅದೆ" (೨) "ಇದು ದಂಡವದೆ,, (೩)
ಪೃಥ್ವಿಯ ರೇಷೆಯದೆ,, (೪ "ಇದು ಜಲರೇಷೆಯದೆ, ಈ ರೀತಿ
ಸರ್ಪಾದಿಕ ವಿಶೇಷಾಂಶಗಳಲ್ಲಿ ಇದಂ ಅಂಶವು ವ್ಯಾಪಕವದೆ, ಈ
ಸಾಮಾನ್ಯ ಇದಂ ಅಂಶವು ರಜ್ಜುಸ್ವರೂಪವದೆ, ಈ ಸಾಮಾನ್ಯ ಇ
ಶದ ಜ್ಞಾನಕ್ಕೆ ಭ್ರಾಂತಿಯ ಹೇತು ರಜ್ಜುವಿನ ಸಾಮಾನ್ಯ ಜ್ಞಾ
ತ್ತಾರೆ.

ಈ ಸಾಮಾನ್ಯ ಇದಂ ಅಂಶವು ಸತ್ಯವದೆ. ಕಾರಣವೇನೆಂದರೆ,
ವಿನ ಜ್ಞಾನವಾದಮೇಲೆ ಸಹ ಈ ಇದಮಂಶದ ಪ್ರತೀತಿಯು ಆ



(೧) ಭ್ರಾಂತಿಕಾಲದಲ್ಲಿ ಹೇಗೆ "ಇದು ಸರ್ಪವಾಗಿದೆ" ಎಂಬ ರೀತಿ
ಯಿಂದ ಸರ್ಪಾದಿಗಳಿಂದ ಕೂಡಿಕೊಂಡು ಇದಮಂಶದ ಪ್ರತೀತಿಯು ಆಗು
ವದು. (೨) ಇದರಂತೆ ಭ್ರಾಂತಿಯ ನಿವೃತ್ತಿಯಾದಬಳಿಕ ಸಹ ಇದು
ರಜ್ಜುವದೆ" ಎಂಬ ರೀತಿಯಿಂದ ರಜ್ಜುವಿನೊಡನೆ ಕೂಡಿಕೊಂಡು"ಇದಂ"
ಅಂಶದ ಪ್ರತೀತಿಯು ಆಗುವದು.

ಈ ಇದಂ ಅಂಶವುಸಹ ಮಿಥ್ಯವಾಗಲು, ಸರ್ಪಾದಿಗಳಂತೆ ಭ್ರಾಂತಿ
ಯ ನಿವೃತ್ತಿಯಾದಮೇಲೆ ಇದರ ಪ್ರತೀತಿಯು ಆಗಬಾರದು. ಇದರಿಂದ
ಸರ್ಪಾದಿಕ ಭ್ರಾಂತಿಗಳಲ್ಲಿ ವ್ಯಾಪಕವಾದ "ಇದಂ,, ಅಂಶವು ಸತ್ಯವದೆ.
ಮತ್ತು ರಜ್ಜುರೂಪವು ಅಧಿಷ್ಠಾನವದೆ. ಮತ್ತು ಪರಸ್ಪರ ವ್ಯಭಿಚಾರಿಗಳಾದ
ಸರ್ಪಾದಿಗಳು ಕಲ್ಪಿತಗಳಾಗಿವೆ.

||೩೬೮|| ಸರ್ವಪದಾರ್ಥಗಳಲ್ಲಿಯೂ ಪಂಚ ಅಂಶಗಳು ಇವೆ. (೧)
ನಾಮ, (೨) ರೂಪ, (೩) ಅಸ್ತಿತ್ವ, (೪) ಭಾಸ, (೫) ಪ್ರಿಯ.

(೧) "ಘಟ" ಈ ಎರಡು ಅಕ್ಷರಗಳು ನಾಮವು. ಮತ್ತು (೨)
ಪೃಥುಲವೆಂಬದು ರೂಪವು. (೩) ಘಟ "ಅದೆ" ಇದು ಅಸ್ತಿಯು. (೪)
ಘಟವು ಪ್ರತೀತವಾಗುವದು,, ಇದು ಭಾಸವು (೫) "ಘಟ ಪ್ರಿಯವಾ
ಗಿದೆ,, ಇದು ಆನಂದವು. (ಸರ್ಪಾದಿಗಳು ಸಹ ಸರ್ಪಿಣಿ ಮೊದಲಾದ
ವುಗಳಿಗೆ ಪ್ರಿಯವಾಗಿವೆ.) ಈ ರೀತಿಯಿಂದ ಸರ್ವಪದಾರ್ಥಗಳಲ್ಲಿ ಐದು
ಅಂಶಗಳು ಇರುತ್ತವೆ.

ಇವುಗಳಲ್ಲಿ ಅಸ್ತಿತ್ವ, ಜ್ಞಾನ, ಪ್ರಿಯರೂಪ, ಈ ಮೂರು ಅಂಶಗಳು
ಸರ್ವಪದಾರ್ಥಗಳಲ್ಲಿ ವ್ಯಾಪಕಗಳಾಗಿವೆ. ಮತ್ತುನಾಮರೂಪಗಳು ವ್ಯಭಿ
ಚಾರಿಗಳಾಗಿವೆ.

ಯಾವ ವಸ್ತುವು ಕೆಲವೆಡೆಯಲ್ಲಿ ಇದ್ದು ಕೆಲವೆಡೆಯಲ್ಲಿ ಇರುವದಿಲ್ಲ
ವೋ, ಅದಕ್ಕೆ ವ್ಯಭಿಚಾರಿ ಎನ್ನುತ್ತಾರೆ.

೧-೨ ಘಟನಾಮ ಮತ್ತು ಗೋಲರೂಪಪಟದಲ್ಲಿ ಇಲ್ಲ. ಪಟನಾಮ
ಮತ್ತು ಅದರರೂಪ ಘಟದಲ್ಲಿ ಇಲ್ಲ. ಈ ರೀತಿಯಿಂದ ಸರ್ವಪದಾರ್ಥಗ
ಳಲ್ಲಿ ನಾಮರೂಪ ಅಂಶಗಳು ವ್ಯಭಿಚಾರಿಗಳಾಗಿವೆ.

೩-೫ ಅಸ್ತಿತ್ವ,ಭಾಸ,ಪ್ರಿಯರೂಪಗಳು ಸರ್ವಪದಾರ್ಥಗಳಲ್ಲಿ ಅನು
ಗತಗಳಾಗಿವೆ. ಸರ್ಪದಂಡಾದಿಗಳಲ್ಲಿ ಅನುಗತವಾದ ಇದಂ ಅಂಶವು ಸತ್ಯ
ಮತ್ತು ಅಧಿಷ್ಠಾನವಾಗಿದೆ. ಇದರಂತೆ ಸರ್ವಪದಾರ್ಥಗಳಲ್ಲಿ ಅನುಗತ
ವಾಗಿದ್ದ ಅಸ್ತಿತ್ವ,ಭಾಸ, ಪ್ರಿಯರೂಪಗಳು ಸತ್ಯವಾಗಿಯೂ ಮತ್ತು ಅಧಿ
ಷ್ಠಾನರೂಪವಾಗಿಯೂ ಇವೆ.

೧-೨ ಸರ್ಪ ದಂಡಾದಿಗಳಂತೆ ವ್ಯಭಿಚಾರೀ ನಾಮರೂಪವು ಕಲ್ಪಿತ
ವಾಗಿವೆ. ಮತ್ತು

೩-೫. ಅಸ್ತಿತ್ವ,ಭಾಸ,ಪ್ರಿಯ ಇವು ಸಚ್ಚಿದಾನಂದ... ಈ ಕಾರಣದಿಂದ ಆತ್ಮಸ್ವರೂಪವುಳ್ಳವುಗಳು.

ಈ ರೀತಿಯಿಂದ ಸಚ್ಚಿದಾನಂದರೂಪ ಆತ್ಮನಲ್ಲಿ ಸಂಪೂರ್ಣ... ರೂಪ ಪ್ರಪಂಚವು ಕಲ್ಪಿತವಾಗಿದೆ. ಈ ಕಲ್ಪಿತ ಪದಾರ್ಥ... ಆತ್ಮನಿಗೂ ಜನ್ಮಕ್ಕೆ ಹೇತುವಾಗಿರುವದಿಲ್ಲ; ಇದರಿಂದ ಆತ್ಮ... ವಾಗಿದೆ.

ಯಾವ ವಸ್ತುವಿನ ಜನ್ಮವಾಗುವದೋ ಅದಕ್ಕೆ ಸತ್ತಾ... ಪರಿಣಾಮ, ಅಪಕ್ಷಯ, ವಿನಾಶರೂಪಗಳೆಂಬ ಐದು ವಿಕಾರ... ಆಗುವವು. ಆತ್ಮದ ಜನ್ಮವಾಗುವದಿಲ್ಲ, ಇದರಿಂದ ಮೇಲಿ... ಐದು ವಿಕಾರಗಳು ಸಹ ಆಗುವದಿಲ್ಲ.

ಈ ರೀತಿಯಿಂದ ಅಜನ್ಮ ಆದರೆ ಜನ್ಮಾದಿಕ ಷಡ್ವಿಕಾರ... ಆತ್ಮವು ರಹಿತವಾಗಿರುವದು.

ಸತ್ತಾ ಎಂದರೆ ಪ್ರಕಟತ್ವ, ಮತ್ತು ಅಪಕ್ಷಯವೆಂದರೆ ಘಟ...

ಟಿಪ್ಪಣಿ—(೧) ಜನ್ಮದಿಂದ ರಹಿತವಾದದ್ದು.

(೨) “ಘಟೋಜಾಯತೆ (ಘಟವಾಗುವದು) ಈ ... ಹೇತುವು ಜನ್ಮ ಅದೆ, ಇದಾದಮೇಲೆ “ಘಟೋಜಾತಃ (ಘಟವು ಜನ್ಮ... ಹೊಂದಿತು) ಇದು ವ್ಯವಹಾರದ ಹೇತುವು ಅಸ್ತಿತಾರೂಪ ವಿಕಾರ... ಇದಕ್ಕೆ ಪ್ರಕಟತ್ವವೆಂದೂ ಹೇಳುವರು. ಮತ್ತು ಸತ್ತಾ ಎಂದೂ ಎನ್ನ...

---

## ||೩೧೯|| ಆತ್ಮವು ಅಸಂಗವಾಗಿದೆ.

ಈ ಆತ್ಮವು ಅಸಂಗವಾಗಿದೆ. ಸಂಗವೆಂದರೆ ಸಂಬಂಧ... ಧವು ಸಜಾತೀಯ ವಿಜಾತೀಯ ಸ್ವಗತ ಪದಾರ್ಥಗಳಿಂದ ಆಗು... (೧) ಘಟಘಟಗಳಲ್ಲಿ ಇರುವ ಸಂಬಂಧವು ಸಜಾತೀಯ ಸಂ... ಮತ್ತು (೨) ಘಟಪಟಗಳಲ್ಲಿ ಇರುವಸಂಬಂಧವು ವಿಜಾತೀಯಸಂ... (೩) ಸ್ವಗತನಾಮವು ಅವಯವಗಳಿಗೆ ಇದೆ. ಇದರಿಂದ ಪಟಕ್ಕೆ ... ನೊಡನೆ ಇರುವ ಸಂಬಂಧಕ್ಕೆ ಸ್ವಗತ ಸಂಬಂಧವೆಂದು ಎನ್ನಬೇ...

೧. ಆತ್ಮವು ಎರಡು ಅಥವಾ ಅಸಂಖ್ಯವಾಗಿದ್ದರೆ ಸಜಾತೀ... ದಿಂದ ಆತ್ಮದ ಸಂಬಂಧವಾಗಬೇಕು; ಆದರೆ ಆತ್ಮ ಒಂದೇ ಇದೆ... ಇದರಿಂದ ಸಜಾತೀಯ ಆತ್ಮದಿಂದ ಆತ್ಮನ ಸಂಬಂಧವು ಇಲ್ಲ. ...

೨ ಆತ್ಮದಿಂದ ವಿಜಾತೀಯವಾದದ್ದು ಅನಾತ್ಮನಾಗಿದೆ... ಮೃಗಜಲವತ್ ಆತ್ಮದಲ್ಲಿ ಕಲ್ಪಿತವು. ಈ ಕಲ್ಪಿತದಿಂದ ಆತ್ಮದ...



...ಉಂಟಾಗುವದಿಲ್ಲ; ಮೃಗಜಲಕ್ಕೂ ಪೃಥ್ವಿಗೂ ಸಂಬಂಧವಾಗುವದಿಲ್ಲ. ಈ ಸಂಬಂಧವಿದ್ದರೆ ಮೃಗಜಲದಿಂದ ಊಷರಭೂಮಿಯು ತೊಯ್ದು ಹಸಿಯಾಗುತ್ತಿತ್ತು. ಮೃಗಜಲಕ್ಕೂ ಊಷರಪ್ರದೇಶಕ್ಕೂ ಹೇಗೆ ಸಂಬಂಧವಾಗುವದಿಲ್ಲವೋ, ಹಾಗೆ ಆತ್ಮದಲ್ಲಿ ಕಲ್ಪಿತವಾದ ವಿಜಾತೀಯ ಅನಾತ್ಮಕ್ಕೂ, ಆತ್ಮಕ್ಕೂ ಸಂಬಂಧವಿಲ್ಲ.

೩. ಆತ್ಮಕ್ಕೆ ಅವಯವವಿದ್ದರೆ, ಆತ್ಮದ ಸ್ವಗತತೆಯಿಂದ ಸಂಬಂಧವಾಗುತ್ತಿತ್ತು; ಆದರೆ ಆತ್ಮ ನಿತ್ಯವದೆ. ಅದರಿಂದ ನಿರವಯವವೂ ಆಗಿದೆ. ಇದರ ಸಂಬಂಧವು ಸ್ವಗತತೆಯಿಂದ ಆಗುವದಿಲ್ಲ.

ಈ ರೀತಿಯಿಂದ ಸಜಾತೀಯ ವಿಜಾತೀಯ ಸ್ವಗತ ಸಂಬಂಧವು ಆತ್ಮದಲ್ಲಿ ಇಲ್ಲ. ಈ ಕಾರಣದಿಂದ ಅಸಂಗವದೆ.

ಎಲೌ ಶಿಷ್ಯನೇ ? ಈ ರೀತಿಯಿಂದ ಸಚ್ಚಿದಾನಂದ ಬ್ರಹ್ಮರೂಪವು ಜನ್ಮಾದಿ ವಿಕಾರರಹಿತ ಅಸಂಗ ಆತ್ಮನೇ ನೀನು ಆಗಿರುವಿ ಎಂದು ಅರ್ಧ ದೋಹಾದಿಂದ ಆಚಾರ್ಯನು ಪ್ರಥಮಪ್ರಶ್ನೆಯ ಉತ್ತರವನ್ನುಹೇಳಿದನು

---

೨. ಸಂಸಾರದ ಕರ್ತೃಯಾರು? ಇದರ ಉತ್ತರ ೩೨೦-೩೨೪

## ||೩೨೦|| ಜಗತ್ತಿನ ಕರ್ತೃವು ಈಶ್ವರನು.

“ಜಗತ್ತಿನ ಕರ್ತೃವು ಯಾರು ?,, ಈ ದ್ವಿತೀಯಪ್ರಶ್ನೆಯ ಉತ್ತರವನ್ನು ಅರ್ಧ ದೋಹಾದಿಂದ ಹೇಳುವನು.

|| ದೋಹಾ ||

ವಿಭು ಚೇತನ ಮಾಯಾ ಕರೈ । ಜಗಕೊ ಉತ್ಪತ್ತಿ ಭಂಗ||

ಟೀಕಾ || ವಿಭು ಅಂದರೆ ವ್ಯಾಪಕವಾದ ಚೇತನ, ಇದರ ಆಶ್ರಿತವಾದ ಮತ್ತು ಇದನ್ನು ವಿಷಯವನ್ನಾಗಿ ಮಾಡತಕ್ಕ ಮಾಯಾ ಅಂದರೆ ಸತ್ ಅಸತ್ತುಗಳಿಂದ ವಿಲಕ್ಷಣವಾದ ಅದ್ಭುತಶಕ್ತಿರೂಪ ಅಜ್ಞಾನ, ಇವುಗಳಿಂದ ಜಗತ್ತಿನ ಉತ್ಪತ್ತಿ ಭಂಗಗಳಾಗುವವು.

ಉತ್ಪತ್ತಿ ಮತ್ತು ಭಂಗ ಎಂಬ ಶಬ್ದಗಳಿಂದ ಸ್ಥಿತಿಯ ಗ್ರಹಣವು ಅರ್ಥಾತ್ ಆಗುವದು. ಇದರಿಂದ ಸಿದ್ಧವಾದ ಅರ್ಥವು ಯಾವದೆಂದರೆ (೧) ಮಾಯಾಯುಕ್ತ ಚೇತನಕ್ಕೆ ಈಶ್ವರ ಅನ್ನುತ್ತಾರೆ. (೨) ಈ ಈಶ್ವರನು ಜಗತ್ತಿನ ಉತ್ಪತ್ತಿ, ಪಾಲನ, ನಾಶಗಳಿಗೆ ಹೇತುವಾಗಿರುವನು.

ಈ ಹೇಳುವಿಕೆಯಿಂದ (೧) ಜಗತ್ತಿಗೆ ಕರ್ತೃವು ಯಾವನಾದರೂ ಇರುವನೋ ಅಥವಾ ತನ್ನಷ್ಟಕ್ಕೆ ತಾನೇ ಆಗುವದೋ ! ಈ ಪ್ರಶ್ನೆಯ

ಉತ್ತರವನ್ನು ಹೇಳಿದರು. (೨) "ಜಗತ್ತಿನ ಕರ್ತೃವು ಜೀವನೋ ಅಥವಾ ಈಶ್ವರನೋ ?,, ಈ ಪ್ರಶ್ನೆಯ ಉತ್ತರವನ್ನು ಸಹಾ ಹೇಳಿದರು.

॥೩೭೧॥ ಈಶ್ವರನು ೧ ಸರ್ವಜ್ಞ, ೨ ಸರ್ವಶಕ್ತಿವಾನ, ಮತ್ತು ಸ್ವತಂತ್ರನಿದ್ದಾನೆ. ॥೩೭೧—೩೭೨॥

ಜಗತ್ತಿನ ಕರ್ತೃವು ಈಶ್ವರನು ಆಗಿದ್ದಾನಲ್ಲದೆ ತನ್ನಷ್ಟಕ್ಕೆ ... ರುವವಿಲ್ಲ; ಕರ್ತೃವಿನ ಹೊರತು ಜಗತ್ತು ಆಗಿದ್ದರೆ, ಕುಲಾಲನ ... ಘಟವು ಆಗಬೇಕು. ಹೀಗೆ ಆಗುವದಿಲ್ಲ ; ಆದರಿಂದ ಜಗತ್ತಿಗೆ ಕರ್ತನು ಇದ್ದಾನೆ.

೧. ಈ ಕರ್ತನು ಸರ್ವಜ್ಞನಿದ್ದಾನೆ. ಕಾರಣವೇನಂದರೆ- ಯಾರು ಕಾರ್ಯದ ಕರ್ತೃವಾಗಿರುವನೋ ಅವನು ಆ ಕಾರ್ಯವನ್ನೂ, ... ಅವರ ಉಪಾದಾನಕಾರಣವನ್ನೂ ತಿಳಿದುಕೊಂಡು ಮಾಡುವನು. ... ರ್ತನು ಸಹಾ ಜಗತ್ತನ್ನೂ ಮತ್ತು ಜಗತ್ತಿನ ಉಪಾದಾನಕಾರಣ... ತಿಳಿದುಕೊಂಡು ಮಾಡಿರುವನು. ಈ ರೀತಿಯಿಂದ ಜಗತ್ಕರ್ತನು ಜ... ನ್ನೂ, ಮತ್ತು ಜಗತ್ತಿನ ಉಪಾದಾನವನ್ನೂ ಅರಿತಿರುವನು ಈ ... ದಿಂದ ಸರ್ವಜ್ಞನು ಮತ್ತು

೨. ಸರ್ವಶಕ್ತಿವಾನ್ ಇರುವನು. ಕಾರಣವೇನಂದರೆ- ಅಲ್ಪ... ಯುಳ್ಳ ಜೀವನಿಂದ ಜಗತ್ತಿನ ರಚನೆಯನ್ನು ಮನದಿಂದ ಸಹಾ ... ಮಾಡುವದಕ್ಕೆ ಆಗುವದಿಲ್ಲ. ಇದರಿಂದ ಅದ್ಭುತ ಜಗತ್ತಿನ ಕ... ಅದ್ಭುತಶಕ್ತಿಯುಳ್ಳವನು ಇರುವನು. ಈ ರೀತಿಯಿಂದ ಜಗತ್ಕ... ಸರ್ವಶಕ್ತಿಯುಳ್ಳವನಿರುವನು. ಮತ್ತು-

೩ ಸ್ವತಂತ್ರನಿರುವನು. ಕಾರಣವೇನಂದರೆ—ನ್ಯೂನಶಕ್ತಿ... ವನು ಪರಾಧೀನನಾಗಿರುವನು ; ಸರ್ವಶಕ್ತಿವಂತನು ಪರಾಧೀನ... ದಿಲ್ಲ. ಈ ಕಾರಣದಿಂದ ಸ್ವತಂತ್ರನಿದ್ದಾನೆ.

ಈ ರೀತಿಯಿಂದ ಜಗತ್ಕರ್ತನು ಸರ್ವಜ್ಞನು, ಸರ್ವಶಕ್ತಿ... ಸ್ವತಂತ್ರನು ಆಗಿದ್ದಾನೆ. ಇವನನ್ನೇ ಈಶ್ವರನೆನ್ನುತ್ತಾರೆ.

॥ ೩೭೨ ॥ ಅಲ್ಪಜ್ಞ, ಅಲ್ಪಶಕ್ತಿಯುತ, ಪರಾಧೀನನಾ... ಜೀವ ಅನ್ನುತ್ತಾರೆ.

ಅಲ್ಪಜ್ಞತ್ವ, ಮೊದಲಾದವುಗಳು ಯದ್ಯಪಿ ಜೀವನಲ್ಲಿ ಸತ್ಯವಾ...



ವಿಲ್ಲ. ಆದರೂ ಅವಿದ್ಯಾಕೃತ ಮಿಥ್ಯಾಲ್ಪಜ್ಞತ್ವ ಮೊದಲಾದವುಗಳು ಜೀವನಲ್ಲಿ ಪ್ರತೀತವಾಗುವವು. ಆದರಿಂದ ಜೀವನು ಅಲ್ಪಜ್ಞ ಎಂದು ಎನ್ನುತ್ತಾರೆ.

ಅವಿದ್ಯಾಕೃತ ಅಲ್ಪಜ್ಞತ್ವ ಮೊದಲಾದ ಭ್ರಾಂತಿಗಳಿಗೇ ಜೀವತ್ವವೆ ...ವೇಕು. ಈ ಅಲ್ಪಜ್ಞತ್ವವೊದಲಾದ ಭ್ರಾಂತಿಗಳು ಈಶ್ವರನಲ್ಲಿ ಇರುವ ...ಲ್ಲ. ಆದರೆ ಮಾಯಾಕೃತ ಸರ್ವಜ್ಞತ್ವಾದಿಗಳು ಈಶ್ವರನಲ್ಲಿವೆ. ಈ ಸಂಗ ...ತಿಯನ್ನು ವಿಸ್ತಾರವಾಗಿ ಮುಂದೆ ಪ್ರತಿಪಾದನಮಾಡುತ್ತೇವೆ

ಈ ಪ್ರಕಾರದಿಂದ ಜಗತ್ಕರ್ತನು ಜೀವನಲ್ಲ. ಈಶ್ವರನಾಗಿದ್ದಾನೆ.

॥೪೭೩॥ ಈಶ್ವರನು ವ್ಯಾಪಕ ಮತ್ತು ನಿತ್ಯನಿದ್ದಾನೆ.

ಈ ಈಶ್ವರನು ಒಂದೇಸ್ಥಳದಲ್ಲಿ ಸ್ಥಿತನಾಗಿ ಇಲ್ಲ ; ಆದರೆ ಸರ್ವತ್ರ ವ್ಯಾಪಕನಾಗಿರುವನು. ಒಂದೇಸ್ಥಳದಲ್ಲಿ ಸ್ಥಿರನಾಗಿರುವನು ಎಂದು ಅಂಗೀ ಕರಿಸಿದರೆ ಯಾವವಸ್ತುವು ದೇಶದಿಂದ ಅಂತವಾಗುವದೋ ಅದಕ್ಕೆ ಕಾಲ ದಿಂದಲೂ ಸಹ ಅಂತವುಂಟಾಗುವದು; ಇದರಿಂದ ಅನಿತ್ಯತ್ವವು ಬರುವದು ಯಾವ ವಸ್ತುವು ಅನಿತ್ಯವಾಗಿರುವದೋ ಅದು ಕರ್ತೃವಿನಿಂದ ಜನ್ಯವಾದ ...ದ್ದಾಗಿರುವದು ಆದರಿಂದ ಈಶ್ವರನನ್ನೇ ತನ್ನಕರ್ತೃವೆಂದೂ ಅಂಗೀಕಾರಮಾ ...ಡಬೇಕಾದೀತು! ಈಶ್ವರನೇ ತಮ್ಮಕರ್ತೃವೆಂಬುವು ಸರಿಯಾದದ್ದಲ್ಲ. ಕಾರ ...ಣವೇನಂದರೆ- (೧) ತಾನೇತನ್ನ ಕರ್ತೃವಾಗುವದು ಸಂಭವಿಸುವದಿಲ್ಲ.ತನ್ನ ಕರ್ತೃವು ತಾನೇ ಎಂದು ಅಂಗೀಕರಿಸಿದರೆ ಆತ್ಮಾಶ್ರಯದೋಷವುಂಟಾಗು ವದು. ಎಲ್ಲಿತಾನೇ ಕ್ರಿಯೆಯ ಕರ್ತೃವೂ (ಆಶ್ರಯ) ಮತ್ತು ತಾನೇ ಕ್ರಿಯೆಯ ಕಾರ್ಯವಾಗುವದೋ, ಅಲ್ಲಿ ಆತ್ಮಾಶ್ರಯವಾಗುವದು. ಕುಲಾ ಲನು ಕ್ರಿಯೆಯ ಕರ್ತೃವಾಗಿರುವನು. ಘಟವು ಕರ್ಮವಾಗಿರುವದು. ಇದ ರಂತೆ ಕ್ರಿಯೆಯ ಕರ್ತಾ-ಮತ್ತು ಕರ್ಮ ಭಿನ್ನವಾಗಿರುವವು ಒಂದೇಯಾ ಗಿರುವದಿಲ್ಲ; ಇದರಿಂದ ಆತ್ಮಾಶ್ರಯದೋಷವದೆ. ಕರ್ಮವೆಂದರೆ ಕಾರ್ಯ ವು. ಕಾರ್ಯದ ವಿರೋಧಿಯನಾಮವು ದೋಷವು. ಆತ್ಮಾಶ್ರಯವು ಕಾರ್ಯದ ವಿರೋಧಿಯದೆ; ಆದರಿಂದ ದೋಷವದೆ. ಈ ಕಾರಣದಿಂದ-

೨. ಈಶ್ವರನ ಕರ್ತಾ ಅನ್ಯ ಅಂಗೀಕಾರಮಾಡಬೇಕಾಗುವದು. ಈ ಅನ್ಯವನ್ನು ಸಹಾ ಪ್ರಥಮಕರ್ತೃವಿನಂತೆ, ಕರ್ತಾಜನ್ಯನೆಂದು ಹೇಳಬೇಕಾ ಗುವದು. ಈ ಕರ್ತನಿಗಾದರೂ ಪ್ರಥಮದಂತೆ ಆದರಿಂದ ಭಿನ್ನನೆಂದೂ ಹೇಳಬೇಕಾದೀತು; ಆದರಿಂದ ಪ್ರಥಮಕರ್ತೃವಾದ ಈಶ್ವರನನ್ನು ದ್ವಿತೀಯ

ಕರ್ತೃವಿನ ಕರ್ತೃವೆಂದು ಅಂಗೀಕರಿಸಿದರೆ ಅನ್ಯೋನ್ಯಾಶ್ರಯದೋಷವಾಗುವದು. ಇದರಂತೆ-

೩. ತೃತೀಯ ಕರ್ತೃವನ್ನೂ ಅಂಗೀಕಾರಮಾಡಬೇಕಾದೀತು! ತೃತೀಯಕರ್ತನು ದ್ವಿತೀಯಕರ್ತೃವಿನ ಕರ್ತೃವೆಂದು ಅಂಗೀ... ಅನ್ಯೋನ್ಯಾಶ್ರಯ ದೋಷವು ಆಗುವದು. ಮತ್ತು ಪ್ರಥಮನ... ಕರ್ತೃವೆಂದು ಅಂಗೀಕರಿಸಿದರೆ ಚಕ್ರಿಕಾದೋಷವಾಗುವದು.

ಚಕ್ರವು ಹೇಗೆ ಭ್ರಮಣವನ್ನು ಹೊಂದುತ್ತಿರುವದೋ, ಹಾಗೆ ಪ್ರಥಮಕರ್ತೃವು ದ್ವಿತೀಯಕರ್ತೃವಿನ ಜನ್ಯನೂ (೨) ದ್ವಿತೀಯ ಕ... ತೃತೀಯಕರ್ತೃವಿನ ಜನ್ಯನೂ (೩) ತೃತೀಯನು ಪ್ರಥಮ ಕರ್ತೃ... ಜನ್ಯನೂ (೪) ಪುನಃ ಪ್ರಥಮನು ದ್ವಿತೀಯಜನ್ಯನು. ಈ ರೀತಿ... ಕಾರ್ಯಕಾರಣಭಾವದ ಭ್ರಮಣವಾಗುವದು. ಚಕ್ರಿಕಾಸ್ಥಾನ... ಯಾವದೂ ಸಿದ್ಧವಾಗುವದಿಲ್ಲ. ಸರ್ವವೂ ಪರಸ್ಪರ ಅಪೇಕ್ಷಿತವಾ...

೪. ಅನ್ಯೋನ್ಯಾಶ್ರಯದಲ್ಲಿ ಎರಡರಲ್ಲಿಯೇ ಪರಸ್ಪರ ಅಪೇಕ್ಷೆ... ರುವದು. ಒಂದರ ಸಿದ್ಧಿಯು ಆಗದಹೊರತು ಮತ್ತೊಂದರ ಸಿ... ಆಗುವದಿಲ್ಲ. (೧) ಕುಲಾಲನ ಕರ್ತೃವು ಕುಲಾಲನಲ್ಲ; ಅವನ ಪಿತ... ವನು. ಇದರಂತೆ ಪ್ರಥಮ ಈಶ್ವರನಕರ್ತೃವು ಅನ್ಯಕರ್ತೃವಿರುವನು. ... (೨) ಕುಲಾಲನ ಪಿತನು ತನ್ನ ಪುತ್ರನಿಂದ ಉತ್ಪನ್ನನಾಗುವದಿಲ್ಲ; ... ಅನ್ಯಪಿತನಿಂದ ಉತ್ಪನ್ನನಾಗಿರುವನು. ಇದರಂತೆ ದ್ವಿತೀಯಕರ್ತೃವು ... ಮಕರ್ತೃವಿನಿಂದ ಉತ್ಪನ್ನನಾಗಿರುವದಿಲ್ಲ; ಅನ್ಯಕರ್ತೃವಿನಿಂದಲೇ ... ಹೇಳಬೇಕಾಗುವದು. ಮತ್ತು (೩) ಕುಲಾಲನ ಪಿತಾಮಹನು. ಕು... ಮತ್ತು ಅವನಪಿತನಿಂದ ಉತ್ಪನ್ನನಾಗಿರುವದಿಲ್ಲ, ಆದರೆ ಚತುರ್ಥ ಪ್ರಪಿ... ಮಹನಿಂದ ಉತ್ಪನ್ನನಾಗಿರುವನು. (೪) ಇದರಂತೆ ತೃತೀಯಕ... ಪ್ರಥಮ ಮತ್ತು ದ್ವಿತೀಯಕರ್ತೃವಿನಿಂದ ಉತ್ಪನ್ನನಾಗಿರುವದಿಲ್ಲ. ... ರಿಂದ ಚತುರ್ಥ ಕರ್ತೃವಿರುವನೆಂದು ಪುನಃ ಅಂಗೀಕಾರ ಮಾಡಬೇಕಾ... ವದು. (೫) ಈ ಚತುರ್ಥ ಕರ್ತೃವಿನ ಕರ್ತೃವು ಇನ್ನೊಬ್ಬ ಪಂಚಮ... ತಿಳಿಯಬೇಕಾಗುವದು; ಅದರಿಂದ ಅನವಸ್ಥಾದೋಷ ಉಂಟಾಗು... ಪರಂಪರಾ ಸಂಬಂಧಕ್ಕೆ ಅನವಸ್ಥೆಯೆಂಬ ನಾಮವು ಕರ್ತೃಗಳ ... ಸಂಬಂಧವನ್ನು ಅಂಗೀಕರಿಸಿದರೆ ಯಾವಕರ್ತೃವು ಜಗತ್ತನ್ನು ಸಿ... ನೆಂಬದು ನಿರ್ಣಯವಾಗಲಾರದು.

೫. ಯಾವನಾದರೊಬ್ಬನಿಗೆ ಜಗತ್ತಿನ ಕರ್ತೃವೆಂದು ನಿಶ್ಚ...



ವಲ್ಲಿ ಯಾವ ಯುಕ್ತಿಯೂ ಇಲ್ಲ. ಈ ಯುಕ್ತಿಯ ಅಭಾವದ ನಾಮಕ್ಕೆ ವಿನಿಗಮನ ವಿರಹವೆನ್ನುತ್ತಾರೆ.

೬. ಪರಸ್ಪರ ಸಂಬಂಧದ ವಿರಾಮವನ್ನು ಮಧ್ಯದಲ್ಲಿ ಎಲ್ಲಿಯಾದರೂ ಅಂಗೀಕರಿಸಿದರೆ ಯಾವಕರ್ತೃವಿನಲ್ಲಿ ಸಂಬಂಧದ ಅಂತ್ಯವನ್ನು ಅಂಗೀಕರಿಸುವೆವೋ ಅವನೇಜಗತ್ಕರ್ತನೆಂದು ತಿಳಿಯುವದು ಯೋಗ್ಯವಾಗುವದು ಅದರಿಂದ ಪೂರ್ವದ ಸರ್ವಕರ್ತೃಗಳೆಲ್ಲ ನಿಷ್ಫಲವಾದಂತಾಯಿತು. ಇದಕ್ಕೆ ಪ್ರಾಗ್ಲೋಪವೆಂಬಹೆಸರು ಹಿಂದಿನವರ ಅಭಾವದನಾಮವೇಪ್ರಾಗ್ಲೋಪವು

ಈ ರೀತಿಯಿಂದ ಈಶ್ವರನಿಗೆ ದೇಶದಿಂದ ಅಂತವನ್ನು ಅಂಗೀಕಾರಮಾಡಿದರೆ, ಉತ್ಪತ್ತಿಯನ್ನು ಅಂಗೀಕಾರಮಾಡಬೇಕಾಗುವದು. ಉತ್ಪತ್ತಿಯನ್ನು ಅಂಗೀಕರಿಸುವದರಿಂದ ಆತ್ಮಾಶ್ರಯಾದಿ ಷಟ್ ದೋಷಗಳು ಆಗುವವು ಅದರಿಂದ ಈಶ್ವರನ ಅಂತ್ಯವು ದೇಶದಿಂದ ಇಲ್ಲ, ಆದರೆ ಈಶ್ವರನು ವ್ಯಾಪಕನೂ ಈ ಕಾರಣದಿಂದ ನಿತ್ಯನೂ ಆಗಿದ್ದಾನೆ.

## ||೩೭೪|| ಈಶ್ವರ, ಮತ್ತು ಜೀವ, ಇವರಭೇದವು ಸ್ವರೂಪದಿಂದ ಇಲ್ಲ.

ಈ ವ್ಯಾಪಕ ಈಶ್ವರನ ಮತ್ತು ಜೀವ ಇವರ ಸ್ವರೂಪದಲ್ಲಿ ಭೇದವಿಲ್ಲ. ಆದರೆ ಉಪಾಧಿಯಿಂದ ಭೇದವದೆ. ಕಾರಣವೇನಂದರೆ-

೧. ಅವಚ್ಛೇದವಾದದಲ್ಲಿ (೧) ಮಾಯಾ ವಿಶಿಷ್ಟಚೇತನಕ್ಕೆ ಈಶ್ವರನೆಂದುಹೇಳಿದ್ದಾರೆ (೨)ಅವಿದ್ಯಾವಿಶಿಷ್ಟ ಚೇತನಕ್ಕೆಜೀವನೆಂದು ಹೇಳಿದ್ದಾರೆ

೨. ಆಭಾಸವಾದದಲ್ಲಿ (೧) ಮಾಯಾ ಮತ್ತು ಆಭಾಸ ವಿಶಿಷ್ಟ ಚೇತನಕ್ಕೆ ಈಶ್ವರನೆಂದು ಹೇಳಿದ್ದಾರೆ. ಮತ್ತು (೨) ಆಭಾಸಸಹಿತ ಅವಿದ್ಯಾವಿಶಿಷ್ಟಚೇತನಕ್ಕೆ ಜೀವನೆಂದು ಹೇಳಿದ್ದಾರೆ.

೧. ಆಭಾಸವಾದದಲ್ಲಿ ಆಭಾಸಸಹಿತ ಅವಿದ್ಯಾ ಮತ್ತು ಮಾಯಾದಲ್ಲಿ ಭೇದವದೆ, ಚೇತನದಲ್ಲಿ ಇಲ್ಲ.

೨. ಇದರಂತೆ ಅವಚ್ಛೇದವಾದದಲ್ಲಿಯೂ ಅವಿದ್ಯಾ ಮತ್ತು ಮಾಯಾದಲ್ಲಿ ಭೇದವದೆ. ಸ್ವರೂಪದಿಂದ ಚೇತನದ ಭೇದವಿಲ್ಲ.

೩. (೧) ಅಜ್ಞಾನದಲ್ಲಿ ಚೇತನದ ಪ್ರತಿಬಿಂಬವು ಜೀವನದೆ. ಮತ್ತು (೨) ಬಿಂಬವು ಈಶ್ವರನಿದ್ದಾನೆ.

ಈ ಪಕ್ಷದಲ್ಲಿ ಸಹಾ ಸ್ವರೂಪದಿಂದ ಚೇತನದ ಭೇದವಿಲ್ಲ. ಆದರೆ

ಒಂದೇ ಚೇತನದಲ್ಲಿ ಜೀವತ್ವ ಮತ್ತು ಈಶ್ವರತ್ವವು ಆರೋಪಿತ
ಈ ಸಂಗತಿಯನ್ನು ಮುಂದೆ ಹೇಳುವೆವು.

ಈ ರೀತಿಯಿಂದ ಈಶ್ವರನು ಜಗತ್ಕರ್ತನೂ, ಸರ್ವಜ್ಞನೂ ಶ
ಕ್ತಿಯುತನೂ, ಸ್ವತಂತ್ರನೂ ಇದ್ದಾನೆ.

ಈ ಈಶ್ವರನು ವ್ಯಾಪಕನಿದ್ದಾನೆ. ಈಶ್ವರನ ಮತ್ತು ಜೀವನ ಭೇ
ವಿಶೇಷಣಮಾತ್ರದಿಂದ ಅದೆ; ಸ್ವರೂಪದಿಂದ ಅಭೇದವದೆ. ಇದು
ಯಪ್ರಶ್ನೆಯ ಉತ್ತರವು.

ಟಿಪ್ಪಣಿ—(೧) ಈ ಸಂಗತಿಯನ್ನು ಮುಂದೆ ೪೩೮ ರಿಂದ ೪೪೫ರ ವ
ತರ ಇರುವ ಅಂಕೆಗಳ ವಿಷಯದಲ್ಲಿ ಹೇಳುವೆವು, ಇದು ಮೂರನೆಯದಾದ
ಪ್ರತಿಬಿಂಬವಾದವಾಗಿದೆ.

(೩. ಮುಕ್ತಿಯ ಹೇತುವು ಯಾವದು ? ಇದರ ಉತ್ತರವು. ೩೭...

## ||೩೭೫|| ಮುಕ್ತಿಗೆ ಜ್ಞಾನವು ಹೇತುವಾಗಿದೆ.

ಮೋಕ್ಷಕ್ಕೆ ಸಾಧನವು ಜ್ಞಾನವೋ ಅಥವಾ ಕರ್ಮವೋ ಅ
ಉಪಾಸನೆಯೋ ? ಇಲ್ಲವೆ ಎರಡೂ ಇರುವವೋ ? ಇದರ ಉತ್ತ
ಹೇಳುವರು

||ದೋಹಾ||

ಹೇತು ಮೋಛಕೊ ಜ್ಞಾನ ಇಕ । ನಹೀ ಕರ್ಮ ನಹಿಧ್ಯಾ
ರಜ್ಜುಸರ್ಪತಬಹೀ ನಸೈ । ಹೋಯು ರಜ್ಜುಕೋ ಜ್ಞಾನ ||

ಟೀಕಾ || ಮುಕ್ತಿಯ ಹೇತುವು ಕರ್ಮ, ಮತ್ತು ಧ್ಯಾನ
ಉಪಾಸನೆಗಳು ಅಲ್ಲ. ಆದರೆ ಜ್ಞಾನವೇ ಹೇತುವಾಗಿದೆ. ಕಾರಣವೇ
ಆತ್ಮದಲ್ಲಿ ಬಂಧವು ಸತ್ಯವಾಗಿದ್ದರೆ ಅದರ ನಿವೃತ್ತಿರೂಪ ಮೋಕ್ಷವು
ದಿಂದ ಆಗುವದಿಲ್ಲ; ಕರ್ಮ, ಮತ್ತು ಉಪಾಸನೆಯಿಂದ ಆಗು
ಈ ಬಂಧವು ಅತ್ಮದಲ್ಲಿ ಸತ್ಯವಿಲ್ಲ, ಆದರೆ ರಜ್ಜು ಸರ್ಪವತ್ ಮಿ
ಗಿದೆ. ಈ ಮಿಥ್ಯೆಯ ನಿವೃತ್ತಿಯು ಅಧಿಷ್ಠಾನ ಜ್ಞಾನದಿಂದಲೇ ಆ
ಕರ್ಮ ಅಥವಾ ಉಪಾಸನಗಳಿಂದ ಆಗುವದಿಲ್ಲ; ರಜ್ಜುಸರ್ಪವು
ಕ್ರಿಯೆಯಿಂದಲೂ ದೂರವಾಗುವದಿಲ್ಲ. ಕೇವಲ ರಜ್ಜುಜ್ಞಾನದಿ
ದೂರವಾಗುವದು. ಇದರಂತೆ ಆತ್ಮದ ಅಜ್ಞಾನದಿಂದ ಪ್ರತೀತವಾ
ಧವು ಮತ್ತು ಈ ಬಂಧದ ಪ್ರತೀತಿಯೂ ಅಜ್ಞಾನವೂ ಆತ್ಮಜ್ಞಾ
ದಲೇ ನಿವೃತ್ತವಾಗುವವು



## ||೩೭೬|| ಕರ್ಮ, ಮತ್ತು ಉಪಾಸನೆಗಳು, ಮುಕ್ತಿಗೆ ಸಾಧನಗಳಲ್ಲ. ||೩೭೬—೩೭೯||

೧. ಕರ್ಮದ ಫಲವು ಮೋಕ್ಷವಾದರೆ, ಮೋಕ್ಷವು ಅನಿತ್ಯವಾಗುವದು. ಕಾರಣವೇನಂದರೆ ಕೃಷ್ಯಾದಿಗಳ ಫಲವು ಅನ್ನಾದಿಕಗಳು ಆಗಿರುವವು. ಇವು ಅನಿತ್ಯ ಅವೆ. ಮತ್ತು ಯಜ್ಞಾದಿಕರ್ಮಗಳ ಫಲವಾಗಿರುವ ಸ್ವರ್ಗಾದಿಗಳು ಸಹ ಅನಿತ್ಯವಾಗಿರುವವು. ಎಂಬ ನಿಯಮಗಳಂತೆ ಮೋಕ್ಷವೂ ಕೂಡ ಕರ್ಮಫಲವೆಂದು ಅಂಗೀಕರಿಸಿದರೆ ಅನಿತ್ಯವಾಗುವದು. ಈಕಾರಣದಿಂದ ೧ ಕರ್ಮಫಲವು ಮೋಕ್ಷವಲ್ಲ.

೨. ಇದರಂತೆ ಉಪಾಸನೆಯ ಫಲವನ್ನು ಮೋಕ್ಷವೆಂದು ಅಂಗೀಕರಿಸಿದರೆ ಮೋಕ್ಷವು ಅನಿತ್ಯವಾಗುವದು. ಕಾರಣವೇನಂದರೆ-ಉಪಾಸನೆಯು ಸಹಾ ಮಾನಸಕರ್ಮವದೆ, ಮತ್ತು ಕರ್ಮದಫಲವು ಅನಿತ್ಯವಾಗಿರುವದು. ಇದರಿಂದ ಉಪಾಸನಾರೂಪ ಕರ್ಮದ ಫಲವು ಸಹಾ ಮೋಕ್ಷವಲ್ಲ. ಮತ್ತು-

ಟಿಪ್ಪಣಿ—೧ "ಕರ್ಮರಚಿತ ಲೋಕವು ಕ್ಷೀಣವಾಗುವಂತೆ, ಪುಣ್ಯರಚಿತ ಲೋಕವು ಸಹ ಕ್ಷೀಣವಾಗುವದು. ಹೀಗೆ ಕರ್ಮರಚಿತ ಲೋಕಗಳನ್ನು ಅನಿತ್ಯವೆಂದು ತಿಳಿದುಕೊಂಡು, ಅದರಿಂದ ಬ್ರಾಹ್ಮಣನು ಬ್ರಹ್ಮನಾಗಬೇಕೆಂಬುದೆ ಇಚ್ಛೆಯುಳ್ಳ ಮುಮುಕ್ಷುವು) ವೈರಾಗ್ಯವನ್ನು ಹೊಂದುವನು. ಕೃತಕರ್ಮದಿಂದ ಅಕೃತ ಮೋಕ್ಷವು ಇಲ್ಲ. ಈ ಶ್ರುತಿಯಿಂದ ಮತ್ತು "ಭಾವನೆ (ಉಪಾಸನೆ) ಯಿಂದ ಜನ್ಯವಾದ ಫಲವೂ ಕರ್ಮದಫಲವೂ ಸ್ಥಿರಗಳು ಎಂದು ತಿಳಿಯುವದು ಯೋಗ್ಯವವಲ್ಲ. ದ್ರವಿಡದೇಶವಾಸೀ ಜನಗಳಲ್ಲಿ ಸಂಗೀತವತ್,, ಈ ಸುರೇಶ್ವರಾಚಾರ್ಯರ ವಾಕ್ಯರೂಪ ಸ್ಮೃತಿಯಿಂದ, ಕರ್ಮದ ಇಲ್ಲವೆ ಉಪಾಸನೆಯ ಫಲವು ಮೋಕ್ಷವಲ್ಲ. ಇದು ನಿಶ್ಚಿತವದೆ.

||೩೭೭|| ಕರ್ಮಕರ್ತೃವಿಗೆ ಕರ್ಮದಿಂದ ಐದುಪ್ರಕಾರದ ಉಪಯೋಗವಾಗುವದು. (೧) ಪದಾರ್ಥದ ಉತ್ಪತ್ತಿ, (೨) ನಾಶ, (೩) ಅಥವಾ ಪದಾರ್ಥದ ಪ್ರಾಪ್ತಿ, (೪) ಇಲ್ಲವೆ ಪದಾರ್ಥಗಳ ವಿಕಾರ, (೫) ಇದರಂತೆ ಸಂಸ್ಕಾರ. ಅನ್ಯರೂಪದ ಪ್ರಾಪ್ತಿಯ ನಾಮವು ವಿಕಾರವದೆ.

ಸಂಸ್ಕಾರವು ಎರಡು ಪ್ರಕಾರವಾಗಿ ಆಗುವದು. ಮಲನಿವೃತ್ತಿ ಮತ್ತು ಗುಣದ ಉತ್ಪತ್ತಿ.

ಈ ಐದು ಪ್ರಕಾರದ ಕರ್ಮಗಳಿಂದ ಉಪಯೋಗವಾಗುವದು. ಈ ಉಪಯೋಗವು ಮುಮುಕ್ಷುವಿಗೆ ಉಂಟಾಗುವದಿಲ್ಲ ; ಅದರಿಂದ ಮುಮುಕ್ಷುವು

ಜ್ಞಾನಾದಿ ಸಾಧನವಾದ ಶ್ರವಣಾದಿಗಳಲ್ಲಿ ಪ್ರವೃತ್ತನಾಗುವನು. ಕರ್ಮದಲ್ಲಿ ಆಗುವದಿಲ್ಲ.

೧. ಕುಲಾಲನ ಕರ್ಮದಿಂದ, ಕುಲಾಲನಿಗೆ ಘಟದ ಉತ್ಪ ಉಪಯೋಗವು ಹೇಗೆ ಆಗುವದೋ, ಹಾಗೆ ಮುಮುಕ್ಷುವಿಗೆ ಕ ಮೋಕ್ಷದ ಉತ್ಪತ್ತಿಯ ಉಪಯೋಗವು ಸಂಭವಿಸುವದಿಲ್ಲ. ಕಾ ನೆಂದರೆ:ಮೋಕ್ಷವು ಅನರ್ಥನಿವೃತ್ತಿ, ಮತ್ತು ಪರಮಾನಂದ ಪ್ರಾಪ್ತಿ ವುಳ್ಳದಾಗಿದೆ.

೧

(೧) ಈ ಅನರ್ಥದ ನಿವೃತ್ತಿಯು ಆತ್ಮದಲ್ಲಿ ನಿತ್ಯಸಿದ್ಧವದೆ. ನಲ್ಲಿ ಸರ್ಪದನಿವೃತ್ತಿಯು ನಿತ್ಯಸಿದ್ಧವದೆ. (೨) ಆತ್ಮವು ಪರಮ ಸ್ವರೂಪವದೆ. ಇದರಿಂದ ಪರಮಾನಂದದ ಪ್ರಾಪ್ತಿಯು ಸಹಾ ವದೆ. ಈ ರೀತಿಯಿಂದ ಸ್ವಭಾವಸಿದ್ಧಮೋಕ್ಷದ ಉತ್ಪತ್ತಿಯು ದಿಂದ ಆಗುವದಿಲ್ಲ.

ಯಾವ ವಸ್ತುವು ಪೂರ್ವದಲ್ಲಿ ಸಿದ್ಧವಿರುವದಿಲ್ಲವೋ, ಅದರ ತ್ತಿಯು ಕರ್ಮದಿಂದ ಆಗುತ್ತದೆ; ಮತ್ತು ಸಿದ್ಧವಸ್ತುವಿನ ಉತ್ಪತ್ತಿ ಆಗುವದಿಲ್ಲ.

ಟಿಪ್ಪಣಿ—೧. ರಜ್ಜುವಿನಲ್ಲಿ ವ್ಯಾವಹಾರಿಕಸತ್ತೆಯುಳ್ಳ ಸರ್ಪದ ಅಭಾವ ಸರ್ಪದ ನಿವೃತ್ತಿಯು ಹೇಗೆ ನಿತ್ಯಸಿದ್ಧವಿರುವದೋ, ಹಾಗೆ ಆತ್ಮದಲ್ಲಿ ಪರ ಸತ್ತೆಯುಳ್ಳ ಕಾರ್ಯಸಹಿತ ಅಜ್ಞಾನರೂಪ ಅನರ್ಥದ ಅತ್ಯಂತಾ ಭಾವ ನಿವೃತ್ತಿಯು ನಿತ್ಯಸಿದ್ಧವದೆ.

೨. ವಿಸ್ಮೃತ ಕಂಠಮಣಿಯ ಪ್ರಾಪ್ತಿ ಇಲ್ಲದೆ ಗೃಹದಲ್ಲಿ ಹುಗಿದಿದ್ದ ಯಪ್ರಾಪ್ತಿಯು ಹೇಗೆ ನಿತ್ಯಸಿದ್ಧವಯೋ, ಅದರಂತೆ ನಿಜರೂಪ ಪರಮಾನ ಪ್ರಾಪ್ತಿಯು ಸಹಾ ಸರ್ವರಿಗೂ ನಿತ್ಯಸಿದ್ಧವದೆ.

---

||೩೭೮|| ವೇದಾಂತಶ್ರವಣವು ಸಹಾ ಮೋಕ್ಷದ ಉತ್ಪತ್ತಿಯ ನಿಮಿ ವಲ್ಲ. ಆದರೆ 'ಆತ್ಮವು ನಿತ್ಯಮುಕ್ತನಾಗಿದೆ. ಕಿಂಚಿನ್ಮಾತ್ರವೂ ಕರ್ತವ್ಯವಿಲ್ಲ' ಬ ಸಂಗತಿಯನ್ನು ತಿಳಿದುಕೊಳ್ಳುವದರ ಸಲುವಾಗಿ ಶ್ರವಣವದೆ. ಇದ ಅರಿತುಕೊಂಡು ಕರ್ತವ್ಯಭ್ರಾಂತಿಯು ದೂರವಾಗುವದು. ಮತ್ತು

ವೇದಾಂತ ಶ್ರವಣಾನಂತರವೂ ಕೂಡ ಯಾವನಿಗೆ ಕರ್ತವ್ಯ ಯನಾಶವನ್ನು ಹೊಂದುವದಿಲ್ಲವೋ, ಅವನಿಂದ ತತ್ತ್ವವನ್ನು ತಿಳಿದು ಲು ಆಗುವದಿಲ್ಲ. ಈ ಕಾರಣದಿಂದ ನಿತ್ಯನಿವೃತ್ತಿಯು ಅನರ್ಥದ ನಿವೃ



ಮತ್ತು ನಿತ್ಯಪ್ರಾಪ್ತಿಯು ಆನಂದದ ಪ್ರಾಪ್ತಿಯೂ, ವೇದಾಂತ ಶ್ರವಣದ ಫಲ, ಇವುಗಳನ್ನು ದೇವ ಗುರುವು ನೈಷ್ಕರ್ಮ್ಯಸಿದ್ಧಿ ಗ್ರಂಥದಲ್ಲಿ ಕಥನ ಮಾಡಿರುವನು.

ಈ ಕಾರಣದಿಂದ ಮೋಕ್ಷದ ಉತ್ಪತ್ತಿರೂಪವಾದ ಕರ್ಮದ ಉಪ ಯೋಗವು ಮುಮುಕ್ಷುವಿಗೆ ಉಂಟಾಗುವದಿಲ್ಲ.

ಶ್ಲೋ॥ ಜ್ಞಾನಾಮೃತೇನ ತೃಪ್ತಸ್ಯ । ಕೃತಕೃತ್ಯಸ್ಯ ಯೋಗಿನಃ ॥
ನೈವಾಸ್ತಿ ಕಿಂಚಿತ್ ಕರ್ತವ್ಯ । ಮಸ್ತಿ ಚೇನ್ನ ಸ ತತ್ತ್ವವಿತ್ ॥೭॥

ಇದರ ಅರ್ಥ॥ ಜ್ಞಾನರೂಪಾಮೃತದಿಂದ ತೃಪ್ತನು, ಮತ್ತು ಇದರಿಂದ ಕೃತ ಕೃತ್ಯನು [ಕೃತಾರ್ಥನೂ] ಆದ ಯಾವ ಯೋಗಿ[ಜ್ಞಾನಿ]ಯು ಇರುವನೋ ಅವನಿಗೆ ಮೋಕ್ಷಾರ್ಥ, ಇಲ್ಲವೆ ಜ್ಞಾನಾರ್ಥವಾಗಿ ಕಿಂಚಿತ್ ಕರ್ತವ್ಯವಾದರೂ ಇರುವದಿಲ್ಲ. ಮತ್ತು ಯಾವನಿಗೆ ಕರ್ತವ್ಯವಿದೆಯೋ ಅವನು ತತ್ತ್ವವೇತ್ತನಲ್ಲ.

೨. ಯಾವನಿಗೆ ಮಂಡನ ಮಿಶ್ರನೆಂಬ ಉಪನಾಮವಿತ್ತೋ, ಆ ಶಂಕರಾಚಾರ್ಯರ ಶಿಷ್ಯನಾದ ಸುರೇಶ್ವರಾಚಾರ್ಯನಿಂದ, ನೈಷ್ಕರ್ಮ್ಯಸಿದ್ಧಿಯು ಬರೆಯಲ್ಪಟ್ಟಿತು.

---

||೩೭೯|| ೧. ದಂಡಪ್ರಹಾರರೂಪ ಕರದ ಉಪಯೋಗವು ಘಟನಾಶಕ್ಕೆ ಆಗುವಂತೆ, ಮುಮುಕ್ಷುವಿಗೆ ಕರ್ಮದಿಂದ ಯಾವ ಪದಾರ್ಥದ ನಾಶರೂಪ ಉಪಯೋಗವು ಸಹಾ ಆಗುವದಿಲ್ಲ. ಕಾರಣವೇನಂದರೆ, ಅನ್ಯಪದಾರ್ಥದ ನಾಶವು ಮುಮುಕ್ಷುವಿಗೆ ವಾಂಛಿತವಲ್ಲ. ಬಂಧದನಾಶವೇ ಕರ್ಮದಿಂದ ಉಪಯೋಗವು. ಅಂದರೆ ಈ ಬಂಧವು ಆತ್ಮನಲ್ಲಿ ಇರುವದಿಲ್ಲ; ಮಿಥ್ಯಾ ಪ್ರತೀತವಾಗುತ್ತದೆ. ಈ ಮಿಥ್ಯಾಪ್ರತೀತಿಯ ನಾಶವು ಕರ್ಮದಿಂದ ಆಗುವದಿಲ್ಲ; ಮತ್ತು ಆತ್ಮದ ಯಥಾರ್ಥಜ್ಞಾನದಿಂದ, ಆ ಮಿಥ್ಯಾಪ್ರತೀತಿಯ ನಾಶವು ಉಂಟಾಗುವದು. ಈ ಕಾರಣದಿಂದ ಮುಮುಕ್ಷುವಿಗೆ ಪದಾರ್ಥ ನಾಶರೂಪ ಉಪಯೋಗವು ಸಹ ಕರ್ಮದಿಂದ ಉಂಟಾಗುವುದಿಲ್ಲ.

೨. ಗಮನರೂಪ ಕರ್ಮದಿಂದ ಹೇಗೆ ಗ್ರಾಮದ ಪ್ರಾಪ್ತಿಯು ಆಗುವದೋ, ಹಾಗೆ ಮೋಕ್ಷಪ್ರಾಪ್ತಿರೂಪ ಉಪಯೋಗವು ಕರ್ಮದಿಂದ ಆಗುವದಿಲ್ಲ. ಕಾರಣವೇನಂದರೆ-ಯಾವ ಆತ್ಮನ ನಿತ್ಯಮುಕ್ತನಾಗಿರುವನೋ, ಅವನಿಗೆ ಮೋಕ್ಷಪ್ರಾಪ್ತಿ ಎಂದು ಹೇಳುವದು ಸಂಭವಿಸುವದಿಲ್ಲ; ಮತ್ತು ಆತ್ಮದಲ್ಲಿ ಬಂಧವಿರುವದಿಲ್ಲ. ಈ ಕಾರಣದಿಂದ ಮೋಕ್ಷಪ್ರಾಪ್ತಿರೂಪ ಕರ್ಮದ ಉಪಯೋಗವು ಮುಮುಕ್ಷುವಿಗೆ ಸಂಭವಿಸುವದಿಲ್ಲ.

೩. ಪಾಕರೂಪ ಕರ್ಮದಿಂದ ಹೇಗೆ ಅನ್ನದ ವಿಕಾರರೂಪ ಉಪಯೋ

ಗವು ಪಾಚಕನಿಗೆ ಆಗುವದೋ, ಹಾಗೆ ಮುಮುಕ್ಷುವಿಗೆ ಕರ್ಮದಿಂ ರರೂಪ ಉಪಯೋಗವು ಸಹ ಆಗುವದಿಲ್ಲ. ಕಾರಣವೇನೆಂದರೆ— ವಿಕಾರವೂ ಸಂಭವಿಸುವದಿಲ್ಲ. ಒಂದುವೇಳೆ ಆತ್ಮದಲ್ಲಿ ಪ್ರಥಮು ನ್ನು ಅಂಗೀಕರಿಸಿದರೆ, ಮತ್ತು ಮೋಕ್ಷ ದಶೆಯಲ್ಲಿ ಚತುರ್ಭುಜಾದಿ ರೂಪ ಪ್ರಾಪ್ತಿಯನ್ನು ಅಂಗೀಕರಿಸಿದರೆ ಅನ್ಯಪ್ರಾಪ್ತಿರೂಪ ವಿಕಾರ ಉಪಯೋಗವು ಮುಮುಕ್ಷುವಿಗೆ ಸಂಭವಿಸುವದು; ಈ ಅನ್ಯ ಪ್ತಿಗೆ ಆತ್ಮದಲ್ಲಿ ಅಂಗೀಕಾರವಿಲ್ಲ. ಇದರಿಂದ ಕರ್ಮದಿಂದ ವಿಕಾ ಉಪಯೋಗವು ಸಹಾ ಮುಮುಕ್ಷುವಿಗೆ ಸಂಭವಿಸುವದಿಲ್ಲ.

೪. ವಸ್ತ್ರದ ಕ್ಷಾಲನರೂಪ ಕರ್ಮದ ವುಪಯೋಗವು, ಮಲ ತ್ತಿರೂಪ ಸಂಸ್ಕಾರವಾಗುವಂತೆ, ಮಲದ ನಿವೃತ್ತಿರೂಪ ಸಂಸ್ಕಾರ ಮುಮುಕ್ಷುವಿಗೆ ಕರ್ಮದಿಂದ ವುಪಯೋಗವಾಗುವದಿಲ್ಲ. ಕಾರಣವೇನ (೧) ಅನ್ಯಮಲದ ನಿವೃತ್ತಿಯಂತೂ ಮುಮುಕ್ಷುವಿಗೆ ವಾಂಛಿತವಿರು ಆತ್ಮದ ಮಲನಿವೃತ್ತಿಯ ಇಚ್ಛೆಯು ಇರುವದು. ಎಂದರೆ ನಿತ್ಯಶುದ್ಧವದೆ? ಅದರಲ್ಲಿ ಮಲವಿರುವದಿಲ್ಲ. ಈ ಕಾರಣದಿಂದ ನಿವೃತ್ತಿರೂಪ ಸಂಸ್ಕಾರವು ಸಂಭವಿಸುವದಿಲ್ಲ. ಮತ್ತು (೨) ಅಂತಃಕರ ಪಾಪಮಲದ ನಿವೃತ್ತಿಯು ಕರ್ಮದಿಂದ ಆಗುವದು ಎಂಬದು ಸತ್ಯ ಸತ್ಯವಿದ್ದಾಗ್ಯೂ ಶುದ್ಧಾಂತಃಕರಣಿಯಾದ ಮುಮುಕ್ಷುವಿನ ವಿಷಯ ಪ್ರಸ್ತುತ ವಿಚಾರವಿರುವುದರಿಂದ, ಅವನ ಅಂತಃಕರಣದಲ್ಲಿ ಪಾಪವು ವಿಸುವದಿಲ್ಲ. ಇದರಿಂದ ಪಾಪರೂಪ ಮಲದ ನಿವೃತ್ತಿರೂಪ ಸಂಸ್ಕಾ ಸಹಾ ಮುಮುಕ್ಷುವಿಗೆ ಕರ್ಮದಿಂದ ಉಪಯೋಗವಾಗುವದಿಲ್ಲ. ಮತ್ತು ಅಜ್ಞಾನಕ್ಕೆ ಮಲವೆಂದಂದರೆ, ಆ ಅಜ್ಞಾನವು ಆತ್ಮದಲ್ಲಿ ಇ ಸಹ ಅದರ ನಿವೃತ್ತಿಯು ಕರ್ಮದಿಂದ ಆಗುವದಿಲ್ಲ. ಕಾರಣವೇನಂದರೆ ಅ ನಕ್ಕೆ ವಿರೋಧಿಯಾದದ್ದು ಜ್ಞಾನವು, ಕರ್ಮವಲ್ಲಾ ಇದರಿಂದ ಮುಮು ವಿಗೆ ಮಲದ ನಿವೃತ್ತಿರೂಪ ಸಂಸ್ಕಾರಕರ್ಮದಿಂದ ವುಪಯೋಗವಾಗುವ (೪) ಕುಸುಂಬೀ ಬಣ್ಣದಲ್ಲಿ ವಸ್ತ್ರದ ಮಜ್ಜನರೂಪ ಕರ್ಮದಿಂದ ಣದ ಉತ್ಪತ್ತಿರೂಪ ವುಪಯೋಗವು ಆಗುವದು. ಇದರಂತೆ ಗುಣದ ತ್ತಿರೂಪ ಸಂಸ್ಕಾರವು ಮುಮುಕ್ಷುವಿಗೆ ಕರ್ಮದಿಂದ ಉಪಯೋಗ ದಿಲ್ಲ. ಕಾರಣವೇನಂದರೆ ಅನ್ಯದಲ್ಲಿ ಈ ಗುಣದ ಉತ್ಪತ್ತಿಯನ್ನು



ವು ಸಂಭವಿಸುವದಿಲ್ಲ. ಆತ್ಮದಲ್ಲಿ ಎಂದು ಹೇಳಬೇಕಾದೀತು; ಈ ಆತ್ಮ ರ್ಗುಣವದೆ. ಇದರಲ್ಲಿ ಗುಣದ ಉತ್ಪತ್ತಿಯು ಸಂಭವಿಸುವದಿಲ್ಲ. ಈ ಕಾ ಣದಿಂದ ಮುಮುಕ್ಷುವಿಗೆ ಗುಣದ ಉತ್ಪತ್ತಿರೂಪ ಸಂಸ್ಕಾರವು ಸಹ ರ್ಮದ ಉಪಯೋಗವಾಗುವದಿಲ್ಲ.

ಈ ಪ್ರಕರಣದಲ್ಲಿ ಉಪಯೋಗವೆಂದರೆ ಫಲವು ಎಂದು ತಿಳಿಯಬೇಕು. ಕರ್ಮಫಲವು ಐದು ಪ್ರಕಾರವಾಗಿರುವದು. ಈ ಐದು ಪ್ರಕಾರದ ರ್ಮದ ಫಲವು ಮುಮುಕ್ಷುವಿಗೆ ಸಂಭವಿಸುವದಿಲ್ಲ. ಅದರಿಂದ ಕರ್ಮವ ನ್ನುಬಿಟ್ಟು ಜ್ಞಾನದ ಸಾಧನವಾದ ಶ್ರವಣದಲ್ಲಿ ಮುಮುಕ್ಷುವು ಪ್ರವೃತ್ತ ನಾಗುತ್ತಾನೆ.

ಉಪಾಸನೆಯು ಕೂಡ ಮಾನಸಕರ್ಮವೇ ಆಗಿದೆ. ಈ ಕಾರಣದಿಂದ ದರ ಖಂಡನದಲ್ಲಿ ಬೇರೆ ಯುಕ್ತಿಯನ್ನು ಹೇಳಿರುವದಿಲ್ಲ.

ಈ ಪ್ರಕಾರದಿಂದ ಕೇವಲ ಕರ್ಮವು ಅಥವಾ ಉಪಾಸನೆಯು, ಮೋ ಕ್ಷದ ಸಾಧನವಲ್ಲ, ಆದರೆ ಕೇವಲ ಜ್ಞಾನವೇ ಆಗಿದೆ.

ಪ್ಪಣಿ=೧ ಪೂರ್ವರೂಪವನ್ನು ಬಿಟ್ಟು ಅನ್ಯರೂಪವನ್ನು ಹೊಂದುವದಕ್ಕೆ ವಿಕಾರವೆ ನ್ನುತ್ತಾರೆ. ಇದಕ್ಕೆ ವಿಕ್ರಿಯಾ ಮತ್ತು ಪರಿಣಾಮವೆಂದೂ ಎನ್ನುತ್ತಾರೆ.

೨. ಪಾಕಕರ್ತನು (ಅಡಿಗೆ ಮಾಡುವವನು.)

೩. ಒಗೆಯುವಿಕೆಯಿಂದ.

೪. ಮುಳುಗಿಸುವದರಿಂದ.

## ॥೩೮೦॥ ಆಕ್ಷೇಪ—ಕರ್ಮ, ಮತ್ತು ಉಪಾಸನೆಗಳು ಜ್ಞಾನದ ಮತ್ತು ಮೋಕ್ಷದ[೧] ಸಾಧನವಲ್ಲ. ॥೩೮೦——೩೮೩॥

[ಪೂರ್ವಪಕ್ಷಿ] ಕೆಲವರು ಕರ್ಮ ಉಪಾಸನಾ ಸಹಿತ ಜ್ಞಾನವು, ಮೋಕ್ಷಕ್ಕೆ ಸಾಧನವೆಂದು ಅಂಗೀಕಾರ ಮಾಡಿ, ಯುಕ್ತಿದೃಷ್ಟಾಂತವನ್ನು ಸಹಾ ಹೇಳುತ್ತಾರೆ.

೧. ದೃಷ್ಟಾಂತ—ಪಕ್ಷಿಗಳಿಗೆ ಆಕಾಶಗಮನವು ಒಂದೇ ಪಕ್ಷದಿಂದ ಸಾಧ್ಯವಲ್ಲ. ಎರಡು ಪಕ್ಷಗಳಿಂದ ಹಾರಾಡುವವು. ಇದರಂತೆ ಮೋಕ್ಷಲೋಕಕ್ಕೆ ಸಹ ಜ್ಞಾನರೂಪ ಪಕ್ಷದಿಂದ ಹೋಗಲಿಕ್ಕೆ ಬರುವದಿಲ್ಲ. ಆದರೆ ಒಂದು ಪಕ್ಷವು ಉಪಾಸನಾ ಸಹಿತ ಕರ್ಮವಾಗಿದೆ. ಮತ್ತೊಂದು ಪಕ್ಷವು ಜ್ಞಾನಸಹಿತ ಕರ್ಮವಾಗಿದೆ. ಉಪಾಸನೆಯು ಸಹಾ ಮಾನಸ ಕರ್ಮವೇ ಆಗಿದೆ. ಇದರಿಂದ ಒಂದೇ ಪಕ್ಷವದೆ.

ಟಿಪ್ಪಣಿ [೧] ಒಬ್ಬಾನೊಬ್ಬ ಭರ್ತೃಪ್ರಪಂಚನಾಮಕ ಪ್ರಾಚೀನ ವ್ಯಕ್ತಿ
[ಬ್ರಹ್ಮಸೂತ್ರದ ಟೀಕಾ ಕರ್ತನು] ಸಮುಚ್ಚಯ ವಾದಿಯು ಆಗಿ
ಅವನ ಅನುಸಾರವಾಗಿ.

||೩೮೧|| ೨. ಅನ್ವಯದೃಷ್ಟಾಂತ-ಸೇತುವಿನ ದರ್ಶನದಿಂ ನಾಶವಾಗುವದು. ಈ ಸೇತುವಿನ ದರ್ಶನವು ಸಹ ಪ್ರತ್ಯಕ್ಷರೂಪ ವಾಗಿದೆ. ಮತ್ತು ಶ್ರದ್ಧಾಭಕ್ತಿ ಸಹಿತ ಗಮನಾದಿ ನಿಯಮವ ಯದೆ. ಶ್ರದ್ಧಾ ರಹಿತ ಪುರುಷನಿಗೆ ಸೇತುದರ್ಶನದಿಂದ ಫಲವಾಗು ಹೇಗೆ ಸೇತುವಿನ ಪ್ರತ್ಯಕ್ಷ ಜ್ಞಾನವು ಶ್ರದ್ಧಾ ಮೊದಲಾದ ನಿ ಫಲದ ಉತ್ಪತ್ತಿಯಲ್ಲಿ ಅಪೇಕ್ಷೆಯನ್ನು ಮಾಡುವದೋ, ಹಾಗೆ ಬ್ರ ನವು ಸಹ ಮೋಕ್ಷರೂಪ ಫಲದ ಉತ್ಪತ್ತಿಯಲ್ಲಿ ಕರ್ಮೋಪಾಸನ ಅಪೇಕ್ಷೆಯನ್ನು ಮಾಡುವದು.

ಕೇವಲ ಜ್ಞಾನದಿಂದ ಯಾರು ಮೋಕ್ಷವೆಂದು ಅಂಗೀಕರಿಸುವ ಅವರು ಜ್ಞಾನದ ಸಾಧನವೇ ಕರ್ಮೋಪಾಸನೆ ಎಂದು ತಿಳಿದಿರುವ ದ್ಧ ಮತ್ತು ನಿಶ್ಚಲ ಅಂತಃಕರಣದಲ್ಲಿ ಜ್ಞಾನವಾಗುತ್ತದೆ. ಈ ಅಂತ ಣವು ಶುಭಕರ್ಮದಿಂದ ಶುದ್ಧವಾಗುವದು. ಮತ್ತು ಉಪಾಸನೆಯ ನಿಶ್ಚಲವಾಗುವದು.

ಈ ರೀತಿಯಿಂದ ಅಂತಃಕರಣದ ಶುದ್ಧಿಯು ಮತ್ತು ನಿಶ್ಚಲತ್ವ ರಾ ಕರ್ಮ ಉಪಾಸನಾ ಇವು ಜ್ಞಾನದ ಸಾಧನವು. ಎಂದು ಅಂಗೀ ದ್ದಾರೆ.

||೩೮೨|| ಜ್ಞಾನದ ಹೇತುವು ಕರ್ಮೋಪಾಸನೆ ಎಂದು ಅಂಗೀ ಮಾಡಿದಂತೆ, ಜ್ಞಾನದ ಫಲವು ಮೋಕ್ಷದ ಸಾಧನವೆಂದು ಅಂಗೀಕಾ ಡಲು ಯೋಗ್ಯವಾಗಿದೆ.

೧. ದೃಷ್ಟಾಂತ—ಜಲಸಿಂಚನವು ವೃಕ್ಷದ ಉತ್ಪತ್ತಿಗೂ ವೃಕ್ಷ ಉತ್ಪತ್ತಿಗೂ ವೃಕ್ಷದ ಹೇತುವಾಗಿದೆ. ವನಸ್ಥ ವೃಕ್ಷಗಳಿಗೆ ಜಲಸೇಚ ಲ್ಲದೆ ಫಲಗಳು ಆಗುವವು. ಆದರೂ ವೃಕ್ಷ ಮೂಲದಲ್ಲಿ (ಬುಡದಲ್ಲಿ) ಸಂಬಂಧವದೆ. ಅದರಿಂದ ಫಲವಾಗುವವು. ಮತ್ತು ಜಲದ ಸಂ ಲ್ಲದಾಗಲು, ವೃಕ್ಷಗಳು ಶುಷ್ಕವಾಗಿ ಹೋಗುವವು; ಫಲವಾಗುವ ಇದರಂತೆ ಕರ್ಮೋಪಾಸನೆಯು ಜ್ಞಾನದ ಉತ್ಪತ್ತಿಯು ಸಾಧನವದೆ. ಜ್ಞಾನದ ಫಲವಾದ ಮೋಕ್ಷಕ್ಕೆ ಸಹಾ ಕಾರಣವಾಗಿದೆ.

ಈ ರೀತಿಯಿಂದ ಕರ್ಮ, ಉಪಾಸನಾ, ಜ್ಞಾನ, ಈ ಮೂರು ನಿ



ಹೇತುವಾಗಿರುವವು ಈ ಕಾರಣದಿಂದ ಜ್ಞಾನಿಗಳು ಸಹಾ ಕರ್ಮವನ್ನು ಮಾಡುವರು.

||೩೮೩|| ೨. ಅಥವಾ ಕರ್ಮ ಉಪಾಸನೆಗಳು ಜ್ಞಾನ ರಕ್ಷಣೆಯ ಹೇತುವಾಗಿವೆ. ಕಾರಣವೇನೆಂದರೆ, ಕರ್ಮ ಉಪಾಸನೆಗಳನ್ನು ಜ್ಞಾನಿಗಳು ತ್ಯಾಗಮಾಡಲು, ಉತ್ಪನ್ನವಾದ ಜ್ಞಾನವು ಸಹಾ, ಜಲಸೇಚನೆಯಿಲ್ಲದ ವೃಕ್ಷವತ್ ನಷ್ಟವಾಗುವದು. ಕಾರಣವೇನೆಂದರೆ, ಶುದ್ಧ ಅಂತಃಕರಣದಲ್ಲಿ ಜ್ಞಾನವಾಗುವದು, ಮತ್ತು ಶುಭಕರ್ಮವನ್ನು ಮಾಡದಿದ್ದರೆ, ಜ್ಞಾನಿಗೆ ಪಾಪವು ಬರುವದು. ಮತ್ತು ಉಪಾಸನೆಯ ತ್ಯಾಗದಿಂದ ಅಂತಃಕರಣದ ಚಂಚಲತೆಯು ಪುನಃ ಉಂಟಾಗುವದು. ಈ ಮಲಿನ ಮತ್ತು ಚಂಚಲ ಅಂತಃಕರಣದಲ್ಲಿ ಜ್ಞಾನವು ಇರುವುದಿಲ್ಲ. ಶುಷ್ಕ ಭೂಮಿಯಲ್ಲಿ ಉತ್ಪನ್ನವಾದ ವೃಕ್ಷವು ಸಹಾ ಇರುವದಿಲ್ಲ.

೩. ಅನ್ವಯದೃಷ್ಟಾಂತ—ಸಂಸ್ಕಾರದಿಂದ ಶುದ್ಧಮಾಡಲ್ಪಟ್ಟ ಸ್ಥಾನದಲ್ಲಿ ವೇದಪಾಠೀ ಬ್ರಹ್ಮಚಾರಿಯು ನಿವಾಸ ಮಾಡುವನು. ಮತ್ತು ಆದೇಸ್ಥಾನವು ಯಾವದೋ ಒಂದು ನಿಮಿತ್ತದಿಂದ ಪುನಃ ಮಲಿನವಾಗಲು ಆಸ್ಥಾನವನ್ನು ತ್ಯಾಗಮಾಡುವನು. ಇದರಂತೆ ಕರ್ಮದ ತ್ಯಾಗದಿಂದ ಮಲಿನವಾದ ಮತ್ತು ಉಪಾಸನೆಯ ತ್ಯಾಗದಿಂದ ಚಂಚಲವಾದ ಅಂತಃಕರಣದಲ್ಲಿ ಜ್ಞಾನವು ಇರುವದಿಲ್ಲ. ಈ ಕಾರಣದಿಂದ ಕರ್ಮ ಮತ್ತು ಉಪಾಸನೆಯು ಜ್ಞಾನದ ರಕ್ಷಣೆಯ ಹೇತುವಾಗಿವೆ.

ಈ ರೀತಿಯಿಂದ ಕರ್ಮ ಉಪಾಸನಾ, ಜ್ಞಾನ ಈ ಮೂರೂ ಮೋಕ್ಷದ ಸಾಧನವೆಂದು ಹಾಗೆಯೇ ಜ್ಞಾನದ ರಕ್ಷಣೆಯ ಹೇತುವು ಕರ್ಮ, ಉಪಾಸನಾ ಎಂದು—ಮತ್ತು ಕೇವಲ ಜ್ಞಾನವು ಹೇತುವು ಎಂದು ಅಂಗೀಕಾರಮಾಡಲು ಸಹಾ ಯಾವದೇ ರೀತಿಯಿಂದಾಗಲಿ ಜ್ಞಾನಿಗೆ ಕರ್ಮ ಉಪಾಸನಾ ಇವು ಕರ್ತವ್ಯವಾಗಿವೆ.[೧] ಇದಕ್ಕೆ ಸಮುಚ್ಚಯವಾದ ಅನ್ನುತ್ತಾರೆ.

ಟಿಪ್ಪಣಿ. [೧] ಈ ಮತದ ಪ್ರತಿಪಾದನವನ್ನು ವೃತ್ತಿಪ್ರಭಾಕರದ ತೃತೀಯ ಪ್ರಕಾಶದಲ್ಲಿ ಸಮ್ಯಕ್ ಮಾಡಿದ್ದಾರೆ||

||೩೮೪|| ಕರ್ಮ ಉಪಾಸನೆಗಳಿಂದ ಜ್ಞಾನದ ವಿರೋಧವು ಅದೆ. ||೩೮೪—೩೮೬||

[ಸಿದ್ಧಾಂತಿ] ಇದು ಸಮಾಚೀನವಲ್ಲ, ಕಾರಣವೇನೆಂದರೆ, ದೇಹದಿಂದ

ಆತ್ಮವು ಭಿನ್ನವೆಂದು ಯಾವನು ತಿಳಿಯುವದಿಲ್ಲವೋ! ಅವನಿಗೆ ಕ… ಉಂಟಾಗುವದಿಲ್ಲ. ಕಾರಣವೇನೆಂದರೆ, ಜನ್ಮಾಂತರದ ಭೋಗ… ವಾಗಿ ಕರ್ಮಮಾಡುತ್ತಾನೆ. ಮತ್ತು ಈದೇಹವು ಪ್ರಸ್ತುತ ಅಗ್ನಿಯ… ವಾಗುತ್ತದೆ. ಅದರಿಂದ ದೇಹಕ್ಕೆ ಜನ್ಮಾಂತರದ ರೋಗವು ಉಂ… ದಿಲ್ಲ. ೧. ಶರೀರದಿಂದ ಭಿನ್ನವಾದ ಆತ್ಮಜ್ಞಾನವು ಕರ್ಮದಹೇತುವು … ತು ಈ ಜ್ಞಾನವು ಶರೀರದಿಂದ ಭಿನ್ನವಾದ ಆತ್ಮಾ, ಕರ್ತಾ, ಭೋ… ರೂಪಗಳಿಂದ ಕರ್ಮದ ಹೇತುವಾಗಿದೆ. "ನಾನು ಪುಣ್ಯಪಾಪ ಕರ್ತ… ದ್ದೇನೆ. ಮತ್ತು ಪುಣ್ಯಪಾಪಗಳ ಫಲವು ನನಗೆ ಉಂಟಾಗುವದು." … ಯಾವನಿಗೆ ಜ್ಞಾನವಿದೆಯೋ, ಅವನು ಕರ್ಮವನ್ನು ಮಾಡುವನು. … ಜ್ಞಾನವಂತನಿಗೆ ಹೀಗೆ ಆತ್ಮದ ಜ್ಞಾನವಿರುವದಿಲ್ಲ. ಆದರೆ "… ಪಾಪ ಮತ್ತು ಸುಖದುಃಖಗಳಿಂದ ರಹಿತವಾಗಿ ಅಸಂಗ ಬ್ರಹ್ಮರೂಪ… ಆತ್ಮವು ಅದೆ." ಹೀಗೆ ವೇದಾಂತ ವಾಕ್ಯದಿಂದ ಜ್ಞಾನವಾಗುವದು… ಜ್ಞಾನವು ಕರ್ಮದ ಹೇತುವಲ್ಲ. ವಿರೋಧಿಯಾಗಿದೆ. ಈ ಕಾರ… ಜ್ಞಾನವಂತನಿಂದ ಕರ್ಮವು ಆಗುವದಿಲ್ಲ.

೨. ಕರ್ತೃ ಕರ್ಮಫಲದ ಭೇದ ಜ್ಞಾನವು ಕರ್ಮದ ಹೇತು… ಈ ಕರ್ತೃ ಕರ್ಮ ಫಲದ ಪ್ರತೀತಿಯು ಜ್ಞಾನವಂತನಿಗೆ ಆತ್ಮದಿಂ… ವಾಗಿ ಆಗುವದಿಲ್ಲ. ಸಂಪೂರ್ಣ ಆತ್ಮಸ್ವರೂಪವೇ ಪ್ರತೀತವಾಗು… ಈ ಕಾರಣದಿಂದ ಸಹಾ ಜ್ಞಾನಿಯಿಂದ ಕರ್ಮವು ಆಗುವದಿಲ್ಲ.

ಭಾಷ್ಯಕಾರನು ಬಹು ಪ್ರಕಾರದಿಂದ ಜ್ಞಾನವಂತನಿಗೆ ಕ… ಅಭಾವವೆಂದು ಪ್ರತಿಪಾದನ ಮಾಡಿರುವನು. ಕರ್ಮದ ಮತ್ತು ಜ್ಞಾ… ಫಲದಿಂದ ವಿರೋಧವದೆ ಈ ಕಾರಣದಿಂದ ಸಹಾ ಜ್ಞಾನ ಮತ್ತು ಕ… ಸಮುಚ್ಚಯವು[೧] ಸಂಭವಿಸುವದಿಲ್ಲ, (೧) ಕರ್ಮದ ಫಲವು ಅನಿತ್ಯ ಸ… ಮತ್ತು (೨) ಜ್ಞಾನದ ಫಲವು ನಿತ್ಯಮೋಕ್ಷವು.

ಟಿಪ್ಪಣಿ ೧. ಯದ್ಯಪಿ ವೇದದಲ್ಲಿ ಸಹ ಕೆಲವೆಡೆಯಲ್ಲಿ ಜ್ಞಾನ, ಮತ್ತು ಕ… ಸಮುಚ್ಚಯವನ್ನು ಬರೆದಿದೆ. ತಥಾಪಿ ಸಮ ಸಮುಚ್ಚಯ,ಮತ್ತು ಕ್ರಮ… ಚ್ಚಯ ಎಂದು ಸಮುಚ್ಚಯದಲ್ಲಿ ಎರಡು ವಿಧ ಉಂಟು. ೧ ಜ್ಞಾ… ಸಾಧನವಾದ ಶ್ರವಣಾದಿಗಳನ್ನು ಮತ್ತು ಕರ್ಮದ ಸಾಧನವಾದ ಅ… ತ್ರಾದಿಗಳನ್ನೂ ಒಂದೇಕಾಲದಲ್ಲಿ ಅನುಷ್ಠಾನ ಮಾಡತಕ್ಕದ್ದರ ಹೆಸರು … ಮುಚ್ಚಯವೆಂದೂ, ಮತ್ತು [೨] ಅಂತಃಕರಣ ಶುದ್ಧವಾಗಿ ಪ್ರಥಮದಲ್ಲಿ ಜಿಜ್ಞಾಸಾ ಪರಿಯಂತರ ಕರ್ಮವನ್ನು ಮಾಡಿ, ಆಮೇಲೆ ಕರ್ಮದ ವಿಧಿಯನ್ನು ಅನಾದರಮಾಡಿ ಜ್ಞಾನದ ಸಾಧನವಾದ ಶ್ರವಣಾದಿಗಳ ದ್ವಾರವಾಗಿ ಜ್ಞಾನವನ್ನು ಸಂಪಾದನಮಾಡುವದಕ್ಕೆ ಕ್ರಮಸಮುಚ್ಚಯವೆಂದೂ ಎನ್ನುತ್ತಾರೆ. ಇವುಗಳಲ್ಲಿ ಸಮಸಮುಚ್ಚಯವು ತ್ಯಾಜ್ಯವು. ಮತ್ತು ಕ್ರಮಸಮುಚ್ಚಯವು ಗ್ರಾಹ್ಯವು. ಇದೇ ವೇದದ ತಾತ್ಪರ್ಯವು. ಈ ಕಾರಣದಿಂದ …ಲ್ಲಿ ಸಮಸಮುಚ್ಚಯದ ಖಂಡನವನ್ನು ಮಾಡಿದೆವು. ಕ್ರಮಸಮುಚ್ಚಯದ ಖಂಡನವನ್ನು ಮಾಡಲಿಲ್ಲ.



||೩೮೫|| ೩. ಆತ್ಮದಲ್ಲಿ ಜಾತಿ, ಆಶ್ರಮ, ಅವಸ್ಥೆಗಳ ಅಧ್ಯಾಸವು ಕ…ದ ಹೇತುವಾಗಿದೆ. ಕಾರಣವೇನೆಂದರೆ,- ಜಾತಿ, ಆಶ್ರಮ, ಅವಸ್ಥೆಗಳ …ಗ್ಯವಾದ ಭಿನ್ನ ಭಿನ್ನ ಕರ್ಮಗಳನ್ನು ಹೇಳಿದ್ದಾರೆ; ಈ ಕಾರಣದಿಂದ …ತ್ಯಾದಿಗಳ ಅಧ್ಯಾಸವು ಕರ್ಮದ ಹೇತುವಾಗಿದೆ.

ಯದ್ಯಪಿ ಜಾತಿ, ಆಶ್ರಮ, ಅವಸ್ಥೆಗಳು ದೇಹದ ಧರ್ಮಗಳು, ಮತ್ತು …ಗೆ ದೇಹದಲ್ಲಿ ಆತ್ಮಾಬುದ್ಧಿಯು ಇರುವದಿಲ್ಲ. ಆದರೆ ದೇಹದಿಂದ …ವು ಭಿನ್ನಕರ್ತ ಎಂದು ಕರ್ಮಿಯು ತಿಳಿದಿರುವನು. ಈಸಂಗತಿಯನ್ನು ಪೂರ್ವದಲ್ಲಿ ಹೇಳಿರುವೆವು. ಅದರಿಂದ ಜಾತಿ, ಆಶ್ರಮ,ಅವಸ್ಥೆಯ ಪ್ರತೀ…ಯು ಆತ್ಮದಲ್ಲಿ ಕರ್ಮಿಗೆ ಸಂಭವಿಸುವದಿಲ್ಲ. ತಥಾಪಿ ದೇಹದಿಂದ ಭಿನ್ನ…ದ ಕರ್ಮಕರ್ತನಿಗೆ ಅಪರೋಕ್ಷಜ್ಞಾನವು ಇಲ್ಲ. ಆದರೆ ಶಾಸ್ತ್ರದಿಂದ …ರೋಕ್ಷಜ್ಞಾನವದೆ. ಮತ್ತು ದೇಹದಲ್ಲಿ ಆತ್ಮಜ್ಞಾನವುಅಪರೋಕ್ಷವದೆ. …ದುವೇಳೆ ದೇಹದಿಂದ ಭಿನ್ನಆತ್ಮದ ಪರೋಕ್ಷಜ್ಞಾನವಿದ್ದರೆ ದೇಹದ…ದು ಅಪರೋಕ್ಷಜ್ಞಾನವು ಆತ್ಮಬುದ್ಧಿಯ ವಿರೋಧಿಯಾಗುವದು. ಪ…ಕ್ಷ ಮತ್ತು ಅಪರೋಕ್ಷ ಜ್ಞಾನಗಳಲ್ಲಿ ವಿರೋಧವಿರುವದಿಲ್ಲ. ಈಕಾರಣ…ದ ದೇಹದಿಂದ ಭಿನ್ನಕರ್ತಾ (ಆತ್ಮದಜ್ಞಾನ) ಮತ್ತು ದೇಹದಲ್ಲಿ …ಬುದ್ಧಿ, ಹೀಗೆ ದ್ವಿವಿಧಬುದ್ಧಿಯು ಒಬ್ಬನಿಗೇ ಉಂಟಾಗುತ್ತದೆ.

ದೃಷ್ಟಾಂತ—ಮೂರ್ತಿಯಲ್ಲಿ ಈಶ್ವರ ಜ್ಞಾನವು ಶಾಸ್ತ್ರದಿಂದ …ರೋಕ್ಷವು,ಮತ್ತು ಪಾಷಾಣಬುದ್ಧಿಯು ಅಪರೋಕ್ಷವು ಇವುಗಳ ವಿರೋ…ಲ್ಲ. ಎರಡೂ ಒಬ್ಬನಿಗೇ ಇರುವವು. ಮತ್ತು ರಜ್ಜುವಿನಲ್ಲಿ ಯಾವನಿಗೆ …ದಿಂದ ಅಪರೋಕ್ಷಭೇದ ಜ್ಞಾನವಿದೆಯೋ ಅವನಿಗೆ ಅಪರೋಕ್ಷ…ಭ್ರಾಂತಿಯು ದೂರವಾಗುವದು. ಈ ಕಾರಣದಿಂದ ಈ ನಿಯಮವು …ವಾಯಿತು. ಅಪರೋಕ್ಷ ಭ್ರಾಂತಿಗೂ ಅಪರೋಕ್ಷ ಜ್ಞಾನಕ್ಕೂ

ವಿರೋಧವದೆ, ಪರೋಕ್ಷ ಜ್ಞಾನದೊಡನೆ ಇಲ್ಲ. ಈ ಕಾರಣ
ಪರೋಕ್ಷ ಜ್ಞಾನವೂ, ಮತ್ತು ದೇಹದಲ್ಲಿ ಅಪರೋಕ್ಷ ಜ್ಞಾನ
ನಲ್ಲಿಯೇ ಸಂಭವಿಸುತ್ತದೆ. ಈಎರಡು ಜ್ಞಾನಗಳು ಕರ್ಮಕ್ಕೆ ಹೇ

೧. ದೇಹದಿಂದ ಭಿನ್ನ ಕರ್ತೃರೂಪದಿಂದ ಆತ್ಮದ ಜ್ಞಾನ
ಹೇತುವಾಗಿದೆ. ಈ ಕರ್ತೃರೂಪದಿಂದ ಆತ್ಮದ ಜ್ಞಾನವು ಭ್ರಾ
ವದೆ. ಮತ್ತು ಭ್ರಾಂತಿಯು ವಿದ್ವಾಂಸನಿಗೆ ಇರುವದಿಲ್ಲ. ಈ ಕಾ
ಕರ್ಮದ ಅಧಿಕಾರವು ಇಲ್ಲ. ಮತ್ತು

೨. ದೇಹದಿಂದ ಅಪರೋಕ್ಷ ಆತ್ಮಬುದ್ಧಿಯು ಸಂಭವಿಸ
ಧರ್ಮ, ಜಾತಿ, ಆಶ್ರಮ, ಅವಸ್ಥಾ ಇವುಗಳ ಪ್ರತೀತಿಯು ಆಗು
ದೇಹದಲ್ಲಿ ಆತ್ಮಬುದ್ಧಿಯೂ ವಿದ್ವಾಂಸನಿಗೆ ಇರುವದಿಲ್ಲ; ಅ
ರೂಪದಿಂದ ಆತ್ಮದ ಪರೋಕ್ಷ ಜ್ಞಾನವದೆ. ಇದರಿಂದ ಜಾತಿ,
ಅವಸ್ಥೆಗಳ ಭ್ರಾಂತಿಯ ಅಭಾವದಿಂದ ವಿದ್ವಾಂಸನಿಗೆ ಕರ್ಮ
ವಿಲ್ಲ; ಮತ್ತು -

ಉಪಾಸನೆಯೂ ಸಹ "ನಾನು ಉಪಾಸಕನಿರುವೆನು, ದೇ
ಸ್ಯನಿರುವನು" ಎಂಬ ಬುದ್ಧಿಯಿಂದ ಆಗುವದು. ವಿದ್ವಾಂಸನಿಗೆ
ಸ್ಯ ಉಪಾಸಕ ಭಾವವು ಪ್ರತೀತವಾಗುವದಿಲ್ಲ. "ದೇಹಾದಿ ಸಂಘಾ
ನನ್ನ ಮತ್ತು ದೇವರಲ್ಲಿ ಸ್ವಪ್ನವತ್ ಕಲ್ಪಿತ ಅವೆ. ಮತ್ತು
ಒಂದೇ ಅದೆ." ಎಂಬ ನಿಶ್ಚಯವು ವಿದ್ವಾಂಸನಿಗೆ ಅದೆ. ಈ ಕಾ
ಜ್ಞಾನದ ವಿರೋಧವು ಉಪಾಸನೆಯೊಡನೆ ಅದೆ.

||೩೮೬|| ಪಕ್ಷಿಯ ಗಮನದ ದೃಷ್ಟಾಂತವು ಸಂಭವಿಸು
ಣವೇನೆಂದರೆ-ಪಕ್ಷಿಗೆ ಎರಡು ಪಕ್ಷಗಳು ಒಂದೇ ಕಾಲದಲ್ಲಿಯೇ
ಅವುಗಳಲ್ಲಿ ಪರಸ್ಪರ ವಿರೋಧವಿಲ್ಲ. ಮತ್ತು ಜ್ಞಾನದ ವಿರೋಧ
ಉಪಾಸನೆಗಳೊಡನೆ ಇರುವದು. ಒಂದೇ ಕಾಲದಲ್ಲಿ ಉಂಟಾಗು

||೩೮೭|| ಜ್ಞಾನದಲ್ಲಿ ಕರ್ಮಉಪಾಸನೆಗಳ ಅಪೇಕ್ಷೆಯು
ಸೇತು ಜ್ಞಾನದ ದೃಷ್ಟಾಂತವು ಸಹ ಸರಿಯಲ್ಲ, ಕಾರಣವೇನೆಂ
೧
ಸೇತುದರ್ಶನವು ದೃಷ್ಟಫಲದ ಹೇತುವಲ್ಲ ಆದರೆ ಅದೃಷ್ಟಫ

೧. ಯಾವ ಫಲವು ಪ್ರತ್ಯಕ್ಷ ಪ್ರತೀತವಾಗುವದೋ,
ಫಲವೆನ್ನುತ್ತಾರೆ. ಭೋಜನವು ಫಲವಾದ ತೃಪ್ತಿಯು ಪ್ರತ್ಯಕ್ಷ



ಣದಿಂದ ಭೋಜನವು ದೃಷ್ಟಫಲದ ಹೇತುವದೆ.

೨. ಸೇತು ದರ್ಶನದಿಂದ ಪ್ರತ್ಯಕ್ಷಫಲವು ಪ್ರತೀತವಾಗುವದಿಲ್ಲ. ಆದರೆ
ಪದ ನಾಶರೂಪ ಫಲವು ಶಾಸ್ತ್ರದಿಂದ ತಿಳಿಯಲ್ಪಡುವದು. ಶಾಸ್ತ್ರದಿಂದ
ವ ಫಲವು ತಿಳಿಯುವದೋ, ಮತ್ತು ಯಾವುದು ಪ್ರತ್ಯಕ್ಷವಾಗುವದಿ
ಲ್ಲವೋ, ಅದಕ್ಕೆ ಅದೃಷ್ಟಫಲವೆಂದು ಎನ್ನುತ್ತಾರೆ.

ಈ ಕಾರಣದಿಂದ ಯಜ್ಞಾದಿ ಕರ್ಮಗಳು, ಸ್ವರ್ಗಾದಿ ಅದೃಷ್ಟ ಫಲಗಳ
ಹೇತುಗಳು, ಇದರಂತೆ ಸೇತುದರ್ಶನವು ಸಹಾ ಪಾಪದ ನಾಶರೂಪ ಅದೃಷ್ಟ
ಫಲದ ಹೇತುವದೆ. ಯಾವದು ಅದೃಷ್ಟಫಲದ ಹೇತುವಾಗಿರುವುದೋ,
ದು ಶಾಸ್ತ್ರವು ಎಷ್ಟು ಸಹಾಯವನ್ನು ಬೋಧಮಾಡಿರುವದೋ, ಅದರ
ಸಹಿತ ಫಲೋತ್ಪತ್ತಿಯ ವಿಷಯದಲ್ಲಿ ಹೇತುವಾಗುವದು. ಕೇವಲ ಇಲ್ಲ. ಈ
ಕಾರಣದಿಂದ ಶ್ರದ್ಧಾ,ನಿಯಮಾದಿಸಹಿತ ಸೇತುದರ್ಶನವು ಪಾಪನಾಶರೂಪ
ಫಲದ ಹೇತುವದೆ. ಶ್ರದ್ಧಾ, ನಿಯಮಾದಿ ರಹಿತವು ಹೇತುವಲ್ಲ. ಕಾರಣವೇ
ನೆಂದರೆ-ಸೇತುದರ್ಶನದಿಂದ ಪ್ರತ್ಯಕ್ಷವಂತೂ ಯಾವ ಫಲವೂ ಪ್ರತೀತವಾ
ಗುವದಿಲ್ಲ. ಕೇವಲ ಶಾಸ್ತ್ರದಿಂದ ತಿಳಿಯಲ್ಪಡುತ್ತದೆ. ಈ ಶಾಸ್ತ್ರವು
ಶ್ರದ್ಧಾದಿ ಸಹಿತ ಸೇತುದರ್ಶನದಿಂದ ಫಲವನ್ನು ಬೋಧನಮಾಡುವುದು.
ಕೇವಲ ದರ್ಶನದಿಂದ ಫಲದ ಉತ್ಪತ್ತಿಯಲ್ಲಿ ಯಾವ ಪ್ರಮಾಣವೂ ಇಲ್ಲ.
ಈ ಕಾರಣದಿಂದ ಸೇತುದರ್ಶನ ಫಲದ ಉತ್ಪತ್ತಿಯಲ್ಲಿ ಶ್ರದ್ಧಾನಿಯಮ
ಶಕ್ತಿಗಳ ಅಪೇಕ್ಷೆಯನ್ನು ಮಾಡುತ್ತದೆ.

ಟಿಪ್ಪಣಿ. [೧] ಶ್ರೀರಾಮಚಂದ್ರನು ರಾಮೇಶ್ವರದಿಂದ ಲಂಕಾಪುರಿಯಂತರ ಸಮು
ದ್ರದಲ್ಲಿ ಸೇತುವೆಯನ್ನು ಕಟ್ಟಿರುವನು. ಅದರ ದರ್ಶನವು.

|| ೩೮೮ || ಬ್ರಹ್ಮವಿದ್ಯೆಯು ತನ್ನ ಫಲೋತ್ಪತ್ತಿಯ ವಿಷಯದಲ್ಲಿ
ಕರ್ಮ,ಉಪಾಸನೆಗಳ ಅಪೇಕ್ಷೆಯನ್ನು ಮಾಡುವದಿಲ್ಲ. ಕಾರಣವೇನೆಂದರೆ,
ಬ್ರಹ್ಮವಿದ್ಯೆಯ ಫಲವು ಸ್ವರ್ಗವತ್ ಲೋಕವಿಶೇಷ ಅದೃಷ್ಟವಾಗಿದ್ದರೆ,
ಬ್ರಹ್ಮವಿದ್ಯೆಯ ಫಲವನ್ನು ಶಾಸ್ತ್ರವು ಬೋಧಿಸುತಿತ್ತು. ಹೀಗೆಯಂತೂ
ಬೋಧಿಸುವದಿಲ್ಲ. ಆದರೆ ಕರ್ಮ ಉಪಾಸನಾ ಸಹಿತವಾಗಿಯೇ ಲೋಕ
ವಿಶೇಷ ಬೋಧನ ಮಾಡಿರುವದು. ಈ ಬ್ರಹ್ಮವಿದ್ಯೆಯು ಸಹಾ ಸೇತು
ದರ್ಶನವತ್ ಫಲದ ಉತ್ಪತ್ತಿಯಲ್ಲಿ ಕರ್ಮಉಪಾಸನೆಗಳ ಅಪೇಕ್ಷೆಯನ್ನು
ಮಾಡಿದರೆ ಬ್ರಹ್ಮವಿದ್ಯೆಯ ಫಲವಾದ ಮೋಕ್ಷವು ಸ್ವರ್ಗವತ್ ಲೋಕವಿಶೇ
ಷ ಅದೃಷ್ಟ ರೂಪವಾದೀತು. ಹೀಗೆ ಆಗುವದಿಲ್ಲ. ಆದರೆ ಮೋಕ್ಷವು ನಿತ್ಯ
ಪ್ರಾಪ್ತವು. ಮತ್ತು ಭ್ರಾಂತಿಯಿಂದ ಬಂಧಪ್ರತೀತವಾಗುತ್ತದೆ. ಈಭ್ರಾಂ

ತಿಯು ನಿವೃತ್ತಿಯೇ ಬ್ರಹ್ಮವಿದ್ಯೆಯು ಫಲವಾಗಿದೆ. ಈ ಭ್ರಾಂತಿಯು ನಿ
೧
ಯು ಕೇವಲ ಬ್ರಹ್ಮವಿದ್ಯೆಯಿಂದ ನಮಗೆ ಪ್ರತ್ಯಕ್ಷವಾಗುವದು. ...
ರಜ್ಜು ಜ್ಞಾನದಿಂದ ಸರ್ಪಭ್ರಾಂತಿಯ ನಿವೃತ್ತಿಯು ಸರ್ವರಿಗೆ ಪ್ರತ್ಯ...
ಕಾರಣದಿಂದ ಅಧಿಷ್ಠಾನ ಜ್ಞಾನದ ಭ್ರಾಂತಿಯ ನಿವೃತ್ತಿಯು ದೃ...
ವದೆ. ದೃಷ್ಟಫಲದ ಉತ್ಪತ್ತಿಯು ಎಷ್ಟು ಸಾಮಗ್ರಿಯಿಂದ ಪ್ರತ್ಯಕ್ಷ...
ವದೋ ಅಷ್ಟು ಸಾಮಗ್ರಿಗಳಿಗೆ ದೃಷ್ಟಫಲದ ಹೇತು ಎಂದು ಎನ್ನ...
(೧) ಕುಂಟೆ, ಅಂದರೆ ವಸ್ತ್ರವನ್ನು ಸುತ್ತಲಿಕ್ಕೆ ಮಾಡಿದ ಕಟ್ಟಿ...
ಲಾಳಿಗಳಿಂದ ವಸ್ತ್ರದ ಉತ್ಪತ್ತಿಯು ಪ್ರತ್ಯಕ್ಷವದೆ. ಈ ಕಾ...
ಕುಂಟೆ, ಎಳೆ (ತಂತು), ಲಾಳಿಗಳು ವಸ್ತ್ರದಹೇತು ಅವೆ. ಮತ್ತು ...
ವಲ ಭೋಜನದಿಂದ ತೃಪ್ತಿರೂಪ ಫಲವು ಪ್ರತ್ಯಕ್ಷ ಪ್ರತೀತವಾಗು...
ಇದರಿಂದ ಕೇವಲ ಭೋಜನವು ತೃಪ್ತಿಯ ಹೇತುಅವೆ.

ಇವುಗಳಂತೆ ಕೇವಲ ಅಧಿಷ್ಠಾನ ಜ್ಞಾನದಿಂದ ಭ್ರಾಂತಿಯ ನಿವೃ...
ತ್ತಿಯು ಪ್ರತ್ಯಕ್ಷ ಪ್ರತೀತವಾಗುವದು. ಈ ಕಾರಣದಿಂದ ಕೇವಲ ...
ಷ್ಠಾನದ ಜ್ಞಾನವೇ ಭ್ರಾಂತಿಯ ನಿವೃತ್ತಿಯ ಹೇತುವಾಗಿರುವುದು.

ಹೇಗೆ ರಜ್ಜುವಿನ ಜ್ಞಾನವು ಭ್ರಾಂತಿಯ ನಿವೃತ್ತಿಯಲ್ಲಿ ಅಪೇಕ್ಷೆ...
ಯನ್ನು ಮಾಡುವದಿಲ್ಲವೋ ಹಾಗೆ ಬಂಧದ ಭ್ರಾಂತಿಯ ಅಧಿಷ್ಠಾನ...
ನಿತ್ಯಮುಕ್ತ ಆತ್ಮನೂ, ಮತ್ತು ಇದರ ಜ್ಞಾನವೂ ಸಹ ಬಂಧಭ್ರಾಂತಿ...
ನಿವೃತ್ತಿಯಲ್ಲಿ ಕರ್ಮ ಉಪಾಸನೆಗಳ ಅಪೇಕ್ಷೆಯನ್ನು ಮಾಡುವದಿ...

॥೩೮೯॥ ೧. ಜ್ಞಾನದ ಫಲವಾದ ಮೋಕ್ಷವನ್ನು ಸ್ವರ್ಗ...
ಲೋಕವಿಶೇಷ ಅದೃಷ್ಟವೆಂದು ಅಂಗೀಕರಿಸಿರುವರು; ಇದು ವೇದ...
ದಿಂದ ವಿರುದ್ಧವಾದುದು. ಕಾರಣವೇನೆಂದರೆ:—ಜ್ಞಾನವಂತನ ಪ್ರಾ...
ಯಾವ ಲೋಕಕ್ಕೂ ಗಮನಮಾಡುವದಿಲ್ಲ. ಎಂದು ವೇದದಲ್ಲಿ ಹೇಳಿ...

೨. ಲೋಕ ವಿಶೇಷವನ್ನು ಅಂಗೀಕಾರ ಮಾಡುವದರಿಂದ ಸ್ವರ್ಗ...
ಮೋಕ್ಷವು ಅನಿತ್ಯವಾಗುವದು. ಈ ಕಾರಣದಿಂದ ಮೋಕ್ಷವು ಲೋ...
ವಿಶೇಷ ರೂಪವಲ್ಲ.

೩. ಯಾರು ಲೋಕವಿಶೇಷರೂಪ ಮೋಕ್ಷವೆಂದು ಅಂಗೀಕರಿಸು...
ಅವರು ಸಹ ಕೇವಲ ಜ್ಞಾನದಿಂದಲೇ ಮೋಕ್ಷಲೋಕದ ಪ್ರಾಪ್ತಿಯ...
ಅಂಗೀಕರಿಸುವದು ಯೋಗ್ಯವು. ಕಾರಣವೇನೆಂದರೆ—



ಅರ್ಥವು ಶಾಸ್ತ್ರದಿಂದ ಪ್ರತಿಪಾದನ ಮಾಡಲ್ಪಟ್ಟಿರುವದೋ, ಅದು ಶಾಸ್ತ್ರದ ಅನುಸಾರವಾಗಿಯೇ ಅಂಗೀಕರಿಸಲ್ಪಟ್ಟಿರುವದು. ಆಶಾಸ್ತ್ರವು ಕೇವಲ ಜ್ಞಾನದಿಂದ ಮೋಕ್ಷವೆಂದು ಹೇಳುವದು. ಈ ಕಾರಣದಿಂದ ಕೇವಲಜ್ಞಾನವೇ ಮೋಕ್ಷದ ಹೇತುವು. ಕರ್ಮ, ಉಪಾಸನಾ, ಜ್ಞಾನ ಈ ಮೂರೂ ಅಲ್ಲ.

ಟಿಪ್ಪಣಿ [೧) ಇಲ್ಲಿ ದುರ್ಜನ ತೋಷವೆಂಬ ನ್ಯಾಯದಿಂದ ಯಾರು ಲೋಕವಿಶೇಷಕ್ಕೆ ಮೋಕ್ಷವೆಂದು ಅಂಗೀಕರಿಸಿರುವರೋ, ಅವರಿಗೆ ಸಹ ಈ ಮೋಕ್ಷವು ಜ್ಞಾನದ ಹೊರತು ಆಗುವದಿಲ್ಲ. ಈ ಸಂಗತಿಯನ್ನು ಸಿದ್ಧಾಂತಿಯು ಪ್ರತಿಪಾದನ ಮಾಡಿರುವನು. ಹೇಗೆಂದರೆ, ಯಾವನಾದರೊಬ್ಬನಿಗೆ ಪ್ರಬಲಶತ್ರುವು ಉಂಟಾಗಲು, ಅವನು ತನ್ನ ನಿರ್ಬಲಶತ್ರುವನ್ನು ಪ್ರಥಮದಲ್ಲಿ ಪ್ರಹಾರಮಾಡುವ ಆಜ್ಞೆಯನ್ನು ಮಾಡಿ ಸಂತೋಷವನ್ನು ಪ್ರಾಪ್ತಿಮಾಡಿಕೊಳ್ಳುವನು. ಬಳಿಕ ಆಪ್ರಬಲಶತ್ರುವನ್ನು ಹೊಡೆಯುವನು. ಇದೇ ದುರ್ಜನತೋಷನ್ಯಾಯವು.

॥೩೯೦॥ ವೃಕ್ಷದ ದೃಷ್ಟಾಂತವು ಸಹ ಸರಿಯುಲ್ಲ, ಕಾರಣವೇನೆಂದರೆ—ಯದ್ಯಪಿ ಜಲಸೇಚನವು ವೃಕ್ಷದ ಉತ್ಪತ್ತಿ, ಮತ್ತು ರಕ್ಷಣೆಗೆ ಹೇತುವಾಗಿದೆ. ತಥಾಪಿ ಫಲದ ಉತ್ಪತ್ತಿಗೆ ಹೇತುವಲ್ಲ. ಮುಪ್ಪಾದ ವೃಕ್ಷಕ್ಕೆ ಜಲಸೇಚನವು ಕೇವಲ ರಕ್ಷಣೆಯ ನಿಮಿತ್ತವಾಗಿದೆ. ಫಲದ ನಿಮಿತ್ತವಲ್ಲ. ಜಲದಿಂದ ಪುಷ್ಟವಾದ ವೃಕ್ಷವು ಫಲದ ಹೇತುವದೆ. ಜಲಸೇಚನವು ಅಲ್ಲ. ಇದರಂತೆ ಕರ್ಮಉಪಾಸನೆಗಳು ಸಹ ಜ್ಞಾನೋತ್ಪತ್ತಿಗೆ ಉಪಯೋಗವಾಗಿವೆ. ಮೋಕ್ಷಕ್ಕೆ ಉಪಯೋಗವಾಗುವದಿಲ್ಲ. ಈ ಕಾರಣದಿಂದ ಜ್ಞಾನೋತ್ಪತ್ತಿಯ ಪೂರ್ವದಲ್ಲಿ ಅಂತಃಕರಣದ ಶುದ್ಧಿ, ಮತ್ತು ನಿಶ್ಚಲತ್ವದ ನಿಮಿತ್ತವಾಗಿ ಕರ್ಮೋಪಾಸನೆಯನ್ನು ಮಾಡಬೇಕು. ಜ್ಞಾನೋತ್ಪತ್ತಿಯ ನಂತರ ಮೋಕ್ಷದ ನಿಮಿತ್ತವಾಗಿ ಅಲ್ಲ.

ಜ್ಞಾನೋತ್ಪತ್ತಿಯ ಪೂರ್ವದಲ್ಲಿ ಸಹ ಯಾವ ಪರಿಯಂತರ ಅಂತಃಕರಣದಲ್ಲಿ ಮಲ, ಮತ್ತು ವಿಕ್ಷೇಪವಿರುವದೋ, ಆ ಪರಿಯಂತರವೇ ಮಾಡಬೇಕು. ಶುದ್ಧ ಮತ್ತು ನಿಶ್ಚಲ ಅಂತಃಕರಣವು ಯಾವನಿಗೆ ಉಂಟಾಗುವದೋ ಆಜಿಜ್ಞಾಸುವು ಶ್ರವಣದ ವಿರೋಧಿಗಳಾದ ಕರ್ಮ,ಉಪಾಸನೆಗಳನ್ನು ತ್ಯಾಗಮಾಡಬೇಕು. ಮಲನಾಮಪಾಪವು ಅಶುಭವಾಸನೆಯ ಹೇತುವಾಗಿದೆ. ಯಾವ ಪರಿಯಂತರ ಮಲವಿರುವದೋ ಆ ಪರಿಯಂತರ ಅಶುಭವಾಸನೆಯುಂಟಾಗುವದು. ಯಾವಾಗ ಅಶುಭವಾಸನೆಯು ಉಂಟಾಗುವದಿಲ್ಲವೋ, ಆಗ ಮಲದ ಭಾವವು ನಿಶ್ಚಯವೆಂದು ತಿಳಿಯಬೇಕು. ಅಂತಃ

ಕರಣದ ಚಂಚಲತ್ವ ಮತ್ತು ಏಕಾಗ್ರತ್ವ ಅನುಭವಸಿದ್ಧಗಳಾಗಿವೆ. ಕಾರಣದಿಂದ ಉತ್ತಮ ಜಿಜ್ಞಾಸು ಮತ್ತು ವಿದ್ವಾಂಸನಿಗೆ ಕರ್ಮಉಪಾಸನೆ ನಿಷ್ಫಲ.

||೫೯೧|| ಕರ್ಮ ಉಪಾಸನೆಗಳಿಂದ ಜ್ಞಾನದ ರಕ್ಷಣೆಯು ಆಗುವದಿಲ್ಲ.

ಈ ಪೂರ್ವದಲ್ಲಿ ಹೇಳಿದ್ದೇನೆಂದರೆ;-ಜ್ಞಾನದ ರಕ್ಷಣೆಯ ನಿಮಿತ್ತವಾಗಿ ಕರ್ಮ ಉಪಾಸನಾ ಮಾಡಬೇಕು. ಹೇಗೆ ಜಲದಿಂದ ಉತ್ಪನ್ನವಾದ ವೃಕ್ಷದ ರಕ್ಷಣೆಯು ಜಲದಿಂದಲೇ ಆಗುವದು. ಜಲದ ಸಂಬಂಧವು ಇಲ್ಲದಿದ್ದರೆ ಮುಪ್ಪಾದ ವೃಕ್ಷವು ಸಹ ಶುಷ್ಕವಾಗಿ ಹೋಗುವದೋ, ಹಾಗೆ ಕರ್ಮ ಉಪಾಸನೆಗಳಿಂದ ಉತ್ಪನ್ನವಾದ ಜ್ಞಾನವು ಕರ್ಮ, ಉಪಾಸನೆಗಳಿಂದಲೇ ರಕ್ಷಣವಾಗುವದು. ಜ್ಞಾನಿಯು ಕರ್ಮ ಉಪಾಸನೆಗಳನ್ನು ಮಾಡದಿದ್ದರೆ ಅಂತಃಕರಣವು ಮತ್ತು ಮಾಲಿ ಚಂಚಲತ್ವಗಳನ್ನು ಪುನಃ ಹೊಂದುವದು. ಈ ಮಲಿನ ಮತ್ತು ಚಂಚಲವಾಗಿದ್ದ ಅಂತಃಕರಣದಲ್ಲಿ ಉತ್ಪನ್ನವಾದ ಜ್ಞಾನವು ಸಹಾ ಶುಷ್ಕ ಭೂಮಿಯಲ್ಲಿ ಉತ್ಪನ್ನವಾಗಿದ್ದ ವೃಕ್ಷದಂತೆ ನಷ್ಟವಾಗಿ ಹೋಗುವದು. ಈ ಕಾರಣದಿಂದ ಜ್ಞಾನಿಯು ಸಹಾ ಕರ್ಮ ಉಪಾಸನಾ ಮಾಡಬೇಕು.

ಇದು ಸಮಂಜಸವಲ್ಲ, ಕಾರಣವೇನೆಂದರೆ, ಆಭಾಸ ಸಹಿತ ಅಥವಾ ಚೇತನ ಸಹಿತ ಅಂತಃಕರಣದ "ನಾನು ಅಸಂಗ ಬ್ರಹ್ಮನಿರವೆನು" ಎಂಬ ವೃತ್ತಿಯು ವೇದಾಂತದ ಫಲರೂಪ ಜ್ಞಾನವದೆ. ಅದರಲ್ಲಿ ಕರ್ಮ, ಉಪಾಸನಾ ಮಾಡದೆ ಹೋದರೆ ಆ ವೃತ್ತಿಜ್ಞಾನದ ನಾಶವಾಗುವದು. ಅಥವಾ ಚೇತನ ಸ್ವರೂಪ ಜ್ಞಾನದ ನಾಶವಾಗುವದು.

ಒಂದು ಪಕ್ಷದಲ್ಲಿ ಹೀಗೆ ಅಂದರೆ, ಸ್ವರೂಪ ಜ್ಞಾನವಂತೂ ನಿತ್ಯವಿದೆ ಅದರಿಂದ ಅದರ ನಾಶ ಮತ್ತು ರಕ್ಷಣೆಯು ಆಗುವದಿಲ್ಲ. ಆದರೆ ವೇದಾಂತದ ಫಲವಾದ ಬ್ರಹ್ಮವಿದ್ಯಾರೂಪ ಜ್ಞಾನವು ಕರ್ಮ ಉಪಾಸನೆಗಳಿಂದ ಉತ್ಪತ್ತಿಯಾಗಿರುವದು, ಮತ್ತು ಕರ್ಮ, ಉಪಾಸನೆಗಳ ತ್ಯಾಗದಿಂದ ಉತ್ಪನ್ನವಾದ ವಿದ್ಯೆಯು ಸಹಾ ನಷ್ಟವಾಗಿ ಹೋಗಬಹುದು. ಈ ಕಾರಣದಿಂದ ಜ್ಞಾನದ ರಕ್ಷಣೆಯ ನಿಮಿತ್ತವಾಗಿ ಕರ್ಮ, ಉಪಾಸನೆಗಳನ್ನು ಮಾಡಬೇಕು.

ಇದು ಸರಿಯಾದದ್ದಲ್ಲ. ಕಾರಣವೇನೆಂದರೆ;- (೧) ಒಂದು ಆವರ್ತಿ ಉತ್ಪನ್ನವಾದ ಅಂತಃಕರಣದ ಬ್ರಹ್ಮಾಕಾರ ವೃತ್ತಿಯಿಂದ ಅಜ್ಞಾನ ಮತ್ತು ಭ್ರಾಂತಿಯ ನಾಶವು ತತ್‌ಕ್ಷಣದಲ್ಲಿಯೇ ಆಗುವದು. ಅಜ್ಞಾನ ಮತ್ತು



ಭ್ರಾಂತಿಯ ನಾಶವಾದಮೇಲೆ ಪುನಃವೃತ್ತಿಯರಕ್ಷಣದ ಉಪಯೋಗವಿಲ್ಲ. ಮತ್ತು (೨) ಅಂತಃಕರಣದ ವೃತ್ತಿಯ ರಕ್ಷಣೆಯು ಕರ್ಮ ಉಪಾಸನೆಗಳಿಂದ ಸಹ ಆಗುವದಿಲ್ಲ. ಕಾರಣವೇನಂದರೆ:-ಯಾವಾಗ ಕರ್ಮ, ಉಪಾಸನೆಗಳ ಅನುಷ್ಠಾನವನ್ನು ಮಾಡುವನೋ, ಆಗ ಕರ್ಮ ಉಪಾಸನೆಗಳ ಸಾಮಗ್ರಿಯ ವೃತ್ತಿರೂಪ ಜ್ಞಾನವೇ ಆಗುವದು. ಬ್ರಹ್ಮಜ್ಞಾನವು ಆಗಲಾರದು.ಅನ್ಯವೃತ್ತಿಯು ಉಂಟಾಗುವದರಿಂದ ಪ್ರಥಮವೃತ್ತಿಯು ಉಳಿಯುವದಿಲ್ಲ. ಅದರಿಂದ ಕರ್ಮ, ಉಪಾಸನೆಗಳು ಜ್ಞಾನೋತ್ಪತ್ತಿಯ ವಿಷಯದಲ್ಲಿ ಪರಂಪರೆಯಿಂದ ಕಾರಣವಾಗಿಇವೆ; ಮತ್ತು ಉತ್ಪನ್ನವಾದ ವೃತ್ತಿಯ ವಿರೋಧಿಯಾಗಿವೆ. ಈ ಕಾರಣದಿಂದ ಕರ್ಮ ಉಪಾಸನೆಗಳಿಂದ ಜ್ಞಾನದ ರಕ್ಷಣೆಯು ಆಗುವದಿಲ್ಲ.

||೫೯೨|| ಜ್ಞಾನಿಗೆ ಪಾಪ ಮತ್ತು ಚಂಚಲತ್ವದ ಅಭಾವದಿಂದ ಕರ್ಮ ಮತ್ತು ಉಪಾಸನೆಗಳ ಉಪಯೋಗವಿಲ್ಲ ||೫೯೨--೫೯೩||

ಈ ಪೂರ್ವದಲ್ಲಿ ಹೇಳಿದ್ದೇನಂದರೆ,- "ಜ್ಞಾನಿಗೆ ಕರ್ಮದ ತ್ಯಾಗದಿಂದ ಪಾಪ ವುಂಟಾಗುವದು,,

ಇದು ಸರಿಯಾದದ್ದಲ್ಲ. ಕಾರಣವೇನೆಂದರೆ,-(೧)ಶುಭ ಕರ್ಮತ್ಯಾಗವು ಪಾಪದ ಹೇತುವಲ್ಲ.ಆದರೆ ನಿಷಿದ್ಧ ಕರ್ಮದ ಅನುಷ್ಠಾನವೇ ಪಾಪದ ಸಾಧನವದೆ. ಈ ಸಂಗತಿಯನ್ನು ಭಾಷ್ಯಕಾರನು ಬಹು ಪ್ರಕಾರದಿಂದ ಪ್ರತಿಪಾದನ ಮಾಡಿರುವನು, ಈ ಕಾರಣದಿಂದ ಕರ್ಮದ ತ್ಯಾಗದಿಂದ ಪಾಪ ವುಂಟಾಗುವದಿಲ್ಲ.ಮತ್ತು (೨)ಜ್ಞಾನಿಗಂತೂಸರ್ವಪ್ರಕಾರದಿಂದಲೂ,ಪಾಪದ ಅಸಂಭವವು. ಕಾರಣವೇನೆಂದರೆ ಪುಣ್ಯಪಾಪ ಮತ್ತು ಇವುಗಳಿಗೆಆಶ್ರಯವಾದ ಅಂತಃಕರಣಇವುಸತ್ಯವಾಗಿಇಲ್ಲ.ಅವಿದ್ಯೆಯಿಂದಮಿಥ್ಯಾಪ್ರತೀತನಾಗಿವೆ. ಈ ಅವಿದ್ಯಾ ಮತ್ತು ಮಿಥ್ಯಾಪ್ರತೀತಿಗಳು ಜ್ಞಾನಿಗೆ ಇರುವದಿಲ್ಲ. ಈ ಕಾರಣದಿಂದ ಜ್ಞಾನಿಗೆ ಶುಭಕರ್ಮದ ತ್ಯಾಗದಿಂದ ಅಥವಾ ಅಶುಭದ ಅನುಷ್ಠಾನದಿದ ಪಾಪವು ಸಂಭವಿಸುವದಿಲ್ಲ.

||೫೯೩|| ಈ ಸ್ಥಾನದಲ್ಲಿ ಸಿದ್ಧಾಂತವಿರುವದೇನೆಂದರೆ; ೧.ಮಂದ೨. ದೃಢ, ಎಂದು ಎರಡುಪ್ರಕಾರದ ಜ್ಞಾನ ಅವೆ. (೧)ಸಂಶಯಾದಿ ಸಹಿತವಾಗಿದ್ದ ಜ್ಞಾನವಕ್ಕೆ ಮಂದ ಜ್ಞಾನವೆನ್ನುತ್ತಾರೆ. (೨) ಸಂಶಯಾದಿ ರಹಿತ ಜ್ಞಾನಕ್ಕೆ ದೃಢವೆಂದು ಅನ್ನುತ್ತಾರೆ.

ಯಾವನಿಗೆ ದೃಢಜ್ಞಾನ ವಿರುವದೋ, ಅವನಿಗೆ ಕಿಚಿನ್ಮಾತ್ರವಾದ

ದೂ ಸಹ, ಕರ್ತವ್ಯವಿಲ್ಲ. ಸಂಶಯಾದಿ ರಹಿತವಾಗಿ ಒಂದೇ ಸಾರೆ ಉ
ವಾದ ಅಂತಃಕರಣದ ವೃತ್ತಿರೂಪ ಜ್ಞಾನವೇ ಅವಿದ್ಯೆಯನಾಶವನ್ನು ಮಾ
ತಾನೂ ನಿವೃತ್ತವಾಗುತ್ತದೆ. ಆದರೂ ಜ್ಞಾನಿಯು ಉತ್ತಮಪ್ರಕಾರ
ತಿಳಿಯುವನಾದ್ದರಿಂದ ಅವನಿಗೆ ಆತ್ಮಸ್ವರೂಪ ವಿಷಯದಲ್ಲಿ ಭ್ರಾಂತಿಯು
ಟಾಗುವದಿಲ್ಲ. ಕಾರಣವೇನೆಂದರೆ ಭ್ರಾಂತಿಯು ಕಾರಣವು ಅವಿದ್ಯೆಯು
ಈ ಅವಿದ್ಯೆಯು ಒಂದುಸಾರೆ ಉತ್ಪನ್ನವಾದ ಜ್ಞಾನದಿಂದ ನಷ್ಟ
ಹೋಗಿರುವದು. ಈ ಭ್ರಾಂತಿ ಮತ್ತು ಅವಿದ್ಯೆಗಳ ಅಭಾವದಿಂದ
ಜ್ಞಾನದ ಆ ವೃತ್ತಿಯ ಉಪಯೋಗವು ಕಿಂಚಿತ್ತಾದರೂ ಇಲ್ಲ, ಮ
ಜೀವನ್ಮುಕ್ತಿಯ ಆನಂದದ ಸಲುವಾಗಿ ವೃತ್ತಿಯ ಆವೃತ್ತಿಯ ಇಚ್ಛೆ
ಯುಂಟಾದರೆ ಮೇಲಿಂದಮೇಲೆ ವೇದಾಂತದ ಅರ್ಥದ ಚಿಂತನೆಯನ್ನು
ಮಾಡಬೇಕು. ವೇದಾಂತದ ಅರ್ಥದ ಚಿಂತನೆಯನ್ನು ಮಾಡುವದ
ಮೇಲಿಂದಮೇಲೆ ಬ್ರಹ್ಮಾಕಾರ ವೃತ್ತಿಯುಂಟಾಗುವದು, ಕರ್ಮ ಉಪಾ
ನೆಗಳಿಂದ ಆಗುವದಿಲ್ಲ. ಕಾರಣವೇನೆಂದರೆ ಕರ್ಮ ಮತ್ತು ಉಪಾಸನೆ
ಉಪಯೋಗವು ಅಂತಃಕರಣದ ಶುದ್ಧಿ ನಿಶ್ಚಲತ್ವದ್ವಾರದಿಂದ ಜ್ಞಾನ
ದೆಯೇ ಹೊರತು ಬೇರೆರೀತಿಯಿಂದಲ್ಲ. ಮತ್ತು ಜ್ಞಾನಿಯ ಅಂತಃಕರಣ
ಪಾಪ, ಮತ್ತು ಚಂಚಲತ್ವಗಳು ಇಲ್ಲ. ರಾಗ, ದ್ವೇಷ ದ್ವಾರದಿಂದ ಪಾ
ಮತ್ತು ಚಂಚಲತ್ವದ ಹೇತುವು ಅವಿದ್ಯೆಯು ಈ ಅವಿದ್ಯೆಯು ಜ್ಞಾನದಿಂ
ನಾಶವಾಗುವದು. ಈ ಕಾರಣದಿಂದ ಜ್ಞಾನಿಗೆ ಪಾಪ ಮತ್ತು ಚಂಚ
ತ್ವದ ಅಭಾವದಿಂದ ಕರ್ಮ ಉಪಾಸನೆಗಳ ಉಪಯೋಗವಿಲ್ಲ.

---

## ||೬೪|| ಜ್ಞಾನಿಗಳಿಗೆ ಪ್ರಾರಬ್ಧದ ವಿಲಕ್ಷಣತ್ವ ಮತ್ತು ಅದರ ಜೀವನ್ಮುಕ್ತಿಯ ಸುಖ ಅರ್ಥವಾಗಿ ಸಹ ಉಪಾಸನೆಯಲ್ಲಿ ಅಪ್ರವೃತ್ತಿಯು.

ಮತ್ತು ಒಂದು ಪಕ್ಷದಲ್ಲಿ ಹೀಗೆ ಎಂದರೆ:-ರಾಗದ್ವೇಷಾದಿಗಳು ಅಂ
ತಃಕರಣದ ಸಹಜ ಧರ್ಮಗಳು ಯಾವಪರಿಯಂತರ ಅಂತಃಕರಣವಿರುವದೋ
ಆ ಪರಿಯಂತರ ರಾಗದ್ವೇಷಗಳ ನಾಶವು ಜ್ಞಾನಿಗೆ ಆಗುವದಿಲ್ಲ. ರಾಗ
ದ್ವೇಷಗಳಿಂದ ಜ್ಞಾನಿಯ ಅಂತಃಕರಣವು ಸಹಾ ಚಂಚಲವಾಗುವದು.
ಈ ಕಾರ ದಿಂದ ಚಂಚಲತ್ವವನ್ನು ದೂ ರ ಮಾ ಡು ವ ದ ರ ಸಲುವಾ



ಜ್ಞಾನಿಯು ಸಹಾ ಉಪಾಸನೆ ಮಾಡುವನು.

ಯದ್ಯಪಿ ಜ್ಞಾನಿಯು ಅಂತಃಕರಣದ ಚಂಚಲತ್ವದಿಂದ ವಿದೇಹಮೋ
ಕ್ಷದ ಹಾನಿಯು ಇಲ್ಲ; ತಥಾಪಿ ಚಂಚಲ ಅಂತಃಕರಣದಲ್ಲಿ ಸ್ವರೂಪಾನಂದ
ದ ಭಾಸವಾಗುವದಿಲ್ಲ. ಈ ಕಾರಣದಿಂದ ಚಂಚಲತ್ವವು ಜೀವನ್ಮುಕ್ತಿಯ
ವಿರೋಧಿಯಾಗಿದೆ. ಜೀವನ್ಮುಕ್ತಿಯ ನಿಮಿತ್ತವಾಗಿ ಚಂಚಲತ್ವವನ್ನು
ದೂರಮಾಡುವದರ ಸಲುವಾಗಿ ಉಪಾಸನೆಯನ್ನು ಮಾಡಬೇಕು.

ಇದು ಸಂಭವಿಸುವದಿಲ್ಲ;—ಕಾರಣವೇನೆಂದರೆ, ಯದ್ಯಪಿ ದೃಢಬೋ
ಧವು ಯಾವನ ಅಂತಃಕರಣದಲ್ಲಿ ಆಗಿರುವದೋ, ಅವನಿಗೆ ಸಮಾಧಿ ಮತ್ತು
ವಿಕ್ಷೇಪಗಳು ಸಮಾನ ಅವೆ. ಅದರಿಂದ ಅಂತಃಕರಣದ ನಿಶ್ಚಲತ್ವದ ಸಲು
ವಾಗಿ ಯಾವ ಯತ್ನದ ಆರಂಭವೂ ಜ್ಞಾನಿಗೆ ಸಂಭವಿಸುವದಿಲ್ಲ. ತಥಾಪಿ
ಜ್ಞಾನಿಯ ಪ್ರವೃತ್ತಿ, ಮತ್ತು ನಿವೃತ್ತಿಗಳು ಪ್ರಾರಬ್ಧದ ಅಧೀನವಾಗಿವೆ.
ಪ್ರಾರಬ್ಧ ಕರ್ಮವು ಎಲ್ಲಕ್ಕೂ ವಿಲಕ್ಷಣವಾಗಿದೆ.

(೧) ಕೆಲವು ಜ್ಞಾನಿಗಳ ಭೋಗದ ಹೇತುವು ಜನಕಾದಿಗಳಂತೆ ಪ್ರಾರ
ಬ್ಧವದೆ. (೨) ಕೆಲವು ಜ್ಞಾನಿಗಳಿಗೆ ಶುಕದೇವ ವಾಮದೇವಾದಿಗಳಂತೆ ನಿವೃ
ತ್ತಿಯ ಹೇತುವು ಪ್ರಾರಬ್ಧ ಅದೆ.

(೧) ಯಾವ ಜ್ಞಾನಿಯ ಭೋಗದ ಹೇತುವು ಪ್ರಾರಬ್ಧವೋ, ಅವನಿ
ಗಂತೂ ಪ್ರಾರಬ್ಧದಿಂದ ಭೋಗದ ಇಚ್ಛಾ ಮತ್ತು ಭೋಗಸಾಧನಗಳು
ತ್ನವು ಸಂಭವಿಸುತ್ತದೆ. (೨) ಯಾವ ಜ್ಞಾನಿಯ ನಿವೃತ್ತಿಯ ಹೇತುವು
ಪ್ರಾರಬ್ಧವೋ, ಅವನಿಗೆ ಜೀವನ್ಮುಕ್ತಿಯ ಆನಂದದ ಇಚ್ಛೆಯು ಆಗುವದು,
ಮತ್ತು ಭೋಗದಲ್ಲಿ ಗ್ಲಾನಿಯು ಆಗುವದು.

ಯಾವನಿಗೆ ಜೀವನ್ಮುಕ್ತಿಯ ಆನಂದದ ಇಚ್ಛೆಯು ಇರುವದೋ,
ಅವನು ಬ್ರಹ್ಮಾಕಾರ ಆವೃತ್ತಿಯ ನಿಮಿತ್ತ ವೇದಾಂತ ಅರ್ಥದ ಚಿಂತನೆ
ಯನ್ನು ಮಾಡುವನು. ಉಪಾಸನೆಯನ್ನು ಮಾಡುವದಿಲ್ಲ. ಕಾರಣವೇ
ನೆಂದರೆ—ಅಂತಃಕರಣದ ನಿಶ್ಚಲತಾ ಮಾತ್ರದಿಂದ ಬ್ರಹ್ಮಾನಂದ ಭಾನವು
ವಿಶೇಷರೂಪದಿಂದ ಆಗುವದಿಲ್ಲ. ಆದರೆ ಬ್ರಹ್ಮಾಕಾರ ವೃತ್ತಿಯಿಂದಲೇ
ಆಗುವದು. ಈ ಬ್ರಹ್ಮಾಕಾರ ವೃತ್ತಿಯು ವೇದಾಂತ ಚಿಂತನೆಯಿಂದಲೇ
ಆಗುವದು, ಉಪಾಸನೆಯಿಂದ ಆಗುವದಿಲ್ಲ. ಮತ್ತು ಅಂತಃಕರಣದ ಚಂಚ
ಲತ್ವವು ಸಹ ಜ್ಞಾನಿಗೆ ವೇದಾಂತ ಚಿಂತನೆಯಿಂದಲೇ ದೂರವಾಗುವದು.
ಈ ಕಾರಣದಿಂದ ಅಂತಃಕರಣದ ನಿಶ್ಚಲತ್ವದ ನಿಮಿತ್ತವಾಗಿ ಸಹ ಉಪಾಸನೆ
ಯಲ್ಲಿ ಪ್ರವೃತ್ತಿಯು ಆಗುವದಿಲ್ಲ.

ಈ ರೀತಿಯಿಂದ ದೃಢಬೋಧವು ಯಾವನಿಗೆ ಆಗಿರುವದೋ, ಅ
ಕರ್ಮ ಉಪಾಸನೆಗಳಲ್ಲಿ ಪ್ರವೃತ್ತಿಯು ಆಗುವದಿಲ್ಲ.

**||೩೯೫|| ದೃಢ ಅದೃಢ ಜ್ಞಾನಿಗಳಿಗೂ, ಮತ್ತು ಉತ್ತ
ಮಂದ ಜಿಜ್ಞಾಸುಗಳಿಗೂ, ಕರ್ಮ ಉಪಾಸನೆಗಳಲ್ಲಿ
ಅಧಿಕಾರವಿಲ್ಲ. ||೩೯೫—೩೯೬||**

೧. ಯಾವನಿಗೆ ಮಂದಬೋಧವಿದೆಯೋ, ಅವನು ಸಹ ಮ
ಮತ್ತು ನಿಧಿಧ್ಯಾಸವನ್ನೇ ಮಾಡಬೇಕು; ಕರ್ಮ ಉಪಾಸನೆಗಳನ್ನು ಮ
ಬಾರದು. ಕಾರಣವೇನೆಂದರೆ, ಮಂದಬೋಧವು ಯಾವನಿಗೆ ಆಗಿರು
ಅವನು ಉತ್ತಮ ಜಿಜ್ಞಾಸುವಾಗಿರುವನು. ಈ ಉತ್ತಮ ಜಿಜ್ಞಾ
ಮನನ, ನಿಧಿಧ್ಯಾಸದ ಹೊರತು ಅನ್ಯಕರ್ತವ್ಯವಿಲ್ಲ. ಈ ಪ್ರಸ್ತಾವ
ಶಾರೀರಿಕದಲ್ಲಿ ಸೂತ್ರಕಾರನೂ ಮತ್ತು ಭಾಷ್ಯಕಾರನೂ ಪ್ರತಿಪಾದಿಸ
ಡಿರುವರು. ಮತ್ತು.

೨. ಜ್ಞಾನಿಗೆ ಮನನ ನಿಧಿಧ್ಯಾಸಗಳ ಕರ್ತವ್ಯವು ಸಹಾ ಇಲ್ಲ. [೧]
ವನ್ಮುಕ್ತಿಯ ಆನಂದದ ಸಲುವಾಗಿ ಜ್ಞಾನಿಯು ಮನನ,ನಿಧಿಧ್ಯಾಸ
ಪ್ರವೃತ್ತನಾಗುವನು. ಈ ಪ್ರವೃತ್ತಿಯು ಅವನ ಸ್ವೇಚ್ಛೆಯಿಂದ
ಉಂಟಾಗಿರುವದು. ಮತ್ತು "ನಾನು ವೇದಾಜ್ಞೆಯನ್ನು ಪಾಲಿಸದಿ
ದರೆ, ನನಗೆ ಜನ್ಮಮರಣ ಪ್ರಾಪ್ತವಾದೀತು." ಎಂಬ ಬುದ್ಧಿ
ಯಾವ ಕ್ರಿಯೆಯು ಮಾಡಲ್ಪಡುವದೋ, ಅದಕ್ಕೆ ಕರ್ತವ್ಯವೆನ್ನು
ಈ ಜನ್ಮಾದಿಗಳ ಬುದ್ಧಿಯು ಜ್ಞಾನಿಗೆ ಇರುವದಿಲ್ಲ. ಈ ಕಾರಣ
ತನ್ನ ಇಚ್ಛೆಯಿಂದ ಜ್ಞಾನಿಯು ಮನನ, ನಿಧಿಧ್ಯಾಸನ ಮಾಡಲು,
ಕರ್ತವ್ಯವಲ್ಲ.

ಈ ರೀತಿಯಿಂದ ಮಂದಬೋಧವು ಅಥವ ದೃಢಬೋಧವು ಯಾವ
ಆಗಿರುವದೋ ಅವನಿಗೆ ಕರ್ಮ, ಉಪಾಸನೆಗಳ ಕರ್ತವ್ಯವು ಇಲ್ಲ.

ಟಿಪ್ಪಣಿ [೧] 'ಅಜ್ಞಾತ ತತ್ವವನ್ನು ಶ್ರವಣಮಾಡಬೇಕು; ನಾನು ತತ್ವವನ್ನು
ದವನಾದ್ದರಿಂದ ಯಾವ ಕಾರಣದಿಂದ ಶ್ರವಣವನ್ನು ಮಾಡಲಿ,, ಮತ್ತು
ಸಂಶಯಪ್ರಾಪ್ತವುಂಟಾಗಲು, ಮನನವನ್ನು ಮಾಡಬೇಕು; ಸಂಶಯ
ನಾದ ನಾನು ಮನನವನ್ನು ಮಾಡುವದಿಲ್ಲ. ೩. ವಿಪರ್ಯಾಸವನ್ನು ಹೊ
ವನು ನಿಧಿಧ್ಯಾಸವನ್ನು ಮಾಡಬೇಕು. ನಾನು ದೇಹದಲ್ಲಿ ಅ
ರೂಪ ವಿಪರ್ಯಯವನ್ನು ಕದಾಚಿತ್ ಭಜನೆ ಮಾಡುವದಿಲ್ಲ. ಈ ಕಾರಣ



ನನಗೆ ವಿಪರ್ಯಯದ ಅಭಾವದಿಂದ ಯಾವ ಧ್ಯಾನವದೆ! ಯಾವದೂ ಇಲ್ಲ.
ಈ ರೀತಿಯಿಂದ ಪಂಚದಶಿಯ ತೃಪ್ತಿದೀಪದಲ್ಲಿ ವಿದ್ಯಾರಣ್ಯಸ್ವಾಮಿಗಳು
ಜ್ಞಾನಿಗಳಿಗೆ ಕರ್ತವ್ಯದ ಅಭಾವವನ್ನು ಸವಿಸ್ತರವಾಗಿ ಬಂದಿರುವರು.

||೩೯೬|| ೩. ಯಾವನಿಗೆ ಬೋಧವಾಗಿರುವದಿಲ್ಲವೋ, ಆತ್ಮನನ್ನು ತಿಳಿಯಬೇಕೆಂಬ ತೀವ್ರ ಇಚ್ಛೆಯು ಇರುವದೋ, ಭೋಗದ ಇಚ್ಛೆಯು ಇರುವದಿಲ್ಲವೋ, ಅವನ ಅಂತಃಕರಣವು ಶುದ್ಧವದೆ. ಈ ಕಾರಣದಿಂದ ಅವನು ಸಹಾ ಉತ್ತಮಜಿಜ್ಞಾಸು ಇರುವನು; ಇವನಿಗೆ ಸಹ ಬೋಧದ ಸಲುವಾಗಿ ಶ್ರವಣಾದಿಗಳೇ ಕರ್ತವ್ಯವಾಗಿರುವವು. ಕರ್ಮ ಉಪಾಸನೆಗಳು ಇಲ್ಲ. ಕಾರಣವೇನೆಂದರೆ, ಕರ್ಮ ಉಪಾಸನೆಗಳಿಂದ ಉಂಟಾಗತಕ್ಕ ಫಲವೇ ಸಿದ್ಧವದೆ. ಮತು=

೪. ಜ್ಞಾನದ ಸಾಮಾನ್ಯ ಇಚ್ಛೆಯಿಂದ ಯಾವನು ಶ್ರವಣದಲ್ಲಿ ಪ್ರವೃತ್ತನಾಗಿರುವನೋ, ಮತ್ತು ಅಂತಃಕರಣದ ಭೋಗಗಳಲ್ಲಿ ಆಸಕ್ತನಾಗಿರುವನೋ, ಅವನು ಮಂದಜಿಜ್ಞಾಸು ಇರುವನು. ಇವನು ಸಹ ಶ್ರವಣವನ್ನು ತ್ಯಾಗಮಾಡಿ, ಪುನಃ ಕರ್ಮ ಉಪಾಸನೆಗಳಲ್ಲಿ ಪ್ರವೃತ್ತನಾಗುವದಿಲ್ಲ. ಕರ್ಮ ಉಪಾಸನೆಗಳ ಫಲವಾದ ಅಂತಃಕರಣಶುದ್ಧಿ, ಮತ್ತು ನಿಶ್ಚಲತ್ವಗಳು ಇವನಿಗೆ ಶ್ರವಣದಿಂದಲೇ ಆಗುವವು. ಶ್ರವಣದ ಆವೃತ್ತಿಯಿಂದ ಅಂತಃಕರಣದ ದೋಷವು ದೂರವಾಗಿ ಈ ಜನ್ಮದಲ್ಲಿ ಅಥವಾ ಅನ್ಯಜನ್ಮದಲ್ಲಿ ಅಥವಾ ಬ್ರಹ್ಮಲೋಕದಲ್ಲಿ ಜ್ಞಾನವಾಗುತ್ತದೆ.

ಆವೃತ್ತಿ ಎಂದರೆ ಮೇಲಿಂದಮೇಲೆ ಉಂಟಾಗುವುದು ಎಂಬ ಅರ್ಥವು.

ಶ್ರವಣವನ್ನು ಬಿಟ್ಟು ಯಾವನು ಕರ್ಮ ಉಪಾಸನೆಗಳಲ್ಲಿ ಪ್ರವೃತ್ತನಾಗಿರುವನೋ, ಅವನಿಗೆ ಆರೂಢ ಪತಿತನೆನ್ನಬೇಕು. [೧]

೧-೨. ಈ ರೀತಿಯಿಂದ ಜ್ಞಾನಿಗೂ, ಮತ್ತು ಉತ್ತಮ ಜಿಜ್ಞಾಸುವಿಗೂ ಕರ್ಮ ಉಪಾಸನಾಗಳಲ್ಲಿ ಅಧಿಕಾರವಿಲ್ಲ. ಮತ್ತು=

೩. ಯಾವ ಮಂದಜಿಜ್ಞಾಸುವು ಸಹ ವೇದಾಂತ ಶ್ರವಣದಲ್ಲಿ ಪ್ರವೃತ್ತನಾಗಿರುವನೋ, ಅವನಿಗೂ ಅಧಿಕಾರವಿಲ್ಲ. ಮತ್ತು-

೪. ಒಬ್ಬೊಬ್ಬನಿಗೆ ಜ್ಞಾನದ ಇಚ್ಛೆಯು ಇದ್ದಾಗ್ಯೂ ಬುದ್ಧಿಯುಭೋಗದಲ್ಲಿ ಆಸಕವಾಗಿರುವುದು. ಈ ಕಾರಣದದಿಂದ ಶ್ರವಣದಲ್ಲಿ ಪ್ರವೃತ್ತನಾಗಿರುವದಿಲ್ಲ. ಇಂಥ ಮಂದಜಿಜ್ಞಾಸುವಿಗೆ ನಿಷ್ಕಾಮಕರ್ಮ ಮತ್ತು ಉಪಾಸನೆಗಳಲ್ಲಿ ಅಧಿಕಾರವದೆ. ಮತ್ತು-

೫. ಯಾವನಿಗೆ ಭೋಗದಲ್ಲಿ ಆಸಕ್ತಿಯಿದ್ದು ಜ್ಞಾನದ [illegible] ಇರುವದಿಲ್ಲವೋ, ಇಂಥ ಬಹಿರ್ಮುಖನಿಗೆ ಸಕಾಮ ಕರ್ಮದಲ್ಲಿ ಸಹ [illegible] ರವಿರುವದು.

ಈ ಕಾರಣದಿಂದ ಜ್ಞಾನಿಗೆ ಕರ್ಮ ಉಪಾಸನೆಗಳ ಅಧಿಕಾರವಿಲ್ಲ [illegible] ಉಪಾಸನೆಗಳು ಜ್ಞಾನಕ್ಕೆ ವಿರೋಧಿಗಳು."

ಟಿಪ್ಪಣಿ. ೧. ಮೋಕ್ಷದ ನಿಚ್ಚಣಿಕೆಯನ್ನು ಹತ್ತಿ, ಪುನಃ ಅಲ್ಲಿಂದ [illegible] ನಿಗೆ ಪ್ರಾಪ್ತವಾದ ಸಕ್ಕರೆಯ ಉಂಡೆಯನ್ನು ಕಳೆದುಕೊಂಡು ಕೈಯನ್ನು [illegible] ವವನ ಸಾಮ್ಯವು ಪ್ರಾಪ್ತವಾಗುವದು ಇದೇ ಅರ್ಥವನ್ನು [illegible] ಧ್ಯಾನದೀಪ ನಾಮಕ ಒಂಭತ್ತನೇ ಪ್ರಕರಣದ ವ್ಯಾಖ್ಯಾನದಲ್ಲಿ ಶ್ರೀ [illegible] ಪೀತಾಂಬರಜಿಯವರು ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ.

---

॥೩೯೭॥ ದೃಢಬೋಧನಿಗೆ ಕರ್ಮ ಉಪಾಸನೆಗಳು ವಿರೋಧಿ[illegible] ಗಿರುವದಿಲ್ಲ. ಅದರೆ ಮಂದಬೋಧನಿಗೆ ವಿರೋಧಿಗಳು.

ಕರ್ಮ ಉಪಾಸನೆಗಳು ಸಹಾ ಅಂತಃಕರಣದ ಶುದ್ಧಿ, ಮತ್ತು [illegible] ತ್ವದ್ವಾರಾ ಜ್ಞಾನದ ಉತ್ಪತ್ತಿಯ ಹೇತುಗಳು. ಪರಂತು ಜ್ಞಾನೋ[illegible] ಯ ತರುವಾಯ ಕರ್ಮ ಉಪಾಸನೆಗಳನ್ನು ಮಾಡಲು, ಉತ್ಪನ್ನವಾದ [illegible] ನವು ನಷ್ಟವಾಗುವದು. ಈ ಕಾರಣದಿಂದ ಜ್ಞಾನದ ವಿರೋಧಿ[illegible] ರಕ್ಷಣೆಯ ಸಾಧನಗಳಲ್ಲ. ಕಾರಣವೇನೆಂದರೆ, (೧) "ನಾನು ಕರ್ತಾ [illegible] ನೆ, ಮತ್ತು ಯಜ್ಞಾದಿಗಳು ನನಗೆ ಕರ್ತವ್ಯವಾಗಿದೆ. ಯಜ್ಞಾದಿಗಳ [illegible] ಗಾದಿ ಫಲಗಳು ನನಗೆ ಪ್ರಾಪ್ಯಗಳು.' ಎಂಬ ಭೇದಬುದ್ಧಿಯಿಂದ ಕ[illegible] ಸಂಭವಿಸುವದು. ಮತ್ತು (೨) "ನಾನು ಉಪಾಸಕನು, ದೇವನು ಉ[illegible] ಸ್ಯನು" ಈ ಭೇದಬುದ್ಧಿಯಿಂದ ಉಪಾಸನೆಯು ಸಂಭವಿಸುವದು.

ಈ ಎರಡು ಪ್ರಕಾರದ ಬುದ್ಧಿಗಳೂ "ಸರ್ವವು ಬ್ರಹ್ಮವದೆ." [illegible] ಬುದ್ಧಿಯನ್ನು ನಿವೃತ್ತಮಾಡಿ, ವೃದ್ಧಿಯನ್ನು ಹೊಂದುತ್ತವೆ. ಈ [illegible] ದಿಂದ ಕರ್ಮ ಉಪಾಸನೆಗಳು ಜ್ಞಾನದ ವಿರೋಧಿಗಳಾಗಿವೆ.

ಯದ್ಯಪಿ ಜ್ಞಾನಿಯು ಆತ್ಮವನ್ನು ಅಸಂಗವೆಂದು ತಿಳಿದಾ[illegible] ದೇಹದ ಭೋಜನಾದಿಕ ವ್ಯವಹಾರವನ್ನು ಅಥವಾ ಜನಕ ಮೊದಲಾ[illegible] ಅಧಿಕ ರಾಜ್ಯಪರಿಪಾಲನ ಮೊದಲಾದ ವ್ಯವಹಾರವನ್ನು ಮಾಡುವನು. [illegible] ವ್ಯವಹಾರದ ಜ್ಞಾನವು ವಿರೋಧಿಯಲ್ಲ. ಮತ್ತು ವ್ಯವಹಾರವು ಸಹ [illegible] ನದ ವಿರೋಧಿಯಲ್ಲ. ಕಾರಣವೇನೆಂದರೆ, ಜ್ಞಾನದಿಂದ ಆತ್ಮಸ್ವರೂ[illegible] ಅಸಂಗವೆಂದು ತಿಳಿದಿರುವನು; ಅದರಿಂದ ಆ ಆತ್ಮಸ್ವರೂಪದಲ್ಲಿ [illegible] ವಹಾರವು ಪ್ರತೀತವಾಗುವದೋ, ಅದು ವ್ಯವಹಾರದ ವಿರೋಧಿ [illegible]



೧

[illegible]ವಾಗಿರಬೇಕು. ಮತ್ತು ಜ್ಞಾನದ ವಿರೋಧಿ ವ್ಯವಹಾರವಾದರೆ ಇವು [illegible]ದ್ವಾಂಸನಿಗೆ ಆತ್ಮದಲ್ಲಿ ವ್ಯವಹಾರ ಪ್ರತೀತವಾಗುವದಿಲ್ಲ; ಆದರೆ ಸಂಪೂ[illegible] [illegible] ವ್ಯವಹಾರವು ದೇಹಾದಿಗಳ ಆಶ್ರಿತ. ಮತ್ತು ಆತ್ಮದಲ್ಲಿ ವ್ಯವಹಾರ [illegible]ಹಿತ ದೇಹಾದಿಗಳ ಸಂಬಂಧವಿರುವದಿಲ್ಲ. ಈ ಬುದ್ಧಿಯಿಂದ ಸಂಪೂರ್ಣ [illegible]ವಹಾರವನ್ನು ಮಾಡುವನು. ಈ ಕಾರಣದಿಂದ ಜ್ಞಾನಿಯ ಪ್ರವೃತ್ತಿ [illegible]ಯೇ ನಿವೃತ್ತಿಯೆಂದು ಹೇಳುವರು.

[illegible]ಪ್ಪಣಿ—(೧) ಈ ಅಭಿಪ್ರಾಯವನ್ನು ವಿದ್ಯಾರಣ್ಯಸ್ವಾಮಿಗಳು ತೃಪ್ತಿದೀಪದಲ್ಲಿ ಸಹ ಹೀಗೆ ಬರೆದಿರುವರು (೧) "ಪ್ರಾರಬ್ಧವು ಯಾವಾಗ ಜಗತ್ತಿನ ಸತ್ಯವನ್ನು ಸಂಪಾದನೆಮಾಡಿ, ಭೋಗವನ್ನು ಕೊಡುವದೋ, ಆಗ ವಿದ್ಯೆಯ ವಿರೋಧಿಯಾಗುವದು. ಭೋಗಮಾತ್ರದಿಂದ ವಿಷಯದ ಸತ್ಯತೆಯು ಆಗುವದಿಲ್ಲ, (೨) ·ವಿದ್ಯೆ (ಜ್ಞಾನ) ಯು ಯಾವಾಗ ಜಗತ್ತಿನ ವಿಲಯವನ್ನು ಮಾಡುವುದೋ ಆಗ ಪ್ರಾರಬ್ಧದ ವಿರೋಧಿಯಾಗುವುದು. ಮತ್ತು ಮಿಥ್ಯಾಬೋಧದಿಂದ ಈ ಜಗತ್ತಿನ ವಿಲಯವು ಆಗುವದಿಲ್ಲ, ಇಲ್ಲಿ ಪ್ರಾರಬ್ಧ ಶಬ್ದದಿಂದ ಅದರ ಕಾರ್ಯವಾದ ವ್ಯವಹಾರವು ಸಹಾ ಗ್ರಾಹ್ಯವೆಂದು ಭಾವಿಸಬೇಕು. (೩) ಇದರಂತೆ "ಧ್ಯಾನದೀಪ,, ಎಂಬ ಗ್ರಂಥದಲ್ಲಿ ಸಹಾ ಹೇಳಿರುವುದು. 'ವ್ಯವಹಾರವು ಪ್ರಪಂಚದ ಸತ್ಯತ್ವವನ್ನೂ ಮತ್ತು ಆತ್ಮದ ಜಡತ್ವವನ್ನೂ ಅಪೇಕ್ಷೆಮಾಡುವುದಿಲ್ಲ. ಆದರೆ ಇದು ಸಾಧನೆಯನ್ನು ಮಾಡುವವನ ಅಪೇಕ್ಷೆಯನ್ನು ಮಾಡುವುದು. (೪) 'ಮನಸ್ಸು, ವಾಣಿ ಶರೀರ. ಮತ್ತು ಇವುಗಳಿಂದ ಬಾಹ್ಯವಾಗಿರುವ ಪದಾರ್ಥ (ಗೃಹ ಕ್ಷೇತ್ರಾದಿ]ಗಳು ವ್ಯವಹಾರದ ಸಾಧನವಾಗಿವೆ. ಇವುಗಳನ್ನು ತತ್ವವಿದನು ಮಿಥ್ಯವೆಂದು ತಿಳಿಯುವನು, ಪರಂತು ಸ್ವರೂಪದಿಂದ ನಾಶಮಾಡುವದಿಲ್ಲ. ಈ ಕಾರಣದಿಂದ ಈ ಜ್ಞಾನಿಯ ವ್ಯವಹಾರವು ಎಲ್ಲೆಡೆಗಳಲ್ಲಿಯೂ ಆಗುವದಿಲ್ಲ, ಆದರೆ ಆಗುವುದು. ಈ ರೀತಿಯಿಂದ ಜ್ಞಾನಕ್ಕೂ ಮತ್ತು ಪ್ರಾರಬ್ಧ ಜನಿತ ವ್ಯವಹಾರಕ್ಕೂ ವಿರೋಧವಿಲ್ಲ.

---

॥೩೯೮॥ ಹೀಗೆ ಅನ್ಯವ್ಯವಹಾರವು ಜ್ಞಾನದ ವಿರೋಧಿಯಲ್ಲ. ಮತ್ತು ಅಸಂಗ ಆತ್ಮಾ ಮತ್ತು ದೇಹಾದಿ ಅಂತಃಕರಣಗಳಲ್ಲಿ ಸರ್ವಕ್ರಿಯೆಗಳು ಇರುವವೆಂದು ತಿಳಿದುಕೊಂಡಿದ್ದ ಬಹಿರ್ಮುಖ ಪುರುಷನನ್ನು ಉಪಾಸನೆ[illegible]ಯಲ್ಲಿ ಪ್ರವೃತ್ತನನ್ನಾಗಿ ಮಾಡುವದರ ಸಲುವಾಗಿ ಜ್ಞಾನದ ವಿರೋಧಿ[illegible]ಯಲ್ಲ. ಕಾರಣವೇನೆಂದರೆ ಯಾವ ಆತ್ಮವನ್ನು ವಿದ್ವಾಂಸನು ಅಸಂಗವೆಂದು ತಿಳಿದಿರುವನೋ, ಅದನ್ನು ಕರ್ತಾ ಎಂದು ತಿಳಿದು ಕರ್ಮೋಪಾಸನೆ ಮಾಡಿದರೆ ಜ್ಞಾನದ ವಿರೋಧಿಯಾಗುವದು. ಈ ಆತ್ಮದ ಅಸಂಗರೂಪ

ದೃಢನಿಶ್ಚಯ ಕರ್ಮ ಉಪಾಸನೆಯಿಂದ ವಿದ್ವಾಂಸನ ನಿವೃತ್ತಿಯು ೧ ವುದಿಲ್ಲ. ಆದರಿಂದ ಆಭಾಸರೂಪಕರ್ಮದ ಮತ್ತು ಉಪಾಸನೆ ಇವು ಜ್ಞಾನದ ವಿರೋಧಿಗಳಲ್ಲ. ಈ ಕಾರಣದಿಂದ ಜನಕಾದಿಗಳು ಆಭಾ ರೂಪ ಕರ್ಮವನ್ನು ಮಾಡಿರುವರು.

ಆತ್ಮ ಅಸಂಗವೆಂದೂ ವ್ಯವಹಾರವು ದೇಹಾದಿಗಳ ಧರ್ಮವೆಂ ತಿಳಿದು, ವಿದ್ವಾಂಸನು ಶುಭಕ್ರಿಯೆಯನ್ನು ಮಾಡುವನು. ಇದಕ್ಕೆ ಆಭಾ ಸರೂಪ ಕರ್ಮವೆನ್ನುತ್ತಾರೆ. ಇದು ಜ್ಞಾನದೊಡನೆ ವಿರೋಧ ಮತ್ತು ಭಾಷ್ಯಕಾರನು, ಕರ್ಮ ಉಪಾಸನೆಗೂ ಜ್ಞಾನಕ್ಕೂ ವಿರೋ ವನ್ನು ಹೇಳಿರುವನು. ಆದರೆ ಆತ್ಮದಲ್ಲಿ ಕರ್ತೃಬುದ್ಧಿಯಿಂದ ಕರ್ಮ ಉ ಪಾಸನೆ ಮಾಡುವವರ ವಿರೋಧವನ್ನು ಹೇಳಿರುವನು. ಆಭಾಸ ಪದಿಂದ ಅಲ್ಲ.

ಟಿಪ್ಪಣಿ—೧. ಆತ್ಮವನ್ನು ಅಸಂಗವೆಂದೂ ಮತ್ತು ದೇಹ, ವಾಣಿ, ಮ ಸ್ಸಿನ ಆಶ್ರಿತ ಕ್ರಿಯೆಯೆಂದೂ ತಿಳಿದು,ಮಾಡುವ ಕರ್ಮ ಉಪಾಸನೆಗೆ ಆಭಾ ಸರೂಪವೆನ್ನುತ್ತಾರೆ.

॥೩೯೯॥ ತಥಾಪಿ ಮುಂದಬೋಧನಿಗೆ ಆಭಾಸರೂಪ ಕರ್ಮ, ಮ ಆಭಾಸರೂಪ ಉಪಾಸನೇ ಇವು ಸಹ, ವಿರೋಧಿಗಳು. ಕಾರಣವೇನೆಂದ ಸಂಶಯ ಸಹಿತವಾದ ಬೋಧಕ್ಕೆ ಮುಂದಬೋಧವೆನ್ನಬೇಕು. ಯಾವನ ಅಂ ತಃಕರಣದಲ್ಲಿ "ಆವು ಅಸಂಗವೋ; ಅಥವಾ ಇಲ್ಲವೋ!" ಕದಾಚಿತ್ ಸಂಶಯವುಳ್ಳ ಪುರುಷನು ಮೇಲಿನದ ಮೇಲೆ, "ಆತ್ಮಾ ಅಸಂ ಅದೆ, ನನಗೆ ಪಂಚಿತ್ತಾದರೂ ಸಹ ಕರ್ತವ್ಯವಿಲ್ಲ; "ಎಂಬ ಅರ್ಥವನ್ನು ತನಮಾಡಿದರೆ ಅವನು ಸಂಶಯ ನಿವೃತ್ತನಾಗಿ, ದೃಢಬೋಧ ನಾಗು ಮತ್ತು ಕರ್ಮ ಉಪಾಸನಾ ಮಾಡುವವನು ಉತ್ಮನ್ನವಾದ ಮುಂದಬೋ ಧವು ನಿವೃತ್ತವಾಗಿ "ನಾನು ಕರ್ತಾ ಭೋಕ್ತಾ ಆಗಿರುವೆನು "ಎಂಬ ವಿ ರೀತ ನಿಶ್ಚಯವುಆಗುವದು. ಆದರಿಂದ ಮುಂದಬೋಧ ಉತ್ಪತ್ತಿಯ ಪೂ ರ್ವದಲ್ಲಿ ಕರ್ಮ ಉಪಾಸನೆಮಾಡಬೇಕು. ಮತ್ತು ಬೋಧವಾದ ಮೇ ಮಾಡಬಾರದು.

ಮಂದ ಬೋಧನು ಕರ್ಮ ಉಪಾಸನೆ ಮಾಡಿದರೆ ಉತ್ಪನ್ನವಾ ಬೋಧವು ನಷ್ಟವಾಗುವದು.

ದೃಷ್ಟಾಂತ—ಪಕ್ಷಿಯು ತನ್ನ ತತ್ತಿಗಳಮೇಲೆ, ಪಕ್ಷ ಉತ್ಪತ್ತಿ ಪೂರ್ವದಲ್ಲಿ ಆಚ್ಛಾದನ ಮಾಡುತ್ತದೆ. ಪಕ್ಷ ಉತ್ಪತ್ತಿಯಾದಮೇಲೆ ಮಾ ಡುವದಿಲ್ಲ ಪಕ್ಷೋತ್ಪತ್ತಿಯ ನಂತರ ತತ್ತಿಗೆ ತನ್ನ ಪಕ್ಷದಿಂದ ಆಚ್ಛಾದನ ಮಾಡಿದರೆ,ಆ ಚಿಕ್ಕಪಕ್ಷಿಯ ಕೋಮಲ ಪಕ್ಷಗಳು ಆ ತತ್ತಿಯೊಳಗಿನ ಜಲ ದಿಂದ ಉದುರಿ ಹೋಗುವವು.



ಇದರಂತೆ ಜ್ಞಾನೋತ್ಪತ್ತಿಯಪೂರ್ವದಲ್ಲಿಯೇ ಕರ್ಮ, ಉಪಾಸ ನೆಗಳ ಸೇವನೆಯನ್ನು ಮಾಡಬೇಕು. ಜ್ಞಾನೋತ್ಪತ್ತಿಯ ನಂತರ ಮಾಡ ಬಾರದು. ಜ್ಞಾನೋತ್ಪತ್ತಿಯನಂತರ ಕರ್ಮ ಉಪಾಸನೆಗಳ ಸೇವನೆಯನ್ನು ಮಾಡಿದರೆ ಕೋಮಲ ಪಕ್ಷಗಳಂತಿರುವ ಮುಂದಜ್ಞಾನದ ನಾಶವಾಗುವ ದು ಮತ್ತು ವೃದ್ಧಪಕ್ಷಿಯ ಹಾಸಿಯು ತತ್ತಿಯ ಸಂಬಂಧದಿಂದ ಹೇಗೆ ಆಗುವದಿಲ್ಲವೋ, ಹಾಗೆ ದೃಢಬೋಧದ ಹಾನಿಯು ಆಗುವದಿಲ್ಲ. ವೃದ್ಧ ಪಕ್ಷಿನತ್ ದೃಢಬೋಧಕ್ಕೆ ಕರ್ಮ ಉಪಾಸನೆಯಿಂದ ಉಪಯೋಗವೂ ಇಲ್ಲ.

ಈ ರೀತಿಯಿಂದ ಜ್ಞಾನಿಗೆ ಮೋಕ್ಷ ನಿಮಿತ್ತ ಕಿಂಚಿನ್ಮಾತ್ರವೂ ಕರ್ತವ್ಯವಿಲ್ಲ. ಇದು ಮೂರನೇ ಪ್ರಶ್ನೆಯ ಉತ್ತರವು.

॥೪೦೦॥ ಈಗ ಹೇಳಲ್ಪಟ್ಟ ಅರ್ಥವು ಸರ್ವವೇದದ ಸಾರವಾಗಿರು ವುದು. ಶಿಷ್ಯನಿಗೆ ಆಚಾರ್ಯನು ಯಾವ ಉತ್ತರವನ್ನು ಹೇಳಿದನೋ ಅದು ವೇದದ ಅನುಸಾರಿಯಾಗಿದೆ. ಆದರಿಂದ ಯಥಾರ್ಥವು. ಇದೇ ಸಂಗತಿಯನ್ನು ಹೇಳುವನು.

॥ ದೋಹಾ ॥

ಶಿಷ್ಯ ಕಹ್ಯೋ ಜೊ ತೊಹಿ ಮೈ । ಸರ್ವ ವೇದಕೊಸಾರ ॥
ಲಹೈ ತಾಹಿ ಅನಯಾಸಹಿ । ಸಂಸೃತಿ ನಸೈ ಅಪಾರ ॥೧೧॥

ಟೀಕಾ॥ ಎಲಾ ಶಿಷ್ಯನೇ ? ಯಾವದನ್ನು ನಾನು ನಿನಗೆ ಹೇಳಿದೆನೋ ಅದೆಲ್ಲವು ವೇದದ ಸಾರವು. ಆದರಿಂದ ಅದರಲ್ಲಿ ವಿಶ್ವಾಸವನ್ನು ಮಾ ಡು. ಮತ್ತು ಇದನ್ನು ತಿಳಿಯುವದರಿಂದ ಅನಾಯಾಸ ಅಂದರೆ ಖೇದವಿ ಲ್ಲದೆ ಅಪಾರವಾದ ಯಾವ ಸಂಸೃತಿ ಅಂದರೆ ಜನ್ಮಮರಣರೂಪ ಸಂಸಾರ ವಿದೆಯೋ ನಾಶವಾಗುವದು.

॥೪೦೧॥ ಭಾಷೆಯ ಸಾಂಪ್ರದಾಯ.

ಖೇದದ ನಾಮವು ಆಯಾಸ, ಇದರ ಅಭಾವದ ನಾಮವು ಅನಾ ಯಾಸ ಎಂದು ಇದೆ. ತಥಾಪಿ ಛಂದದ ಮಾತ್ರಾ ಸಂಬಂಧದಿಂದ ಅನಾ ಯಾಸ ಎಂದು ಉಲ್ಲೇಖವಾಗಿರುವದು.

ಭಾಷೆಯಲ್ಲಿ ಛಂದದ ಮಾತ್ರಾ ಸಂಬಂಧದಿಂದ ಗುರುಸ್ಥಾನ... ಲಘು ಮತ್ತು ಲಘುವಿದ್ದಲ್ಲಿ ಗುರುವಾಗಿ ಓದುವದರಿಂದ ದೋಷವಿಲ್ಲ... ಮತ್ತು ಮೋಕ್ಷದಸ್ಥಾನದಲ್ಲಿ ಮೋಛ ಎಂದು ಭಾಷೆಯಲ್ಲಿ ... ಇರುವದು. ಕಾರಣವೇನೆಂದರೆ ಇದು ಭಾಷೆಯ ಸಂಪ್ರದಾಯ.

॥ ದೋಹಾ ॥

ಲಘು ಗುರು ಗುರು ಲಘುಹೋತಹೈ । ವೃತ್ತಿ ಹೇತುಉ...
ರೂ ಹ್ವೈ ಅರುಕೀ ಠೌರಮ್ಯೆ । ಅಬಕೀ ಠೌರ ವಕಾರ ॥೧॥
ಸಂಯೋತಿಕ್ಷ ನ ಕ ಪರ ಖನ । ನಹೀ ಟವರ್ಗ ಣಕಾರ ॥
ಭಾಷಾಮ್ಯೆ ಋ ಲು ಹೂ ನಹೀ । ಅರು ತಾಲವ್ಯ ಶಕಾರ ॥...

ಟೀಕಾ॥ ಇಷ್ಟು ಅಕ್ಷರಗಳು ಭಾಷಾ (ಹಿಂದುಸ್ತಾನಿ)ದಲ್ಲಿ ಇಲ್ಲ. ... ರಾದರೂ ಬರೆದರೆ ಆಕವನವು ಅಶುದ್ಧವೆಂದು ತಿಳಿಯಬೇಕು. (೧) ಕ್ಷ... ಬ ಅಕ್ಷರದ ಸ್ಥಳದಲ್ಲಿ ಛ. (೨) 'ಷ, ಎಂಬ ಅಕ್ಷರಸ್ಥಾನದಲ್ಲಿ ಖ, (೩)... ಕಾರದ ಸ್ಥಾನದಲ್ಲಿ 'ನ,ಕಾರ, (೪) ಋ, ಲು, ಎಂಬ ಅಕ್ಷರಗಳ ಸ್ಥಾನ... ರಿ, ಲಿ, ಎಂದು ಬರೆದಿದೆ. (೫) ಶಕಾರದ ಸ್ಥಾನದಲ್ಲಿ ಸಕಾರ.

ಈ ಬಗೆಯಾಗಿ ಹಿಂದುಸ್ತಾನೀಭಾಷೆಯಲ್ಲಿ ಬರೆಯುವದು ಯೋಗ್ಯ...

॥೪೦೨॥ ಹೇಳಿದ ಅರ್ಥದ ಸಂಗ್ರಹವು ॥೪೦೨—೪೦...

“ಜಗತ್ತಿನ ಕರ್ತನು ಈಶ್ವರನು. ಅವನು ನಿನ್ನಿಂದ ಭಿನ್ನವಾಗಿ... ಮತ್ತು ಸತ್ ಚಿತ್ ಅನಂದರೂಪ ಬ್ರಹ್ಮನು ನೀನು” ಎಂದು ಆಚಾ... ಹೇಳಿದನು. ಅದನ್ನೇ ಪುನಃ ಶಿಷ್ಯನಿಗೆ ಕೃಪೆಯಿಂದ ಹೇಳುವನು.

॥ ಕ ವಿ ತ್ವ ॥

ದೀನತಾಕೂ ತ್ಯಾಗಿ ನರ ಅಪನೊ ಸ್ವರೂಪ ದೇಖಿ।
ತೂ ತೌ ಸುದ್ಧಬ್ರಹ್ಮ ಅಜ ದೃಶ್ಯಕೊ ಪ್ರಕಾಸೀ ಹೈ॥
ಆಪನ್ಯೆ ಅಜ್ಞಾನತ್ಯೆ ಜಗತ ಸಬ ತೂಂಹಿ ರಚ್ಯೆ।
ಸರ್ವಕೊ ಸಂಹಾರ ಕರ್ಯೆ ಆವ ಅವಿನಾಸೀ ಹೈ।
ಮಿಥ್ಯಾ ಪರಪಂಚ ದೇಖಿ ದುಃಖ ಜಿನ ಆನಿ ಜಿಯ।
ದೇವನಕೊ ದೇವ ತೂ ತೌ ಸಬ ಸುಖರಾಸೀ ಹೈ॥



ಜೀವ ಜಗ ಈಸ ಹೋಯ ಮಾಯಾಸ್ಯೆ ಪ್ರಭಾಸ್ಯೆ ತೂಹಿ
ಜ್ಯೆಸ್ಯೆ ರಜ್ಜು ಸಾಪ ಸೀಪ ರೂಪ ಹ್ವೈ ಪ್ರಭಾಸೀ ಹೈ ॥೧೨॥

ಅರ್ಥ॥ ಎಲೌ ಮನುಷ್ಯನೇ? ದೀನತ್ವವನ್ನು ಬಿಟ್ಟು, ನಿನ್ನ ಸ್ವರೂಪವನ್ನು ಅವಲೋಕನ ಮಾಡಿ ನೋಡು, ನೀನು ಉತ್ಪತ್ತಿರಹಿತನೂ, ಶುದ್ಧನೂ ಬ್ರಹ್ಮನೆಂದು ತಿಳಿ. ದೃಶ್ಯವನ್ನು ಪ್ರಕಾಶಪಡಿಸುವಿ. ನಿನ್ನ ಅಜ್ಞಾನದಿಂದ ಸರ್ವ ಜಗತ್ತನ್ನು ನೀನೇ ರಚನೆಮಾಡುವಿ. ಎಂದು ತಿಳಿ. ಪುನಃ ಸರ್ವವನ್ನು ಸಂಹಾರಮಾಡಿ, ನೀನು ಅವಿನಾಶಿಯಾಗಿರುವಿ, ಮಿಥ್ಯಾಪ್ರಪಂಚವನ್ನು ನೋಡಿ ಕಿಂಚಿತ್ತಾದರೂ ಮನಸ್ಸಿನಲ್ಲಿ ಖೇದವುಳ್ಳವನಾಗುವದಿಲ್ಲ ದೇವರ ದೇವನು ನೀನು ಆಗಿರುವಿ. ಸರ್ವ ಪರಿಪೂರ್ಣಸುಖವುಳ್ಳವನಿರುವಿ. ಮಾಯೆಯಿಂದ ನಿನ್ನಲ್ಲಿ ಜೀವ, ಜಗ, ಎಂದು ನೋಡುವಿ. ರಜ್ಜು ಮತ್ತು ಚಿಪ್ಪಿನಲ್ಲಿ ಸರ್ಪ ಮತ್ತು ರಜತವತ್ ಭಾಸಮಾನನಾಗುವಿ.

॥೪೦೩॥ ಕ ವಿ ತ್ವ ॥

ರಾಗ ಜಾರಿ ಲೋಭಹಾರಿ ದ್ವೇಷಮಾರಿ ಮಾರವಾರಿ।
ಮಾರವಾರ ಮೃಗವಾರ ಪಾರವಾರ ಪೇಖಿಯೆ ॥
ಜ್ಞಾನ ಭಾನ ಅನಿತಮ ತಮತಾರಿ ಭಾಗತ್ಯಾಗ।
ಜೀವ ಸೀವ ಭೇದ ಛೇದ ವೇದನ ಸು ಲೇಖಿಯೆ।
ವೇದಕೊ ವಿಚಾರ ಸಾರ ಆಪಕೂ ಸಂಭಾರಿ ಯಾರ।
ಬಾರಿ ದಾಸಪಾಸ ಆಸ ಇಸಕೀನ ದೇಖಿಯೆ ॥
ನಿಶ್ಚಲ ತೂ ಚಲ ನ ಅಚಲ ಚಲ ದಲ ಛಲ।
ನಬ ನೀಲ ತಲ ಮಲ ತಾಸೂ ನ ವಿಸೇಖಿಯೆ ॥೧೩॥

ಟೀಕಾ॥ ಜ್ಞಾನದ ಸಾಧನಗಳನ್ನು ಹೇಳುವೆನು. ಎಲೌ ಶಿಷ್ಯನೇ? ರಾಗ ಅಂದರೆ ಪದಾರ್ಥಗಳಲ್ಲಿರುವ ಆಸಕ್ತಿಯನ್ನು ಭಸ್ಮಮಾಡಿ, ಲೋಭವನ್ನು ನಾಶಮಾಡು. ದ್ವೇಷವನ್ನು ಹೊಡೆದು ಓಡಿಸು. ಕಾಮವನ್ನು ನಿಶ್ಯ

೧

ತ್ರಮಾಡು, ರಾಗ, ಲೋಭ, ದ್ವೇಷ, ಕಾಮಗಳ ಗ್ರಹಣದಿಂದ ಸರ್ವರಾಜಸ ತಾಮಸ ವೃತ್ತಿಗಳ ಗ್ರಹಣವಾಗುತ್ತವೆ. ಅದರಿಂದ ಸರ್ವ ರಾಜಸ ತಾಮಸ ವೃತ್ತಿಗಳನ್ನು ನಾಶ ಮಾಡು. ಎಂದರೆ, ಅರ್ಥ ಸಿದ್ಧವಾಯಿತು. ರಾಜಸ ತಾಮಸ ವೃತ್ತಿಗಳು ಜ್ಞಾನದ ವಿರೋಧಿಗಳಾಗಿವೆ. ಇವುಗಳ ನಾಶದ

ಹೊರತು ಜ್ಞಾನ ವುಂಟಾಗುವದಿಲ್ಲ. ಈ ಕಾರಣದಿಂದ ಇವುಗಳ ಸಾ ಜಿಜ್ಞಾಸುವಳಿಗೆ ಅಪೇಕ್ಷಿತವಾದದ್ದಾಗಿದೆ.

ವಿವೇಕ, ವೈರಾಗ್ಯ, ಶಮಾದಿ ಷಟ್‌ಸಂಪತ್ತಿ, ಮುಮುಕ್ಷುತ್ವ ನಾಲ್ಕು ಜ್ಞಾನದ ಸಾಧನಗಳಾಗಿವೆ. ಇವುಗಳಲ್ಲಿ ವಿವೇಕವು ಪ್ರಧಾನವಾ ದ್ದು. ಕಾರಣವೇನೆಂಗರೆ, ವಿವೇಕದಿಂದ ವೈರಾಗ್ಯಾದಿಗಳು ಉತ್ಪನ್ನವಾ ವವು. ಆದುದರಿಂದ ವಿವೇಕದ ಉಪದೇಶವನ್ನು ಆಚಾರ್ಯನು ಹೇಳುವ

ಎಲೌ ಶಿಷ್ಯನೇ! ಪಾರವಿಲ್ಲದೆ ಇರುವ ಈ ಸಂಸಾರವನ್ನು ಮೇ ಮೇಲೆ ಮೃಗಜಲವತ್ ಮಿಥ್ಯವೆಂದು ತಿಳಿ. (೧) ಸಂಸಾರಕ್ಕೆ ಪಾರಾವಾ ವೆಂಬ ನಾಮವು. (೨) ಆತ್ಮಕ್ಕೆ ಅಪಾರನೆಂಬ ನಾಮವು ಇರುವ ಪಾರಾವಾರವು ಮಿಥ್ಯಾ ಆದೆ; ಎಂಬ ಶಬ್ದದಿಂದ ಅಪಾರವಾದವು ಮಿಥ್ಯ ಆದರೆ ಸತ್ಯವದೆ. ಎಂಬ ಪ್ರಸಂಗವನ್ನು ಅರ್ಥದಿಂದ ಕಥನಮಾಡುವನು.

ಗಾರುಡಿಗನ ಚಮತ್ಕಾರಿಕ ಆಟವನ್ನು ನೋಡುವಾಗ ಪುತ್ರನಿಗೆ ಪಿತ ಹೀಗೆ ಎನ್ನುವನು. "ಎಲೌ ವುತ್ರನೇ? ಗಾರುಡಿಗನು ಮಾಡಿದ ಅನ್ನ ಮೊದಲಾದುವುಗಳೆಲ್ಲ ಮಿಥ್ಯಗಳಾಗಿವೆ." ಎಂಬ ಹೇಳುವಿಕೆಯಿಂದ ಗಾರು ಗನಿಗೆ ಮಿಥ್ಯವೆಂದು ತಿಳಿಯುವದಿಲ್ಲ. ಆದರೆ ಸತ್ಯವೆಂದು ತಿಳಿಯುವ ಇದರಂತೆ ಜಗತ್ತು ಮಿಥ್ಯಾ ಎಂದು ಹೇಳುವದರಿಂದ ಆತ್ಮಾ ಸತ್ಯವೆ ತಿಳಿಯಬೇಕು. ಈಅಭಿಪ್ರಾಯದಿಂದ ಆಚಾರ್ಯನು ಪಾರಾವಾರ ಮಿ ಎಂದು ಹೇಳಿದನು.

ಈ ರೀತಿಯಿಂದ ಮಿಥ್ಯವಾಗಿದೆ. ಮತ್ತು ಆತ್ಮಸತ್ಯವು ಈ ವಿವೇ ಉಪದೇಶವನ್ನು ಮಾಡಿದನು.

ಈ ವಿವೇಕದಿಂದ ಅನ್ಯಸಾಧನಗಳು ತಾವೇ ಉತ್ಪನ್ನವಾಗುವ ಆದರಿಂದ ವಿವೇಕದ ಉಪದೇಶದಿಂದ ಸರ್ವಸಾಧನಗಳ ಉಪದೇಶ ಅರ್ಥದಿಂದ ಹೇಳಿದನು.

ಜ್ಞಾನದ ಬಹಿರಂಗ ಸಾಧನಗಳನ್ನು ಹೇಳಿದನು. ಇನ್ನು ಅಂತರಂ ಸಾಧನಗಳನ್ನು ಹೇಳುವನು.

ಅಂತರಂಗದ ಸಾಧನವು ಶ್ರವಣವೆನ್ನಬೇಕು. ಎಲೌ ಶಿಷ್ಯನೇ! ಜ್ಞಾ ರೂಪೀ ಭಾನುವನ್ನು ಶ್ರವಣದಿಂದ ಸಂಪಾದನಮಾಡಿ, ತಮ ಉ ಜ್ಞಾನರೂಪ ಅಂಧಕಾರವನ್ನು ನಾಶಮಾಡು.

ತಮ ಎಂಬ ನಾಮವು ಅಂಧಕಾರಕ್ಕೆ, ಮತ್ತು ಅಜ್ಞಾನಕ್ಕೂ

ಅಂಧಕಾರವು ಉಪಮಾನವು, ಮತ್ತು ಅಜ್ಞಾನವು ಉಪಮೇ



ಪ್ರಥಮದಲ್ಲಿ ಯಾವ ತಮ ಎಂಬ ಶಬ್ದವಿದೆಯೋ, ಅದು ಉಪಮೇಯವಾಚಕವು. ಮತ್ತು ಎರಡನೆಯದು ಉಪಮಾನದ ವಾಚಕವು.

॥ ದೋಹಾ ॥

ಜಾಕೂ ಉಪಮಾ ದೀಜಿಯೆ । ಸೊ ಉಪಮೇಯ ಬಖಾನಿ॥
ಜಾಕೀ ಉಪಮಾ ದೀಜಿಯೇ । ಸೊ ಕಹಿಯೆ ಉಪಮಾನಿ॥೩॥

ಅರ್ಥ॥ ಯಾವದಕ್ಕೆ ಉಪಮಾ ಕೊಡುವೆವೋ ಅದು ಉಪಮೇಯವೆಂದು ತಿಳಿ; ಯಾವದರ ಉಪಮಾಕೊಡುವೆವೋ, ಅದಕ್ಕೆ ಉಪಮಾನವೆಂದು ಅನ್ನಬೇಕು.

ಟಿಪ್ಪಣಿ. (೧) ವಿಷಯಗಳಲ್ಲಿ ದೋಷದ ದರ್ಶನದಿಂದ ರಾಗದ ನಾಶವಾಗುವದು. ಮತ್ತು ಅರ್ಥದಲ್ಲಿ ಅನರ್ಥದ ನೋಡುವಿಕೆಯಿಂದ ಲೋಭದ ನಾಶವು ಆಗುವದು. ಕಾಮದ ಅಭಾವದಿಂದ ಕ್ರೋಧರೂಪ ದ್ವೇಷದ ಉತ್ಪತ್ತಿಯು ಆಗುವದಿಲ್ಲ. ಪದಾರ್ಥಗಳ ಚಿಂತನರೂಪ ಸಂಕಲ್ಪದಅಭಾವದಿಂದ ಇಚ್ಛಾರೂಪ ಕಾಮದ ಉತ್ಪತ್ತಿಯು ಆಗುವದಿಲ್ಲ.

ಈ ರೀತಿಯಿಂದ ಅನ್ಯ ರಾಜಸ ತಾಮಸ ವೃತ್ತಿಗಳ ನಾಶದ ಉಪಾಯವನ್ನು ಸಹಾ ಶಾಸ್ತ್ರದಿಂದ ತಿಳಿದುಕೊಳ್ಳಬೇಕು.

ಇಲ್ಲವೆ ಏಕಾದಶ ಸ್ಕಂಧದ ೧೩ನೇ ಅಧ್ಯಾಯದಲ್ಲಿ ಹೇಳಿದ ದೇಶಕಾಲಾದಿರೂಪ ದಶ ಸಾತ್ವಿಕೀ ಪದಾರ್ಥಗಳ ಸೇವನೆಯಿಂದ ಸತ್ವಗುಣ ವೃದ್ಧಿದ್ವಾರ ಸರ್ವ ರಾಜಸ ತಾಮಸ, ವೃತ್ತಿಗಳ ನಾಶವು (ತಿರಸ್ಕಾರ) ಆಗುವದು.

೧

॥೪೦೪॥ ಜ್ಞಾನದ ಸ್ವರೂಪವನ್ನು ಅನ್ಯಶಾಸ್ತ್ರಗಳಲ್ಲಿ ಅನೇಕ ಪ್ರಕಾರವಾಗಿ ವರ್ಣಿಸಿದ್ದಾರೆ. ಅದರಿಂದ ಮಹಾವಾಕ್ಯಾನುಸಾರವಾಗಿ ಜ್ಞಾನಸ್ವರೂಪವನ್ನು ಹೇಳುವೆನು. ಎಲೌ ಶಿಷ್ಯನೇ! (೧) ಜೀವೇಶ್ವರರಲ್ಲಿಯ ಭೇದ ಪ್ರತೀತಿ ದರ್ಶಕವಾದ ಮಾಯಾ ಅವಿದ್ಯಾಭಾಗವನ್ನು ತ್ಯಾಗಮಾಡಿ, (೨) ಭೇದರಹಿತ ಚೈತನ್ಯಭಾಗವನ್ನು ನೀನು ತಿಳಿ.

ಈ ಹೇಳುವಿಕೆಯಿಂದ ಸಿದ್ಧವಾದದ್ದೇನೆಂದರೆ; ಭಾಗತ್ಯಾಗ ಲಕ್ಷಣದಿಂದ ಜೀವೇಶ್ವರರ ಐಕ್ಯವನ್ನು ತಿಳಿ.

ಶಿವಸ್ಥಾನದಲ್ಲಿ ಸೀವ ಎಂದು ಬಿದ್ದಿರುವದು.

ತೃತೀಯ ಪಾದದ ಅರ್ಥವು ಸ್ಪಷ್ಟ.

ಪೂರ್ವದಲ್ಲಿ ಹೇಳಿದ ಅರ್ಥವನ್ನೇ ಸಂಕ್ಷೇಪದಿಂದ ಹೇಳುವೆನು. ಎಲೌ ಶಿಷ್ಯ! ಚಲ ಅಂದರೆ ವಿನಾಶಿಯಾದ ದೇಹಾದಿ, ಸಂಘಾತವು ನೀನು ಅಲ್ಲ; ಆದರೆ ಅಚಲ ಅಂದರೆ ವಿನಾಶಿಯಾದ ಬ್ರಹ್ಮನು ನೀನು. ಮತ್ತು

೨

ಚಲದಲ ಅಂದರೆ ವೃಕ್ಷರೂಪ ಸಂಸಾರವು ಮಿಥ್ಯಾ ಅದೆ. ಆಕಾಶದಲ್ಲಿ ಹೇ ನೀಲತ್ವವೂ, ಕಟಾಹ ರೂಪತ್ವವು ಇಲ್ಲದೇಇದ್ದು, ಮಿಥ್ಯಾಪ್ರತೀತಮಾ ತ್ರದೆಯೋ, ಇದರಂತೆ ಸಂಸಾರವು ಸಹ ಆತ್ಮದಲ್ಲಿ ಇರುವದಿಲ್ಲ. ಮಿ ಪ್ರತೀತವಾಗುವದು.

ಈ ಸಂಸಾರವು ವೃಕ್ಷರೂಪದಿಂದ ಶ್ರುತಿ, ಸ್ಮೃತಿಯಲ್ಲಿ ಹೇಳಿರುವದು ಅದರಿಂದ ವೃಕ್ಷಶಬ್ದದ ಪ್ರಯೋಗವನ್ನು ಸಂಸಾರದಲ್ಲಿ ಮಾಡಿರುವ.

ಟಿಪ್ಪಣಿ. ೧. ಸಾಂಖ್ಯನ್ಯಾಯ ಮೊದಲಾದ ಶಾಸ್ತ್ರಗಳಲ್ಲಿ

೨. ಸರ್ವಕ್ಕಿಂತಲೂ ಉತ್ಕೃಷ್ಟವಾಗಿರುವದರಿಂದ ಶ್ರೇಷ್ಠ. ಹೇಗೆ ಮಾಯಾ ಪರಬ್ರಹ್ಮವು ಯಾವದರ ಮೂಲವೋ, ಮಹತ್ತವು ಯಾವದರ ಅಂಕುರ ಅಹಂಕಾರವೆಂಬುವದು ಬೊಡ್ಡಿಯೋ, ಪಂಚತನ್ಮಾತ್ರಗಳು ಯಾವ ಶಾಖೆಗಳೋ, ಮಹತ್ವಾದಿಗಳು ಕಾರ್ಯತಃ ನಿಕೃಷ್ಟವಾಗಿರುವದು ಯಾವದರ ಕೆಳಗಿನ ಶಾಖೆಗಳೋ, ವೇದ ಮೊದಲಾದ ಶಾಸ್ತ್ರಗಳು ರೋಚನರೂಪವಾಕ್ಯಗಳಿಂದ ಅನಿತ್ಯತ್ವಮೊದಲಾದ ದೋಷಗಳನ್ನು ದನೆಮಾಡುವುದರಿಂದ ಈ ಶಾಸ್ತ್ರಗಳು ಯಾವದರ ಪರ್ಣ (ಎಲೆ)ಗಳಾ ವವೋ, ಚತುರ್ಥ ಪುರುಷಾರ್ಥ ರೂಪವು ಯಾವದರ ರಸವಾಗಿರುವದು ಧರ್ಮ ಅಧರ್ಮರೂಪ ಪುಷ್ಪಗಳು ಯಾವದಕ್ಕೆ ಆಗುವವೋ, ಜನ್ಮಮರಣ ದುಃಖಗಳು ಯಾವದರ ಫಲವಾಗಿರುವವೋ, ಅಜ್ಞಜೀವರೂಪ ಪಕ್ಷಿ ಯಾವದರ ಭೋಕ್ತೃವಾಗಿರುವದೋ, ವೈರಾಗ್ಯಕ್ಕಿಂತಲೂ ತೀಕ್ಷ್ಣವಾ ಜ್ಞಾನರೂಪಕ ದ್ವಾರವು ಯಾವದರ ಭೇದಕವಾಗಿರುವದೋ ಇಂಥ ಸಂ ಸಾರವು ಅಶ್ವತ್ಥವೃಕ್ಷರೂಪಿಯಾಗಿದೆ. ಇತ್ಯಾದಿ ಅನೇಕ ರೂಪಪ್ರಕಾ ಳಿಂದ ಶಾಸ್ತ್ರಗಳಲ್ಲಿ ಸಂಸಾರ ರೂಪ ವೃಕ್ಷದ ವರ್ಣನೆಯನ್ನು ಮಾಡಿ

---

॥೪೦೫॥ ಮೋಕ್ಷದ ಸಾಧನವು ಜ್ಞಾನವು, ಎಂಬುದನ್ನು ಅನ್ಯಪ್ರಕಾರದಿಂದ ಕಥನವು. ॥೪೦೫-೪೦೬॥

ಮೋಕ್ಷದ ಸಾಧನವು ಜ್ಞಾನವು. ಈ ಅರ್ಥವನ್ನು ಅನ್ಯಪ್ರ ದಿಂದ ಹೇಳಿರುವರು.

॥ ಕ ವಿ ತ್ವ ॥

ಬಂಧ ಮೋಖ ಗೇಹ ದೇಹವಾನ ಜ್ಞಾನವಾನ ಜ
ರಾಗ ರು ವಿರಾಗ ದೋಇ ಧಜಾ ಫರರಾತ ಹೈ ॥
ವಿಷೇವಿಷ್ಯೆ ಸತ್ಯಭ್ರಮು ಭ್ರಮು ಮತಿ ವಾತ ತಾತ



ಹಲಲಾತ ಪ್ರಾತ ರಾತ ಘರೀ ನ ಠಹರಾತ ಹೈ ॥
ಸಾಛ್ಯ ಸಾಛೀ ಪೂತರೀ ಅನೂಜರೀ ರು ಊಜರೀದ್ವೈ।
ದೇಖಿ ರಾಗೀ ತ್ಯಾಗೀ ಲಲಜಾತ ಜನ ಜಾತ ಹೈ ॥
ಚಂಚಲ ಅಚಲ ಭ್ರಮು ಬ್ರಹ್ಮ ಲಖಿ ರೂಪ ನಿಜ ।
ದುಃಖರೂಪ ಆನಂದ ಸ್ವರೂಪಮೈ ಸಮಾತ ಹೈ॥೧೪॥

ಟೀಕಾ॥ ಎಲೌ ಶಿಷ್ಯನೇ? ದೇಹವಾನ್ ಅಂದರೆ ದೇಹಾಭಿಮಾನವುಳ್ಳ ಅಜ್ಞಾನಿಯು, ಮತ್ತು ದೇಹಾಭಿಮಾನರಹಿತ ಜ್ಞಾನಿಯು,ಇವರಿಗೆ ಬಂಧ, ಮೋಕ್ಷಗಳೆಂಬ ಎರಡು ಗೃಹಗಳಿರುವವು. ಇವುಗಳಲ್ಲಿ (೧) ಅಜ್ಞಾನಿಯ ಗೃಹವು ಬಂಧವು.(೨) ಜ್ಞಾನಿಯ ಗೃಹವು ಮೋಕ್ಷವು ಆಗಿದೆ ರಾಗ,ವಿರಾ ಗಗಳು ಆ ಗೃಹಗಳ ಧ್ವಜಗಳಾಗಿರುವವು. ಧ್ವಜವು ಹೇಗೆ ರಾಜಧಾನಿಯಚಿ ಹ್ನವಾಗಿರುವದೋ, ಹಾಗೆ ರಾಗ, ವಿರಾಗಗಳು ಅವುಗಳ ಚಿಹ್ನವಾಗಿವೆ(೧) ಅಜ್ಞಾನಿಯ ಚಿಹ್ನವು ರಾಗವು. (೨) ಜ್ಞಾನಿಯ ಚಿಹ್ನವು ವಿರಾಗವು. ಅಜ್ಞಾನಿಯಲ್ಲಿಯೂ ಸಹ ವಿರಾಗವುಂಟಾಗುವದು ; ತಥಾಪಿ ಜ್ಞಾನಿಯ ವಿರಾಗವು ಅಜ್ಞಾನಿಯ ವಿರಾಗಕ್ಕಿಂತ ವಿಲಕ್ಷಣವಾಗಿರುವದು.ಎಲೌ ಶಿಷ್ಯ ನೇ! ಶಬ್ದಾದಿ ವಿಷಯುಗಳಲ್ಲಿ ಸತ್ಯಭ್ರಮೆ ಅಂದರೆ ಸತ್ಯತ್ವದ ಭ್ರಾಂತಿ,ಮ ತ್ತು ಭ್ರಮುಮತಿ ಅಂದರೆ ರಜ್ಜುಸರ್ಪವತ್ ವಿಷಯುವು ಭ್ರಮರೂಪವಾಗಿದೆ. ಬುದ್ಧಿಯ ಈ ನಿಶ್ಚಯವು ವಾಯುವಿನಂತೆ ರಾಗ ಮತ್ತು ವಿರಾಗವನ್ನು ಅಲುಗಾಡಿಸುವದು. ವಾಯುವು ಹೇಗೆ ಧ್ವಜವನ್ನು ಅಲುಗಾಡಿಸುವದೋ ಹಾಗೆ ವಿಷಯುಗಳಲ್ಲಿ ಸತ್ಯಬುದ್ಧಿ ಮತ್ತು ಭ್ರಮುಬುದ್ಧಿಯು ರಾಗವಿರಾಗ ಗಳನ್ನು ಅಲುಗಾಡಿಸುವದು;ಶಿಥಿಲವಾಗಗೊಡುವದಿಲ್ಲ. (೧) ವಿಷಯಗಳಲ್ಲಿ ಸತ್ಯಬುದ್ಧಿಯಿಂದ ರಾಗದ ಶಿಥಿಲತ್ವವು ನಿವೃತ್ತವಾಗುವದು.(೨) ವಿಷಯ ಗಳಲ್ಲಿ ಭ್ರಮುಬುದ್ಧಿಯಿಂದ ವಿರಾಗದ ಶಿಥಿಲತ್ವವು ನಿವೃತ್ತವಾಗುವದು.

---

॥೪೦೬॥ ವಿಷಯುವು ಅಸತ್ಯವು, ಅದರಿಂದ ಅದರಲ್ಲಿ ಸತ್ಯಬುದ್ಧಿಯು ಭ್ರಾಂತಿರೂಪವು. ಈ ಅರ್ಥವು ಸಿದ್ಧವಾಗುವದರ ದೆಶೆಯಿಂದ ಕವಿತ್ವದಲ್ಲಿ ಸತ್ಯಭ್ರಮು ಎಂದು ಹೇಳಬೇಕಾಯಿತು. ಸತ್ಯಬುದ್ಧಿಯೆಂದು ಹೇಳಲಿಲ್ಲ. ಭ್ರಾಂತಿಜ್ಞಾನ, ಮತ್ತು ಭ್ರಾಂತಿಜ್ಞಾನದ ವಿಷಯುವಾದ ಮಿಥ್ಯಾವಸ್ತು, ಇವೆರಡಕ್ಕೂ ಭ್ರಮೆಯೆಂದು ಎನ್ನಬೇಕು. ಇದರಿಂದ ಅಜ್ಞಾನಿಯ ವಿರಾ ಗಕ್ಕೂ, ಜ್ಞಾನಿಯ ವಿರಾಗಕ್ಕೂ ಭೇದವನ್ನು ಹೇಳಿದಂತಾಯಿತು. ಕಾರ ಣವೇನೆಂದರೆ:-ಅಜ್ಞಾನಿಯವಿರಾಗವು ವಿಷಯಗಳಲ್ಲಿ ಮಿಥ್ಯಾಬುದ್ಧಿಯಿಂದ

ಉತ್ಪನ್ನವಾಗಿರುವದಿಲ್ಲವೆಂಬುದರ ದೆಶೆಯಿಂದ ಮಂದವು. "ವಿಷ...
"ಮಿಥ್ಯ ಎಂಬ ಬುದ್ಧಿಯು ಅಜ್ಞಾನಿಗೆ ಆಗುವದಿಲ್ಲ.

೧. ಯದ್ಯಪಿ ಶಾಸ್ತ್ರಯುಕ್ತಿಯಿಂದ ಅಜ್ಞಾನಿಯು ಸಹಾ ವಿಷ... ವೆಂದು ತಿಳಿಯುವನು, ತಥಾಪಿ "ವಿಷಯ ಮಿಥ್ಯೆ.,, ಎಂಬ ಅಪರೋ... ಬುದ್ಧಿಯು ಜ್ಞಾನಿಗೇ ಇರುವದು, ಅಜ್ಞಾನಿಗೆ ಇರುವದಿಲ್ಲ. ಅ... ಅಜ್ಞಾನಿಗೆ ವಿಷಯದಲ್ಲಿ ಇರತಕ್ಕ ಪರೋಕ್ಷ ಮಿಥ್ಯಾಬುದ್ಧಿಯಿಂದ ಅ... ರೋಕ್ಷ ಸತ್ಯಭ್ರಾಂತಿಯು ನಿವೃತ್ತವಾಗುವದಿಲ್ಲ. ಈರೀತಿಯಿಂದ ಅ... ನಿಗೆ ಯಾವಕಾಲದಲ್ಲಿ ವಿಷಯದಲ್ಲಿ ವಿರಾಗವುಂಟಾಗುವದೋ ಆ... ದಲ್ಲಿ ಪರೋಕ್ಷ ಮಿಥ್ಯಾಬುದ್ಧಿಯಿಂದ ಆಗುವದು. ಅದರೂ ಪರೋ... ಮಿಥ್ಯಾಬುದ್ಧಿಗಿಂತಲೂ ಅಪರೋಕ್ಷ ಸತ್ಯಬುದ್ಧಿಯು ಪ್ರಬಲವದೆ, ಈ... ರಣದಿಂದ ಅಜ್ಞಾನಿಯ ಪರೋಕ್ಷ ಮಿಥ್ಯಾಬುದ್ಧಿಯು ವಿರಾಗದಹೇತುವ... ಕಾರಣವೇನೆಂದರೆ; ವಿಷಯದಲ್ಲಿ ಪ್ರಬಲವಾದ ಸತ್ಯಬುದ್ಧಿಯಿಂದ ರಾ... ವುಂಟಾಗುತ್ತದೆ,ಮತ್ತು ವಿರಾಗವು ಉತ್ಪನ್ನವಾದರೂ ಸಹ ಮಿಥ್ಯಾಬು... ಯಿಂದ ಆಗುವದಿಲ್ಲ.ವಿಷಯದಲ್ಲಿ ದೋಷದೃಷ್ಟಿಯಿಂದ ಉಂಟಾಗು...

೨. ಜ್ಞಾನಿಯು ಸರ್ವಪ್ರಪಂಚವನ್ನು ಅಪರೋಕ್ಷ ರೂಪದಿ... ಮಿಥ್ಯೆ ಎಂದು ತಿಳಿಯುವನು. ಈ ಅಪರೋಕ್ಷ ಮಿಥ್ಯಾಬುದ್ಧಿಯಿಂದ ಅ... ರೋಕ್ಷ ಸತ್ಯಬುದ್ಧಿಯು ನಿವೃತ್ತವಾಗುತ್ತದೆ. ಆದರಿಂದ ರಾಗದ ಹೇ... ವಾದ ವಿಷಯದಲ್ಲಿ ಸತ್ಯಬುದ್ಧಿಯು ಜ್ಞಾನಿಗೆ ಇರುವುದಿಲ್ಲ.ವಿರಾಗದ... ತುವಾದ ವಿಷಯದಲ್ಲಿ ಮಿಥ್ಯಾಬುದ್ಧಿಯು ಇರುವುದು. ಜ್ಞಾ... ವಿಷಯದಲ್ಲಿ ಸತ್ಯಬುದ್ಧಿಯಿದ್ದರೆ, ಪುನಃ ರಾಗವು ಉತ್ಪನ್ನವಾಗಿ ವಿ... ಗವು ನಿವೃತ್ತಿಯಾಗಬೇಕು. ಈ ಅಪರೋಕ್ಷದಿಂದ ಮಿಥ್ಯೆ ಎಂದು ತಿ... ಪದಾರ್ಥಗಳಲ್ಲಿ ಪುನಃ ಸತ್ಯಬುದ್ಧಿಯು ಉಂಟಾಗುವದಿಲ್ಲ, ಹೇಗೆ ಅಪರೋ... ಕ್ಷರೂಪದಿಂದ ಮಿಥ್ಯವೆಂದು ತಿಳಿದ ರಜ್ಜು ಸರ್ಪದಲ್ಲಿ ಪುನಃ ಸತ್ಯಬು... ಯುಂಟಾಗುವದಿಲ್ಲವೋ, ಹಾಗೆ ಜ್ಞಾನಿಗೆ ಪುನಃ ಸತ್ಯ ಬುದ್ಧಿಯುಂ... ಗುವದಿಲ್ಲ, ಈ ರೀತಿಯಿಂದ ರಾಗದ ಉತ್ಪತ್ತಿ, ಮತ್ತು ವಿರಾಗದ ನಿ... ತ್ತಿಯು ಜ್ಞಾನಿಗೆ ಉಂಟಾಗುವದಿಲ್ಲ, ಈ ಕಾರಣದಿಂದ ಜ್ಞಾನಿಯ ವಿ... ಗವು ದೃಢವು.

ಅಜ್ಞಾನಿಗೆ ದೋಷದೃಷ್ಟಿಯಿಂದ ವಿರಾಗವು ಉಂಟಾಗುತ್ತದೆ. ಆ... ದೂರವಾಗುವದು.ಕಾರಣವೇನೆಂದರೆ, ಯಾವ ಪದಾರ್ಥದಲ್ಲಿ ದೋಷ... ಯುಂಟಾಗಿರುವದೋ,ಆ ಪದಾರ್ಥದಲ್ಲಿಯೇ ಅನ್ಯಕಾಲದಲ್ಲಿ ಸಮ್ಯ...



...ವು ಸಹಾ ಉಂಟಾಗುವದು. ಸರ್ವಪುರುಷರಿಗೆ ವೃತ್ತಿಯು ಅಂತ್ಯದಲ್ಲಿ ...ಗೆ ಸ್ತ್ರೀವಿಷಯದಲ್ಲಿ ದೋಷದೃಷ್ಟಿಯುಂಟಾಗುವದೋ, ಮತ್ತು ...ಲಾಂತರದಲ್ಲಿ ಪುನಃ ಸಮ್ಯಕ್ ಬುದ್ಧಿಯು ಉಂಟಾಗುವದೋ, ಹಾಗೆ ...ಷದೃಷ್ಟಿಯು ಯಾವಾಗ ನಿವೃತ್ತವಾಗುವದೋ ಆಗ ಅಜ್ಞಾನಿಯ (೧) ...ಗವು ಸಹಾ ದೂರವಾಗುವದು. ಈ ಕಾರಣದಿಂದ ಅಜ್ಞಾನಿಗೆ ದೃಢವಿ ...ಗವು ಉಂಟಾಗುದಿಲ್ಲ.

ಈ ರೀತಿಯಿಂದ ರಾಗ ಮತ್ತು ವಿರಾಗವು ಅಜ್ಞಾನಿಯ ಮತ್ತು ...ಜ್ಞಾನಿಯ ಚಿನ್ಹವಾಗಿವೆ.

ಮತ್ತೂ ಬೇರೆ ಚಿನ್ಹಗಳನ್ನೂ ಹೇಳಿದ್ದಾರೆ. "ಎಲೌ ಶಿಷ್ಯನೇ! ಮನೆ ...ಮೇಲೆ ಗಜ ಮೊದಲಾದವುಗಳ ಮೂರ್ತಿಯು ಇರುವವು. ಇದರಂತೆ ...ಪರೋಕ್ಷದ ಧಾಮವು ಅಜ್ಞಾನಿ ಮತ್ತು ಜ್ಞಾನಿಯ ಅಂತಃಕರಣವಾ ...ದೆ. ಈ ವಿಷಯದಲ್ಲಿ ಪುತ್ಥಳಿಯು ಮತ್ತು ಗೃಹವು ಸಾಕ್ಷ್ಯಸಾಕ್ಷೀಆಗಿವೆ

(೧) ಅಜ್ಞಾನಿಯ ಅಂತಃಕರಣದಲ್ಲಿ ಸಾಕ್ಷ್ಯರೂಪೀ ಪುತ್ಥಳಿಯದೆ. ಮತ್ತು

(೨) ಜ್ಞಾನಿಯ ಅಂತಃಕರಣದಲ್ಲಿ ಸಾಕ್ಷಿರೂಪೀ ಪುತ್ಥಳಿಯದೆ.

ಸಾಕ್ಷಿಯ ವಿಷಯವಾದ ಪ್ರಪಂಚಕ್ಕೆ ಸಾಕ್ಷ್ಯವೆನ್ನುತ್ತಾರೆ. (೧) ಸಾಕ್ಷ್ಯರೂಪ ಪುತ್ಥಳಿಯು ಮಲಿನವು. ಮತ್ತು (೨) ಸಾಕ್ಷೀರೂಪಿಯಾದ ಪುತ್ಥಳಿಯು ಶುದ್ಧವು. ಮುಂದೆ ಅರ್ಥವು ಸ್ಪಷ್ಟವದೆ. ಎಂದರೆ ನಿಜಸ್ವರೂಪವನ್ನು ಚಂಚಲವಾದ ಭ್ರಮೆಯಿಂದ ಅವಲೋಕಿಸಲು,ದುಃಖರೂಪಭಾಜನನಾಗುವನು. ಅಚಲ ಬ್ರಹ್ಮ ನಿಜಸ್ವರೂಪವನ್ನು ಯಾವನು ತಿಳಿಯುವನೋ ಅವನು ಆನಂದ ಸ್ವರೂಪವನ್ನು ಹೊಂದುವನು.

ಟಿಪ್ಪಣಿ—(೧) ಅಜ್ಞಾನಿಗೆ ದೃಢವಿರಾಗವು ಆಗುವದಿಲ್ಲ. ಈ ಅಭಿಪ್ರಾಯದಿಂದಲೆ ಗೀತೆಯಲ್ಲಿ ಭಗವಂತನು ಹೇಳಿದ್ದೇನೆಂದರೆ, ನಿರಾಹಾರ(ಹೊರಗಿನಿಂದ ವಿಷಯಗಳನ್ನು ಬಿಟ್ಟವನು) ಯಾವ ದೇಹೀ [ಜಿಜ್ಞಾಸು] ಇರುವನೋ ಅವನಿಗೆ ರಸವು ಹೇಗೆ ವರ್ಜಿತವಾಗುವದೋ, ಹಾಗೆ ವಿಷಯವು ನಿವೃತ್ತವಾಗಿರುವದು ಎಂದರೆ ಅವನಿಗೆ ವಿಷಯಗಳಲ್ಲಿಯ ಸ್ಥೂಲರಾಗವು ನಿವೃತ್ತವಾಗಿರುವದು, ಆದರೆ ರಸಶಬ್ದದ ವಾಚ್ಯವಾದ ವಾಸನಾರೂಪ ಸೂಕ್ಷ್ಮರಾಗವು ಮನಸ್ಸಿನಲ್ಲಿ ಇರುವದು. ಈ ಪುರುಷನ ಈ ರಸ [ಸೂಕ್ಷ್ಮರಾಗ]ವು ಸಹ ಪರಬ್ರಹ್ಮವನ್ನು ನೋಡಿ, (ಅಪರೋಕ್ಷದಿಂದ] ನಿವೃತ್ತವಾಗುವುದು.

||೫೦೭|| ಮೂರುಪ್ರಕಾರದ ಲಕ್ಷಣಗಳು ಇವೆ. ||೫೦೭-೫೦೯||

ಕವಿತ್ವದಲ್ಲಿ ಭಾಗತ್ಯಾಗ ಲಕ್ಷಣದ ಗ್ರಹಣವನ್ನೇ ವಿಶೇಷವಾ[illegible] ಡಿರುವದು. ಅದನ್ನು ಸ್ಪಷ್ಟವಾಗಿ ಹೇಳುವದರ ದೆಸೆಯಿಂದ ಲಕ್ಷಣಗ[illegible] ದವನ್ನು ಹೇಳಿರುವರು.

|| ದೋಹಾ ||

ತ್ರಿವಿಧಲಚ್ಛನಾ ಕಿಹತಹೈ । ಕೋವಿಧ ಬುಧ್ಧಿನಿದಾನ ||
ಜಹತೀ ಅರು ಅಜಹತೀ ಪುನಿ । ಭಾಗತ್ಯಾಗ ನಿಜ ಜಾನ ||[illegible]
ಆದಿ ದೋಇ ನಹಿ ಸಂಭವೈ । ಮುಹಾವಾಕ್ಯಮೈ ತಾತ ||
ಭಾಗತ್ಯಾಗತೈ ರೂಪ ನಿಜ । ಬ್ರಹ್ಮರೂಪ ದರಸಾತ ||[illegible]

ಅರ್ಥ|| ಬುದ್ಧಿವಂತರಾದ ಪಂಡಿತರು ಲಕ್ಷಣಗಳು ಮೂರು [illegible] ವಾಗಿರುವುವೆಂದು ಹುಳುತ್ತಾರೆ. ಅವು ಯಾವವೆಂದರೆ;=ಜಹತ್ [illegible] ಜಗದಜಹತ್, ಇವುಗಳಲ್ಲಿ ಮೊದಲಿನ ಎರಡು ಲಕ್ಷಣಗಳು ಮಹಾವಾ[illegible] ಲ್ಲಿ ಸಂಭವಿಸುವದಿಲ್ಲ. ಭಾಗತ್ಯಾದಿಂದ ಬ್ರಹ್ಮನು ನಿಜರೂಪವನ್ನು [illegible] ಯುವಾಗಿ ದರ್ಶನ ಮಾಡಿಸುವನು.

---

||೪೦೮|| ಶಿಷ್ಯ ಉವಾಚ ||

|| ಅರ್ಧಶಂಕರ ಛಂದ ||

ಅಬ ಲಚ್ಛನಾ ಪ್ರಭು ಕಹತ ಕಾಕೂ।ದೇಹು ಯುಹ ಸಮು[illegible]
ಯು||ಪುನಿ ಭೇದ ತಾಕ ತೀನಿ ತಿನಕೆ।ಲಛನಹು ದರಸಾಯ ||[illegible]

ಟೀಕಾ|| ಸಾಮಾನ್ಯ ಜ್ಞಾನವಾದ ಬಳಿಕ ವಿಶೇಷದ ಜ್ಞಾ[illegible] ವದು. ಹೇಗೆ ಸಾಮಾನ್ಯ ಬ್ರಾಹ್ಮಣನ ಜ್ಞಾನವಾದ ಬಳಿಕ ಸಾರ[illegible] ದಲಾದ ವಿಶೇಷದ ಜ್ಞಾನವು ಆಗುವದೋ, ಹಾಗೆ ಲಕ್ಷಣದ ಸಾ[illegible] ಜ್ಞಾನವಾದ ಬಳಿಕ ಜಹತೀ ಮೊದಲಾದ ವಿಶೇಷರೂಪಗಳ ಜ್ಞಾ[illegible] ವದು. ಲಕ್ಷಣದ ಸಾಮಾನ್ಯಸ್ವರೂಪವನ್ನು ತಿಳಿಯುದಹೊರತು ಜ[illegible] ದಲಾದ ವಿಶೇಷರೂಪಗಳ ಜ್ಞಾನವಾಗುವದು. ಈಅಭಿಪ್ರಾಯದಿಂ[illegible] ನು ಎನ್ನುವದೇನೆಂದರೆ, ಗುರುವೇ; ಲಕ್ಷಣವೆಂದು ಯಾತಕ್ಕೆ ಎನ್ನು[illegible] ಎಂಬುದನ್ನು ನಾನು ತಿಳಿಯುವದಿಲ್ಲ. ಆದರಿಂದ ಲಕ್ಷಣದ ಸಾಮಾ[illegible] ಪವನ್ನು ತೋರಿಸಿ? ಆಮೇಲೆ ಜಹತ್ಯಾದಿ ಲಕ್ಷಣಗಳ ವಿಶೇಷ[illegible] ನ್ನು ಸ್ಪಷ್ಟವಾಗಿ ಹೇಳಬೇಕು.



||೪೦೯|| || ಗುರುರುವಾಚ ||

|| ಶಂಕರಛಂದ ||

ಶ್ರುತಿಚಿತ ನಿಜ ಏಕಾಗ್ರ ಕರಿ। ಅಬ ಸಿಷ್ಯ ಸುನಿ ಮಮ ಬಾನಿ||
ಜ್ಯೂ ಲಚ್ಛನಾ ಅರು ಭೇದ ತಾಕೆ। ತೀಹು ನಿಕೇ ಜಾನಿ ||
ಸುನಿ ವೃತ್ತಿ ಹೈ ದ್ವೈಭಾಂತಿಪದಕೀ। ಸಕ್ತಿತಾಮೈ ಏಕ ||
ತಹಾ ಲಚ್ಛನಾ ಪುನಿ ಜಾನಿ ದೂಜೀ। ಗುನಹು ಸೊ ಸವಿವೇಕ||

ಟೀಕಾ—ಪದದ ಅರ್ಥದ ಸಂಬಂಧಕ್ಕೆ ವೃತ್ತಿ ಎನ್ನುತ್ತಾರೆ. ಈ ವೃತ್ತಿಯು ಎರಡು ಪ್ರಕಾರಗಳಲ್ಲಿ (೧) ಶಕ್ತಿವೃತ್ತಿ (೨) ಲಕ್ಷಣಾವೃತ್ತಿ ಇವುಗಳ ಅರ್ಥಗಳನ್ನು ಲಕ್ಷಣ ಸಹಿತವಾಗಿ ನೀನು ಶ್ರವಣಮಾಡು.

ಟಿಪ್ಪಣಿ[೧]ವತ್ಸಕ್ಕೆ ಗೋವಿನಸಂಬಧವು ಇದೆ. ಈ ವತ್ಸದ ಪ್ರವೃತ್ತಿಯು ಅನೇಕ ಗೋವುಗಳ ಮಧ್ಯದಲ್ಲ ನಿಂತುಕೊಂಡ ತನ್ನ ಮಾತಾರೂಪ ಗೋವಿನಲ್ಲಿಯೇ ಉಂಟಾಗುವದು. ಸಂಬಂಧದ ಹೊರತು ಪ್ರವೃತ್ತಿಯು ಆಗುವದಿಲ್ಲ. ಈ ಕಾರಣದಿಂದ ವತ್ಸ ಮತ್ತು ಗೋವಿನ ಸಂಬಂಧವು ಪರಸ್ಪರ ಜನ್ಯ ಜನಕ ಭಾವಸಂಬಂಧವೆಂದು ತಿಳಿಯಲ್ಪಟ್ಟಿರುವದು. ಈ ಜನ್ಯಜನಕ ಭಾವ ರೂಪಪ ಜ್ಞಾನದ ಹೇತುವಾದ ಪ್ರವೃತ್ತಿಯು ಗೋವಿನಲ್ಲಿ ಇದೆ. ಇದು ಸಹಾ ಸಂಬಂಧವೆನ್ನುತ್ತಾರೆ.

೨. ಇದರಂತೆ ಶಬ್ದಗಳ ಪರಸ್ಪರ ಅರ್ಥದಲ್ಲಿ ಯಾವ ಪ್ರವೃತ್ತಿಯು ಉಂಟಾಗಿರುವದೋ, ಅದು ಸಹಾ ಯಾವ ಸಂಬಂಧವೂ ಇಲ್ಲದೆ ಆಗಿಬುವದಿಲ್ಲ, ಈ ಕಾರಣದಿಂದ ಶಬ್ದದ ವಾಚ್ಯರೂಪ ಇಲ್ಲವೆ ಲಕ್ಷ್ಯರೂಪ ಅರ್ಥದೊಡನೆ ವಾಚಕ ಭಾವರೂಪ ಅಥವ ಲಕ್ಷ್ಯಲಕ್ಷಕ ಭಾವರೂಪ ಸಂಬಂಧವನ್ನು ತಿಳಿದಿರುವೆವು.

ಈ ಎರಡೂ ಸಂಬಂಧಗಳಿಗೆ ಸ್ಮಾರ್ಯ ಸ್ಮಾರಕ ಭಾವರೂಪ ಸಂಬಂಧವೆಂದೂ ಹೇಳುತ್ತಾರೆ.

(೧) ವಾಚ್ಯರೂಪ ಇಲ್ಲವೆ ಲಕ್ಷ್ಯರೂಪ ಅರ್ಥವನ್ನು ಪದವನ್ನಾಗಿಮಾಡಿ ಸ್ಮರಣೆಮಾಡಲು ಯೋಗ್ಯವಾಗಿದೆ. ಈ ಕಾರಣದಿಂದ ಇದಕ್ಕೆ ಸ್ಮಾರ್ಯವೆಂದು ಅನ್ನುತ್ತಾರೆ ಮತ್ತು (೨) ವಾಚಕರೂಪ ಇಲ್ಲವೆ ಲಕ್ಷಕರೂಪ ಪದಗಳ ಅರ್ಥವೇ ಸ್ಮರಣೆಯನ್ನುಂಟುಮಾಡತಕ್ಕವುಗಳಾದ್ದರಿಂದ ಅವಕ್ಕೆ ಸ್ಮಾರಕವೆಂದು ಅನ್ನುತ್ತಾರೆ.

ಈ ಎರಡರ ಪರಸ್ಪರ ಸಂಬಂಧವು ಸ್ಮಾರ್ಯ ಸ್ಮಾರಕರೂಪ ಸಂಬಂಧವಾಗಿದೆ. ಈಶಬ್ದಗಳ ಸಂಬಂಧದ ಜ್ಞಾನವಾಗುವದಕ್ಕೆ ಹೇತುವಾದ ಶಬ್ದಗಳ

ದಲ್ಲಿ"ಎಲ್ಲಂಕಿಂತಲೂ ಪ್ರಥಮದಲ್ಲಿ ಪಿತನ ಪಾದಗಳಲ್ಲಿ ನಮಸ್ಕಾ
ಹೀಗೆ ಪೌತ್ರನನ್ನು ಕುರಿತು, ಬೋಧಮಾಡತಕ್ಕ ವಕ್ತೃವಿನ ತಾ
ವಿಷಯವು ಪಿತಾಮುಹರೂಪ ಅಸ್ವಾರ್ಥವಿದೆ, ಇದರಲ್ಲಿ ಪಿತಾಶಬ್ದ
ಪರಾ ಸಂಬಂಧವು ಈ ಪಿತಾಶಬ್ದದ ಲಕ್ಷಣಾವೃತ್ತಿಯದೆ. ಮತ್ತು
೩. ಈ ಲಕ್ಷಣಾವೃತ್ತಿಯಿಂದ ತಿಳಿಯಲ್ಪಟ್ಟ ಪಿತಾಶಬ್ದದ ಪರಂಪರೆಯಿಂದ [
ಕರೂಪ ಶಕ್ತಿದ್ವಾರಾ] ಸಂಬಂಧಿಯಾದ ಪಿತಾಮುಹರೂಪ ಅರ್ಥ
ಪಿತಾಶಬ್ದದ ಲಕ್ಷ್ಯಅರ್ಥವದೆ.

ಯಾವ ಅರ್ಥದೊಡನೆ ಯಾಪದರ ಸಾಕ್ಷಾತ್ ಸಂಬಂಧವು ಇರುವದಿಲ್ಲ
ಆದರೆ ಯಾವದೋ ಒಂದು ದ್ವಾರದಿಂದ ಸಂಬಂಧವಿರುವದೊ ಇದರ ಅ
ದೊಡನೆ ಇದಕ್ಕೆ ಪರಂಪರಾ ಸಂಬಂಧ ಎಂದು ಹೇಳುತ್ತಾರೆ.

ಪೌತ್ರರೂಪ ತೃತೀಯ ಪುರುಷನ ತನ್ನ ಪಿತಾಮುಹರೂಪ ಪ್ರಥಮ ಪುರುಷ
ಡನೆ ಸಾಕ್ಷಾತ್ ಸಂಬಂಧವು [ಜನ್ಯಜನಕ ಭಾವವು] ಇರುವದಿಲ್ಲ,
ಪುತ್ರನ ತನ್ನ ಪಿತನ ಸಂಬಂಧವು ಜನ್ಯಜನಕಭಾವವು ಮತ್ತು
ಸಂಬಂಧವು ಪಿತಾಮುಹನೀದದೆ. ಈ ಕಾರಣದಿಂದ ಪೌತ್ರನಿಗೆ ಪಿತಾ
ನಿಂದ ಪಿತೃದ್ವಾರಾ ಸಂಬಂಧವಿದೆ. ಇದು ಪರಂಪರಾ ಸಂಬಂಧವು.
ಇದರಂತೆ ಶಬ್ದದ ತನ್ನ ಸಾಕ್ಷಾತ್‌ಸಂಬಂಧೀ ಶಕ್ಯಾರ್ಥದಿಂದ ಭಿನ್ನ
ಶಕ್ಯಾರ್ಥದ ಸಂಬಂಧವು. ಅದರೊಡನೆ ಸಾಕ್ಷಾತ್ ಸಂಬಂಧಿಯ
ಶಬ್ದದ ಶಕ್ತಿರೂಪ ಸಂಬಂಧವು ಶಕ್ಯಅರ್ಥದಿಂದ ಇವೆ. ಮತ್ತು ಶಕ್ಯ
ಸಂಯೋಗಾದಿರೂಪ ಯಾವ ಪ್ರಕಾರದ ಸಂಬಂಧವೂ ಸಹಾ ವಕ್ತೃವಿನ ತಾ
ರ್ಯದ ವಿಷಯರೂಪವು ತನ್ನ ಸಂಬಂಧೀ ಅನ್ಯ ಅರ್ಥದಿಂದ ಅದೆ. ಈಕಾ
ದಿಂದ ಈ ಶಕ್ಯದ ಸಂಬಂಧೀ ಅನ್ಯ ಅರ್ಥದಿಂದ ಶಬ್ದದ ಶಕ್ಯ ಅರ್ಥ
ರಾಸಂಬಂಧವಿದೆ. ಇದರಿಂದ ಇದು ಪರಂಪರಾ ಸಂಬಂಧವು ಎಂದು
ಳುತ್ತಾರೆ.

ಇದು ಶಬ್ದದ ಪರಂಪರಾ ಸಂಬಂಧವೇ ಲಕ್ಷಣಾವೃತ್ತಿಯಾಗಿದೆ. ಈ
ಪರಂಪರಾ ಸಂಬಂಧವು ಯಾವ ಅರ್ಥದೊಡನೆ ಲಕ್ಷ್ಯಅರ್ಥವದೆ. ಈ ಲಕ್ಷಣಾ
ತ್ತಿಯ ಸಾಮಾನ್ಯ ಲಕ್ಷಣಾವೃತ್ತಿಯ ಸಾಮಾನ್ಯ ಲಕ್ಷಣವನ್ನೂ, ಮತ್ತು ಉದಾ
ಹರಣೆಯನ್ನೂ ಹೇಳಿದೆ. ಇದರ ಜಹತಿ ಮೊದಲಾದ ತ್ರಿವಿಧಭೇದಗಳ ಅ
ಉದಾಹರಣೆಗಳು ಮುಂದೆ ೪೩೦-ರಿಂದ ೪೩೨ ಅಂಕೆಗಳಲ್ಲಿಯ ವಾಕ್ಯಗಳ ತ್ರಿ
ಲಕ್ಷಣಗಳ ಪ್ರಸಂಗದಲ್ಲಿ ಟಿಪ್ಪಣಿಯಲ್ಲಿ ಹೇಳುವೆವು.

---

||೪೧೦|| ನ್ಯಾಯರೀತಿಯಿಂದ ಶಕ್ತಿ ಲಕ್ಷಣವು.

(ಈಶ ಇಚ್ಛಾ)

ಯಾ ಪದತೈ ಯಾ ಅರ್ಥಕೀ। ಹ್ವೈ ಸುನತೇಹಿ ಪ್ರತೀತಿ



ಇಚ್ಛಾ ಈಸಕೀ। ಸಕ್ತಿ ನ್ಯಾಯಕೀ ರೀತಿ ||೧೯||

ಟೀಕಾ || ಈ ಪದದಿಂದ ಅಂದರೆ ಘಟಪದದಿಂದ, ಈ ಅರ್ಥದ ಶ್ರವ
ದಿಂದ ಪ್ರತೀತಿ ಅಂದರೆ ಜ್ಞಾನವು ಸರ್ವಪುರುಷರಿಗೂ ಆಗುವದು. ಇಂಥ
ಈಶ್ವರ ಇಚ್ಛೆಗೆ ನ್ಯಾಯಶಾಸ್ತ್ರದಲ್ಲಿ ಶಕ್ತಿ ಎನ್ನುವರು.

---

||೪೧೧|| ಸ್ವರೀತಿ ಶಕ್ತಿಲಕ್ಷಣ ||

(ಪದದಲ್ಲಿ ಅರ್ಥಜ್ಞಾನದ ಸಾಮರ್ಥ್ಯವು.)

||ಅರ್ಥ ಶಂಕರ ಛಂದ ||

ಸಾಮರ್ಥ್ಯ ಪದಕೀ ಸಕ್ತಿ ಜಾನಹು। ವೇದಮತ ಅನುಸಾರ||
ಜ್ಯೋ ವನ್ಹಿಮೈ ಜಮ ದಾಹಕೀ। ಹೈ ಸಕ್ತಿತ್ಯೂನಿರಧಾರ ||೨೦||

ಟೀಕಾ|| ಘಟಪದದ ಶ್ರವಣಕರ್ತೃವಿಗೆ ಕಲಶರೂಪ ಅರ್ಥದಜ್ಞಾನ
ವನ್ನುಂಟುಮಾಡತಕ್ಕ ಘಟಪದದಲ್ಲಿ ಯಾವ ಸಾಮರ್ಥ್ಯವುಂಟೊ, ಇದೇ
ಘಟಪದದಲ್ಲಿ ಶಕ್ತಿಯು ಅದೆ. ಇದರಂತೆ ಪಟಪದದ ಶ್ರೋತೃವಿಗೆ ವಸ್ತ್ರ
ರೂಪ ಅರ್ಥದ ಜ್ಞಾನವನ್ನುಂಟುಮಾಡತಕ್ಕ ಪಟಪದದಲ್ಲಿ ಯಾವ ಸಾಮ
ರ್ಥ್ಯವುಂಟೊ ಇದೇ ಪದದಲ್ಲಿಯ ಶಕ್ತಿವೃತ್ತಿಯು. ಹೀಗೆ ಸರ್ವಪದಗಳಲ್ಲಿ
ಯೂ ತಿಳಿಯಬೇಕು.

ದೃಷ್ಟಾಂತ;-ಅಗ್ನಿಯಲ್ಲಿ ಸಲ್ಲಗ್ನವಸ್ತುವಿನ ದಹನವನ್ನು ಮಾಡತಕ್ಕ
ಸಾಮರ್ಥ್ಯರೂಪ ಶಕ್ತಿಯಿದೆ. ಇದರಂತೆ ಶ್ರೋತೃವಿನಕರ್ಣಕ್ಕೆ ಸಂಬಂಧ
ವಾದೊಡನೆ ವಸ್ತುವಿನ ಜ್ಞಾನವನ್ನುಂಟುಮಾಡತಕ್ಕ ಪದದಲ್ಲಿಯಸಾಮ
ರ್ಥ್ಯಕ್ಕೆ ಶಕ್ತಿ ಅನ್ನುತ್ತಾರೆ.

ಸಾಮರ್ಥ್ಯನಾಮ ಸಮರ್ಥತ್ವವು. ಇದಕ್ಕೇ ಸಾಮರ್ಥ್ಯ, ಮತ್ತು
ಬಲ, ಮತ್ತು ಶಕ್ತಿ ಎಂದೂ ಅನ್ನುವರು.

ಅಗ್ನಿಯಲ್ಲಿ ಹೇಗೆ ದಾಹಕಶಕ್ತಿಯು ಇರುವದೋ, ಹಾಗೆ ಜಲದಲ್ಲಿ
ಹಸಿಯನ್ನುಂಟುಮಾಡತಕ್ಕ, ತೃಷೆಯನ್ನು ನಿವಾರಣಮಾಡತಕ್ಕ, ಉಂಡೆ
ಯನ್ನುಂಟುಮಾಡತಕ್ಕ, ಇವೇ ಮೊದಲಾದ ಸಾಮರ್ಥ್ಯಗಳು ಇವೆ. ಈ
ಸಾಮರ್ಥ್ಯಕ್ಕೇ ಶಕ್ತಿಯೆಂಬ ನಾಮವು.

ಈ ಪ್ರಕಾರದಿಂದ ಸರ್ವಪದಾರ್ಥಗಳಲ್ಲಿ ತಮ್ಮ ತಮ್ಮ ಕಾರ್ಯಮಾ
ಡತಕ್ಕ ಸಾಮರ್ಥ್ಯವಿದೆ. ಇದೇ ಶಕ್ತಿಯು. ಇದು ವೇದದ ಸಿದ್ಧಾಂತವು.

ಇದನ್ನು ನೀನು ನಿಶ್ಚಯವನ್ನಾಗಿ ಮಾಡು ಮತ್ತು ನ್ಯಾಯರೀತಿ
ಯನ್ನು ತ್ಯಾಗಮಾಡು.

॥೪೧೨॥ ಪ್ರಶ್ನೆ. ವರ್ಣಸಮುದಾಯದಿಂದ ಬೇರೆಯಾ
ಯು ಇಲ್ಲ. ಈಕಾರಣದಿಂದ ಈತ ಇಚ್ಛೆಯು ಶಕ್ತಿಯು

॥ಶಿಷ್ಯ ಉವಾಚ ॥

॥ ಶಂಕರ ಛಂದ ॥

ನನು ವನ್ಹಿಮೆ ನಹಿ ಶಕ್ತಿ ಭಾಸೆ । ವನ್ಹಿಬಿನ ಕಛು ...
ಹೈ ಹೇತುತಾ ಜೊ ದಾಹಕೀ । ಸೊ ವನ್ಹಿಮೆ ತಿಹಿ ...
ಇಮ ಪದನಹೂಮ್ಯ ವರ್ಣಬಿನ ಕಛು । ಶಕ್ತಿ ಭಾಸತ...
ಯಾ ಹೇತುತಾಜೊ ಈಸಇಚ್ಛಾ।ಸಕ್ತಿ ಸೊ ಮತಿಮಾ...

ಟೀಕಾ॥ ನನು ಎಂಬ ಶಬ್ದವು ಸಂದೇಹವಾಚಕವು. ...
ವನ್ಹಿಸ್ವರೂಪದಿಂದ ಬೇರೆಯಾಗಿ ಶಕ್ತಿಯು ಪ್ರತೀತಿಯು ...
ಮತ್ತು ನೀವು ಹೇಳಿದ್ದೇನಂದರೆ "ದಾಹಕತ್ವದ ಹೇತುವು ...
ಸಾಮರ್ಥ್ಯವು;ಇದೇ ವನ್ಹಿಯಲ್ಲಿಯ ಶಕ್ತಿಯು." ಇದು ಸಂಭವಿ...
ಕಾರಣವೇನೆಂದರೆ ದಾಹಕತೆಯು ಯಾವಕಾರಣವು, ಅದು ಕೇವ...
ಯಲ್ಲಿಯೆ ಇದೆ. ಅಪ್ರಸಿದ್ಧ ಸಾಮರ್ಥ್ಯವನ್ನು ಅಗ್ನಿಯಲ್ಲಿ ಕಲ್ಪಿಸಿ...
ಹೇತುವನ್ನು ತಿಳಿಯತಕ್ಕ ಮತ್ತು ಪ್ರಸಿದ್ಧವಾದ ಹೇತುವನ್ನು ...
ಷಯದಲ್ಲಿ ತ್ಯಾಗಮಾಡತಕ್ಕ ಪ್ರಯೋಜನವು ಏನೂ ಇಲ್ಲ...
ಶಕ್ತಿಯು ಸಂಭವಿಸುವದಿಲ್ಲ. ಈಪ್ರಕಾರವಾಗಿ ಪದದಲ್ಲಿಯೂ ...
ದಾಯವು ಪದಸ್ವರೂಪದಿಂದ ಬೇರೆಶಕ್ತಿಯಾಗಿ ಭಾಸಿಸುವದಿಲ್ಲ...
ಆದರ ಪ್ರಯೋಜನವೂ ಇಲ್ಲ. ಈ ಕಾರಣದಸಲುವಾಗಿ ಈಶ್ವರೇಚ್ಛಾ...
ನ್ಯಾಯರೀತಿಯಿಂದ ಶಕ್ತಿಯು ಇದೇ ನನ್ನ ಬುದ್ಧಿಗೆ ಹೊಳೆಯು...

ಟಿಪ್ಪಣಿ—೧. ಇಲ್ಲಿ "ನನು" ಎಂಬ ಶಬ್ದವು ಸಂದೇಹವಾಚಕವಾಗಿದೆ ...
ಶಂಕಾರೂಪ ಅರ್ಥದ ಬೋಧಕವು. ಈ ಕಾರಣದಿಂದ ಶಿಷ್ಯನು ಇಲ್ಲಿ...
ಪಣೆಯನ್ನು ಮಾಡಿರುವನು ಎಂದು ತಿಳಿಯಬೇಕು.

॥ ಗತ ಪ್ರಶ್ನೆಯ ಉತ್ತರ. ॥೪೧೩—೪೨೮॥

॥ ೪೧೩ ॥ ಸಿದ್ಧಾಂತ ರೀತಿಯಿಂದ ಅಗ್ನಿ ಮೊದಲಾದವ...



ದಾಹಾದಿ ಕಾರ್ಯಗಳ ಸಾಮರ್ಥ್ಯರೂಪ ಶಕ್ತಿಯ
ಪ್ರತಿಪಾದನವು. ॥೪೧೩—೪೧೫॥

॥ಗುರು ಉವಾಚ ॥

॥ ಶಂಕರ ಛಂದ ॥

...ಬಂಧ ಹೋತ ವನ್ಹಿತೈ ನಹಿ । ದಾಹ ಉಪಜೈ ಅಂಗ ॥
...ತ್ತೇಜನ ರು ಜಬ ಧರ್ಯ ...ಬ । ಫಿರಿ ದಹ್ಯೆ ವನ್ಹಿ ಸ್ವಸಂಗ ॥
...ವನ್ಹಿಮೆ ಜೊ ಹೇತುತಾ । ತೌ ದಾಹ ಹ್ವೈ ಸಬಕಾಲ ।
...ನಸೈ ಉಪಜೈ ವನ್ಹಿಹೋತೆ । ಹೇತು ಸಕ್ತಿ ಸುಚಾಲ॥೨೨

ಟೀಕಾ॥ ಎಲೈ ಪ್ರಿಯ ಶಿಷ್ಯನೇ ! ಅಗ್ನಿಯು ಪ್ರತಿಬಂಧವಾದರೆ ಅಗ್ನಿ
...ದೆ ದಾಹವಾಗುವದಿಲ್ಲ; ಮತ್ತು ಪ್ರತಿಬಂಧವಿದ್ದರೂ ಉತ್ತೇಜಕ
...ಯನ್ನು ಸಮೀಪದಲ್ಲಿ ಇಡಿಸಿಕೊಡಲು ಅಗ್ನಿಸಂಯುಕ್ತ ಪದಾರ್ಥದ
...ವಾಗುವದು. ಹೀಗೆ ಶಕ್ತಿಯು ಹೊರತು ಕೇವಲ ದಾಹಕತೆಯ ಹೇ
... ಇದ್ದರೆ,ಸರ್ವಕಾಲ ಅಂದರೆ ಪ್ರತಿಬಂಧರಹಿತ ಕಾಲದಂತೆ ಉತ್ತೇಜಕ
...ಕಾಲದಲ್ಲಿ, ಉತ್ತೇಜಕವಿಲ್ಲದೆ ದಾಹವಾಗಲಿಕ್ಕೆಬೇಕು. ಕಾರಣವೇ
..., ದಾಹಕತೆಯ ಹೇತುವಾದ ಕೇವಲ ಅಗ್ನಿಯು ಆ ಕಾಲದಲ್ಲಿ ವಿದ್ಯ
...ವಾಗಿದೆ ಮತ್ತು ಸ್ವಮತದಲ್ಲಿ ಈ ದೋಷವಿಲ್ಲ. ಕಾರಣವೇನೆಂದರೆ
...ತದಲ್ಲಿ ಅಗ್ನಿಯ ಶಕ್ತಿಯು, ಅಥವಾ ಶಕ್ತಿಸಹಿತ ಅಗ್ನಿಯು ದಾಹಕ
... ಹೇತುವು, ಕೇವಲ ಅಗ್ನಿಯು ಅಲ್ಲ.

ಎಲ್ಲಿ ಪ್ರತಿಬಂಧವಿದೆಯೋ, ಅಲ್ಲಿ ಯದ್ಯಪಿ ಪ್ರತಿಬಂಧದಿಂದಅಗ್ನಿಯ
..., ಅಥವಾ ತಿರೋಧಾನವು ಆಗುವದಿಲ್ಲ. ತಥಾಪಿ ಅಗ್ನಿಯಶಕ್ತಿಯನಾಶ
...ವಾ ತಿರೋಧಾನವು ಆಗುವದು. ಆದರಿಂದ ದಾಹಕತೆಯ ಹೇತುವಾದ
...ನ ಶಕ್ತಿಯ ಅಭಾವವಾಗುವದರಿಂದ ದಾಹವಾಗುವದಿಲ್ಲ.ಮತ್ತು
...ಯಾವಸ್ಥಾನದಲ್ಲಿ ಪ್ರತಿಬಂಧದ ಸಮೀಪವಾಗಿ ಉತ್ತೇಜಕವು ಪ್ರಾಪ್ತ
...ಲು, ಆಗ ಅಗ್ನಿಶಕ್ತಿಯನಾಶ,ಅಥವಾ ತಿರೋಧಾನವುಪ್ರತಿಬಂಧದಿಂದ
...ಗ್ಯೂ, ಉತ್ತೇಜಕದ ಸಾನ್ನಿಧ್ಯದಿಂದಪುನಃಶಕ್ತಿಯ ಪ್ರಾದುರ್ಭಾವ
...ತ್ತದೆ.ಆದರಿಂದ ದಾಹವಾಗುತ್ತದೆ.ಸಾರಾಂಶ-ಪ್ರತಿಬಂಧದಿಂದನಾಶ
...ವು, ಉತ್ತೇಜಕದಿಂದ ಉತ್ಪನ್ನವಾಗುತ್ತದೆ. ಈಶಕ್ತಿಯೇ ದಾಹಕ
... ಹೇತುವದೆ.

೧. ಕಾರ್ಯದ ವಿರೋಧಿಯಾದದ್ದು ಪ್ರತಿಬಂಧಕ ಎಂದು ಅನ್ನುತ್ತಾರೆ.

೨. ಪ್ರತಿಬಂಧಕವಾದರೂ ಯಾವುದರಿಂದಕಾರ್ಯಸಾಧನೆಯಾಗುವದೊ ಅದಕ್ಕೆ ಉತ್ತೇಜಕವೆನ್ನುತ್ತಾರೆ.

೧. ಅಗ್ನಿಯಸ್ಥಾನ ಪ್ರತಿಬಂಧ ಮತ್ತು ಉತ್ತೇಜಕ ಮಣಿಮಂತ್ರ ಔಷಧಗಳಾಗಿವೆ. ಆ ಮಣಿ ಮಂತ್ರ ಔಷಧಿಯ ಸನ್ನಿಧಾನದಿಂದ ದಾಹವಾಗುವದಿಲ್ಲ; ಇದಕ್ಕೆ ಪ್ರತಿ ಬಂಧಕವೆನ್ನಬೇಕು.

೧

೨. ಯಾವ ಮಣಿ ಮಂತ್ರ ಔಷಧಿಯ ಸನ್ನಿಧಾನದಿಂದ ಪ್ರತಿಬಂಧಕವಿದ್ದರೂ ದಾಹವಾಗುವದೊ ಅದಕ್ಕೆ ಉತ್ತೇಜಕವೆನ್ನಬೇಕು.

ಟಿಪ್ಪಣಿ—೧. ಇಲ್ಲಿ ಪ್ರತಿಬಂಧರೂಪವಾದ ಯಾವ ಮಣಿಮಂತ್ರ ಔಷಧಿಗಳಿವೆಯೊ ಇವುಗಳಿಂದ ಅಗ್ನಿಯು ದಾಹಕಶಕ್ತಿಯ ನಾಶ ಅಥವಾ ತಿರೋಧಾನವು ಆಗುವದು. ಇದರಂತೆ ಉತ್ತೇಜಕರೂಪ ಮಣಿಮಂತ್ರ ಔಷಧರೂಪವು. ಇವುಗಳಿಂದ ಅಗ್ನಿಯ ಶಕ್ತಿಯ ಉತ್ಪತ್ತಿ ಅಥವಾ ಪ್ರಾದುರ್ಭಾವವಾಗುವದು. ಇದು ದೀಕರನಾಥ ಮೊದಲಾದವುಗಳಲ್ಲಿ ಪ್ರಸಿದ್ಧವಾಗಿದೆ.

॥೪೧೪॥ ॥ ಗುರುರುವಾಚ ॥

॥ ಅರ್ಧ ಶಂಕರ ಛಂದ ॥

ಸಿಷರೀತಿ ಯಹ ಸಬವಸ್ತುಮ್ಯೆತೂ । ಸಕ್ತಿಲೇಹು ಪಿಛಾನ॥
ಬಿನಸಕ್ತಿ ನಹಿ ಕಭು ಕಾಜ ಹೋವ್ಯೆ। ಯುಹ್ಯೆ ನಿಶ್ಚೈಮಾನ॥

ಟೀಕಾ॥ ಎಲೈ ಶಿಷ್ಯನೇ !ಅಗ್ನಿವತ್ ಜಲ ಮೊದಲಾದ ಸರ್ವಪದಾರ್ಥಗಳಲ್ಲಿ ನೀನು ಶಕ್ತಿಯನ್ನು ತಿಳಿ. ಶಕ್ತಿಯ ಹೊರತು ಯಾವಸಾಧನದಿಂದಲೂ ಯಾವಕಾರ್ಯವೂ ಆಗುವದಿಲ್ಲ.

ಈ ಅರ್ಧಶಂಕರ ಛಂದದಿಂದ ಶಕ್ತಿಯ ಪ್ರಯೋಜನವು ಹೇಳಲ್ಪಟ್ಟಿತು.

ಈ ಪೂರ್ವದಲ್ಲಿ ಶಿಷ್ಯನು ಪ್ರಶ್ನೆಮಾಡಿದ್ದೇನೆಂದರೆ- "ಅಗ್ನಿಯಿಂದ ಭಿನ್ನವಾಗಿದ್ದ ಶಕ್ತಿಯ ಪ್ರತೀತಿಯಾಗುವದಿಲ್ಲ,, ಎಂಬುದರ ಸಮಾಧಾನವನ್ನು ಹೇಳುವದಕ್ಕೆ ಉಳಿದ ಅರ್ಧಶಂಕರ ಛಂದದಿಂದ ಶಕ್ತಿಯ ಅನುಭವವನ್ನು ತೋರಿಸಿರುವನು.

॥ ಅರ್ಧ ಶಂಕರಛಂದ ॥

೧
ಅಬ ಶಕ್ತಿ ಯಾಮ್ಯೆ ಹೈನಹಿ ವಹ । ಸಕ್ತಿ ಉಪಜೀ ...
ಯುಹ ಸಕ್ತಿಕೊ ಪರಸಿದ್ಧ ಅನುಭವ । ಲೋಪಿಹ್ಯೆ ಕಿಹ...



ಅರ್ಥ॥ ಈಗ ಅದರಲ್ಲಿ ಶಕ್ತಿಯಿಲ್ಲ; ಮತ್ತು ಪುನಃ ಶಕ್ತಿಯು ಹುಟ್ಟಿಲ್ಲ; ಈ ಶಕ್ತಿಯ ಪ್ರತ್ಯಕ್ಷ ಅನುಭವವನ್ನು ತೆಗೆದುಕೊಳ್ಳಲು ಯಾವ ಸ್ಥಳದಲ್ಲಿಯೂ ಲೋಪವಿಲ್ಲ.

ಸಿದ್ಧಾಂತದ ರೀತಿಯಿಂದ ಶಕ್ತಿಯ ಸ್ವರೂಪವನ್ನೂ ಮತ್ತು ಶಕ್ತಿಯಲ್ಲಿ ಪ್ರಮಾಣ ನಿರೂಪಣವನ್ನೂ ಮಾಡಿದನು.

ಟಿಪ್ಪಣಿ—೧. ಈ ಮೇಲೆ ಹೇಳಿದ ಅರ್ಧಶಂಕರಛಂದದ ಅರ್ಥವು ಹೀಗೆ ಇರುವದು; ಪ್ರತಿಬಂಧದ ಸದ್ಭಾವಕಾಲದಲ್ಲಿ ಶಕ್ತಿ ಅಂದರೆ ದಾಹಮಾಡತಕ್ಕ ಸಾಮರ್ಥ್ಯವು ಇದರಲ್ಲಿ ಅಂದರೆ ಪ್ರಜ್ವಲಿತ ಅಗ್ನಿಯಲ್ಲಿ ಇರುವದಿಲ್ಲ. ಮತ್ತುಪುನಃ ಉತ್ತೇಜಕದ ಸದ್ಭಾವಕಾಲದಲ್ಲಿ ಈ ಬೇರೆ ಶಕ್ತಿಯು ಹುಟ್ಟಿರುವದು. ಈ ಶಕ್ತಿಯ ಪ್ರಸಿದ್ಧ ಅನುಭವವು ದೀಕರನಾದ ಮೊದಲಾದ ಕೌತುಕವನ್ನು ನೋಡಬೇಕೆಂದು ಸರ್ವಜನರಿಗೂ ಅದೆ. ಈ ಜನರ ಅನುಭವವನ್ನು ಎಲೈ ಶಿಷ್ಯನೇ ? ನೀನು ಯಾವ ಸ್ಥಳದಲ್ಲಿ ಲೋಪಮಾಡುವಿ, ಅನುಮಿತಿ ಪ್ರಮಾರೂಪ ಅನುಭವದ ಯಾವ ಪ್ರಕಾರದಿಂದಲೂ ಲೋಪ (ಬಾಧ)ವು ಸಂಭವಿಸುವದಿಲ್ಲ.

॥೪೧೫॥ ಅನ್ಯಮತದ ಶಕ್ತಿಯ ಖಂಡನ ॥೪೧೮—೪೨೭॥

॥ ಅರ್ಧಶಂಕಕ ಛಂದ ॥

ಜೊ ಶಕ್ತಿ ಇಚ್ಛಾ ಈಸಕೀ ಸೊ । ಪದನಕೆ ನ ನಜೀಕ॥
ಮತ ನ್ಯಾಯಕೊ ಅನ್ಯಾಯ ಯೊ ವಿಧಿ। ಶಕ್ತಿ ಜಾನಿ ಅಲೀಕ॥

೧

ಟೀಕಾ॥ ಈಶ್ವರನ ಇಚ್ಛೆಗೆ ಪದಶಕ್ತಿ ಎಂದು ಅಂದರೆ,ಇದು ಸಂಭವಿಸುವುದಿಲ್ಲ. ಕಾರಣವೇನೆಂದರೆ- ಈಶ್ವರನ ಇಚ್ಛೆಯು ಈಶ್ವರನ ಧರ್ಮವು. ಅದು ಈಶ್ವರನಲ್ಲಿಯೇ ಇರುವುದು. ಅದರಿಂದ ಈ ಇಚ್ಛೆಯು ಪದದ ಶಕ್ತಿ ಎಂದು ಹೇಳುವದು ಸರಿಯಲ್ಲ ; ಪದದ ಧರ್ಮಶಕ್ತಿಯು ಇದ್ದರೆ ಅದು
೨
ಪದದ ಶಕ್ತಿಯಾಗಿ ಎಂದು ಹೇಳುವದು ಸಂಭವಿಸುತ್ತದೆ. ಈಶ್ವರನ ಇಚ್ಛೆಯು ಪದದ ಸಮೀಪದಲ್ಲಿ ಇಲ್ಲ ; ಈ ಪದದ ಶಕ್ತಿಯೆನ್ನುವದು ಸಂಭವಿಸುವದಿಲ್ಲ.

ಟಿಪ್ಪಣಿ—೧. ನೈಯಾಯಿಕರು ಪದಶಕ್ತಿಅಂದರೆ ಪದದಶಕ್ತಿ ಎಂದು ಹೇಳುತ್ತಾರೆ.

೨. ಈಶ್ವರನ ಇಚ್ಛೆಯು ಈಶ್ವರನ ಧರ್ಮವು.ಈಕಾರಣದಿಂದ ಇದು ಈಶ್ವರನ ಆಶ್ರಿತವಾಗಿರುವದರಿಂದ ಈಶ್ವರನ ಸಮೀಪದಲ್ಲಿ ಇದೆ,ಈ ಕಾರಣದಿಂದಲೇ ಇದು ಈಶ್ವರನ ಸಂಬಂಧಿಯಾಗಿರುವದರಿಂದ ಈಶ್ವರನ ಶಕ್ತಿಯಾಗಿದೆ.

ಈರೀತಿಯಿಂದ ಸಾಮರ್ಥ್ಯ, ಮತ್ತು ಶಕ್ತಿಯು, ಏಕತ್ವವು ಲೋಕ ದಲ್ಲಿ ಪ್ರಸಿದ್ಧವಾಗಿದೆ. ಮತ್ತು-

ಅಗ್ನಿ ಯಲ್ಲಿ ಸಹಾ ಸಾಮರ್ಥ್ಯರೂಪವೇ ಶಕ್ತಿಯೆಂದುಸಿದ್ಧ... ಆದರಿಂದ ಪದದಲ್ಲಿ ಸಾಮರ್ಥ್ಯರೂಪವೇಶಕ್ತಿಯೆಂದು ತಿಳಿಯುವದುಯೋ ಗ್ಯವಾಗಿದೆ; ಮತ್ತುಪದದಲ್ಲಿ ಸಾಮರ್ಥ್ಯವನ್ನು ಒಪ್ಪಿಕೊಂಡು,ಅದರಿಂದ... ನ್ನ ವಾಗಿರುವ ಯೋಗ್ಯತೆಗೆ ಶಕ್ತಿಯೆಂದು ಹೇಳುವದರಿಂದಲೋಕಪ್ರಸಿದ್ಧ ವಿರೋಧದ ಹೊರತು ಅನ್ಯಫಲವಿಲ್ಲ. ಮತ್ತು-

---

||೪೧೮|| "ಸಾಮರ್ಥ್ಯಕ್ಕೂ ಸಹ ನಾವು ಯೋಗ್ಯತೆಎಂದುಅನ್ನುತ್ತೇ ವೆ" ಎಂದು ಹೇಳಿದರೆ ನಮ್ಮ ಮತವೇ ಸಿದ್ಧವಾಗುವದು. ಮತ್ತು ಹೀಗೆ ಅಂದರೆ-"ನಾವು ಸಾಮರ್ಥ್ಯವನ್ನು ಅಂಗೀಕಾರಮಾಡಿದರೆ ಸಾಮರ್ಥ್ಯರೂ ಪ ಶಕಿಯುಪದದಲ್ಲಿ ಸಂಭವಿಸುವದು. ಆದರೆ ಸಾಮರ್ಥ್ಯದ ಅಂಗೀಕಾರ ವನ್ನುಮಾಡುವದಿಲ್ಲ,ಅದರಿಂದ ಅರ್ಥ ಜ್ಞಾನೋತ್ಪತ್ತಿ ರೂಪ ಯೋಗ್ಯತೆಯೇ ಪದದಲ್ಲಿ ಶಕ್ತಿಯುದೆ. "ಆದರೆ ಅವರಿಗೆ ಹೀಗೆ ಪ್ರಶ್ನೆ ಮಾಡಬೇಕು"ಸಾ ಮರ್ಥ್ಯದ ಅಭಾವವನ್ನು ಕೇವಲ ಪದದಲ್ಲಿಯೇ ಅಂಗೀ ಕರಿಸುವಿರೋ ಅಥವಾ ಅಗ್ನಿ ಮೊದಲಾದ ಸರ್ವ ಪದಾರ್ಥಗಳಲ್ಲಿ ಸಾಮರ್ಥ್ಯದಅಭಾವವ ನ್ನು ಅಂಗೀಕರಿಸುವಿರೋ ?"

ಅವರು"ಅಂತ್ಯಪಕ್ಷವನ್ನು"ಎಂದರೆ ಜ್ಞಾನಾದಿಪದಾರ್ಥಗಳಲ್ಲಿ ಸಾಮ ರ್ಥ್ಯರೂಪ ಶಕ್ತಿಯ ಪ್ರತಿಪಾದನದಲ್ಲಿ ಹೇಳಿದ ಯುಕ್ತಿಯಿಂದಖಂಡ... ಅರ್ಹವಾಯಿತು ಮತ್ತು-

"ಪ್ರಥಮಪಕ್ಷವನ್ನು"ಎಂದರೆ-"ಈವಿಷಯದಲ್ಲಿ ಅಂತ್ಯಪಕ್ಷದಲ್ಲಿ ಹೇ ಳಿದ ದೋಷವು ಯದ್ಯಪಿ ಇರುವದಿಲ್ಲ. ಕಾರಣವೇನೆಂದರೆ-ಅಗ್ನಿಮೊದಲಾ... ಸರ್ವಪದಾರ್ಥಗಳಲ್ಲಿ ಸಾಮರ್ಥ್ಯರೂಪ ಶಕ್ತಿಯನ್ನು ಅಂಗೀಕರಿಸದಿದ್ದ... ಪ್ರತಿಬಂಧಕದಿಂದ ದಾಹತ್ವದ ಅಭಾವವು ಸಂಭವಿಸುವದಿಲ್ಲ. ಇದು ಅಂತ್ಯ ಪಕ್ಷದಲ್ಲಿ ದೋಷವು; ಈ ದೋಷವು ಪ್ರಥಮ ಇಲ್ಲ. ಕಾರಣವೇನೆಂದ... ಅಗ್ನಿ ಮೊದಲಾದ ಸರ್ವಪದಾರ್ಥಗಳಲ್ಲಿ ಸಾಮರ್ಥ್ಯರೂಪ ಶಕ್ತಿಇದೆ. ಅದ ರಿಂದ ಪ್ರತಿಬಂಧಕದಿಂದ ದಾಹದ ಅಭಾವವು ಸಂಭವಿಸುವದಿಲ್ಲ. ಆದ... ಪದದಲ್ಲಿ ಅರ್ಥ ಜ್ಞಾನದ ಉತ್ಪತ್ತಿರೂಪಯೋಗ್ಯತೆ ಯಿಂದಭಿನ್ನ ಸಾಮ ರ್ಥ್ಯರೂಪ ಶಕ್ತಿಯಿಲ್ಲ, ಆದರೆ ಪದದಲ್ಲಿ ಅರ್ಥದಯೋಗ್ಯತೆಯೇಶಕ್ತಿ... ಇದು ಪ್ರಥಮಪಕ್ಷವು.ಇದರಲ್ಲಿ ಪ್ರತಿಬಂಧಕದಿಂದ ದಾಹಕತೆಯ ಅಭಾ... ವರೂಪ ದೋಷವು ಇಲ್ಲ.



ತಥಾಪಿ ಪದದಲ್ಲಿ ಸಹ ಅಗ್ನಿವತ್ ಸಾಮರ್ಥ್ಯದ ಅಂಗೀಕಾರವನ್ನು ಅವಶ್ಯವಾಗಿ ಮಾಡಬೇಕು. ಇದನ್ನು ಪ್ರತಿಪಾದನಮಾಡುವನು, ಶಂಕರ ಪದದ ಎರಡು ಪಾದಗಳಿಂದ "ನಾಹಿ ಜೊ ಅಸಮರ್ಥ" ಇತ್ಯಾದಿ "ಸವಿ ರೋಧ" ಪರಿಯಂತರ ಅರ್ಥವಿಲ್ಲ. ಎಂದರೆ ಪದದಲ್ಲಿ ಸಾಮರ್ಥ್ಯದ ಅಂಗೀ ಕಾರವಿಲ್ಲ. ಆದರೆ ಅಸಮರ್ಥವಾದ ಪದವು ಯೋಗ್ಯವು. ಎಂದರೆ ಅರ್ಥ ಜ್ಞಾನದ ಉತ್ಪತ್ತಿಗೆ ಕಾರಣವು. ಎಂದು ಹೇಳುವದು ಅಸಂಗತವಾದದ್ದು. ಯಾಕೆಂದರೆ, ಪದವು ಅಸಮರ್ಥವು. ಮತ್ತು ಅರ್ಥಯೋಗ್ಯ ಎಂದರೆ ಅರ್ಥಜ್ಞಾನದ ಉತ್ಪತ್ತಿಯು ಮೂಲವು. ಎಂದು ಹೇಳುವದರಿಂದ ನಪುಂಸ ಕನಲ್ಲಿ ಅಮೋಘವೀರ್ಯವಿದೆ." ಎಂಬ ವಾಕ್ಯದಂತೆ ಹೇಳಿದ ಕೂಡಲೇ ವಿರೋಧವಾಗಿದೆ. ಅಂದರೆ ವಿರೋಧಸಹಿತವದೆ. (೧) ಸಾಮರ್ಥ್ಯ ಸಹಿತ ವಾದದ್ದು ಸಮರ್ಥ, (೨) ಸಾಮರ್ಥ್ಯ ರಹಿತವಾದದ್ದು ಅಸಮರ್ಥವು.

ಅಸಮರ್ಥ ವಸ್ತುವಿನಿಂದ ಯಾವ ಕಾರ್ಯವೂ ಆಗುವದಿಲ್ಲವೆಂಬುದು ಲೋಕದಲ್ಲಿ ಪ್ರಸಿದ್ಧವಾದ ವಿಷಯವು, ಈ ಕಾರಣದಿಂದ ಅಸಮರ್ಥದಿಂದ ಪದ ಅರ್ಥಜ್ಞಾನರೂಪ ಕಾರ್ಯವು ಸಂಭವಿಸುವದಿಲ್ಲ. ಈ ಕಾರಣದಿಂದ ಪದದಲ್ಲಿ ಸಾಮರ್ಥ್ಯವನ್ನು ತಿಳಿಯುವದು ಯೋಗ್ಯವು. ಯಾವಾಗ ಪದ ದಲ್ಲಿ ಸಾಮರ್ಥ್ಯವನ್ನು ಅಂಗೀಕರಿಸಿದೆವೋ, ಆಗ ಶಕ್ತಿಯನ್ನು ಸಹಾ ಪದ ದಲ್ಲಿ ಸಾಮರ್ಥ್ಯರೂಪವೇ ಎಂದು ತಿಳಿಯುವದು ಯೋಗ್ಯವಾಗಿದೆ.

ಈ ರೀತಿಯಿಂದ ಅರ್ಥಜ್ಞಾನದ ಉತ್ಪತ್ತಿರೂಪ ಯೋಗ್ಯತೆಯು[೧], ಪದ ದಲ್ಲಿ ಶಕ್ತಿಯು ಅಲ್ಲ; ಆದರೆ ಸಾಮರ್ಥ್ಯರೂಪವೇ ಶಕ್ತಿಯುದೆ.

ವೈಯಾಕರಣ ಮತದಲ್ಲಿ ಮತ್ತೂ ಕೆಲವು ದೂಷಣೆಗಳನ್ನು ನೋಡ ಬೇಕಾಗಿದ್ದರೆ "ಶಕ್ತಿನಿರೂಪಣ ರೂಪದರ್ಪಣ" ನಾಮಕ ಗ್ರಂಥದಲ್ಲಿ ನೋ ಡು. ಆ ಗ್ರಂಥವು ಕೇವಲ ಕಠಿಣವಾಗಿದೆ. ಅದರಿಂದ ಆ ಗ್ರಂಥೋಕ್ತ ದೂಷಣೆಯನ್ನು ಇಲ್ಲಿ ಬರೆದಿರುವದಿಲ್ಲ.

ಟಿಪ್ಪಣಿ. ೧. ದಗ್ಧಬೀಜವತ್ ಸಾಮರ್ಥ್ಯಹೀನ ಪದದಲ್ಲಿ ಅರ್ಥಜ್ಞಾನದ ಉತ್ಪತ್ತಿ ಯ ಅಭಾವದಿಂದ ಈ ಯೋಗ್ಯತೆಯು ಪದದಲ್ಲಿ ಶಕ್ತಿ ಅಲ್ಲ. ಆದರೆ ಈ ಯೋಗ್ಯತೆಯು ಯಾವ ಸಾಮರ್ಥ್ಯದಿಂದ ಉಂಟಾಗಿರುವದೋ ಆ ಸಾಮ ರ್ಥ್ಯವೇ ಲೋಕಪ್ರಸಿದ್ಧ ಶಕ್ತಿಯಾಗಿದೆ

||೪೧೯|| ಭಟ್ಟರೀತಿ ಶಕ್ತಿಲಕ್ಷಣ || ೪೧೯—೪೨೧ ||

(ಪದದ ಅರ್ಥದಿಂದ ಭೇದಾಭೇದರೂಪ ತಾದಾತ್ಮ್ಯ.)

ಜನರಿಗೆ ಪದವು ವಾಣಿಯಲ್ಲಿ ಅರ್ಥವು, ವಾಣಿಯಿಂದ ಹೊರಗೂ ಇರುವ
ದು ಪ್ರತೀತವಾಗಿದೆ. ಇದರಿಂದ ಪದದ ಮತ್ತು ಅರ್ಥದ ಭೇದವು
ತ್ತಿನಲ್ಲಿ ಪ್ರಸಿದ್ಧವಾಗಿದೆ. (೧) ಈ ರೀತಿಯಿಂದ ವಾಚ್ಯವಾಚಕ
ಭೇದದಲ್ಲಿ ಸರ್ವ ಜನರ ಅನುಭವವು ಪ್ರಮಾಣವು. ಮತ್ತು [೨]
ಗಳ ಅಭೇದದಲ್ಲಿ ವೇದ ವಚನವು ಪ್ರಮಾಣವದೆ.

ಇದರಿಂದ ಪದದ ಅರ್ಥದಿಂದ ಭೇದಾಭೇದರೂಪ ತಾದಾತ್ಮ್ಯ
ಸಂಬಂಧವು ಅಪ್ರಮಾಣವಲ್ಲ; ಆದರೆ ಪ್ರಮಾಣಸಿದ್ಧವು.

---

ಟಿಪ್ಪಣಿ. ೧. ಯಾವುದು ನ್ಯೂನದೇಶದಲ್ಲಿ ಇರುವುದೋ ಅದಕ್ಕೆ ವ್ಯಾಪ್ಯ
ತ್ತಾರೆ. ಯಾವುದು ಅಧಿಕ ದೇಶದಲ್ಲಿ ಇರುವುದೋ ಅದಕ್ಕೆ ವ್ಯಾಪಕವೆನ್ನು
ತ್ತಾರೆ. ಘಟವು ನ್ಯೂನ ದೇಶದಲ್ಲಿ ಇರುವುದರಿಂದ ವ್ಯಾಪ್ಯವು. ಆಕಾ
ಅಧಿಕ ದೇಶದಲ್ಲಿ ಇರುವುದರಿಂದ ವ್ಯಾಪಕವು.

ವ್ಯಾಪ್ಯವಿದ್ದದ್ದು ವ್ಯಾಪಕದ ಮಧ್ಯದಲ್ಲಿ ಇದೆ. ಮತ್ತು ವ್ಯಾಪಕವಿ
ದ್ದು. ವ್ಯಾಪ್ಯದಿಂದ ಹೊರಗೆ ಇರುವದೇ. ಘಟವು ಆಕಾಶದ ಮಧ್ಯದ
ಇದೆ. ಮತ್ತು ಆಕಾಶವು ಘಟದ ಹೊರಗೆ ಇದೆ. ಇದರಂತೆ ವಾಣಿ
ಬ್ರಹ್ಮಕ್ಕಿಂ ನ್ಯೂನ ದೇಶದಲ್ಲಿ ಇದೆ. ವ್ಯಾಪ್ಯವಾಗಿರುವದರಿಂದ ಬ್ರ
ಮಧ್ಯದಲ್ಲಿ ಇದೆ. ಮತ್ತು ಬ್ರಹ್ಮವು ವಾಣಿಗಿಂತ ಅಧಿಕ ದೇಶದಲ್ಲಿ
ವ್ಯಾಪಕವಾಗುವದರಿಂದ ವಾಣಿಯ ಹೊರಗೂ ಇದೆ, ಎಂದುಹೇಳಿದಾ

---

॥೪೨೧॥ ಪ್ರಸಂಗದಿಂದ ಅನ್ಯಸ್ಥಾನದಲ್ಲಿ ಸಹಾ ಭೇದಾಭೇ
ತಾದಾತ್ಮ್ಯ ಸಂಬಂಧವನ್ನು ತೋರಿಸುತ್ತಾರೆ.

॥ ಅರ್ಧ ಶಂಕರ ಛಂದ ॥

ಜೊ ಗುನ ಗುನೀ ಔ ಜಾತಿ ವ್ಯಕ್ತಿ । ಕ್ರಿಯಾ ಅರು ತದ್ವಾ
ಸಂಬಂಧ ಲಖಿ ತಾದಾತ್ಮ್ಯ ಇನಕೊ। ಕಾರ್ಯ ಕಾರನಸ

ಟೀಕಾ॥ [೧] ರೂಪ, ರಸ, ಗಂಧ ಮೊದಲಾದ ಗುಣಗಳು
ಇವುಗಳ ಆಶ್ರಯಕ್ಕೆ ಗುಣಿ ಎಂದು ಎನ್ನುತ್ತಾರೆ. ರೂಪ ಮೊದಲಾ
ಗಳಿಗೆ ಆಶ್ರಯವಾದ ಭೂಮಿಯು ಗುಣಿ ಇದೆ.

ಅನೇಕ ಸ್ಥಳದಲ್ಲಿ ಒಂದೇಧರ್ಮವಿರುವದು. ಅದಕ್ಕೆ ಜಾತಿಯೆನ್ನು
ರೆ. ಸರ್ವಬ್ರಾಹ್ಮಣ ಶರೀರಗಳಲ್ಲಿ ಒಂದು ಬ್ರಾಹ್ಮಣತ್ವವು ಇದೆ. ಸ
ಸರ್ವಶೂದ್ರ ಶರೀರಗಳಲ್ಲಿ ಶೂದ್ರತ್ವವಿದೆ. ಸರ್ವ ಜೀವನಗಳಲ್ಲಿ ಜೀ
ತ್ವವಿದೆ. ಸರ್ವಪುರುಷರಲ್ಲಿ ಪುರುಷತ್ವವಿದೆ. ಸರ್ವಘಟಗಳಲ್ಲಿ ಘಟ



ವುಗಳಿಗೆ ಜಗತ್ತಿನಲ್ಲಿ ಬ್ರಾಹ್ಮಣತ್ವ, ಶೂದ್ರತ್ವ, ಜೀವತ್ವ ಪುರುಷತ್ವ,
ತ್ವವೆಂದು ಎನ್ನುವರೋ, ಅವಕ್ಕೇ ಬ್ರಾಹ್ಮಣ ಮೊದಲಾದ ಸರ್ವಶರೀ
ಗಳಲ್ಲಿ ಬ್ರಾಹ್ಮಣತ್ವನೊದಲಾದ ಜಾತಿಗಳಿವೆ. ಜಾತಿಯ ಆಶ್ರಯವಾದ
ಬ್ರಾಹ್ಮಣಾದಿಗಳು ಇವು ವ್ಯಕ್ತಿಯೆಂದು ತಿಳಿಯಬೇಕು. ಮತ್ತು

(೩) ಗಮನಾಗಮನಾದಿಗಳಿಗೆ ಕ್ರಿಯಾ ಎಂದು ಎನ್ನಬೇಕು. ಈ
ಯುಳ್ಳದ್ದು ಕ್ರಿಯೆಯ ಆಶ್ರಯನೆಂದೆನ್ನಬೇಕು.

ಇಷ್ಟು ಪದಾರ್ಥಗಳ ತಾದಾತ್ಮ್ಯಸಂಬಂಧವಿದೆ, ಎಂಬದನ್ನುನೀನು
! ಕಾರಣ, ಕಾರ್ಯಕ್ಕೆ ಹೊಂದಿಸು,ಆದರೆ ಗುಣ ಮತ್ತು ಗುಣಿಮೊ
ಲಾದವುಗಳಲ್ಲಿ ಕೂಡಿಸು, ಅಭಿಪ್ರಾಯವು ಹೀಗೆ ಇದೆ.

೧. ಕಾರಣ ಮತ್ತು ಕಾರ್ಯಕ್ಕೆ ಸಹ ಗುಣ ಗುಣಿವತ್ ತಾದಾ
ಸಂಬಂಧವಿದೆ. (೨) ಗುಣದ ಮತ್ತು ಗುಣಿಯ ಪರಸ್ಪರ ತಾದಾತ್ಮ್ಯ
ಬಂಧವಿದೆ. (೩) ಜಾತಿಯ ಮತ್ತು ವ್ಯಕ್ತಿಯ ಪರಸ್ಪರ ತಾದಾತ್ಮ್ಯ
ಬಂಧವಿದೆ. (೪) ಇದರಂತೆ ಕ್ರಿಯಾ ಮತ್ತು ಕ್ರಿಯಾವಾನ್ ಇವರ
ತಾದಾತ್ಮ್ಯ ಸಂಬಂಧವಿದೆ.

ಕಾರಣದ ಮತ್ತು ಕಾರ್ಯದ ತಾದಾತ್ಮ್ಯ ಸಂಬಂಧವು ಸಹ ಅದೆ.
ತಾದಾತ್ಮ್ಯ ಎಂದರೆ ಭೇದ ಸಹಿತ ಅಭೇದವು.

ಯದ್ಯಪಿ ನಿಮಿತ್ತ ಕಾರಣದ ಮತ್ತು ಕಾರ್ಯದ ಭೇದಾಭೇದರೂಪ
ತಾದಾತ್ಮ್ಯವು ಇರುವದಿಲ್ಲ. ಅತ್ಯಂತ ಭೇದವಿದೆ. ತಥಾಪಿ ಉಪಾದಾನ
ಕಾರಣದ ಮತ್ತು ಕಾರ್ಯದ ಭೇದಾಭೇದರೂಪ ತಾದಾತ್ಮ್ಯ ಸಂಬಧ
ವಿದೆ. ಘಟದ ನಿಮಿತ್ತ ಕಾರಣಗಳು ಕುಲಾಲ, ದಂಡ,ಮೊದಲಾದವುಗಳು
ವೆ. ಇವುಗಳ ಘಟರೂಪ ಕಾರ್ಯದಿಂದ ಅತ್ಯಂತ ಭೇದವು ಸಹ ಇದೆ.
ಮತ್ತು ಉಪಾದಾನಕಾರಣ ಮೃತ್ತಿಕಾಪಿಂಡ, ಮತ್ತು ಘಟಕಾರ್ಯದ
ಭೇದಸಹಿತ ಅಭೇದವಿದೆ. (೧) ಇನ್ನು ಮೃತ್ತಿಕಾ ಪಿಂಡಕ್ಕೂ ಘಟಕ್ಕೂ
ಅತ್ಯಂತ ಭೇದವಿದ್ದರೆ ಹೇಗೆ ಮೃತ್ತಿಕಾಪಿಂಡದಿಂದ ಅತ್ಯಂತ ಭಿನ್ನವಾದ
ದ ಉತ್ಪತ್ತಿಯು ಆಗುವುದಿಲ್ಲವೋ,ಹಾಗೆ ಘಟದ ಉತ್ಪತ್ತಿಯು ಸಹ
ಬಾರದು. ಮತ್ತು (೨) ಉಪಾದಾನ ಕಾರಣಕ್ಕೂ, ಕಾರ್ಯಕ್ಕೂ
ಅತ್ಯಂತ ಭೇದವಿದ್ದಪಕ್ಷದಲ್ಲಿ ಮೃತ್ಪಿಂಡದಿಂದ ಘಟದ ಉತ್ಪತ್ತಿಯು ಆಗ
ದು. ಕಾರಣವೇನೆಂದರೆ,-ತನ್ನ ಸ್ವರೂಪದಿಂದಲೇ ತನ್ನ ಉತ್ಪತ್ತಿಯು
ಗುವದಿಲ್ಲ. ಈ ಕಾರಣದಿಂದ (೧) ಉಪಾದಾನ ಕಾರಣಕ್ಕೂ, ಕಾರ್ಯ
ಕ್ಕೂ ಭೇದ ಸಹಿತ ಅಭೇದವಿದೆ. ಅಭೇದವಿರುವುದರಿಂದ ಅತ್ಯಂತ ಭೇದ

ಪಕ್ಷದ ದೋಷವಿಲ್ಲ. ಮತ್ತು, ಭೇದವಿರುವುದರಿಂದ ಅಭೇದಪಕ್ಷದದೋ
ಷವಿಲ್ಲ. ಈ ರೀತಿಯಿಂದ ಉಪಾದಾನ ಕಾರಣಕ್ಕೂ ಕಾರ್ಯಕ್ಕೂ ಭೇದಾ
ಭೇದವು ಯುಕ್ತಿ ಸಿದ್ಧವಾಗಿದೆ. ಮತ್ತು (೧) ಪ್ರತೀತಿಯಿಂದ ಸಹ ಉ
ಪಾದಾನಕ್ಕೂ ಕಾರ್ಯಕ್ಕೂ ಭೇದಾಭೇದವು ಸಿದ್ಧವು. "ಇದು ಮೃತ್ತಿ
ಡವು. ಇದು ಘಟವು." ಈ ಪ್ರಕಾರದ ಭಿನ್ನಪ್ರತೀತಿಯಿಂದ ಭೇದವು ಸಿ
ದ್ಧವಾಗುವದು. ಮತ್ತು, (೨) ವಿಚಾರದಿಂದ ನೋಡಲು ಘಟದ ಹೊರಗೂ
ಒಳಗೂ ಮೃತ್ತಿಕೆಯಿಂದ ಭಿನ್ನವಾದ ಯಾವವಸ್ತುವೂ ಪ್ರತೀತವಾಗುವ
ದಿಲ್ಲ. ಮೃತ್ತಿಕೆಯೇ ಪ್ರತೀತವಾಗುವದು. ಈ ಕಾರಣದಿಂದ ಅಭೇದವು
ಸಿದ್ಧವಾಗುವದು. ಈ ರೀತಿಯಿಂದ ಉಪಾದಾನ ಕಾರಣಕ್ಕೂ ಕಾರ್ಯ
ಕ್ಕೂ ಭೇದಾಭೇದರೂಪ ತಾದಾತ್ಮ್ಯಸಂಬಂಧವದೆ.

ಇದರಂತೆ ಗುಣ ಮತ್ತು ಗುಣಿಯು ಭೇದಾಭೇದವು ಸಹ ಇದೆ. (೧)
ಇನ್ನು ಘಟರೂಪಕ್ಕೂ ಘಟಕ್ಕೂ ಅತ್ಯಂತ ಭೇದವಿದ್ದರೆ, ಹೇಗೆ ಘಟಕ್ಕೂ
ಪಟಕ್ಕೂ ಅತ್ಯಂತಭೇದವಿರುವುದರಿಂದ ಆ ಪಟವು ಘಟಾಶ್ರಿತವಲ್ಲದೆ ಸ್ವತಂ
ತ್ರವದೆಯೋ ಹಾಗೆ ಘಟದರೂಪವು ಸಹ ಘಟದ ಆಶ್ರಯವಾಗಕೂಡದು.
ಮತ್ತು (೨) ಗುಣ, ಮತ್ತು ಗುಣಿಯು ಅತ್ಯಂತ ಅಭೇದವಿದ್ದರೆ ಘಟದರೂ
ಪವು ಘಟದ ಆಶ್ರಿತವಾಗುತ್ತಿದ್ದಿಲ್ಲ. ಕಾರಣವೇನೆಂದರೆ ತನ್ನ ಆಶ್ರಯವು
ತಾನು ಆಗಲಾರದು. ಇದರಿಂದ ಗುಣ ಮತ್ತು ಗುಣಿಯು ಭೇದಾಭೇದರೂಪ
ತಾದಾತ್ಮ್ಯಸಂಬಂಧವದೆ.

ಈ ಯುಕ್ತಿಯಿಂದ ಜಾತಿ ಮತ್ತು ವ್ಯಕ್ತಿ ಹಾಗೂ ಕ್ರಿಯಾ, ಮತ್ತು
ಕ್ರಿಯಾವಾನ್ ಅಂದರೆ ಕರ್ತೃ ಇವರ ಭೇದಾಭೇದರೂಪ ತಾದಾತ್ಮ್ಯ
ಸಂಬಂಧವನ್ನು ತಿಳಿ, ಮತ್ತು ಖಂಡನಮಾಡತಕ್ಕ ಮತದಲ್ಲಿಬಹಳ ಯು
ಕ್ತಿಗಳನ್ನು ಹೇಳುವ ಪ್ರಯೋಜನವಿಲ್ಲ. ಈ ಕಾರಣದಿಂದ ಬೇರೆಯುಕ್ತಿಗ
ಳನ್ನು ಬರೆಯುಲಿಲ್ಲ.

ಟಿಪ್ಪಣಿ—೧. ಗುಣ ಮತ್ತು ಗುಣಿ ಮೊದಲಾದನಾಲ್ಕುಸ್ಥಳಗಳಲ್ಲಿಭಟ್ಟಮತದಂತೆ
ವೇದಾಂತಿಗಳುಸಹಾ ತಾದಾತ್ಮ್ಯ ಸಂಬಂಧವನ್ನು ಒಪ್ಪಿಕೊಳ್ಳುತ್ತಾರೆ. ಆದರೆ
ವೇದಾಂತ ಮತದಲ್ಲಿ ತಾದಾತ್ಮ್ಯಸಂಬಂಧದ ಲಕ್ಷಣವನ್ನು ಭಟ್ಟಮತಕ್ಕಿಂತ
ವಿಲಕ್ಷಣವಮಾಡಿರುವರು. ಇದನ್ನು ಮುಂದೆಹೇಳುವೆನು. ಮತ್ತು ಇಷ್ಟುನಾಲ್ಕು
ಸ್ಥಳಗಳಿಗೆ ನೈಯಾಯಿಕರು ಸಮವಾಯ ಸಂಬಂಧವೆಂದುಒಪ್ಪುವರು.ನಿತ್ಯ
ಸಂಬಂಧಕ್ಕೆ ಸಮವಾಯವೆನ್ನುತ್ತಾರೆ.





|| ದೋಹಾ ||

ಏಕ ವಸ್ತುಕೊ ಏಕಮೈ । ಭೇದ ಅಭೇದ ನಿರುದ್ಧ ||
ಯುಕ್ತಿಜುಕ್ತ ಯಾತೈ ಕಹೆತ । ಯುಹಮತ ಸಕಲಅಸುದ್ಧ ||೩೨||

ಟೀಕಾ|| ಒಂದೇವಸ್ತುವಿನಲ್ಲಿ ಭೇದಮತ್ತುಅಭೇದವಿರುವುದು ಅಸಂ
ಭವವು. ಆದರಿಂದ ಸುಜ್ಞರಾದವರೆಲ್ಲರು ಈ ಮತವು ಅಶುದ್ಧವಾದದ್ದೆಂದು
ಯುಕ್ತಿಪ್ರಯುಕ್ತಿಗಳಿಂದ ನಿಶ್ಚಯಿಸಿರುವರು.

ಯದ್ಯಪಿ ಒಂದೇಘಟದಲ್ಲಿತನ್ನಅಭೇದವು ಮತ್ತು ಅನ್ಯದರಭೇದವೂ
ಇರುವದು. ತಥಾಪಿ (೧) ಯಾವದರಅಭೇದವಿದೆಯೋಅದರಭೇದವಿಲ್ಲ. ಮ
ತ್ತು ಯಾವದರ ಭೇದವಿರುದೋ ಅದರ ಅಭೇದವಿಲ್ಲ. ಈ ಅಭಿಪ್ರಾಯ
ದಿಂದ ಒಂದೇ ವಸುವಿನಲ್ಲಿ ಭೇದ ಅಭೇದವೆಂದು ಹೇಳುವದುವಿರುದ್ಧವಾ
ದ್ದು. (೨) ಇದೇಪ್ರಕಾರ ಒಂದುವಸ್ತುವಿನಲಿಅಂದರೆಘಟದಲ್ಲಿಯೇ ತನ್ನಲ್ಲಿ
ಅಭೇದವೂ ಅನ್ಯದರಲ್ಲಿ ಭೇದವೂ ಇದೆ. ಪರಂತುಯಾವದರಲ್ಲಿ ಅಭೇದವಿದೆ
ಯೋ ಅದರಲ್ಲಿ ಭೇದವಿಲ್ಲ. ಮತ್ತು ಯಾವದರಲ್ಲಿ ಭೇದವಿದೆಯೋಅದರಲ್ಲಿ
ಅಭೇದವಿಲ್ಲ. ಈ ಅಭಿಪ್ರಾಯದಿಂದ ಒಂದೇ ವಸ್ತುವಿನ ಭೇದಅಭೇದಗಳು
ಒಂದರಲ್ಲಿಯೇ ವಿರುದ್ಧವೆಂದು ಹೇಳಲ್ಪಟ್ಟದೆ.

ಭೇದ ಅಭೇದಗಳು ಪರಸ್ಪರವಿರೋಧಿಗಳಾಗಿರುವುವು. ಒಂದುವಸ್ತು
ವಿನಲ್ಲಿ ಯಾವದರ ಭೇದವಿರುವದೋ ಅದರ ಅಭೇದವೂ ಮತ್ತು ಯಾವದರ
ಅಭೇದವಿರುವದೋ ಅದರ ಭೇದವೂ ವಿರುದ್ಧಗಳು. ಆದರಿಂದ ವಾಚ್ಯವಾ
ಚಕ, ಗುಣಗುಣೀ, ಜಾತಿವ್ಯಕ್ತಿ, ಕ್ರಿಯಾ ಕರ್ತೃ, ಉಪಾದಾನ ಕಾರಣ
ಕಾರ್ಯದ ಭೇದಾಭೇದರೂಪ ತಾದಾತ್ಮ್ಯವನ್ನುಅಂಗೀಕಾರಮಾಡಿದ್ದು
ಕೇವಲ ಅಶುದ್ಧವದೆ.

ಟಿಪ್ಪಣಿ—(೧) ಶಂಕರದಿಗ್ವಿಜಯದಲ್ಲಿಯಾವನನಾಮವು ಕುಮಾರಿಲಭಟ್ಟಅಥವಾ
ಭಟ್ಟಪಾದನೆಂದು ಉಲ್ಲೇಖವಿರುವದೋ, ಮತ್ತು ಮಂಡನಮಿಶ್ರ ಪ್ರ
ಭಾಕರ ಮೊದಲಾದವರುಯಾವನ ಶಿಷ್ಯರಾಗಿರುವರೋ, ಯಾವನುಜೈಮಿನಿ
ಕೃತ ಪೂರ್ವಮೀಮಾಂಸೆಯ ವಾರ್ತಿಕಕಾರನಾಗಿರುವನೋ ಅವನಿಗೇ ಇಲ್ಲಿ
ಭಟ್ಟನೆಂದು ಹೇಳಿದ್ದಾರೆ.

||೪೨೩|| ಈಪೂರ್ವದಲ್ಲಿ ವಾಚ್ಯವಾಚಕದ ಭೇದವಿಷಯದಲ್ಲಿಪ್ರಮಾ
ಣವನ್ನು ಹೇಳಿದ್ದೇನೆಂದರೆ (೧) "ವಾಣಿಯಲ್ಲಿ ವಾಚಕ, ಮತ್ತುಹೊರಗೆ
ವಾಚ್ಯವೆಂದು ಭೇದವೂ ಮತ್ತು (೨) ಶ್ರುತಿಯಲ್ಲಿ 'ಓಂ'ಅಕ್ಷರವುಬ್ರಹ್ಮವೆಂ
ದು ಹೇಳಿದೆಯೆಂದೂ ಅಭೇದವು." ಇದರಸಮಾಧಾನವನ್ನು ಹೇಳುವೆನು.

॥ ದೋಹಾ ॥

ಪ್ರನವವರ್ನ ಅರು ಬ್ರಹ್ಮಕೊ । ಕಹ್ಯೊ ಜು ಭೇದ ಅಭೇ
ತಾತ್ಪೈ ಅನ್ಯರಹಸ್ಯ ಕಛು। ಲಖ್ಯೋನ ಭಟ್ಟಸು ವೇದ ॥

ಟೀಕಾ ॥ ಪ್ರಣವ ವರ್ಣವೆಂದರೆ ಓಂ ಅಕ್ಷರವು, ಮತ್ತು ಬ್ರಹ್ಮ ಇವುಗಳಲ್ಲಿ ಅಭೇದವನ್ನು ವೇದದಲ್ಲಿ ಹೇಳಿದೆ; ವಾಚ್ಯವಾಚಕದ ಅಭೇದದಲ್ಲಿ ಆವೇದವಚನದ ತಾತ್ಪರ್ಯವಿಲ್ಲ. ಆದರೆ ಅದರಲ್ಲಿ ಅನ್ಯರಹಸ್ಯ ಅಂದರೆ ಗುಪ್ತ ಅಭಿಪ್ರಾಯವದೆ. ಈ ಭೇದವನ್ನು ಭಟ್ಟನು ಅರಿತುಕೊಳ್ಳಲಿಲ್ಲ.

ಎಲ್ಲಿ ಓಂ ಅಕ್ಷರವು ಬ್ರಹ್ಮವೆಂದು ಹೇಳಿದೆಯೋ ಆ ವಾಕ್ಯದ ತಾತ್ಪರ್ಯವು ಓಂ ಅಕ್ಷರ ಮತ್ತು ಬ್ರಹ್ಮದ ಅಭೇದವಿಷಯವಾಗಿ ಇಲ್ಲ. ಆದರೆ "ಓಂ ಅಕ್ಷರವನ್ನು ಬ್ರಹ್ಮರೂಪದಿಂದ ಉಪಾಸನ ಮಾಡಬೇಕು." ಎಂಬ ಅರ್ಥದಲ್ಲಿ ತಾತ್ಪರ್ಯವಿದೆ. ಯಾವ ಉಪಾಸನೆಯ ವಿಧಾನವಿರುವದೋ ಅದರಂತೆಯೇ ಉಪಾಸ್ಯದ ಸ್ವರೂಪದ ನಿಯಮವಿರುವದಿಲ್ಲ. ಶಾಸ್ತ್ರವು ಉಪಾಸನಾ ವಿಧಾನಮಾಡಿರುವುದೋ, ಅದರಂತೆಯೇ ಉಪಾಸ್ಯದ ಸ್ವರೂಪವಾಗುವದು; ಆದರೆ ವಸ್ತುವಿನ ಸ್ವರೂಪವು ಹೇಗೆ ಇರುವದೋ ಅದನ್ನು ಬಿಟ್ಟು ಅನ್ಯಸ್ವರೂಪವನ್ನೇ ಅದರಲ್ಲಿ ಉಪಾಸನ ಮಾಡಬೇಕು.

೧. ಸಾಲಿಗ್ರಾಮವುಮತ್ತುನರ್ಮದೇಶ್ವರ ಇವುಗಳನ್ನು ಕ್ರಮದಿಂದ ವಿಷ್ಣು ರೂಪ, ಮತ್ತು ಶಿವರೂಪದಿಂದ ಉಪಾಸನಮಾಡಬೇಕು ಎಂದು ಹೇಳಿದೆ. ಇಲ್ಲಿ ಸಾಲಿಗ್ರಾಮವು ಶಂಖ ಚಕ್ರಗದಾದಿಸಹಿತ ಚತುರ್ಭುಜಮೂರ್ತಿಯಾಗಿ ಇರುವುದಿಲ್ಲ; ಮತ್ತು ಗಂಗಾಭೂಷಿತ, ಜಟಾಜೂಟ, ಡಮರುಕಪಾಲಿಕಾ ಸಹಿತ ಭದ್ರಾಮುದ್ರೆಯಿಂದ ಶರಣಾಗತರಿಗೆ ತ್ರಿಗುಣರಹಿತ ಆತ್ಮೋಪದೇಶವನ್ನು ಕೊಡತಕ್ಕ ಮೂರ್ತಿಯು ನರ್ಮದೇಶ್ವರನಲ್ಲಿರುವುದಿಲ್ಲ; ಆದರೆ ಎರಡೂ ಶಿಲಾರೂಪವಾಗಿರುವವು. ಮತ್ತು ಶಾಸ್ತ್ರದ ಆಜ್ಞೆಯಿಂದ ಈ ಶಿಲಾ ರೂಪದ ದೃಷ್ಟಿಯನ್ನು ಬಿಟ್ಟು ಎರಡರಲ್ಲಿಯೂ ಕ್ರಮದಿಂದ ವಿಷ್ಣುರೂಪ ಮತ್ತು ಶಿವರೂಪದ ಉಪಾಸನೆಯನ್ನು ಮಾಡುತ್ತಾರೆ. ಈ ಕಾರಣದಿಂದ ಉಪಾಸನೆಯು ಉಪಾಸ್ಯಸ್ವರೂಪದ ಆಧೀನವು ಆಗುವದಿಲ್ಲ; ನಿಯಮದ ಆಧೀನವಾಗಿದೆ. ಹೇಗೆ ಶಾಸ್ತ್ರವಚನದ ವಿಧಾನವಿರುವದೋ ಹಾಗೆ ಉಪಾಸನಾ ಮಾಡಬೇಕು.

೨. ಛಾಂದೋಗ್ಯ ಉಪನಿಷತ್ತಿನಲ್ಲಿ ಪಂಚಾಗ್ನಿವಿದ್ಯಾಪ್ರಕರಣದಲ್ಲಿ



ಸ್ವರ್ಗಲೋಕ, ಮೇಘ, ಭೂಮಿ, ಪುರುಷ, ಸ್ತ್ರೀ, ಐದು ಪದಾರ್ಥಗಳನ್ನು ಅಗ್ನಿರೂಪದಿಂದ ಉಪಾಸನಾ ಮಾಡಬೇಕೆಂದು ಹೇಳಿದೆ. ಮತ್ತು ಶ್ರದ್ಧಾ, ಸೋಮ, ವೃಷ್ಟಿ, ಅನ್ನ, ವೀರ್‍ಯ, ಈ ಐದು ಪದಾರ್ಥಗಳನ್ನು ಪಂಚಾಗ್ನಿಯ ಆಹುತಿರೂಪವೆಂದು ಭಾವಿಸಿ, ಉಪಾಸನ ಮಾಡಬೇಕೆಂದು ಹೇಳಿದೆ. ಅಲ್ಲಿ ಸ್ವರ್ಗಾದಿಗಳು ಅಗ್ನಿಯಲ್ಲ; ಮತ್ತು ಶ್ರದ್ಧಾ, ಸೋಮಾದಿಗಳು ಆಹುತಿಯು ಅಲ್ಲ. ತಥಾಪಿ ವೇದಾಜ್ಞೆಯಿಂದ ಸ್ವರ್ಗಲೋಕಾದಿಗಳನ್ನು ಅಗ್ನಿರೂಪವೆಂದು ತಿಳಿದು, ಮತ್ತು ಶ್ರದ್ಧಾ, ಮೊದಲಾದವುಗಳನ್ನು ೧ ಆಹುತಿ ರೂಪವೆಂದು ಭಾವಿಸಿ, ಉಪಾಸನೆಯನ್ನು ಮಾಡುವರು.

ಈರೀತಿಯಿಂದ ಓಂ ಅಕ್ಷರವನ್ನು ಬ್ರಹ್ಮರೂಪದಿಂದ ಉಪಾಸನೆ ಮಾಡಬೇಕೆಂದು ಹೇಳಿದೆ. ಅಲ್ಲಿ ಓಂ ಅಕ್ಷರವು ಬ್ರಹ್ಮರೂಪವಿರುವದಿಲ್ಲ. ಆದಾಗ್ಯೂ ಸಹ ಬ್ರಹ್ಮರೂಪದಿಂದ ಉಪಾಸನೆ ಸಂಭವಿಸುತ್ತದೆ. ಉಪಾಸನಾವಾಕ್ಯದಲ್ಲಿ ವಸ್ತುವಿನ ಅಭೇದದ ಅಪೇಕ್ಷೆಯು ಇಲ್ಲ. ಆದರೆ ಭಿನ್ನವಸ್ತುವಿನ ಉಪಾಸನೆಯು ಸಹ ಅಭಿನ್ನರೂಪದಿಂದ ಆಗುವದು. ಮತ್ತು-

ವಿಚಾರದಿಂದ ನೋಡಲು ಬ್ರಹ್ಮದ ವಾಚಕವಾದ ಓಂ ಅಕ್ಷರಕ್ಕೂ ಮತ್ತು ಇದರ ವಾಚ್ಯವಾದ ಬ್ರಹ್ಮಕ್ಕೂ ಅಭೇದವು ಸಂಭವಿಸುತ್ತದೆ. ಆದರೆ ಘಟಾದಿ ಅನ್ಯಪದಗಳ ತಮ್ಮತಮ್ಮ ಜಡರೂಪ ಅರ್ಥದಿಂದ ಅಭೇದವು ಸಂಭವಿಸುವದಿಲ್ಲ. ಕಾರಣವೇನೆಂದರೆ, ಸರ್ವನಾಮರೂಪವು ಬ್ರಹ್ಮದಲ್ಲಿ ಕಲ್ಪಿತವಾಗಿದೆ. ಬ್ರಹ್ಮವು ಅಧಿಷ್ಠಾನವು. ಓಂ ಅಕ್ಷರವು ಸಹ ಬ್ರಹ್ಮದ ನಾಮವಿರುವದು; ಈ ಕಾರಣದಿಂದ ಬ್ರಹ್ಮದಲ್ಲಿ ಕಲ್ಪಿತವು. ಕಲ್ಪಿತವಸ್ತುವು ಅಧಿಷ್ಠಾನದಿಂದ ಭಿನ್ನವಾಗಿರುವುದಿಲ್ಲ. ಆದರೆ ಅಧಿಷ್ಠಾನರೂಪವೇ ಆಗಿರುವದು. ಅದರಿಂದ ಓಂ ಅಕ್ಷರವು ಬ್ರಹ್ಮರೂಪವಾಗಿದೆ. ಮತ್ತು ಘಟಾದಿಪದಗಳ ಜಡರೂಪವು ತಮ್ಮ ಅರ್ಥದಿಂದ ಅಧಿಷ್ಠಾನವಲ್ಲ. ಆದರೆ ವಾಚ್ಯಸಹಿತ ಘಟಾದಿ ಪದಗಳು ಬ್ರಹ್ಮದಲ್ಲಿ ಕಲ್ಪಿತಗಳು. ಮತ್ತು ಬ್ರಹ್ಮವು ಇವುಗಳ ಅಧಿಷ್ಠಾನವಾಗಿದೆ. ಇದರಿಂದ ಬ್ರಹ್ಮಕ್ಕೂ, ಸರ್ವಕ್ಕೂ, ಅಭೇದವು ಸಂಭವಿಸುತ್ತದೆ. ಆದರೆ ಘಟಾದಿ ಪದಗಳ ತಮ್ಮ ಜಡರೂಪಗಳು ವಾಚ್ಯ ಅರ್ಥದಿಂದ ಅಭೇದವು ಯಾವ ರೀತಿಯಿಂದಲೂ ಉಂಟಾಗುವದಿಲ್ಲ. ಈ ಕಾರಣದಿಂದ ಭಟ್ಟಮತದ ವಾಚ್ಯವಾಚಕದ ಅಭೇದವು ಅಸಂಗತವದೆ. ಮತ್ತು-

ಟಿಪ್ಪಣಿ—೧. ಈ ಪಂಚಾಗ್ನಿ ವಿದ್ಯೆಯ ಸರ್ವಪ್ರಸಂಗವನ್ನು ಪಂಡಿತ ಪೀತಾಂಬರ

ಜಿಯವರು ಪಂಚದಶಿಯ ಧ್ಯಾನದೀಪಿಕೆಯ ಭಾಷಾಟೀಕೆಯ ಟಿಪ್ಪಣಿಯಲ್ಲಿ ಹಾಗೂ ಛಾಂದೋಗ್ಯದಲ್ಲಿಯೂ ಬರೆದಿರುವರು. ಅಲ್ಲಿ ನೋಡಿಕೊಳ್ಳಬೇಕು.

||೪೨೪|| ವಾಚ್ಯವಾಚಕದ ಕೇವಲ ಭೇದವನ್ನು ಅಂಗೀಕರಿಸುವ ಮತದಲ್ಲಿ ಭಟ್ಟನು ಹೇಳಿದ ದೋಷವು ಯಾವದೆಂದರೆ, ಘಟಪದದ ವಾಚ್ಯವು ಘಟಪದದಿಂದ ಅತ್ಯಂತ ಭಿನ್ನವಾಗಿದ್ದರೆ, ಹೇಗೆ ಘಟಪದದಿಂದ ಅತ್ಯಂತ ಭಿನ್ನವಾದ ವಸ್ತ್ರರೂಪ ಅರ್ಥದ ಪ್ರತೀತಿಯು ಆಗುವದಿಲ್ಲವೋ, ಹಾಗೆ ಘಟಪದದಿಂದ ಅತ್ಯಂತ ಭಿನ್ನವಾದ ಕಲಶರೂಪ ಅರ್ಥದ ಪ್ರತೀತಿಯು ಆಗಕೂಡದು. ಮತ್ತು ಘಟ ಪದದಿಂದ ವಾಚ್ಯವನ್ನು ಭಿನ್ನವೆಂದು ತಿಳಿದು ಅದರ ಪ್ರತೀತಿಯನ್ನು ಘಟಪದದಿಂದ ತಿಳಿಯಲು, ಹೇಗೆ ಘಟಪದದಿಂದ ಅತ್ಯಂತ ಭಿನ್ನಕಲಶರೂಪ ಅರ್ಥದ ಪ್ರತೀತಿಯಾಗುವಂತೆ ಅತ್ಯಂತ ಭಿನ್ನವಾದ ವಸ್ತ್ರದ ಪ್ರತೀತಿಯು ಸಹ ಘಟಪದದಿಂದ ಆಗಬೇಕು; ಈ ದೋಷವು ಸಾಮರ್ಥ್ಯ ಅಥವಾ ಇಚ್ಛಾರೂಪ ಶಕ್ತಿಯು ಇಲ್ಲವೆಂದು ತಿಳಿಯುವ ಮತವು. ಯಾವ ಮತದಲ್ಲಿ ಶಕ್ತಿಯನ್ನು ಅಂಗೀಕರಿಸುವರೋ, ಆ ಮತದಲ್ಲಿ ದೋಷವಿಲ್ಲ. ಕಾರಣವೇನೆಂದರೆ, ಘಟಪದದ ವಾಚ್ಯವಾದ ಕಲಶವು ಮತ್ತು ಅದರ ವಾಚ್ಯವಾದ ವಸ್ತ್ರಾದಿಗಳೂ ಘಟಪದದಿಂದ ಭಿನ್ನವು. ಆದರೆ ಘಟಪದದಲ್ಲಿ ಕಲಶರೂಪ ಅರ್ಥದ ಜ್ಞಾನವನ್ನುಂಟುಮಾಡತಕ್ಕ ಜ್ಞಾನಶಕ್ತಿಯು ಇಲ್ಲ. ಈ ಕಾರಣದಿಂದ ಘಟಪದದಿಂದ ಕಲಶರೂಪ ಅರ್ಥದ ಹೊರತು ಭಿನ್ನ ಅರ್ಥದ ಪ್ರತೀತಿಯು ಆಗುವದಿಲ್ಲ.

ಈ ರೀತಿಯಿಂದ ಯಾವ ಪದದಲ್ಲಿ ಯಾವ ಅರ್ಥದ ಶಕ್ತಿಯಿರುವದೋ ಆದೇಪದದಿಂದ ಅದೇ ಅರ್ಥದ ಪ್ರತೀತಿಯು ಆಗುವದು. ಅನ್ಯ ಅರ್ಥದ ಪ್ರತೀತಿಯು ಆಗುವದಿಲ್ಲ; ಈ ಕಾರಣದಿಂದ ವಾಚ್ಯವಾಚಕದ ಅತ್ಯಂತ ಭೇದದಲ್ಲಿ ದೋಷವಿಲ್ಲ. ಇದರ ಭೇದಸಹಿತ ಅಭೇದರೂಪ ತಾದಾತ್ಮ್ಯ ಸಂಬಂಧವು ಸಂಭವಿಸುವದಿಲ್ಲ.

---

||೪೨೫|| ಭೇದ, ಮತ್ತು ಅಭೇದವು ಪರಸ್ಪರ ವಿರೋಧಿಗಳಾಗಿರುವವು. ಇದರಂತೆ ಉಪಾದಾನ ಕಾರಣದ ಕಾರ್ಯದಿಂದ ಭೇದಸಹಿತ ಅಭೇದವಿಲ್ಲ. ೧ ಕೇವಲ ಭೇದವೇ ಇದೆ, ಕೇವಲ ಭೇದದಲ್ಲಿ ಯಾವ ದೋಷಗಳು ಹೇಳಲ್ಪಟ್ಟವೆಯೋ ಅವು ನೈಯಾಯಿಕ ಮತ್ತು ಶಕ್ತಿವಾದಿಗಳ ಮತದಲ್ಲಿ ಇಲ್ಲ. ಕಾರಣವೇನೆಂದರೆ, ಕಾರಣಕಾರ್ಯದ ಅತ್ಯಂತ ಭೇದದಲ್ಲಿ ಈ ದೋಷವಿದೆ: ಮೃತ್ಪಿಂಡದಿಂದ ಅತ್ಯಂತ ಭಿನ್ನಘಟದ ಉತ್ಪತ್ತಿಯು ಆಗಲು ಅತ್ಯಂತ ಭಿನ್ನ



ವಸ್ತ್ರದ ತೈಲದ ಉತ್ಪತ್ತಿಯು ಸಹಾ ಆಗಬೇಕು, ಮತ್ತು ಅತ್ಯಂತ ಭಿನ್ನವಸ್ತ್ರ ತೈಲೋತ್ಪತ್ತಿಯು ಆಗದೆ ಇದ್ದಲ್ಲಿ ಅತ್ಯಂತ ಭಿನ್ನವಾದ ಘಟೋತ್ಪತ್ತಿಯು ಸಹಾ ಮೃತ್ಪಿಂಡದಿಂದ ಆಗಬಾರದು.

೧. ಶಕ್ತಿವಾದಿ ಸಿದ್ಧಾಂತಿಗಳ ಮತದಲ್ಲಿ ಉಪಾದಾನಕಾರಣಕ್ಕೂ ಕಾರ್ಯಕ್ಕೂ ಕೇವಲ ಭೇದವಿಲ್ಲ. ಅನಿರ್ವಚನೀಯ ತಾದಾತ್ಮ್ಯವಿದೆ. ತಥಾಪಿ ಇಲ್ಲಿ ಕಾರ್ಯಕಾರಣದ ಕೇವಲಭೇದವು ಹೇಳಲ್ಪಟ್ಟಿದೆ. ಇದು ಪ್ರೌಢಿವಾದವು ಪ್ರೌಢಿ ಎಂದರೆ ತಮ್ಮ ಉತ್ಕರ್ಷದಸಲುವಾಗಿ ವಾದ ಅಂದರೆ ಕಥನವು. ಇದು ಪ್ರೌಢೀವಾದದ ಸ್ವರೂಪವು. ಇದರ ಲಕ್ಷಣವು ಹೀಗೆ,ಪ್ರತಿವಾದಿಯ ಉಕ್ತಿಯನ್ನು ಒಪ್ಪಿಕೊಂಡರೂ ಸಹ ಸ್ವಮತದಲ್ಲಿ ದೋಷದ ಪರಿಹಾರವನ್ನು ಮಾಡುವದಕ್ಕೆ ಪ್ರೌಢಿವಾದ ವೆನ್ನುತ್ತಾರೆ. ಇಲ್ಲಿ ಕಾರ್ಯಕಾರಣದ ಭೇದಪಕ್ಷದಲ್ಲಿ ಭಟ್ಟನು ದೋಷವನ್ನು ಹೇಳಿದ್ದನು. ಈ ಭಟ್ಟೋಕ್ತ ದೋಷಸಹಿತ ಪಕ್ಷವನ್ನು ಒಪ್ಪಿಕೊಂಡರೂ ಸಹ ಸ್ವಮತದ ದೋಷದ ಪರಿಹಾರಮಾಡಿರುತ್ತದೆ. ಈ ಕಾರಣದಿಂದ ಇದು ಪ್ರೌಢಿವಾದವು.

---

||೪೨೬|| ಈ ದೋಷವು ನೈಯಾಯಿಕ ಮತದಲ್ಲಿ ಇಲ್ಲ. ಕಾರಣವೇನೆಂದರೆ ಸರ್ವವಸ್ತುಗಳ ಉತ್ಪತ್ತಿಯಲ್ಲಿ ನೈಯಾಯಿಕರು ಪ್ರಾಗಭಾವವನ್ನು ಕಾರಣವೆಂದು ಒಪ್ಪಿಕೊಂಡಿರುವರು. ಘಟದ ಉತ್ಪತ್ತಿಯಲ್ಲಿ ದಂಡ,ಚಕ್ರ, ಕುಲಾಲ ಇವುಗಳೆಲ್ಲ ಕಾರಣಗಳಾಗಿರುವವು. ಇದರಂತೆ ಪ್ರಾಗಭಾವವು ಸರ್ವವಸ್ತುಗಳ ಉತ್ಪತ್ತಿಯಲ್ಲಿ ಕಾರಣ. (೧) ಈ ಘಟದಪ್ರಾಗಭಾವವು ಘಟದ ಉಪಾದಾನಕಾರಣವಾದ ಮೃತ್ಪಿಂಡದಲ್ಲಿ ಇರುವದು, ಅನ್ಯದರಲ್ಲಿ ಇರುವದಿಲ್ಲ. (೨) ತೈಲದ ಪ್ರಾಗಭಾವವು ತಿಲದಲ್ಲಿ ಇರುವದು, ಅನ್ಯದರಲ್ಲಿ ಇರುವದಿಲ್ಲ. ಹೀಗೆ ಸರ್ವಕಾರ್ಯಗಳ ಪ್ರಾಗಭಾವವು ತಮ್ಮತಮ್ಮ ಉಪಾದಾನಕಾರಣಗಳಲ್ಲಿ ಇರುವುದು, ಯಾವ ಪದಾರ್ಥದಲ್ಲಿ ಯಾವುದರ ಪ್ರಾಗಭಾವವು ಇರುವುದೋ, ಆ ಪದಾರ್ಥದಿಂದಲೇ ಅದರ ಉತ್ಪತ್ತಿಯಾಗುವದು, ಅನ್ಯದರ ಉತ್ಪತ್ತಿಯು ಆಗುವದಿಲ್ಲ. (೧) ಮೃತ್ಪಿಂಡದಲ್ಲಿ ಘಟದ ಪ್ರಾಗಭಾವವು ಇದೆ, ಆದುದರಿಂದ ಮೃತ್ಪಿಂಡದಿಂದ ಘಟದ ಉತ್ಪತ್ತಿಯು ಆಗುವದು, ತೈಲದ ಉತ್ಪತ್ತಿಯು ಇಲ್ಲ. ಮತ್ತು (೨) ತೈಲದ ಪ್ರಾಗಭಾವವು ತಿಲದಲ್ಲಿ ಇರುವದು. ಈ ಕಾರಣದಿಂದ ತಿಲದಿಂದ ತೈಲದ ಉತ್ಪತ್ತಿಯು ಆಗುವದೇ ಹೊರತು, ಘಟದ ಉತ್ಪತ್ತಿಯು ಆಗಲಾರದು.

ಹೀಗೆ ಸರ್ವಕಾರ್ಯದಲ್ಲಿಯೂ ಪ್ರಾಗಭಾವವು ಕಾರಣವಾಗಿದೆ. ಈ ಕಾರಣದಿಂದ ಕಾರಣ ಮತ್ತು ಕಾರ್ಯದ ಅತ್ಯಂತಭೇದವನ್ನು ಒಪ್ಪಿಕೊಳ್ಳುವದರಿಂದ ನೈಯಾಯಿಕ ಮತದಲ್ಲಿ ದೋಷವಿಲ್ಲ.

||೪೨೭|| ಸಾಮರ್ಥ್ಯರೂಪ ಶಕ್ತಿವಾದಿಗಳ ಮತದಲ್ಲಿ ದೋಷವ
ಕಾರಣವೇನೆಂದರೆ, ಮೃತ್ತಿಕಿತವಲ್ಲಿ ಘಟದ ಸಾಮರ್ಥ್ಯರೂಪ ಶಕ್ತಿಯು
ತೈಲದ್ದು ಇಲ್ಲ, ಮತ್ತು ತಿಲದಲ್ಲಿ ತೈಲದಸಾಮರ್ಥ್ಯವಿದೆ, ಘಟದ್ದು
ಈ ಕಾರಣದಿಂದ ಮೃತ್ಪಿಂಡದಿಂದ ಘಟದ ಉತ್ಪತ್ತಿಯೇ ಆಗುವದು, ತೈ
ಉತ್ಪತ್ತಿಯಾಗುವದಿಲ್ಲ. ಇದರಂತೆ ತಿಲದಿಂದ ತೈಲದ ಉತ್ಪತ್ತಿಯು
ವದೇ ಹೊರತು ಘಟದ ಉತ್ಪತ್ತಿಯಾಗುವದಿಲ್ಲ.

ಈರೀತಿಯಿಂದ ಉಪಾದಾನಕಾರಣದ ಮತ್ತು ಕಾರ್ಯದ
ಭೇದವನ್ನು ಒಪ್ಪಿಕೊಳ್ಳುವವರಲ್ಲಿ ದೋಷವಿಲ್ಲ. ಭೇದಾಭೇದವು
ತವು, ಮತ್ತು-

ಭೇದದಲ್ಲಿಯು ಅಭೇದದಲ್ಲಿಯೂ ಭಟ್ಟನು ಯಾವ ದೋಷ
ಹೇಳಿರುವನೋ ಈ ಎರಡೂ ಪಕ್ಷಗಳದೋಷವು ಭಟ್ಟಮತದಲ್ಲಿ
ವಾಗಿ ಇವೆ. ಕಾರಣವೇನೆಂದರೆ ಭಟ್ಟನು ಭೇದಸಹಿತ ಅಭೇದವನ್ನು
ಕರಿಸಿರುವನು. ಈಕಾರಣದಿಂದ ಕಾರಣ, ಮತ್ತು ಕಾರ್ಯದ, ಭೇದ
ಇದೆ. ಮತ್ತು ಅಭೇದವೂ ಇದೆ. ಎಂಬ ಅರ್ಥವು ಸಿದ್ಧವಾಯಿತು. (೧
ಭೇದವಿದೆ ಎಂಬ ಕಾರಣದಿಂದ ಭೇದಪಕ್ಷ ಉಕ್ತದೋಷವು ಆಗುವ
ಮತ್ತು (೨) ಅಭೇದವಿದೆ, ಎಂಬ ಕಾರಣದಿಂದ ಅಭೇದಪಕ್ಷ ಉಕ್ತದೋ
ವು ಆಗುವುದು. ಹೇಗೆ ಕಳವು ಮಾಡುವವನಿಗೆ ಕಳ್ಳನೆಂದೂ, ದ್ಯೂತ
ನ್ನಾಡುವವನಿಗೆ ಜೂಜುಗಾರನೆಂದೂ, ಈ ಎರಡೂ ವ್ಯಸನವುಳ್ಳವನಿಗೆ ಕ
ಮತ್ತು ಜೂಜುಗಾರ ಎಂಬ ಎರಡೂ ದೋಷಗಳುಂಟಾಗುವವೋ ಹಾ
ಗುಣ ಮತ್ತು ಗುಣಿ ಮೊದಲಾದವುಗಳ ಭೇದಾಭೇದವನ್ನು ಒಪ್ಪಿಕೊ
ಪಕ್ಷದಲ್ಲಿ ಭೇದ ಪಕ್ಷ ಮತ್ತು ಅಭೇದಪಕ್ಷ ಈ ಎರಡೂ ಪಕ್ಷಗಳು
ವುವು. ಮತ್ತು-ಶಕ್ತಿವಾದಿಗಳ ಮತದಲ್ಲಿ ಕೇವಲಭೇದವನ್ನು ಅಂಗೀಕಾ
ಮಾಡುವದರಿಂದ ದೋಷವಿಲ್ಲ. ಕಾರಣವೇನೆಂದರೆ-ಗುಣಿಯಲ್ಲಿ ಗುಣಧಾ
ರಣಮಾಡುವಶಕ್ತಿಯಿದೆ, ಅನ್ಯಶಕ್ತಿಯಿಲ್ಲ. ಈ ಕಾರಣದಿಂದ ಭೇದಪಕ್ಷ
ಯಾವದೋಷವನ್ನುಹೇಳಿದ್ದೆವೋ ಈ ದೋಷವು ಶಕ್ತಿಯ ಅಂಗೀಕಾರ
ಡದೆ ಇದ್ದವರ ಮತದಲ್ಲಿದೆ. ಘಟದ ರೂಪಾದಿಗಳು ಘಟದಿಂದ ಭಿನ್ನವಾಗಿ
ಇವರಂತೆ ಪಟಾದಿಗಳು ಸಹ ಘಟದಿಂದ ಭಿನ್ನವಿವೆ. ರೂಪಾದಿಗಳಂತೆ ಪಟಾ
ದಿಗಳು ಸಹ ಘಟದಲ್ಲಿ ಇರಲಿಕ್ಕೆಬೇಕು, ಅಥವಾ ಪಟಾದಿಗಳಂತೆ ರೂಪಾ
ದಿಗಳು ಸಹಾ ಇರಲಿಕ್ಕೆಬೇಕು.

ಶಕ್ತಿವಾದಿಗಳ ಮತದಲ್ಲಿ ಕೇವಲ ಭೇದವನ್ನು ಒಪ್ಪಿಕೊಂಡ
ದೋಷವಿಲ್ಲ ಇದಕ್ಕೆ ವಿಪರೀತವಾಗಿ (೧) ಭಟ್ಟಮತದಲ್ಲಿ ಭೇದ



ವ ಈ ಎರಡನ್ನೂ ಒಪ್ಪಿಕೊಂಡಲ್ಲಿ ಉಭಯಪಕ್ಷದ ದೃಷ್ಟಾಂತದಿಂದ
ದೋಷವಿದೆ. ಮತ್ತು (೨) ಭೇದಾ ಭೇದವುವಿರೋಧಿ ಧರ್ಮದ ಅಸಂಭವ
ದೋಷವು. ಇದರಂತೆ ಜಾತಿವ್ಯಕ್ತಿಯು, ಮತ್ತು ಕ್ರಿಯೆಯು ಕರ್ತೃವಿನ ಕೇ
ಭೇದವು ಇದೆ. ತಥಾಪಿ ವ್ಯಕ್ತಿಯಲ್ಲಿ ಜಾತಿಯ ಧಾರಣಮಾಡುವ ಶಕ್ತಿ
ದೆ. ಮತ್ತು ಕರ್ತೃವಿನಲ್ಲಿ ಕ್ರಿಯಾಧಾರಣಮಾಡುವ ಶಕ್ತಿ ಯಿದೆ, ಅನ್ಯ
ಧಾರಣಾಶಕ್ತಿಯು ಇಲ್ಲ.

ಈಪ್ರಕಾರದಿಂದಉಪಾದಾನ ಮತ್ತು ಕಾರ್ಯದ, ಹಾಗೆಯೇ ಗು
ಮತ್ತು ಗುಣಿ ಮೊದಲಾದವುಗಳ ಭೇದಾಭೇದರೂಪತಾದಾತ್ಮ್ಯಸಂಬಂ
ವು ಅಸಂಗತವು,

ಸರ್ವಗಳ ಪರಸ್ಪರ ಭೇದವನ್ನು ಅಂಗೀಕರಿಸುವದರಿಂದ ಭಟ್ಟೋಕ
ದೋಷಕ್ಕೆ ಶಕ್ತಿಯು ಗ್ರಾಸಮಾಡುತ್ತದೆ.

ಯದ್ಯಪಿ ವೇದಾಂತ ಸಿದ್ಧಾಂತದಲ್ಲಿ ಸಹ ಕಾರ್ಯ ಮತ್ತು ಕಾರಣ,
ಗುಣ ಮತ್ತು ಗುಣಿ, ಕರ್ಮ ಮತ್ತು ಕರ್ತೃ, ಜಾತಿ ಮತ್ತು ವ್ಯಕ್ತಿ,
ಇವುಗಳ ಅತ್ಯಂತಭೇದವಿಲ್ಲ; ಆದರೆ ತಾದಾತ್ಮ್ಯಸಂಬಂಧ ಅಂಗೀಕಾರಮಾಡಿ
ರುತ್ತದೆ. ತಥಾಪಿ ವೇದಾಂತಮತದಲ್ಲಿ ಭೇದಾಭೇದರೂಪ ತಾದಾತ್ಮ್ಯವಿಲ್ಲ.
ಆದರೆ ಭೇದ ಮತ್ತು ಅಭೇದದಿಂದ ವಿಲಕ್ಷಣವಾದ ಅನಿರ್ವಚನೀಯರೂಪ
ತಾದಾತ್ಮ್ಯಸಂಬಂಧವಿದೆ. (೧) ಭೇದದಿಂದ ವಿಲಕ್ಷಣವು. ಈಕಾರಣದಿಂದ
ಅಭೇದಪಕ್ಷದ ದೋಷವಿಲ್ಲ. ಮತ್ತು (೨) ಅಭೇದದಿಂದ ವಿಲಕ್ಷಣವು. ಈ
ಕಾರಣದಿಂದ ಭೇದಪಕ್ಷದ ದೋಷವಿಲ್ಲ.

ಈರೀತಿಯಿಂದ ಭೇದಾಭೇದದಿಂದ ವಿಲಕ್ಷಣ ಅನಿರ್ವಚನೀಯ ತಾ

೧

ದಾತ್ಮ್ಯ ಸಂಬಂಧವಿದೆ.

ಪರಂತು ಭೇದಾಭೇದರೂಪ ತಾದಾತ್ಮ್ಯವು ಅಸಂಗತವು. ಇದರಿಂದ
ವಾಚಕವಾಚ್ಯದ ಭೇದಾಭೇದರೂಪ ತಾದಾತ್ಮ್ಯಸಂಬಂಧವೇಶಕ್ತಿಯೂಗಿದೆ;
ಎಂಬ ಭಟ್ಟ ಅನುಸಾರಿಯ ಪಕ್ಷವು ಸಮಾಧಾನಕರವಲ್ಲ. ಆದರೆ ಪದಶ್ರವ
ಣದಿಂದಲೇ ಅರ್ಥಜ್ಞಾನವನ್ನುಂಟು ಮಾಡತಕ್ಕ ಪದದಲ್ಲಿಯ ಸಾಮರ್ಥ್ಯ
ವೇ ಪದದಲ್ಲಿ ಶಕ್ತಿ ಯಾಗಿದೆ.

ಟಿಪ್ಪಣಿ—(೧) ಯದ್ಯಪಿ ಎಲ್ಲಿ ಕೇವಲಭೇದವಿದೆಯೋ, ಅಲ್ಲಿ ತಾದಾತ್ಮ್ಯಉಂಟಾ
ಗುವುದಿಲ್ಲ. ಕಾರಣವೇನೆಂದರೆಅಭೇದಪ್ರತೀತಿಯುವಿಷಯದ ಸಾಮಾನ್ಯ ಸಹ
ತಾದಾತ್ಮ್ಯವೆಂದಿರುವುದು ಈಕಾರಣದಿಂದ ಕೇವಲಭೇದವೇ ಆದರೆಅಭೇದಪ್ರ
ತೀತಿಯುಸಂಭವಿಸುವುದಿಲ್ಲ. ಈ ಕಾರಣದಿಂದ ತಾದಾತ್ಮ್ಯಸಂಬಂಧದಲ್ಲಿಭೇದದ

ಅಪೇಕ್ಷೆಯು ಇದೆ. ಮತ್ತು ಎಲ್ಲಿ ಕೇವಲ ಅಭೇದವುಂಟಾಗುವದೋ ಬಾಧವಾಗುವುದಿಲ್ಲ, ಕಾರಣವೇನೆಂದರೆ ಎರಡು ಪದಾರ್ಥಗಳಲ್ಲಿ ಸಂಭವಿಸುತ್ತದೆ. ತನ್ನ ಸ್ವರೂಪದಿಂದ ತನ್ನ ಸಂಬಂಧವು ಸಂಭವಿಸುವ ರಿಂದ ಸರ್ವ ಸಂಬಂಧಗಳಲ್ಲಿ ಭೇದದ ಅಪೇಕ್ಷೆಯು ಇದೆ. ಅದ್ದರಿಂದ ತಾದಾತ್ಮ್ಯವು ಸಹ ಸಂಬಂಧವು. ಈ ಕಾರಣದಿಂದ ಅದರಲ್ಲಿ ಸಹ ಭೇದದ ಅಪೇಕ್ಷೆ ಇದೆ. ಈರೀತಿಯಿಂದ ಭೇದ ಅಭೇದಗಳ ಹೊರತು ತಾದಾತ್ಮ್ಯ ಸಂಬಂಧ ಟಾಗುವುದಿಲ್ಲ. ಮತ್ತು ಭೇದ ಅಭೇದಗಳು ಒಂದೇಸ್ಥಳದಲ್ಲಿ ಇರುವುದು ಭವವು. ತಥಾಪಿ ಇಲ್ಲಿ ಕಲ್ಪಿತ ಭೇದಸಹಿತ ನಿಜ ಅಭೇದದ ನಾಮವು ತಾದಾ ತ್ಮ್ಯಸಂಬಂಧವು, ಮತ್ತು ಇಲ್ಲಿ ಭೇದ ಅಭೇದದಿಂದ ವಿಲಕ್ಷಣ ತಾದಾತ್ಮ್ಯ ಹೇಳಲ್ಪಟ್ಟದೆ. ಅದರ ಅಭಿಪ್ರಾಯವು ಹೀಗೆ ಇದೆ. ೧. ಭೇದದಿಂದ ವಿಲ ಣವನ್ನು ಹೇಳಿದ್ದರಿಂದ ನಿಜಭೇದದಿಂದ ರಹಿತ್ಯವನ್ನು ಹೇಳಿದಂತಾಯಿತು. ಕಾರಣದಿಂದ ಕಲ್ಪಿತಭೇದಸಹಿತನೆಂದು ತಿಳಿದರು. ಮತ್ತು ೨. ಅಭೇದದಿಂದ ವಿಲಕ್ಷಣವೆಂದು ಹೇಳಿದ್ದರಿಂದ ಅಭೇದದಿಂದ ರಹಿತವನ್ನು ಹೇಳಿದಂತಾಯಿತು. ಇದರಿಂದ ನಿಜ ಅಭೇದವೆಂದು ತಿಳಿದರು.

ಈರೀತಿಯಿಂದ ಸಿದ್ಧಾಂತದಲ್ಲಿ ಕಲ್ಪಿತಭೇದಸಹಿತ ವಾಸ್ತವ ಅಭೇದವು ತಾದಾ ತ್ಮ್ಯಸಂಬಂಧವೆಂದು ಹೇಳಿದರು. ಇದಕ್ಕೇ ಅನಿರ್ವಚನೀಯ ತಾದಾತ್ಮ್ಯ ಸಂಬಂಧವೆನ್ನುತ್ತಾರೆ.

---

||೪೨೮|| ಶಕ್ಯದ ಲಕ್ಷಣವು

ಲಕ್ಷಣದ ಜ್ಞಾನದಲ್ಲಿ ಶಕ್ಯದ ಜ್ಞಾನವು ಉಪಯೋಗವಿದೆ. ಕಾರಣ ವೇನೆಂದರೆ ಶಕ್ಯಸಂಬಂಧವು ಲಕ್ಷಣದ ಸ್ವರೂಪವು. ಶಕ್ಯವನ್ನು ತಿಳಿಯದ ಹೊರತು ಶಕ್ಯಸಂಬಂಧರೂಪ ಲಕ್ಷಣದಜ್ಞಾನವು ಆಗುವುದಿಲ್ಲ. ಈ ಕಾರಣ ದಿಂದ ಶಕ್ಯದ ಲಕ್ಷಣವನ್ನು ಹೇಳುವೆನು.

|| ದೋಹಾ ||

ಹ್ವೈ ಪದಮ್ವೈ ಜಾ ಅರ್ಥಕೀ । ಸಕ್ತಿ ಸಕ್ಯ ಸೊ ಜಾನಿ॥
ವಾಚ್ಯ ಅರ್ಥ ಪುನಿ ಕಹತ ತಿಹಿ। ವಾಚಕ ಪದಹಿ ಪಿಛಾನಿ॥೩೯

ಟೀಕಾ—ಯಾವ ಪದದಲ್ಲಿ ಯಾವ ಅರ್ಥದ ಶಕ್ತಿಯಿದೆಯೋ ಆ

ಆ ಅರ್ಥವು ಶಕ್ಯವೆಂದು ತಿಳಿಯಬೇಕು. ಮತ್ತು ಶಕ್ಯ ಅರ್ಥಕ್ಕೇ ವಾಚ್ಯ ಅರ್ಥವೆಂದೂ ಎನ್ನಬೇಕು.

ಅಗ್ನಿಪದದಲ್ಲಿ ಬೆಂಕಿ ಎಂಬರೂಪ ಅರ್ಥದ ಶಕ್ತಿಯು ಇದೆ. ಈ ಕಾರ ಣದಿಂದ ಅಗ್ನಿ ಪದಕ್ಕೆ ಬೆಂಕಿ ಎಂಬಪದವು ಶಕ್ಯಅರ್ಥ ಮತ್ತು ವಾಚ್ಯಅರ್ಥ



ತ್ತಾರೆ. ಮತ್ತು, ವಾಚ್ಯಅರ್ಥದ ಬೋಧಕ ಪದಕ್ಕೆ ವಾಚಕವೆನ್ನು

—(೧) ಇದಕ್ಕೆ ಅಭಿಧೇಯ ಅರ್ಥ ಮತ್ತು ಮುಖ್ಯ ಅರ್ಥವೆಂದೂ ಎನ್ನುತ್ತಾರೆ.

---

೪೨೯|| ಲಕ್ಷ್ಯ ಅರ್ಥ ಮತ್ತು ಲಕ್ಷಣದ ಸಾಮಾನ್ಯರೂಪವು॥
॥ ಲಕ್ಷಣಾ ಮತ್ತು ಜಹತ್ಯಾದಿಕ ಭೇದ ಲಕ್ಷಣಗಳು ॥

|| ಕವಿತ್ವ ||

ಶಕ್ಯಕೊ ಸಂಬಂಧ ಜೊಸ್ವರೂಪ ಜಾನಿ ಲಚ್ಛನಕೊ।
ಲಚ್ಛನಾ ಸೊ ಭಾನ ಜಾಕೊ ಲಚ್ಛ ಸು ಪಿಛಾನಿಯೆ ॥
ವಾಚ್ಯ ಅರ್ಥಸಾರೊ ತ್ಯಾಗಿ ವಾಚ್ಯಕೊ ಸಂಬಂಧ ಜಹಾ
ಹೊಈ ಪರತೀತಿ ತಹಾ ಜಹತೀ ಬಖಾನಿಯೆ
ವಾಚ್ಯಜೂತವಾಚ್ಯಕೆಸಂಬಂಧೀಕಾ ಜುಜ್ಞಾನಹೋಯ।
ತಾಂಹಿ ಠಾರ ಲಚ್ಛನಾ ಅಜಹತೀಹಿ ಮಾನಿಯೆ॥
ಏಕ ವಾಚ್ಯ ಭಾಗ ತ್ಯಾಗ ಹೋತ ತಹಾ ಭಾಗ ತ್ಯಾಗ ।
ದೂಜೊ ನಾಮ ಜಹತೀ ಅಜಹತೀ ಪ್ರಮಾನಿಯೆ॥೩೫॥

ಟೀಕಾ—ಶಕ್ಯ ಅಂದರೆ ವಾಚ್ಯಾರ್ಥವು. ಇವರಸಂಬಂಧವೆಂದರೆ ಸಂ ಯೋಗವು. ಈ ಲಕ್ಷಣದ ಸ್ವರೂಪ ಎಂದರೆ ಲಕ್ಷಣವನ್ನು ತಿಳಿ. ಮತ್ತು ಯಾವ ಅರ್ಥದ ಪದದ ಶಕ್ತಿಯಿಂದ ಜ್ಞಾನವಾಗುವದಿಲ್ಲವೊ, ಆದ ಲಕ್ಷಣದಿಂದ ಭಾನ ಅಂದರೆ ಜ್ಞಾನವಾಗುವದೊ ಇದು ಪದದ ಲಕ್ಷ್ಯಅರ್ಥ ವೆನ್ನಬೇಕು.

ಒಂದು ಪಾದದಿಂದ ಲಕ್ಷಣದ ಸ್ವರೂಪವನ್ನು ಹೇಳಿದೆ.

---

೪೩೦ ||೧ ಜಹತಿ ೨ ಅಜಹತಿ ಮತ್ತು ೩ ಭಾಗ ತ್ಯಾಗ ಲಕ್ಷ ಣದ ಲಕ್ಷಣವು ||೪೩೦—೪೩೨||

ಲಕ್ಷಣದ ಜಹತಿ ಮೊದಲಾದ ಮೂರು ಭೇದಗಳ ಲಕ್ಷಣವನ್ನು ಒಂ ದು ಪಾದದಿಂದ ಹೇಳಿದೆ " ವಾಚ್ಯ " ಇತ್ಯಾದಿಯಿಂದ.

೧ ಪದದ ವಾಚ್ಯಾರ್ಥವನ್ನು ಸಂಪೂರ್ಣ ತ್ಯಾಗಮಾಡಿ, ವಾಚ್ಯಅರ್ಥ ದ ಸಂಬಂಧದ ಪ್ರತೀತಿಯಾಗುತ್ತದೆ. ಇದಕ್ಕೆ ಜಹತಿ ಲಕ್ಷಣವೆನ್ನಬೇಕು. ಇದಕ್ಕೆ ಉದಾಹರಣೆ " ಗಂಗಾದಲ್ಲಿ ಗ್ರಾಮವಿದೆ. " ಎಂಬ ವಾಕ್ಯದಲ್ಲಿ

ತೀರವಲ್ಲಿ ಗಂಗಾಪದದ ಜಹತಿ ಲಕ್ಷಣವಿದೆ. ಕಾರಣವೇನಂದರೆ ಗಂಗಾ ಪದದ ವಾಚ್ಯ ಅರ್ಥವು ದೇವನದಿಯ ಪ್ರವಾಹದಲ್ಲಿ ಎಂದು ಇದೆ. ಪ್ರವಾಹ ದಲ್ಲಿ ಗ್ರಾಮದ ಇರುವಿಕೆಯು ಅಸಂಭವವು. ಆದ್ದರಿಂದ ಸರ್ವವಾಚ್ಯಾರ್ಥ ವನ್ನು ಬಿಟ್ಟು, ತೀರದಲ್ಲಿ ಗಂಗಾಪದದ ಜಹಲ್ಲಕ್ಷಣೆ ವನ್ನು ತಿಳಿಯತಕ್ಕದ್ದು. ವಾಚ್ಯದ ಸಂಬಂಧದ ನಾಮವು ಲಕ್ಷಣೆ ಇದೆ. ಈ ಸ್ಥಾನದಲ್ಲಿ ಗಂಗಾಪದದ ವಾಚ್ಯ ಅರ್ಥವಾದ ಪ್ರವಾಹವು ತೀರ ದೊಡನೆ ಸಂಯೋಗ ಸಂಬಂಧವಿದೆ. ಈ ಕಾರಣದಿಂದ (೧)ಗಂಗಾಪದದ ವಾಚ್ಯಾರ್ಥವಾದ ತೀರದಿಂದ ಸಂಬಂಧವು ಇದು ಲಕ್ಷಣೆ ಇದೆ. ಮತ್ತು ಸರ್ವವಾಚ್ಯದ ತ್ಯಾಗವಿರುವದರಿಂದ ಜಹತ್ ಲಕ್ಷಣಾ ಎನ್ನಬೇಕು.

ಟಿಪ್ಪಣಿ---[೧]ಜಹತಿಲಕ್ಷಣದಸುಗಮ ಉದಾಹರಣೆಯು ಕೆಳಗೆಹೇಳಿದಂತೆ ಇದ್ದು. ಒಬ್ಬಪುರುಷನುತನ್ನ ತಂದೆಯು ಪರದೇಶದಲ್ಲಿ ಇರುವಾಗ ತನ್ನ ವಿವಾಹ ನಿಶ್ಚಯವಾಗಲು, ಅವನು ತನ್ನ ವಿವಾಹದುದ್ದೇಶ್ಯವಾಗಿ ಪಿತೃವ್ಯನನ್ನೂ ಇತರ ಆಪ್ತೇಷ್ಟರನ್ನೂ ಕರೆದುಕೊಂಡು ಹೋದನು. ಆ ಸಮಾರಂಭದಲ್ಲಿ ವಸ್ತ್ರ ಗಳ ಉಡುಗರೆಯನ್ನು ಕೊಡುವ ಸಮಯದಲ್ಲಿ ಒಬ್ಬನು ಎಂದದ್ದೇನಂದರೆ ವರಪಿತನಿಗೆ ಉಡುಗರೆಯನ್ನು ಕೊಡಿರಿ,, ಎಂದನು. ಈವಾಕ್ಯದಲ್ಲಿ ಪಿತೃಶಬ್ದದ ಶಕ್ಯಾರ್ಥವು ವರನಪಿತನು ಎಂದು ಇದ್ದು, ಅವನು ಅಲ್ಲಿ ವಿದ್ಯಮಾನ ನಿರುವದಿಲ್ಲದರಿಂದ ಜನಕರೂಪ ಶಕ್ಯಾರ್ಥದಲ್ಲಿ ವಕ್ತೃವಿನ ತಾತ್ಪರ್ಯವು ಸಂಭವಿಸುವುದಿಲ್ಲ. ಆದರೆ ಪಿತೃಶಬ್ದದಶಕ್ಯಾರ್ಥವಾದ ಜನಕನನ್ನು ಬಿಟ್ಟು ಅವನ ಸಂಬಂಧಿಯಾದಪಿತೃವ್ಯನೆಂಬುದನ್ನು ಗ್ರಹಣಮಾಡಬೇಕಾಗುತ್ತದೆ. ಇದು ಜಹತಿ ಲಕ್ಷಣವಿದೆ.

ಇಲ್ಲಿ ಜನಕರೂಪ ಶಕ್ಯಅರ್ಥದ ಸಂಬಂಧವು ಪಿತೃವ್ಯನಿಂದ ಸಹೋದರನಾದ ಬಂದದ್ದು. ಇದು ಲಕ್ಷಣಾ ಇದೆ. ಈಲಕ್ಷಣದಿಂದ ತಿಳಿಯಲ್ಪಟ್ಟ ಪಿತೃವ್ಯ ರೂಪ ಅರ್ಥವೇ ಪಿತೃಶಬ್ದದ ಲಕ್ಷ್ಯವು.

ಅಥವಾ ಒಬ್ಬನೊಬ್ಬನು ಎಂದದ್ದೇನಂದರೆ-" ಕೂಪವು ಜಲಿಸುತ್ತದೆ.,, ಇಲ್ಲಿ ಕೂಪಶಬ್ದದ ಶಕ್ಯಅರ್ಥ ಜಲಪೂರಿತ ಆಳವಾದ ತೆಗ್ಗು ಎಂದು ಆಗುತ್ತದೆ. ಆದರಲ್ಲಿ ಜಲನರೂಪ ಕ್ರಿಯೆಯ ಅಭಾವದಿಂದ ವಕ್ತೃವಿನ ತಾತ್ಪರ್ಯವು ಸಂಭವಿಸುವದಿಲ್ಲ. ಆದರೆ ಕೂಪಸಂಬಂಧಿ ಎರಡು ಎತ್ತುಗಳಿಂದ ಸಹಿತವಾದ ಜಲ ಪಾತ್ರೆ [ಮೊಟ್ಟೆ]ಯಲ್ಲಿ ವಕ್ತೃವಿನ ತಾತ್ಪರ್ಯವಿದೆ. ಆದರಿಂದ ಕೂಪಶಬ್ದದ ಸ್ವಶಕ್ಯ[ವಾಚ್ಯ]ದತ್ಯಾಗಮಾಡಿ ಅದರಸಂಬಂಧಿಯಾದ ಎರಡು ಎತ್ತುಗಳ ಮೊಟ್ಟೆಯುಗ್ರಹಿಸಲ್ಪಡಬೇಕು. ಇದರಿಂದ ಜಹತಿಲಕ್ಷಣಾ ಇದೆ, ಇದರಂತೆಯೇ ' ಮಾರ್ಗಜಲಿಸುತ್ತದೆ; ಮತ್ತು "ಒಲೆಯು ಉರಿಯುತ್ತದೆ., ಇತ್ಯಾದಿ ವಾಕ್ಯಗಳಲ್ಲಿ ಸಹ ಜಹತಿ ಲಕ್ಷಣವನ್ನು ತಿಳಿಯಬೇಕು;



ಜಹತಿಲಕ್ಷಣದ ಉಪಯೋಗವನ್ನು ಒಬ್ಬಗ್ರಂಥಕಾರನು ಸಿದ್ಧಾಂತದಲ್ಲಿ ಕೆಳಗೆ ಉಲ್ಲೇಖಿಸಿದ ರೀತಿಯಿಂದ ತೋರಿಸಿದ್ದಾನೆ- ,,ಸರ್ವಂ ಖಲ್ವಿದಂ ಬ್ರಹ್ಮ,, ಈ ಸರ್ವ ಜಗತ್ತು ನಿಶ್ಚಯವಾಗ ಬ್ರಹ್ಮವಿದೆ,, ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಸರ್ವಜಗತ್ತಿನ ಬ್ರಹ್ಮರೂಪವನ್ನು ಹೇಳಿದೆ. ಇದರಲ್ಲಿ ಅನಿತ್ಯತ್ವ,ದೃಶ್ಯತ್ವ,ವಿಕಾರತ್ವ ಜಡತ್ವ,ದುಃಖರೂಪತ್ವ ಮೊದಲಾದ ವಿಪರೀತಧರ್ಮಸಹಿತನಾಮರೂಪವುಳ್ಳ ಜಗತ್ತನ್ನು ನಿತ್ಯದ್ರಷ್ಟ,ಅವಿಕಾರಿ, ಚೇತನ, ಆನಂದಾದಿಸ್ವರೂಪವುಳ್ಳ ಬ್ರಹ್ಮ ಎಂದುಹೇಳುವದು ವಿರುದ್ಧವು. ಇದರಲ್ಲಿ ಶ್ರುತಿವಾಕ್ಯಗಳ ತಾತ್ಪರ್ಯವು ಸಂಭವಿಸುವುದಿಲ್ಲ. ಆದರೆಬಾಧಸಾಮಾನಾಧಿಕರಣ್ಯದರೀತಿಯಿಂದನಾಮರೂಪದ ಬಾಧೆಮಾಡಿ,ಅವಶೇಷವಾದ ಆದರ ಸಂಬಂಧಿಯಾದ ಅಧಿಷ್ಠಾನಚೇತನವು ಬ್ರಹ್ಮವು; ಈಅರ್ಥದಲ್ಲಿ ಶ್ರುತಿವಾಕ್ಯಗಳ ತಾತ್ಪರ್ಯವು ಈಕಾರಣದಿಂದ ಇಲ್ಲಿ ಸರ್ವಶಬ್ದದ ವಾಚ್ಯದ ನಾಮರೂಪ ಜಗತ್ತು, ಈಸರ್ವದರ ತ್ಯಾಗ ಮಾಡಿ ಇವುಗಳ ಸಂಬಂಧಿಯಾದಅಸ್ತಿಭಾತಿ ಪ್ರಿಯರೂಪಅಧಿಷ್ಠಾನದಬ್ರಹ್ಮರೂಪದಿಂದ ಗ್ರಹಣವಿದೆ, ಈಕಾರಣದಿಂದ ಜಹತಿಲಕ್ಷಣಾ ಇದೆ. ಇಲ್ಲಿಆರೋಪಿತ ನಾಮರೂಪದ ತಾದಾತ್ಮ್ಯಸಂಬಂಧವು ತನ್ನ ಅಧಿಷ್ಠಾನಚೇತನದಿಂದ ಇದೆ. ಇದು ಲಕ್ಷಣವು. ಮತ್ತು ಇದರಿಂದ ತಿಳಿಯಲ್ಪಟ್ಟ ಅಧಿಷ್ಠಾನ ಚೇತನವೇ ಲಕ್ಷ್ಯ ಅರ್ಥವು ಮತ್ತು.

ಮುಖ್ಯಸಿದ್ಧಾಂತದಲ್ಲಿ ಅಧಿಷ್ಠಾನವನ್ನು ಬಿಟ್ಟು ಆರೋಪಿತದಪ್ರತೀತಿಯು ಆಗುವವುದಿಲ್ಲ ಆದರೆ ಅಧಿಷ್ಠಾನದಿಂದ ಅಭಿನ್ನವಾಗಿ ಆರೋಪಿತದಪ್ರತೀತಿಯುಆಗುವದು.ಅದರಿಂದ ಅಸ್ತಿಭಾತಿ ಪ್ರಿಯಸಹಿತ ನಾಮರೂಪಸರ್ವಶಬ್ದದ ಇಲ್ಲವೆಜಗತ್‌ಶಬ್ದದ ವಾಚ್ಯ ಅರ್ಥವಾಗಿದೆ, ಇದರೊಳಗಿಂದ ನಾಮರೂಪಭಾಗದ ತ್ಯಾಗ ಮಾಡಿಅವಶೇಷವುಳಿದ ಅಸ್ತಿಭಾತಿ ಪ್ರಿಯರೂಪ ಅಧಿಷ್ಠಾನಭಾಗವು ಬ್ರಹ್ಮವು.ಹೀಗೆ ಉಕ್ತಶ್ರುತಿವಾಕ್ಯಗತ ಸರ್ವಪದಗಳಲ್ಲಿಭಾಗತ್ಯಾಗ ಲಕ್ಷಣೆಯುತಿಳಿಯಲ್ಪಟ್ಟಿದೆ. ಈರೀತಿಯಿದ ಜಹತಿಲಕ್ಷಣದ ಉದಾಹರಣೆಯನ್ನು ಹೇಳಿದೆ.

---

‖ ೪೩೧ ೨ "ವಾಚ್ಯ ಜೂತ" ಇತ್ಯಾದಿ ತೃತೀಯಪಾದದಿಂದಅಜಹತಿ ಲಕ್ಷಣವನ್ನು ತೋರಿಸಿರುವದು.

ವಾಚ್ಯಜೂತ ಅಂದರೆ ವಾಚ್ಯ ಅರ್ಥ ಸಹಿತ ವಾಚ್ಯದ ಸಂಬಂಧಿಯ ಜ್ಞಾನ ಪದದಿಂದ ಜ್ಞಾನವಾಗುವುದೋ ಆಪದದಲ್ಲಿ ಅಜಹತಿ ಲಕ್ಷಣವನ್ನು ತಿಳಿಯಬೇಕು.

ಅದಕ್ಕೆ ಉದಾಹರಣೆ—"ಶೋಣ ಧಾವತಿ" ಇಲ್ಲಿ ಶೋಣಪದದ ರಕ್ತವರ್ಣದ ಅಶ್ವದಲ್ಲಿ ಅಜಹತ್ ಲಕ್ಷಣವಿದೆ. ಕಾರಣವೇನಂದರೆ ಶೋಣ ಶಬ್ದವಾಚ್ಯವು ರಕ್ತವರ್ಣಕ್ಕೆ ಇದೆ. ಅದರಿಂದ ಶೋಣಪದದ ವಾಚ್ಯವುರಕ್ತ ವರ್ಣವು. ಈ ಕೇವಲ ರಕ್ತವರ್ಣದಲ್ಲಿ ಧಾವಿಸುವ ಶಕ್ತಿಯು ಅಸಂಭವವು

ಈ ಕಾರಣದಿಂದ ಶೋಣಪದದ ವಾಚ್ಯವಾದ ರಕ್ತವರ್ಣದ ಅಶ್ವನಲ್ಲಿ ಶೋಣಪದದ ಅಜಹತಿ ಲಕ್ಷಣವಿದೆ.

ಮತ್ತು ರಕ್ತತೆಯು ರೂಪದ ಭೇದವನ್ನುಂಟುಮಾಡುವುದರಿಂದ ಗುಣವು ಈ ಕಾರಣದಿಂದ ಗುಣದ ಮತ್ತು ಗುಣಿಯು ತಾದಾತ್ಮ್ಯ ಸಂಬಂಧವನ್ನು ... ತ್ತಾರೆ. ೧ ಶೋಣಪದದ ವಾಚ್ಯವಾದ ರಕ್ತಗುಣಕ್ಕೂ ಅದರ ಗುಣಿಯಾದ ಅಶ್ವಕ್ಕೂ ತಾದಾತ್ಮ್ಯ ಸಂಬಂಧವು. ಇದು ಲಕ್ಷಣಾ ಅದೆ. ಮತ್ತು

(೨) ವಾಚ್ಯದ ತ್ಯಾಗವಿಲ್ಲದೆ, ಅಧಿಕ ಗ್ರಹಣವಿದೆ. ಈ ಕಾರಣದಿಂದ ಅಜಹತಿ ಲಕ್ಷಣವು

---

ಟಿಪ್ಪಣಿ—(೧) ಜಹತಿ ಲಕ್ಷಣದ ಉದಾಹರಣೆಯು-- ೧ "ಕಾಕೇಭ್ಯೋ ದಧಿ ರಕ್ಷ್ಯತಾಂ" (ಸೂರಜುಗಳ ನಿವಾರಣಾರ್ಥವಾಗಿ ಬಿಸಿಲಿನಲ್ಲಿ ದಧಿಯನ್ನಿಟ್ಟು ಅಲ್ಲಿ ಒಬ್ಬ ಸೇವಕನನ್ನು ಕೂಡಿಸಿ ಸ್ವಾಮಿಯು ಹೇಳಿದ್ದೇನೆಂದರೆ, ಕಾಕಗದಳಿಂದ ದಧಿಯನ್ನು ರಕ್ಷಿಸಬೇಕು" ಈ ವಾಕ್ಯದಲ್ಲಿ ಕಾಕಪದದ ವಾಚ್ಯವಾದ ಪಕ್ಷಿ. ಕೇವಲ ಇದರಿಂದಲೇ ದಧಿಯ ರಕ್ಷಣೆಯಲ್ಲಿ ಅಪ್ಪಣೆಮಾಡುವವನ ತಾತ್ಪರ್ಯವಿಲ್ಲ. ಆದರೆ ದಧಿಯನ್ನು ಭಕ್ಷಣಮಾಡತಕ್ಕವಾಯಸಗಳಿದಲೂ ಮಾರ್ಜಾಲಾದಿಗಳಿಂದಲೂ ಸಹಾ ದಧಿಯನ್ನು ರಕ್ಷಿಸಬೇಕೆಂಬ ಉದ್ದೇಶವಿರುತ್ತದೆ. ಅದರಿಂದ ಕಾಕಪದದ ವಾಚ್ಯವಾದ ವಾಯಸಪಕ್ಷಿಗೆ ಇದರ ಬಿಡಲಾದಿಗಳೊಡನೆ ಇರುವ ಸಜಾತೀಯ ಸಂಬಂಧವು ಲಕ್ಷಣೇ ಇದೆ. ಮತ್ತು ವಾಚ್ಯದ ತ್ಯಾಗವಿಲ್ಲ. ಅಧಿಕ ಗ್ರಹಣವಿದೆ. ಅದರಿಂದ ಅಜಹತಿಲಕ್ಷಣವು.

೨. ಇರುತೆಹೊಲದ ರಕ್ಷಣೆಯ ನಿಮಿತ್ತ ಮಂಚಿಕೆಯ ಮೇಲೆ ಕುಳಿತ ಪುರುಷನು ಪಕ್ಷಿಗಳನ್ನು ಹಾರಿಸುವ ನಿಮಿತ್ತ ಕೂಗುತ್ತಿರುವನು. ಅಲ್ಲಿ ಯಾವನೊ ಒಬ್ಬನು ಮತ್ತೊಬ್ಬನೊಡನೆ ಹೇಳುತಿರುವುದೇನೆಂದರೆ "ಮಂಚಿಕೆಯು ಕೂಗುತಿರುವುದು,, ಇಲ್ಲಿ ಮಂಚಿಕೆ ಪದದ ಮಂಚಿಕೆಯ ಮೇಲೆ ಕುಳಿತ ಪುರುಷನ ವಿಷಯದಲ್ಲಿ ಅಜಹತಿ ಲಕ್ಷಣವಿದೆ. ಕಾರಣವೇನಂದರೆ- ಮಂಚಿಕೆ ಎಂಬ ಪದದ ವಾಚ್ಯವಾದ ಮಂಚಿಗೆಯು ಕೂಗುವುದು ಅಸಂಭವವು. ಅದರಿಂದ ಮಂಚಿಗೆ ಪದದ ವಾಚ್ಯವಾದ ಮಂಚಿಗೆ ಸಹಿತ ಪುರುಷನಲ್ಲಿ ಮಂಚಿಗೆ ಪದದ ಅಜಹತಿಲಕ್ಷಣವಿದೆ ಇಲ್ಲಿ ಮಂಚಿಗೆಯು ಪದದ ವಾಚ್ಯವಾದ ಮಂಚಿಗೆಯು ತನ್ನ ಆಧೇಯವಾದ (ಆಶ್ರಿತ) ಪುರುಷನೊಡನೆ ಆಧೇಯತಾ ಸಂಬಂಧಿಯಾಗಿದೆ. ಈ ಲಕ್ಷಣಾ ಮತ್ತು ತ್ಯಾಗವಿಲ್ಲ. ಅಧಿಕ ಗ್ರಹಣವಿದೆ. ಅದರಿಂದ ಅಜಹತಿ ಲಕ್ಷಣವಿದೆ.

೩ ೪. ಛತ್ರವುಳ್ಳವನು ಹೋಗುತ್ತಿರುವನು. ಮತ್ತು ಕಟ್ಟಿಗೆಗಳನ್ನು ಪ್ರವೇಶಮಾಡು ಇತ್ಯಾದಿ ವಾಕ್ಯಗಳಲ್ಲಿ ಛತ್ರವುಳ್ಳವನು ಎಂಬ ಪದದಲ್ಲಿ, ಮತ್ತು ಕಟ್ಟಿಗೆ ಎಂಬ ಪದದಲ್ಲಿ ತಮ್ಮ ವಾಚ್ಯ ಛತ್ರಯುಕ್ತ ಪುರುಷ. ಮತ್ತು ಕಾಷ್ಠಸಮೂಹಗಳ ಛತ್ರರಹಿತ ಪುರುಷನ ಸಂಬಂಧೀ ಮತ್ತು ಕಟ್ಟಿಗೆಗಳನ್ನು ಹೊತ್ತ ಕೆ



ಳ್ಳುವ ಪುರುಷ ಇವರ ಗ್ರಹಣವು ಕ್ರಮದಿಂದ ಇದೆ. ಈ ಕಾರಣದಿಂದ ವಾಚ್ಯದ ತ್ಯಾಗವಿಲ್ಲ. ಅಧಿಕವನ್ನು ಗ್ರಹಣಮಾಡಬೇಕಾದ್ದರಿಂದ ಅಜಹತಿಲಕ್ಷಣವಿದೆ. ಈ ರೀತಿಯಿಂದ ಎಲ್ಲಿ ಶ್ರುತಿವಾಕ್ಯಗಳಲ್ಲಿ ಅಶ್ಮಕ್ಕೆ ಸತ್ ಮೊದಲಾದ ವಿಶೇಷಣಗಳಲ್ಲಿ ಒಂದು ಅಥವಾ ಎರಡು ವಿಶೇಷಣಗಳ ಉಚ್ಚಾರಣಮಾಡಬೇಕಾಗುವದೊ ಅಲ್ಲಿ ಇವುಗಳ ಸಹಿತ ಅನ್ಯ ಹೇಳದೆ ಇದ್ದ ಸರ್ವವಿಶೇಷಣಗಳ ಗ್ರಹಣವಾಗುವುದು. ಅದರಿಂದ ಅಲ್ಲಿ (ಇಂಥ ಸ್ಥಳದಲ್ಲಿ) ಸಿದ್ಧಾಂತದಲ್ಲಿ ಸಹ ಅಜಹತಿಲಕ್ಷಣದ ಉಪಯೋಗವಿದೆ.

---

೫೫೧ ॥ ೩. ,, ಏಕವಾಚ್ಯ,, ಇತ್ಯಾದಿ ಚತುರ್ಥಪಾದದಿಂದ ಭಾಗತ್ಯಾಗ ಲಕ್ಷಣವನ್ನು ತೋರಿಸಿರುವರು.

ಎಲ್ಲಿ ಪದಗಳ ವಾಚ್ಯ ಅರ್ಥಗಳ ಮಧ್ಯದಲ್ಲಿ ಒಂದು ಭಾಗದ ತ್ಯಾಗವೂ ಒಂದು ಭಾಗದ ಗ್ರಹಣವೂ ಆಗುವದೊ ಅಲ್ಲಿ ಭಾಗತ್ಯಾಗ ಲಕ್ಷಣವಿನ್ನಬೇಕು. ಈ ಭಾಗ ತ್ಯಾಗಕ್ಕೇ ಜಹತಿ ಅಜಹತಿ ಲಕ್ಷಣವೆಂದೂ ಎನ್ನುತ್ತಾರೆ.

ಮೊದಲು ನೋಡಿದ ಪದಾರ್ಥವನ್ನು ಅನ್ಯದೇಶದಲ್ಲಿ ನೋಡಿ, ಒಬ್ಬಾತನು ಒಬ್ಬನು ಎಂಬದ್ದೇನೆಂದರೆ "ಅದು ಇದು ಇದೆ". ಇಲ್ಲಿ ಭಾಗತ್ಯಾಗಲಕ್ಷಣವಿದೆ. ಕಾರಣವೇನೆಂದರೆ (೧) ಗತಿಸಿಹೋದ ಕಾಲದಲ್ಲಿ ಮತ್ತು ಅನ್ಯ ದೇಶದಲ್ಲಿ ಇದ್ದ ವಸ್ತುವಿಗೆ 'ಅದು' ಎಂದು ಎನ್ನುತ್ತಾನೆ. ಅದರಿಂದ ಗತಿಸಿಹೋದ ಕಾಲಸಹಿತ ಮತ್ತು ಅನ್ಯದೇಶಸಹಿತ ವಸ್ತು 'ಅದು' ಪದದ ವಾಚ್ಯ ಅರ್ಥವು. ಮತ್ತು (೨) ವರ್ತಮಾನಕಾಲದಲ್ಲಿ ಸಮೀಪ ದೇಶದಲ್ಲಿ ಸ್ಥಿತವಸ್ತುವಿಗೆ 'ಇದು' ಎಂದು ಎನ್ನುತ್ತಾನೆ. ಅದರಿಂದ ವರ್ತಮಾನ ಕಾಲಸಹಿತ ಮತ್ತು ಸಮೀಪದೇಶಸಹಿತ ವಸ್ತು 'ಇದು' ಪದದ ವಾಚ್ಯ ಅರ್ಥವಿದೆ. ಮತ್ತು ಅದು ವ್ಯತೀತ ಕಾಲಸಹಿತ ಅನ್ಯದೇಶ ಸಹಿತವಾಗಿದ್ದ ವಸ್ತುವು ಇದು ವರ್ತಮಾನಕಾಲ, ಮತ್ತು ಸಮೀಪದೇಶ ಸಹಿತವು ಇದು ಸಮುದಾಯ ವಾಚ್ಯ ಅರ್ಥವಿದೆ. ಇದು ಸಂಭವಿಸುವದಿಲ್ಲ. ಕಾರಣವೇನೆಂದರೆ (೧) ವ್ಯತೀತ ಕಾಲ, ಮತ್ತು ವರ್ತಮಾನಕಾಲಗಳ ವಿರೋಧವಿದೆ. (೨) ಹಾಗೆಯೇ ಅನ್ಯ ದೇಶದ ಮತ್ತು ಸಮೀಪದೇಶದ ವಿರೋಧವಿದೆ.

ಈ ಕಾರಣದಿಂದ ಎರಡೂ ಪದಗಳಲ್ಲಿ ದೇಶಕಾಲಗಳ ವಾಚ್ಯಭಾಗವ ೧ ತ್ಯಾಗಮಾಡಿ, ವಸ್ತುಮಾತ್ರದಲ್ಲಿ ಎರಡೂ ಪದಗಳ ಭಾಗತ್ಯಾಗಲಕ್ಷಣವಿದೆ.

ಟಿಪ್ಪಣಿ.(೧) " ಅದು ಇದು ಇದೆ,, ಈ ವಾಕ್ಯದಲ್ಲಿ ಇದ್ದ 'ಅದು, ಮತ್ತು 'ಇದು, ಎಂಬ ಎರಡು ಪದಗಳ ಪರಸ್ಪರ ಸಮಾನ (ಒಂದೇ) ವಿಭಕ್ತಿಯ ಬಲದಿಂದ ಬಂ

ದೇ ಅರ್ಥವನ್ನು ಹೊಂದುವರೂಪವು ಸಾಮಾನಾಧಿಕರಣ್ಯ ಸಂಬಂಧವೆನ್ನ ಲ್ಪಡುವುದು. ಇದರ ಬಲದಿಂದ ಇವುಗಳ ವಾಚ್ಯ ಅರ್ಥವಾದ ಪರೋಕ್ಷ ವಸ್ತುವು. ಮತ್ತು ಅಪರೋಕ್ಷವಸ್ತುವು, ಇವುಗಳ ಏಕತ್ವವು ಪ್ರತೀತವಾ ಗುವುದು. ಮತ್ತು ಈ ಎರಡೂ ವಾಚ್ಯಗಳು ವಿರೋಧಿಧರ್ಮ ಉಳ್ಳವುಗ ಳಾದ್ದರಿಂದ ಇವುಗಳ ಏಕತ್ವವು ಸಂಭವಿಸುವುದಿಲ್ಲ. ಅದರಿಂದ ಇಲ್ಲಿ ಲಕ್ಷ ಣವಾಡುವುದು ಯೋಗ್ಯವು. ಇದರಲ್ಲಿ ಜಹತಿ ಅಥವಾ ಅಜಹತಿ ಲಕ್ಷಣ ವು ಹೊಂದುವುದಿಲ್ಲ. ಆದರೆ ಭಾಗತ್ಯಾಗಲಕ್ಷಣವು ಹೊಂದುವುದು. ಅದ ರಿಂದ 'ಅದು, ಪದದ ವಾಚ್ಯವಾದ ಪರೋಕ್ಷತಾ ಸಹಿತ ವಸ್ತುವು ಮತ್ತು 'ಇದು, ಪದದ ವಾಚ್ಯವಾದ ಅಪರೋಕ್ಷತಾ ಸಹಿತ ವಸ್ತುವು, ಇವುಗಳ ಪರೋಕ್ಷ ಅಪರೋಕ್ಷ ಭಾಗಗಳ ತ್ಯಾಗಮಾಡಿ,ಅವಿರೋಧಿವಸ್ತು ಮಾತ್ರ ಗ್ರಹಣವಿದೆ.

೧. ಇಲ್ಲಿ ಪರೋಕ್ಷ ಅಪರೋಕ್ಷಭಾಗಗಳಿಗೆ ವಸ್ತುವಿನೊಡನೆ ಆಶ್ರಯತಾ ಸಂಬಂಧ ವಿದೆ. ೨. ವಸ್ತುಭಾಗಕ್ಕೆ ತನ್ನ ಸ್ವರೂಪದಿಂದ ತಾದಾತ್ಮ್ಯ ಸಂಬಂಧವಿದೆ.

ಈ ಸರ್ವವಾಚ್ಯ ಭಾಗದ ಯಾವವಸ್ತುವಿನೊಡನೆ ಆಶ್ರಯತಾ ದಾದಾತ್ಮ್ಯ ಸಂಬಂಧವು ಲಕ್ಷಣವು ಮತ್ತು ೧. ಪರಸ್ಪರ ವಿರೋಧಿ ಪರೋಕ್ಷತಾ ಅಪರೋಕ್ಷ ತಾರೂಪ ವಾಚ್ಯಭಾಗದ ತ್ಯಾಗವು. ೨. ಅವಿರೋಧಿ ಕೇವಲವಸ್ತುರೂಪ ವಾಚ್ಯ ಭಾಗದ ಗ್ರಹಣವಿದೆ. ಅದರಿಂದ ಇದು ಭಾಗತ್ಯಾಗಲಕ್ಷಣವು. ಇದರಂತೆ "ತತ್ವಮಸಿ,, ಮೊದಲಾದ ಮಹಾವಾಕ್ಯಗಳಲ್ಲಿ ಸ್ಥಿತವಾದ ಜೀವ ಈಶವಾಚಕ ಎರಡು ಪದಗಳಿಗೂ ಸಹಾ ಪರಸ್ಪರ ಸಮಾನ ವಿಭಕ್ತಿಯಬಲದಿಂದ ಒಂದೇ ಅರ್ಥ ವನ್ನು ಹೊಂದತಕ್ಕಂಥ ಸಾಮಾನಾಧಿಕರಣ ಸಂಬಂಧವಿದೆ. ಇದರ ಬಲದಿಂದ ಇವುಗಳ ವಾಚ್ಯವಾದ ಜೀವ ಈಶ್ವರರ ಏಕತ್ವವು ಪ್ರತೀತವಾಗುವದು. ಮತ್ತು ಇವೆರಡೂ ವಿರೋಧಿಧರ್ಮ ಉಳ್ಳವುಗಳಾದ್ದರಿಂದ ಇವುಗಳ ಏಕತ್ವವು ಸಂಭವಿ ಸುವದಿಲ್ಲ. ಅದರಿಂದ ಅಲ್ಲಿ ಲಕ್ಷಣ ಅಂಗೀಕಾರವಾಡುವುದು ಯೋಗ್ಯವು. ಇದ ರಲ್ಲಿ ಮುಂದೆ ಹೇಳಲ್ಪಡುವ ಪ್ರಕಾರದಿಂದ ಜಹತಿ ಇಲ್ಲವೆ ಅಜಹತಿಲಕ್ಷಣಗಳು ಸಂಭವಿಸುವುದಿಲ್ಲ, ಆದರೆ ಭಾಗತ್ಯಾಗವೇ ಸಂಭವಿಸುವುದು. ಅದರಿಂದ ಸರ್ವ ಮಹಾವಾಕ್ಯಗಳಲ್ಲಿ ಎರಡರಡು ಪದಗಳ ವಾಚ್ಯಗಳಾದ ಜೀವ ಮತ್ತು ಈಶ್ವರ ಇವುಗಳಲ್ಲಿ ೧. ಧರ್ಮಸಹಿತ ಉಪಾಧಿರೂಪ ವಿರೋಧಿ ವಾಚ್ಯಭಾಗದ ತ್ಯಾಗವು ಮತ್ತು ೨. ಅವಿರೋಧಿ ಚೇತನಭಾಗದ ಗ್ರಹಣವೂ ಇದೆ.

೨. ಇಲ್ಲಿ ಧರ್ಮಸಹಿತ ಮಾಯೆಯು ಅವಿದ್ಯೆಯ ಅಧಿಷ್ಠಾನತಾ ಸಂಬಂಧವು ಮತ್ತು ೨. ಚೇತನಭಾಗದ ತನ್ನಿಂದ ತಾದಾತ್ಮ್ಯಸಂಬಂಧವಿದೆ. ಈ ಸರ್ವ ವಾಚ್ಯದ ಚೇತನಭಾಗದಿಂದ ಅಧಿಷ್ಠಾನತಾ ತಾದಾತ್ಮ್ಯ ಸಂಬಂಧವು ಲಕ್ಷಣವು ಮತ್ತು ೧. ವಿರೋಧಿ ವಾಚ್ಯಭಾಗದ ತ್ಯಾಗವೂ ಮತ್ತು ೨. ಅವಿರೋಧಿ ಚೇತನ ಭಾಗದ ಗ್ರಹಣವೂ ಇವೆ.

ಅದರಿಂದ ಇದು ಭಾಗತ್ಯಾಗ ಲಕ್ಷಣ ಎನ್ನುತ್ತಾರೆ.



## ॥ ಮಹಾ ವಾಕ್ಯಗಳಲ್ಲಿ ಲಕ್ಷಣವು ೪೩೩—೪೪೯॥

"ತತ್ವಮಸಿ" ಮಹಾವಾಕ್ಯದಲ್ಲಿ ಲಕ್ಷಣವನ್ನು ತೋರಿಸುವದಕ್ಕಾಗಿ "ತತ್"ಪದ ಮತ್ತು "ತ್ವಂ" ಪದದ ವಾಚ್ಯ ಅರ್ಥವನ್ನು ವರ್ಣಿಸುವೆನು.

## ॥೪೩೩॥ "ತತ್,, ಪದದ ವಾಚ್ಯ ಅರ್ಥವು.

॥ದೋಹಾ॥

ಸರ್ವಸಕ್ತಿ ಸರ್ವಜ್ಞ ವಿಭು । ಈಶ ಸ್ವತಂತ್ರ ಪರೋಖ ॥
ಮಾಯಿತತ್ಪದವಾಚ್ಯಸೊ। ಜಾಮೈ ಬಂಧ ನ ಮೋಖ॥೩೭॥

ಟೀಕಾ-(೧) ಸರ್ವ ಶಕ್ತಿ ಎಂದರೆ ಯಾವವರಲ್ಲಿ ಸರ್ವ ಸಾಮರ್ಥ್ಯ ಇದೆ (೨) ಸರ್ವಜ್ಞ ಎಂದರೆ ಸರ್ವವಸ್ತುಗಳನ್ನು ತಿಳಿಯುವವನು (೩) ವಿಭು ಎಂದರೆ ವ್ಯಾಪಕನು (೪) ಈಶ ಎಂದರೆ ಸರ್ವಕ್ಕೂ ಪ್ರೇರಕನು (೫) ಸ್ವತಂತ್ರ ಅಂದರೆ, ಕರ್ಮಾಧೀನನಲ್ಲದವನು ಮತ್ತು (೬) ಪರೋಕ್ಷ ಅಂದರೆ ಜೀವನಿಗೆ ಪ್ರತ್ಯಕ್ಷ ವಿಷಯನಲ್ಲದವನು (೭) ಮಾಯಿ ಎಂದರೆ ಮಾಯೆಯು ಯಾವನ ಆಧೀನವೋ (೮) ಬಂಧಮೋಕ್ಷರಹಿತ. ಯಾವನಿಗೆ ಬಂಧವಿರುವುದೋ ಅವನಿಗೆ ಮೋಕ್ಷವಾಗುತ್ತದೆ. ಈಶ್ವರನು ಬಂಧರಹಿತನಾಗಿರುವನು. ಅದರಿಂದ ಈಶ್ವರನಲ್ಲಿ ಮೋಕ್ಷವು ಸಹ ಇಲ್ಲ. ಇಷ್ಟು ಧರ್ಮವುಳ್ಳ ಈಶ್ವರ ಚೈತನ್ಯವು"ತತ್"ಪದದನಿರ್ದಿಷ್ಟ ಅರ್ಥವು.

## ॥೪೩೪॥ "ತ್ವಂ,, ಪದವಾಚ್ಯ ನಿರೂಪಣ.

॥ ದೋಹಾ ॥

ಕಹೆ ಧರ್ಮಜೊ ಈಸಕೆ । ಸಬ ತಿನತೈ ವಿಪರೀತ ॥
ಹೈ ಜಿಹಿ ಚೇತನ ಜೀವತಿಹಿ। ತ್ವಂಪದವಾಚ್ಯಪ್ರತೀತ॥

ಟೀಕಾ॥ ಈಶ್ವರನ ಯಾವಯಾವ ಧರ್ಮಗಳನ್ನು ಹೇಳಿರುವುದೋ ಅವುಗಳಿಗೆ ವಿಪರೀತವಾದ ಧರ್ಮಗಳು ಯಾವುದರಲ್ಲಿ ಇರುವುವೋ, ಆ ಜೀವ ಚೈತನ್ಯವು "ತ್ವಂ"ಪದದ ವಾಚ್ಯವೆಂದುತಿಳಿ. ಇದರ ಭಾವಾರ್ಥವೇನೆಂದರೆ (೧) ಅಲ್ಪಶಕ್ತಿ(೨) ಅಲ್ಪಜ್ಞ (೩) ಪರಿಚ್ಛಿನ್ನ(೪)ಅನೀಶ (೫) ಕರ್ಮಾಧೀನ (೬)ಅವಿದ್ಯಾ ಮೋಹಿತ, ಮತ್ತು(೭)ಬಂಧಮೋಕ್ಷವುಳ್ಳ(೮) ಪ್ರತ್ಯಕ್ಷ-ಕಾ ರಣವೇನೆಂದರೆ, ತನ್ನ ಸ್ವರೂಪವು ಯಾರಿಗೂ ಪರೋಕ್ಷವಿಲ್ಲ-ಪ್ರತ್ಯಕ್ಷವಾಗಿ ಯೇ ಇದೆ. ಯದ್ಯಪಿ ಈಶ್ವರನಿಗೂ ಸಹ ತನ್ನಸ್ವರೂಪವು ಪ್ರತ್ಯಕ್ಷವು.ತಥಾಪಿ ಈಶ್ವರನ ಸ್ವರೂಪವು ಜೀವನಿಗೆ ಪ್ರತ್ಯಕ್ಷವಿಲ್ಲ. ಅದರಿಂದ ಪರೋಕ್ಷವೆನ್ನು

ವರು. ಮತ್ತು ಜೀವಸ್ವರೂಪವನ್ನು ಜೀವ, ಈಶ್ವರ, ಈ ಉಭಯತ್ರ…
೧
ತಿಳಿಯುವುದಂತ ಪ್ರತ್ಯಕ್ಷವೆನ್ನುತ್ತಾರೆ. ಇಷ್ಟು ಧರ್ಮವುಳ್ಳ ಜೀವಚೈತನ್ಯ ವು ತ್ವಂಪದದ ವಾಚ್ಯಾರ್ಥವೆನ್ನಬೇಕು.

ಟಿಪ್ಪಣಿ-(೧)ಯದ್ಯಪಿ ಜೀವನು ತನ್ನ ನಿಜರೂಪ ಅಹಂ, ಪದದ ಲಕ್ಷ್ಯ ಕೂಟಸ್ಥಮಾ ತ್ರವನ್ನು ತಿಳಿಯುವುದಿಲ್ಲ. ತಥಾಪಿ ಅಹಂ ಪದದ ವಾಚ್ಯವಾದ ಅಂತಃಕರಣವಿಶಿ ಷ್ಟ ಚೇತನ ಅಥವಾ ಸ್ಥೂಲ ಸೂಕ್ಷ್ಮ ಸಂಘಾತ ವಿಶಿಷ್ಟ ಚೇತನವು "ನಾನು … ದ್ದೇನೆ" ಎಂದು ತಿಳಿಯುವನಾದ್ದರಿಂದ ಜೀವಕ್ಕೆ ವಿವೇಕ ಜ್ಞಾನಾತ್ಪೂರ್ವ… ಸಹ ವಿಶಿಷ್ಟಾತ್ಮರೂಪದಿಂದ ತನ್ನ ಸ್ವರೂಪದ ಜ್ಞಾನವು ಪ್ರತ್ಯಕ್ಷವಾಗಿರುವ…

॥೪೩೫॥ ವಾಚ್ಯ ಅರ್ಥದಲ್ಲಿ ಏಕತ್ವದ ವಿರೋಧ ಮತ್ತು ಲಕ್ಷಣದ ಕರ್ತವ್ಯತೆಯು

॥ ದೋಹಾ ॥

ಮಹಾವಾಕ್ಯಮೈ ಏಕತಾ। ಹ್ವೈ ದೋನೋಂಕೀಭಾನ॥
ಸೊ ನ ಬನ್ಯೈ ಯಾತೈ ಸುಮತಿ । ಲಛ್ಯಲಛನಹಿ ಜಾನ ॥೩೮॥

ಟೀಕಾ—ಸಾಮವೇದದ ಛಾಂದೋಗ್ಯಉಪನಿಷತ್ತಿನಲ್ಲಿ ಉದ್ದಾಲಕ ಮುನಿಯು ತನ್ನ ಪುತ್ರ ಶ್ವೇತಕೇತುವಿಗೆ, ಜಗತ್ತಿನ ಉತ್ಪತ್ತಿ ಕರ್ತನಾದ ಈಶ್ವರನನ್ನು ತೋರಿಸಿ, "ತತ್ವಮಸಿ" ಎಂದು ಹೇಳಿದನು. ಇದರ ವಾಚ್ಯ ಅರ್ಥವು ಹೀಗಿರುವುದು. (೧) "ತತ್" ಅಂದರೆ ಅವನು, ಜಗತ್ತಿನ ಉತ್ಪತ್ತಿಯನ್ನು ಮಾಡತಕ್ಕ ಸರ್ವಶಕ್ತಿ, ಸರ್ವಜ್ಞತಾ ಆದಿಕ ಧರ್ಮಸಹಿತ ಈಶ್ವರನು (೨) "ತ್ವಂ" ಅಂದರೆ ನೀನು ಅಲ್ಪಶಕ್ತಿ, ಅಲ್ಪಜ್ಞತಾ ಆದಿ ಧರ್ಮವುಳ್ಳ ಜೀವನು (೩) "ಅಸಿ" ಅಂದರೆ ಇದ್ದೀ, ಇಲ್ಲಿ "ಅವನು, ನೀನು, ಇ…ಪಿ" ಎಂಬ ಕಥನದಿಂದ ಈಶ್ವರ ಮತ್ತು ಜೀವರ ಏಕತ್ವವು ವಾಚ್ಯ ಅರ್ಥದಿಂದ ಗ್ರಹಣವಾಗುತ್ತದೆ. ಈ ಏಕತ್ವವು ಸಂಭವಿಸುವುದಿಲ್ಲ. ಕಾರಣವೇನೆಂದರೆ (೧) ಸರ್ವಶಕ್ತಿ, ಮತ್ತು ಅಲ್ಪಶಕ್ತಿ (೨) ಸರ್ವಜ್ಞ ಮತ್ತು ಅಲ್ಪಜ್ಞ, (೩) ವಿಭು, ಮತ್ತು ಪರಿಚ್ಛಿನ್ನ. (೪) ಸ್ವತಂತ್ರ, ಮತ್ತು ಕರ್ಮಾಧೀನ (೫) ಪರೋಕ್ಷ ಮತ್ತು ಪ್ರತ್ಯಕ್ಷ, (೬) ಮಾಯೆಯು ಅವನ ಅಧೀನವು. ಮತ್ತು ಅವಿದ್ಯಾ ಮೋಹಿತ ಒಬ್ಬನೇ ಇರುವನು ಎಂಬ ಕಥನವು "ಅಗ್ನಿ ಶೀತಲವಿದೆ" ಎಂಬ ವಾಕ್ಯಕ್ಕೆ ಸಮಾನವಾದದ್ದು. ಆದ್ದರಿಂದ ಎಲೈ ಸುಮತಿಯೇ! ಲಕ್ಷಣದಿಂದ ಲಕ್ಷ್ಯಾರ್ಥವನ್ನು ತಿಳಿ, ವಾಚ್ಯ ಅರ್ಥದಲ್ಲಿ ವಿರೋಧವಿದೆ.



ಟಿಪ್ಪಣಿ. ೧. "ತತ್ವಮಸಿ" ಎಂಬ ಸಾಮವೇದದ ಛಾಂದೋಗ್ಯ ಉಪನಿಷತ್ತಿನ ಷಷ್ಠಾಧ್ಯಾಯದಲ್ಲಿಯ ಮಹಾವಾಕ್ಯದ ಉಪದೇಶವನ್ನು ಉದ್ದಾಲಕ ಪಿತನು ತನ್ನ ಪುತ್ರನಾದ ಶ್ವೇತಕೇತುವನ್ನು ಕುರಿತು ಒಂಭತ್ತು ಆವರ್ತಿ ಮಾಡಿದ ಸರ್ವ ರೀತಿಯನ್ನು ಪಂಡಿತ ಪೀತಾಂಬರಜಿಯವರು ಪಂಚದಶಿಯ ಮಹಾವಾಕ್ಯ ವಿವೇಕನಾಮ ಪಂಚಮ ಪ್ರಕರಣದ ಟಿಪ್ಪಣಿಯಲ್ಲಿಯೂ, ಮತ್ತು ಛಾಂದೋಗ್ಯ ಉಪನಿಷತ್ತಿನ ಟೀಕಾದಲ್ಲಿಯೂ ಉಲ್ಲೇಖಿಸಿರುವರು. ೨. ಇಲ್ಲಿ ವಾಚ್ಯ ಅರ್ಥದಿಂದ ಏಕತ್ವದ ಗ್ರಹಣವನ್ನು ಹೇಳಿದೆ. "ತತ್, "ತ್ವಂ" ಈ ಎರಡು ಪದಗಳ ಸಮಾನಾಧಿಕರಣರೂಪ ಸಂಬಂಧದ ಬಲವಾದ ಹೇಳಿರುವುದು. ಸಮಾನಾಧಿಕರಣ್ಯದ ಉದಾಹರಣ ಸಹಿತ ಲಕ್ಷಣವನ್ನು ಚತುರ್ಥತರಂಗದ ೧೧೩ನೇ ದೋಹಾದ ಟಿಪ್ಪಣಿಯಲ್ಲಿ ಬರೆದಿರುವೆವು.

॥ ದೋಹಾ ॥

ಆದಿ ದೋಯ ನಹಿ ಸಂಭವೈ । ಮಹಾವಾಕ್ಯಮೈ ತಾತ ॥
ಭಾಗತ್ಯಾಗ ಯಾತೈ ಲಖಹು । ಹ್ವೈಜಾತೈ ಕುಸಲಾತ ॥೩೯॥

ಟೀಕಾ॥ ಎಲೈ ಶಿಷ್ಯನೇ ! ಮಹಾವಾಕ್ಯದಲ್ಲಿ ಪ್ರಥಮ ಎರಡೂ ಅಂದರೆ ಜಹತಿ ಅಜಹತಿ ಲಕ್ಷಣಗಳು ಸಂಭವಿಸುವದಿಲ್ಲ. ಅದರಿಂದ ಮಹಾವಾಕ್ಯದಲ್ಲಿ ಭಾಗತ್ಯಾಗ ಲಕ್ಷಣದಿಂದ ಲಕ್ಷ್ಯಾರ್ಥವನ್ನು ತಿಳಿಯಬೇಕು. ಇದರಿಂದ ವಿರೋಧದ ಪರಿಹಾರವಾಗುತ್ತದೆ.

॥೪೩೬॥ ೧ ಮಹಾವಾಕ್ಯದಲ್ಲಿ ಜಹತ್ ಲಕ್ಷಣದ ಅಸಂಭವವನ್ನು ಹೇಳುವೆನು.

॥ ಜಹತಿ ಅಸಂಭವ ಪ್ರತಿಪಾದನ ॥

॥ ದೋಹಾ ॥

ಜ್ಞೇಯ ಜು ಸಾಖೀ ಬ್ರಹ್ಮಚಿತ್। ವಾಚ್ಯಮಾಂಹಿಸೊ ಲೀನ ॥
ತಾನ್ಯೈ ಜಹತೀ ಲಚ್ಛನಾ । ಹ್ವೈಕಥು ಜ್ಞೇಯ ನವೀನ ॥೪೦॥

ಟೀಕಾ॥ ಸಂಪೂರ್ಣ ವೇದಾಂತ ಜ್ಞೇಯವು ಸಾಕ್ಷೀ ಚೈತನ್ಯ ಮತ್ತು ಬ್ರಹ್ಮಚೈತನ್ಯವಾಗಿದೆ. ಈ ಸಾಕ್ಷೀಚೇತನ ಮತ್ತು ಬ್ರಹ್ಮಚೇತನ "ತ್ವಂ" ಪದದ ಮತ್ತು "ತತ್" ಪದದ ವಾಚ್ಯದಲ್ಲಿ ಲೀನ ಅಂದರೆ ಪ್ರವಿಷ್ಟವಿದೆ. ಮತ್ತು ಜಹತ್‌ಲಕ್ಷಣವು ಎಲ್ಲಿ ಆಗುವದೋ, ಅಲ್ಲಿ ಸಂಪೂರ್ಣ ವಾಚ್ಯದ ತ್ಯಾಗಮಾಡಿ, ವಾಚ್ಯಸಂಬಂಧೀ ಅನ್ಯಜ್ಞೇಯವಾಗುತ್ತದೆ. ಅದರಿಂದ ಮಹಾವಾಕ್ಯದಲ್ಲಿ ಜಹತ್‌ಲಕ್ಷಣವನ್ನು ಅಂಗೀಕರಿಸಿದ ಪಕ್ಷದಲ್ಲಿ ವಾಚ್ಯಾಂತರ್ಗತವಾದ ಚೈತನ್ಯದ ತ್ಯಾಗವಮಾಡಿ, ಅದರಿಂದ ಅನ್ಯಜ್ಞೇಯವನ್ನು ಅಂಗೀಕರಿಸ

ಬೇಕಾಗುವದು. ಮತ್ತು ಚೈತನ್ಯದಿಂದ ಭಿನ್ನವಾದ ಅಸತ್ ಜಡದುಃಖರೂಪವಾಗಿದೆ. ಇದನ್ನು ಅಂಗೀಕರಿಸುವದರಿಂದ ಪುರುಷಾರ್ಥವು ಸಿದ್ಧವಾಗುವದಿಲ್ಲ. ಈ ಕಾರಣದಿಂದ ಮಹಾವಾಕ್ಯದಲ್ಲಿ ಜಹತಿ ಲಕ್ಷಣವು ಇಲ್ಲ.

||೪೩೭|| ೨ಮಹಾವಾಕ್ಯದಲ್ಲಿ ಅಜಹತಿ ಲಕ್ಷಣದ ಅಸಂಭವಪ್ರ...

|| ಅಜಹತಿ ಲಕ್ಷಣಾ ಅಸಂಭವ ಪ್ರತಿಪಾದನ ||

|| ದೋ ೯ ಹಾ ||

ವಾಚ್ಯಹು ಸಾರೊ ರಹತಹೈ । ಜಹಾ ಅಜಹತೀ ಮಿತ ॥
ವಾಚ್ಯಅರ್ಥ ಸವಿರೋಧ ಯಹಾ । ತಜಹು ಅಜಹತೀ ರೀತ॥೪೧...

ಟೀಕಾ॥ ಎಲೌ ಶಿಷ್ಯನೇ ; ಎಲ್ಲಿಅಜಹತ್ ಲಕ್ಷಣವಾಗುವದೋ ಅಲ್ಲಿ ಸರ್ವವಾಚ್ಯಾರ್ಥವು ಇರುವದು. ಮತ್ತು ವಾಚ್ಯಕ್ಕಿಂತಲೂ ಅಧಿಕ ಗ್ರಹಣವಾಗುವುದು. ಮಹಾವಾಕ್ಯದಲ್ಲಿ ಅಜಹತ್ ಲಕ್ಷಣವನ್ನು ಅಂಗೀಕರಿಸಿದರೆ ವಾಚ್ಯಅರ್ಥವು ಸರ್ವವೂ ಇರುವದು.ಮತ್ತು ವಾಚ್ಯಅರ್ಥವು ಮಹಾವಾಕ್ಯದಲ್ಲಿಸವಿರೋಧ ಅಂದರೆ ವಿರೋಧ ಸಹಿತವಾಗಿದೆ; ವಿರೋಧವನ್ನು ನಿವೃತ್ತಿಮಾಡುವ ಸಲುವಾಗಿ ಲಕ್ಷಣದ ಅಂಗೀಕಾರವನ್ನು ಮಾಡದೆ ಅಜಹತ್ ಲಕ್ಷಣವನ್ನು ಅಂಗೀಕರಿಸಿದರೆ ಮಹಾವಾಕ್ಯದಲ್ಲಿ ವಿರೋಧವು ನಿವೃತ್ತವಾಗುವದಿಲ್ಲ. ಅದರಿಂದ ಅಜಹತ್ ಲಕ್ಷಣವನ್ನು ಮಹಾವಾಕ್ಯದಲ್ಲಿ ತ್ಯಾಗ ಮಾಡಬೇಕು.

||೪೩೮|| ಮಹಾವಾಕ್ಯದಲ್ಲಿ ಭಾಗತ್ಯಾಗ ಲಕ್ಷಣದ ಅಂಗಿಕಾರವು.

|| ಭಾಗತ್ಯಾಗ ಲಕ್ಷಣ ಪ್ರಕಾರ ||

ತ್ಯಾಗಿ ವಿರೋಧೀ ಧರ್ಮ ಸಬ । ಚೇತನ ಸುಧ್ಧ ಅಸಂಗ ॥
ಲಖಹು ಲಚ್ಛನಾತೈ ಸುಮತಿ । ಭಾಗತ್ಯಾಗ ಯಹ ಅಂಗ ॥೪೨...

ಟೀಕಾ॥ ಎಲೌ ಶಿಷ್ಯೋತ್ತಮ! "ತತ್" ಪದದವಾಚ್ಯ ಈಶ್ವರ ಮತ್ತು "ತ್ವಂ" ಪದದ ವಾಚ್ಯ ಜೀವ, ಇವರಲ್ಲಿ ಪರಸ್ಪರ ವಿರೋಧೀ ಧರ್ಮಗಳು ಇವೆ. ಈ ಸರ್ವವನ್ನು ತ್ಯಾಗಮಾಡಿ, ಶುದ್ಧ ಅಸಂಗಚೇತನಲಕ್ಷಣದಿಂದ ತಿಳಿ; ಇದು ಭಾಗತ್ಯಾಗ ಲಕ್ಷಣವು. ಈ ಸ್ಥಳದಲ್ಲಿ ಈಸಿದ್ಧಾಂತವಿದೆ. ಈಶ್ವರ ಜೀವ ಅನೇಕ ಸ್ವರೂಪಗಳು ಅದ್ವೈತ ಗ್ರಂಥದಲ್ಲಿ ಹೇಳಲ್ಪಟ್ಟವೆ

೧. ವಿವರಣ ಗ್ರಂಥದಲ್ಲಿ (೧) ಅಜ್ಞಾನದಲ್ಲಿ ಪ್ರತಿಬಿಂಬ ಜೀವ ಮತ್ತು



(೨) ಬಿಂಬವು ಈಶ್ವರ, ಎಂದು ಹೇಳಲ್ಪಟ್ಟದೆ. ಮತ್ತು-

೨. ವಿದ್ಯಾರಣ್ಯಮತದಲ್ಲಿ (೧) ಶುದ್ಧ ಸತ್ವಗುಣಸಹಿತ ಮಾಯಾದಲ್ಲಿ ಆಭಾಸ ಈಶ್ವರ, ಮತ್ತು (೨) ಮಲಿನ ಸತ್ವಗುಣಸಹಿತ ಅಂತಃಕರಣ ಉಪಾದಾನಕಾರಣ ಅವಿದ್ಯೆಯು ಅಂಶದಲ್ಲಿ ಆಭಾಸಜೀವಎಂದುಹೇಳಲ್ಪಟ್ಟದೆ.

||೪೩೯|| ಜೀವ ಈಶ್ವರರ ಸ್ವರೂಪದಲ್ಲಿ ಪಂಚದಶಿಯಕಾರ, ಮತ್ತು ವಿವರಣಕಾರ ಮೊದಲಾದವರ ಮತವು.

(ಆಭಾಸ ಪ್ರತಿಬಿಂಬ ಮತ್ತು ಅವಚ್ಛೇದವಾದ) ೪೩೯—೪೪೩

ಯದ್ಯಪಿ ಪಂಚದಶಿ ಗ್ರಂಥದಲ್ಲಿ ವಿದ್ಯಾರಣ್ಯಸ್ವಾಮಿಯವರ ಅಂತಃಕರಣದಲ್ಲಿ ಆಭಾಸ ಜೀವ, ಎಂದು ಹೇಳಿದ್ದಾರೆ. ತಥಾಪಿ ಅಂತಃಕರಣದ ಆಭಾಸಕ್ಕೆ ಜೀವನೆಂದು ಅಂಗೀಕರಿಸಿದರೆ ಸುಷುಪ್ತಿಯಲ್ಲಿ ಅಂತಃಕರಣವು ಇರುವುದಿಲ್ಲ, ಅದರಿಂದ ಜೀವದ ಅಭಾವವು ಸಹಾ ಆಗ ಬೇಕು. ಮತ್ತು ಪ್ರಾಜ್ಞ ರೂಪ ಜೀವವು ಸುಷುಪ್ತಿಯಲ್ಲಿ ಇರುವುದು. ಅದರಿಂದ ವಿದ್ಯಾರಣ್ಯ ಸ್ವಾಮಿಯವರ ಅಭಿಪ್ರಾಯವಿರುವುದೇನೆಂದರೆ- ಅಂತಃಕರಣರೂಪ ಪರಿಣಾಮವನ್ನುಹೊಂದಿದ ಅವಿದ್ಯಾ ಅಂಶದಲ್ಲಿ ಜೀವವಾಗಿ ಆಭಾಸಇದೆ. ಈಅವಿದ್ಯೆಯ ಅಂಶವು ಸುಷುಪ್ತಿಯಲ್ಲಿ ಸಹ ಇರುವುದು. ಅದರಿಂದ ಪ್ರಾಜ್ಞದ ಅಭಾವವಿಲ್ಲ. ಮತ್ತು ಕೇವಲ ಆಭಾಸವೇ[೧] ಜೀವ ಈಶ್ವರ ಅಲ್ಲ. ಆದರೆ (೧) ಮಾಯೆಯ ಅಧಿಷ್ಠಾನಚೇತನ, ಮತ್ತು ಮಾಯಾಸಹಿತ ಆಭಾಸ ಈಶ್ವರನಿದ್ದಾನೆ. ಮತ್ತು (೨) ಅವಿದ್ಯಾ ಅಂಶದ ಅಧಿಷ್ಠಾನಚೇತನ ಮತ್ತು ಅವಿದ್ಯೆಯ ಅಂಶಸಹಿತ ಆಭಾಸ ಜೀವವು.

(೧) ಈಶ್ವರನ ಉಪಾಧಿಯಲ್ಲಿ ಶುದ್ಧಸತ್ವಗುಣವಿದೆ. ಆದರಿಂದ ಈಶ್ವರನಲ್ಲಿ ಸರ್ವಶಕ್ತಿ, ಸರ್ವಜ್ಞತ್ವಾದಿ ಧರ್ಮಗಳು ಇವೆ. ಮತ್ತು (೨) ಜೀವನ ಉಪಾಧಿಯಲ್ಲಿ ಮಲಿನಸತ್ವಗುಣವಿದೆ. ಅದರಿಂದ ಜೀವದಲ್ಲಿ ಅಲ್ಪಶಕ್ತಿ,ಅಲ್ಪಜ್ಞತ್ವ ಮೊದಲಾದ ಧರ್ಮಗಳು ಇವೆ.

ಇದಕ್ಕೆ ಆಭಾಸವಾದವೆನ್ನುತ್ತಾರೆ.-

ಟಿಪ್ಪಣಿ—(೧)ಕೇವಲ ಚಿದಾಭಾಸವೇ ಜೀವ ಈಶ್ವರಅಲ್ಲ. ಕಾರಣವೇನೆಂದರೆ:ಯಾವ ತಾದಾತ್ಮ್ಯ ಸಂಬಂಧವುಳ್ಳ ಅಧಿಷ್ಠಾನದಿಂದ ಅಭಿನ್ನವಾಗಿ ಯಾವದು ಪ್ರತೀತವಾಗುವದೋ ಅದು ಆರೋಪಿತ ಎಂದು ಎನ್ನುತ್ತಾರೆ. ಆರೋಪಿತವಾದದ್ದು ಅಧಿಷ್ಠಾನದಿಂದ ಭಿನ್ನವಾಗಿ ಪ್ರತೀತವಾಗುವದಿಲ್ಲ. ಉದಾಹರಣೆ;-ರಜ್ಜುವಿನಲ್ಲಿ ಸರ್ಪವು ಆರೋಪಿತವಾಗಿದೆ, ಅದರಿಂದ ಅದುರಜ್ಜುವಿನಿಂದ ಭಿನ್ನವಾಗಿ ಪ್ರತೀತಿ

ಯಾಗುವದಿಲ್ಲ. ಆದರೆ ರೆಜ್ಜುವಿನಿಂದಅಭಿನ್ನವಾಗಿ, ಮತ್ತುರಜ್ಜುಸ್ವರೂಪವ ನ್ನು ಆಚ್ಛಾದನಮಾಡಿ ಸರ್ಪದ ಪ್ರತೀತಿಯುಆಗುವುದು. ಇದರಂತೆ... ಅವಿದ್ಯೆಯಲ್ಲಿ ಆಭಾಸವು ಆರೋಪಿತವಾಗಿದೆ. ಅದರಿಂದ ಅದರ ಪ್ರತೀತಿಯು ತನ್ನ ಅಧಿಷ್ಠಾನ ಕೂಟಸ್ಥ ಮತ್ತು ಬ್ರಹ್ಮದಿಂದ ಭಿನ್ನತ್ವವುಳ್ಳದ್ದಾಗಿ ಸಂಭವಿ ವದಿಲ್ಲ. ಆದರೆ ಈ ಎರಡೂ ತಮ್ಮ ಅಧಿಷ್ಠಾನ ಕೂಟಸ್ಥಮತ್ತು ಬ್ರಹ್ಮದಿಂ ತಾದಾತ್ಮ್ಯಸಂಬಂಧ ರೂಪ ಏಕತ್ವವನ್ನು ಹೊಂದಿ, ಅದರ ಸ್ವರೂಪವನ್ನು ಆಚ್ಛಾದಿಸಿ ಪ್ರತೀತಿಯಾಗುವುದು. ಅದರಿಂದ ಅಧಿಷ್ಠಾನಚೇತನ ಮತ್ತು ಉ ಪಾಧಿ ಸಹಿತ ಚಿದಾಭಾಸ ಜೀವ, ಇಲ್ಲವೆ ಈಶ್ವರನು ಆಗಿರುವನು.

---

॥೫೫೦॥ ವಿವರಣಾ ಮತದಲ್ಲಿ ಯದ್ಯಪಿ ಜೀವೇಶ್ವರರ ಉಪಾಧಿಯು ಒಂದೇ ಅಜ್ಞಾನವಾಗಿದೆ. ಅದರಿಂದ ಎರಡೂ ಅಲ್ಪಜ್ಞವಾಗಲೇಬೇಕು ತಥಾಪಿ ಯಾವ ಉಪಾಧಿಯಲ್ಲಿಪ್ರತಿಬಿಂಬ ವಿರುವುದೋ ಅದರಸ್ವಭಾವವು ಹೀಗೆ ಇರುವದು; ಪ್ರತಿಬಿಂಬದಲ್ಲಿ ತನ್ನ ದೋಷವನ್ನು ತೋರಿಸುತ್ತದೆ, ಮ ತ್ತು ಬಿಂಬದಲ್ಲಿ ಇಲ್ಲ.

ದರ್ಪಣರೂಪ ಉಪಾಧಿಯಲ್ಲಿ ಮುಖದಪ್ರತಿಬಿಂಬವುಇರುವುದು.ಗ್ರೀ ವ(ಕುತ್ತಿಗೆ)ದಮೇಲೆ ಇದ್ದಮುಖವು ಬಿಂಬ ವಾಗಿದೆ.ಅಲ್ಲಿ ದರ್ಪಣರೂಪ ಉ ಪಾಧಿಯು ಶ್ಯಾಮ, ಪೀತ, ಲಘುತ್ವ ಮೊದಲಾದ ಅನೇಕ ದೋಷಗಳುಪ್ರತಿ ಬಿಂಬದಲ್ಲಿ ದೃಗ್ಗೋಚರಿಸುವವು,ಮತ್ತುಗ್ರೀವಾಸ್ಥಿತಮುಖ್ಯಬಿಂಬದಲ್ಲಿ ಆ ವು ದೃಗ್ಗೋಚರಿಸುವದಿಲ್ಲ. ಇದರಂತೆ ದರ್ಪಣವತ್ ಇದ್ದ ಅಜ್ಞಾನದಲ್ಲಿಪ್ರ ತಿಬಿಂಬರೂಪ ಜೀವದಲ್ಲಿ ಅಜ್ಞಾನಕೃತ ಅಲ್ಪಜ್ಞತ್ವಾದಿಕದೋಷಗಳು ಇವೆ
೧
ಮತ್ತು ಬಿಂಬರೂಪ ಈಶ್ವರನಲ್ಲಿ ಇಲ್ಲ. ಅದರಿಂದ(೧) ಈಶ್ವರನಲ್ಲಿ ಸರ್ವಜ್ಞ ತ್ವಾದಿಗಳು ಇವೆ. ಮತ್ತು [೨] ಜೀವನಲ್ಲಿ ಅಲ್ಪಜ್ಞತ್ವಾದಿಗಳು ಇವೆ

ಟಿಪ್ಪಣಿ—೧. ಯದ್ಯಪಿ ಪ್ರತಿಬಿಂಬವಾದದಲ್ಲಿ ಶುದ್ಧಬ್ರಹ್ಮವೇ ಈಶ್ವರವೆಂದುಇದೆ. ಅದರಲ್ಲಿ ಸರ್ವಜ್ಞತ್ವಾದಿ ಧರ್ಮಗಳು ಸಹ ಸಂಭವಿಸುವುದಿಲ್ಲ. ತಥಾಪಿ ಜೀವನ ಅಲ್ಪಜ್ಞತ್ವಾದಿಕ ಧರ್ಮಗಳ ಅಪೇಕ್ಷೆಯಿಂದ ಶುದ್ಧಬ್ರಹ್ಮದಲ್ಲಿ ಬಿಂಬತ್ವ ಈಶ್ವ ರತ್ವ, ಸರ್ವಜ್ಞತ್ವ, ಇತ್ಯಾದಿ ಧರ್ಮಗಳ ಆರೋಪವಾಗುವುದು. ನಿಜವಾಗಿ ಜೀ ವೇಶ್ವರರು ಶುದ್ಧಬ್ರಹ್ಮರೂಪವುಳ್ಳವರು. ಇವರಲ್ಲಿ ಯಾವ ಧರ್ಮದ ಸಂಭ ವವೂ ಇಲ್ಲ.

---

॥೫೫೧॥ ಆಭಾಸ ಮತ್ತು ಪ್ರತಿಬಿಂಬದಲ್ಲಿಯ ಭೇದವು ಇಷ್ಟೇ ಆಭಾಸ ಪಕ್ಷದಲ್ಲಿ ಆಭಾಸವು ಮಿಥ್ಯ ಮತ್ತು ಪ್ರತಿಬಿಂಬವಾದದಲ್ಲಿ ಪ್ರ ತಿಬಿಂಬವು ಮಿಥ್ಯ ಯಲ್ಲ, ಆದರೆ ಸತ್ಯವು. ಕಾರಣವೇನೆಂದರೆ; ಪ್ರತಿಬಿಂಬ



...ವಾದಿಗಳ ಸಿದ್ಧಾಂತವೇನೆಂದರೆ, ದರ್ಪಣದಲ್ಲಿಯ ಮುಖದ ಪ್ರತಿಬಿಂಬವು ಮುಖದ ಛಾಯೆಯಲ್ಲ. ಕಾರಣವೇನೆಂದರೆ, (೧) ಛಾಯೆಯ ಸ್ವಭಾವವು ...ನೆಂದರೆ, ಪುರುಷನ ಮುಖವು ಮತ್ತು ಪೃಷ್ಠವು ಎತ್ತ ಇರುವದೋ ಆಕ ...ೕ ಛಾಯೆಯ ಮುಖ ಮತ್ತು ಪೃಷ್ಠವಿರುತ್ತದೆ. ಮತ್ತು (೨) ದರ್ಪಣ ...ಯ ಪ್ರತಿಬಿಂಬದ ಮುಖವು ಮತ್ತು ಪೃಷ್ಠವು ಬಿಂಬದಿಂದ ವಿಪರೀತ ...ರುವವು. ಆದರಿಂದ ದರ್ಪಣದಲ್ಲಿ ಛಾಯಾರೂಪ ಪ್ರತಿಬಿಂಬವಿಲ್ಲ, ...ರೆ ದರ್ಪಣವನ್ನು ವಿಷಯವನ್ನಾಗಿ ಮಾಡುವದಕ್ಕೆ ನೇತ್ರದ್ವಾರದಿಂದ ...ಟ ಅಂತಃಕರಣದ ವೃತ್ತಿಯು ದರ್ಪಣವನ್ನು ವಿಷಯವನ್ನಾಗಿ ಮಾಡಿ ...ತ್ಕ್ಷಣದಲ್ಲಿ ದರ್ಪಣದಿಂದ ನಿವೃತ್ತವಾಗಿ ಗ್ರೀವಾಸ್ಥಿತ ಮುಖವನ್ನು ...ಷಯವನ್ನಾಗಿ ಮಾಡುವದು.

ಭ್ರಮಣದ ವೇಗದಿಂದ ಅಲಾತ ಚಕ್ರಭಾನವಾಗುವದು. ಆದರೆ ...ದು ಸತ್ಯವಾಗಿ ಚಕ್ರವಲ್ಲ. ಇದರಂತೆ ದರ್ಪಣ ಮತ್ತು ಮುಖವನ್ನು ವಿಷ ...ಯವನ್ನಾಗಿ ಮಾಡುವುದರಲ್ಲಿವೃತ್ತಿಯ ವೇಗದಿಂದ ದರ್ಪಣದಲ್ಲಿ ಮುಖದ ...ಭಾನವಾಗುತ್ತದೆ. ಆದರೆ ಮುಖವು ಕಂಠದಮೇಲೆಯೇ ಇರುವುದು,ದರ್ಪಣ ...ಲ್ಲಿ ಇಲ್ಲ, ಮತ್ತು ಛಾಯೆಯುಸಹಾ ಇಲ್ಲ,ವೃತ್ತಿಯ ವೇಗದಿಂದ ದರ್ಪ ...ದಲ್ಲಿ ಮುಖದ ಪ್ರತೀತಿಯಾಗುವದಕ್ಕೇ ಪ್ರತಿಬಿಂಬವೆನ್ನಬೇಕು.

ಈ ರೀತಿಯಿಂದ ದರ್ಪಣರೂಪ ಉಪಾಧಿಯುಸಂಬಂಧದಿಂದ ಕಂಠದ ...ಸ್ಥಿತ ಮುಖವು ಬಿಂಬರೂಪ,ಪ್ರತಿಬಿಂಬರೂಪವಾಗಿತೋರುವುದು,ಆದರೆ ...ಚಾರದಿಂದ ನೋಡಲು,ಬಿಂಬ ಪ್ರತಿಬಿಂಬ ಭಾವವಿಲ್ಲ. ಇದರಂತೆ ಅಜ್ಞಾ ...ರೂಪ ಉಪಾಧಿಯ ಸಂಬಂಧದಿಂದಅಸಂಗಚೇತನದಲ್ಲಿಬಿಂಬಸ್ಥಾನದಲ್ಲಿ ಈಶ್ವರಭಾವವೂ ಪ್ರತಿಬಿಂಬ ಸ್ಥಾನದಲ್ಲಿ ಜೀವಭಾವವೂ ಪ್ರತೀತವಾಗುವ ...ದು, ಮತ್ತು ವಿಚಾರದಿಂದ ಈಶ್ವರತ್ವಗಳಿಲ್ಲ.

ಅಜ್ಞಾನದಿಂದ ಚೇತನದಲ್ಲಿ ಜೀವಭಾವದಪ್ರತೀತಿಯಾಗುವದಕ್ಕೇ ಅಜ್ಞಾನದಲ್ಲಿ ಪ್ರತಿಬಿಂಬವೆನ್ನುತ್ತಾರೆ. ಆದರಿಂದ ಬಿಂಬತ್ವ ಮತ್ತು ಪ್ರತಿ ಬಿಂಬತ್ವನೆಂಬುದು ಮಿಥ್ಯವು; ಮತ್ತು,ಸ್ವರೂಪದಿಂದ ಬಿಂಬ ಪ್ರತಿಬಿಂಬವು ಸತ್ಯವು,ಕಾರಣವೇನಂದರೆ,ಬಿಂಬಪ್ರತಿಬಿಂಬಗಳಸ್ವರೂಪವುದೃಷ್ಟಾಂತದಲ್ಲಿ ಮುಖವೆಂದೂ, ದಾರ್ಷ್ಟಾಂತದಲ್ಲಿ ಚೇತನನೆಂದೂ ಅದೆ. ಈಮುಖ ಮತ್ತು ಚೇತನವು ಸತ್ಯವು. (೧) ಈ ರೀತಿಯಿಂದ ಪ್ರತಿಬಿಂಬವು ಸ್ವರೂಪದಿಂದ ಸತ್ಯವಾಗುವದರಿಂದ ಸತ್ಯವೆನ್ನುತ್ತಾರೆ. ಮತ್ತು (೨) ಆಭಾಸದಸ್ವರೂಪ ವು ಛಾಯಾ ಎಂದು ತಿಳಿದಿರುವದರಿಂದ ಮಿಥ್ಯೆಯಾಗಿದೆ.

೧

ಇದು ಆಭಾಸವಾದದ ಮತ್ತು ಪ್ರತಿಬಿಂಬವಾದದ ಭೇದವು.

ಟಿಪ್ಪಣಿ [೧] ಇಲ್ಲಿ ಕಿಂಚಿತ್ ವಿಶೇಷವಿದೆ-ಜಲಪೂರಿತ ಅನೇಕ ಘಟಗಳಲ್ಲಿ ಸೂರ್ಯನ ಅನೇಕ ಪ್ರತಿಬಿಂಬಗಳು [ಆಭಾಸ] ಆಗುವವು, ಇವುಗಳಲ್ಲಿ-

೧. ಒಂದೊಂದು ಪ್ರತಿಬಿಂಬವು ವ್ಯಷ್ಟಿ ಎಂದು ಅನ್ನುತ್ತಾರೆ. ಮತ್ತು

೨. ಸರ್ವವು ಕೂಡಿ ಒಂದೇ ಸಮಷ್ಟಿ ಪ್ರತಿಬಿಂಬವೆನ್ನುತ್ತಾರೆ.

ಇವುಗಳಲ್ಲಿಯು ಯಾವ ಪ್ರತಿಬಿಂಬದ ಅಭಾವವು ಜಲದ ಅಭಾವದಿಂದ ಆಗುವುದೋ, ಆದರ ಅಭೇದವು ಸೂರ್ಯನಿಂದೆನ್ನುತ್ತಾರೆ. ಅನ್ಯದ ಅಭಾವವಿಲ್ಲ. ಹೀಗೆ ಯಾವಾಗ ಸರ್ವಪ್ರತಿಬಿಂಬಗಳ ಅಭಾವವಾಗುವದೋ ಆಗ ಈ ಸಮಷ್ಟಿ ಪ್ರತಿಬಿಂಬದ ಅಭೇದವು ಸೂರ್ಯನಿಂದೆನ್ನುತ್ತಾರೆ.

ಇದರಂತೆ ಇಲ್ಲಿಹೇಳಿದ ಆಭಾಸವಾದದ ಪಕ್ಷದಲ್ಲಿ ೧. ಅನೇಕಬುದ್ಧಿ, ಇಲ್ಲವೆ ಅವಿದ್ಯಾ ಅಂಶರೂಪ ಜಲದಲ್ಲಿ ಅನೇಕ ಬ್ರಹ್ಮರ ಪ್ರತಿಬಿಂಬಗಳು [ಆಭಾಸ] ಇವೆ. ಇವುಗಳಲ್ಲಿ ಒಂದೊಂದು ಪ್ರತಿಬಿಂಬಕ್ಕೆ ವ್ಯಷ್ಟಿಯೆನ್ನುತ್ತಾರೆ. ಮತ್ತು ೨.ಸರ್ವವೂ ಕೂಡಿ ಒಂದು ಸಮಷ್ಟಿ ಪ್ರತಿಬಿಂಬವೆನ್ನುತ್ತಾರೆ. ಇವುಗಳಲ್ಲಿ ೧ ಅನೇಕ ವ್ಯಷ್ಟಿಪ್ರತಿಬಿಂಬವು ಜೀವರು, ಮತ್ತು ೨ ಏಕಸಮಷ್ಟಿ ಪ್ರತಿಬಿಂಬವು ಈಶ್ವರನು.

ಇವುಗಳಲ್ಲಿ ಯಾವಜೀವದ ಉಪಾಧಿಯ ಅಭಾವದಿಂದ ಅಭಾವವಾಗುವದೋ ಇದುಬ್ರಹ್ಮದೊಡನೆ ಉಪಚಾರಮಾತ್ರ ಅಭೇದವೆನ್ನುತ್ತಾರೆ.

ಹೀಗೆ ಯಾವಾಗ ಸರ್ವಜೀವಗಳ ಅಭಾವವಾಗುವದೋ ಆಗ ಈ ಸಮಷ್ಟಿ ಪ್ರತಿಬಿಂಬರೂಪ ಈಶ್ವರನ ವಿದೇಹ ಮೋಕ್ಷವಾಗುವುದು.

೧. ಈ ಪಕ್ಷದಲ್ಲಿ ಜಗತ್, ಮತ್ತು ಬ್ರಹ್ಮದ ಇಲ್ಲವೆ ಜೀವಬ್ರಹ್ಮದ ಅಭೇದ ಬೋಧಕ ಶೃತಿವಾಕ್ಯಗಳಲ್ಲಿ ಭಾಗತ್ಯಾಗ ಲಕ್ಷಣದ ಸ್ವೀಕಾರವಿಲ್ಲ. ಆದರೆ "ಗಂಗಾದಲ್ಲಿ ಗ್ರಾಮವದೆ,, ಎಂಬ ವಾಕ್ಯವತ್ ಸರ್ವವಾಚ್ಯದ ತ್ಯಾಗವು ಮತ್ತು ಇದರ ಸಂಬಂಧೀ ಬ್ರಹ್ಮದಗ್ರಹಣದಿಂದ ಜಹತಿಲಕ್ಷಣದ ಸ್ವೀಕಾರವದೆ. ಈ ಅಧಿಷ್ಠಾನ ಕೂಟಸ್ಥವನ್ನುಬಿಟ್ಟು ಕೇವಲ ಬುದ್ಧಿ ಸಹಿತ ಅಥವಾ ಅವಿದ್ಯಾಸಹಿತ ಆಭಾಸವನ್ನು ಜೀವವೆಂದು ತಿಳಿಯತಕ್ಕ ಕೆಲವರು ವೇದಾಂತದ ಏಕದೇಶೀ ಆಭಾಸ ವಾದಿಗಳ ಮತವು.

೨. ಈ ಪಕ್ಷದಲ್ಲಿ ಪುರುಷಾರ್ಥ (ಮೋಕ್ಷ) ದನಿಮಿತ್ತ ಪ್ರಯತ್ನ ಮಾಡತಕ್ಕ ಜೀವದ ಮೋಕ್ಷದಶೆಯಲ್ಲಿ ಅಭಾವವಾಗುವುದು. ಅದರಿಂದ "ಧನವೃದ್ಧಿಯ ಆಶೆಯಿಂದ ವ್ಯಾಪಾರಮಾಡತಕ್ಕವನ ಮೂಲಧನವು ಸಹ ನಷ್ಟವಾಯಿತು" ಎಂಬ ನ್ಯಾಯದಂತೆ ಮೋಕ್ಷದ ಪ್ರಾಪ್ತಿಯನಿಮಿತ್ತ ಪ್ರಯತ್ನ ಮಾಡತಕ್ಕ ಜೀವದ ಸ್ವರೂಪವು ನಷ್ಟವಾಗುವದು. ಈ ಅನರ್ಥವನ್ನು ತಿಳಿದುಕೊಂಡು ಈಸಿದ್ಧಾಂತದಲ್ಲಿ ಯಾವ ಮುಮುಕ್ಷುವಿನ ಪ್ರವೃತ್ತಿಯೂ ಆಗುವದಿಲ್ಲ. ಅದರಿಂದ ಈ ಪಕ್ಷವು ಸಮೀಚೀನವಲ್ಲ.



ಪಂಚದಶಿ ಮತ್ತು ವಿಚಾರಸಾಗರ ಮೊದಲಾದ ಗ್ರಂಥಿಗಳಲ್ಲಿ ೧.ಅಧಿಷ್ಠಾನಕೂಟಸ್ಥ ಸಹಿತ ಸಾಭಾಸವೃದ್ಧಿ ಅಥವಾ ಅವಿದ್ಯೆಯನ್ನು ಜೀವವೆಂದುತಿಳಿದಿರುವರು. ೨. ಅಧಿಷ್ಠಾನ ಬ್ರಹ್ಮಸಹಿತ ಸಾಭಾಸ ಮಾಯೆಯನ್ನು ಈಶ್ವರನೆಂದು ತಿಳಿದಿರುವರು. ಇದರಲ್ಲಿ ವಾಚ್ಯಭಾಗದ ಏಕದೇಶದ ತ್ಯಾಗದಿಂದ ಮತ್ತು ಏಕದೇಶದಗ್ರಹಣದಿಂದ ಮಹಾವಾಕ್ಯಾದಿ ಸ್ಥಳಗಳಲ್ಲಿ ಸಿದ್ಧಾಂತ ಸಮ್ಮತಭಾಗತ್ಯಾಗಲಕ್ಷಣವೇ ಸ್ವೀಕೃತವಾಗಿದೆ.

ಈ ಪಕ್ಷದಲ್ಲಿ ಮುಖ್ಯ ಆಕಾಶದ ದೃಷ್ಟಾಂತವೇ ಅಂಗೀಕರಿಸಲ್ಪಟ್ಟಿದೆ. ಈ ಆಕಾಶದ ದೃಷ್ಟಾಂತದ ಸವಿಸ್ತರ ವರ್ಣನೆಯು ಪಂಚದಶಿಯ ಚಿತ್ರದೀಪದಲ್ಲಿ ಮತ್ತು ವಿಚಾರಸಾಗರದ ಚತುರ್ಥತರಂಗದಲ್ಲಿ ಮಾಡಿದೆ.

ಈ ಪಕ್ಷದ ರೀತಿಯಿಂದ ೧.ಆಕಾಶದ ಅಥವಾ ಮುಖಾದಿಗಳಪ್ರತಿಬಿಂಬದ ಅಧಿಷ್ಠಾನರೂಪವು ಉಪಾದಾನ ಘಟಾಕಾಶ ಮತ್ತು ದರ್ಪಣಾದಿಗಳು. ಮತ್ತು ೨. ಪರಿಣಾಮಿ ಉಪಾದಾನ ಜಲ, ಮತ್ತು ಅವಿದ್ಯಾದಿಗಳು, ಮತ್ತು ೩ ನಿಮಿತ್ತಕಾರಣ ಮಹಾಕಾಶ,ಮತ್ತು ಮುಖಾದಿಕಬಿಂಬ, ಮತ್ತು ಉಪಾಧಿಯ ಸನ್ನಿಧಿಗಳು ಇರುವುವು.

ಈ ಪ್ರತಿಬಿಂಬದ ಬಾಧದಿಂದ ತನ್ನ ಬಿಂಬಮುಖಾದಿಗಳಿಂದ ಅಭೇದವಾಗುವುದು. ತಥಾಪಿ ಯಾವಪರಿಯಂತರ ಜಲದರ್ಪಣಾದಿಕ ಮತ್ತು ಬಿಂಬದ ಸನ್ನಿಧಿರೂಪವು ನಿವೃತ್ತವಾಗುವುದೋ, ಆ ಪರಿಯಂತರ ಬಾಧಿತ ಪ್ರತಿಬಿಂಬವು ಸಹ ಅನುವೃತ್ತಿ ಪ್ರತೀತಿಯು ಆಗುವದು, ಇದಕ್ಕೇ ಬಾಧಿತಾನುವೃತ್ತಿ ಎನ್ನುತ್ತಾರೆ. ಇದರಂತೆ ೧ ಚಿದಾಭಾಸರೂಪಜೀವದ ಅಧಿಷ್ಠಾನರೂಪವು ಉಪಾದಾನಕೂಟಸ್ಥವು. ಮತ್ತು ೨ ಪರಿಣಾಮಿ ಉಪಾದಾನ ಅನೇಕ ಬುದ್ಧಿಅಥವಾ ಅಜ್ಞಾನ ಅಂಶವು, ಮತ್ತು ೩ ಪ್ರಾರಬ್ಧವು ನಿಮಿತ್ತಕಾರಣವು.

ಇವುಗಳಲ್ಲಿ ಯಾವ ಚಿದಾಭಾಸ, ಬುದ್ಧಿ, ಅಥವಾ ಅಜ್ಞಾನ ಅಂಶರೂಪವು ಉಪಾಧಿಸಹಿತ ತನ್ನ ಸ್ವರೂಪದ ಬಾಧಮಾಡಿ, ಅಹಂ ಮೊದಲಾದ ಜೀವ ವಾಚಕಪದದ ಲಕ್ಷ್ಯಾರ್ಥವಾದ ಕೂಟಸ್ಥ ಅಧಿಷ್ಠಾನ ರೂಪವು ತನ್ನ ನಿಜರೂಪವು. ಇದರ ಅಭಿಮಾನದಿಂದ ಈಅಹಂ ಪದದಲಕ್ಷ್ಯಕೂಟಸ್ಥದ ಬಿಂಬರೂಪಬ್ರಹ್ಮದೊಡನೆಪೂರ್ವಸಿದ್ಧ ಏಕತ್ವವುಳೆದೆ,ಇದನ್ನು ಯಾವನು ತಿಳಿಯುವನೋ ಅವನು ಮುಕ್ತನಾಗುವನು. ತಿಳಿಯದವನು ಬದ್ಧನಾಗಿಯೇ ಇರುವನು.

ಯದ್ಯಪಿ ಹೇಳಿದ "ಅಹಂಬ್ರಹ್ಮಾಸ್ಮಿ,,ಎಂಬ ಜ್ಞಾನದ ಸಮಯದಲ್ಲಿಯೂ ಅವಿದ್ಯಾರೂಪ ಉಪಾದಾನದ ನಾಶದಿಂದ ಅದರಕಾರ್ಯ ಜಗತ್‌ಸಹಿತ ಚಿದಾಭಾಸದ ಬಾಧವಾಗುವುದು ತಥಾಪಿ ಯಾವಪರಿಯಂತರ ಪ್ರಾರಬ್ಧರೂಪವುನಿಮಿತ್ತವಿದೆಯೋ ಆ ಪರಿಯಂತರ ಬಾಧವಾದ(ಮಿಥ್ಯಾತಿಳಿದ)ದೇಹಾದಿ ಜಗತ್‌ಸಹಿತ ಚಿದಾಭಾಸದ ಅನುವೃತ್ತಿ ಪ್ರತೀತಿಯು ಆಗುವುದು. ಯಾವಾಗ ಪ್ರಾರಬ್ಧದ ಅಂತವಾಗುವುದೋ ಆಗ ಈಪ್ರತೀತಿಯು ಅಭಾವವಾಗುವುದು. ಇದೇ

ಅದರ ವಿದೇಹಮೋಕ್ಷವು. ಪೂರ್ವೋಕ್ತ ಪಕ್ಷಕ್ಕಿಂತಲೂ ಈ ಪಕ್ಷವು ಉತ್ತಮವಾಗಿದೆ. ಮತ್ತು

ಬಿಂಬ ಪ್ರತಿಬಿಂಬವಾದದಲ್ಲಿ ೧ ಪ್ರತಿಬಿಂಬದ ಅಧಿಷ್ಠಾನರೂಪವು ಉಪಾದಾನವು. ಮತ್ತು ೨ ಪರಿಣಾಮಿ ಉಪಾದಾನ ಮುಖಾದಿ ಬಿಂಬದ ಅಜ್ಞಾನವು.

೩. ಇದರ ನಿಮಿತ್ತಕಾರಣವು ದರ್ಪಣ, ಮತ್ತು ಬಿಂಬದ ಸನ್ನಿಧಿ ಮೊದಲಾದವು. ಬಿಂಬ ಪ್ರತಿಬಿಂಬದ ಅಭೇದಜ್ಞಾನದಿಂದ ಪ್ರತಿಬಿಂಬ ಭಾವದ ನಿವೃತ್ತಿಯಾಗುವುದು. ಪರಂತು ಯಾವಪರಿಯಂತರ ಬಿಂಬ ಮತ್ತು ದರ್ಪಣದ ಸನ್ನಿಧಿ ರೂಪ ಉಪಾಧಿಯು ನಿಮಿತ್ತ ಆಗುವುದೋ ಆ ಪರಿಯಂತರ ಮಿಥ್ಯವೆಂದು ತಿಳಿದ ಪ್ರತಿಬಿಂಬ ಭಾವರಹಿತ ಪ್ರತಿಬಿಂಬದ ಸ್ವರೂಪದಪ್ರತೀತಿಯು ಆಗುವದು. ಯಾವಾಗ ದರ್ಪಣಾದಿಗಳ ಅಪಸರಣವಾಗುವುದೋ ಆಗ ಪ್ರತಿಬಿಂಬದ ಪ್ರತೀತಿಯ ಅಭಾವವಾಗುವದು.

೧. ಇದರಂತೆ ಒಂದೇ ಅಜ್ಞಾನದಿಂದ ಶುದ್ಧಬ್ರಹ್ಮರೂಪ ಬಿಂಬದಲ್ಲಿ ಜೀವರೂಪ ಪ್ರತಿಬಿಂಬಭಾವವು ಪ್ರತೀತವಾಗುವುದು. ಇದರ ಉಪಾದಾನವು ಅಜ್ಞಾನವು, ಮತ್ತು ಅಧಿಷ್ಠಾನವು ಶುದ್ಧಬ್ರಹ್ಮವು.

೨ ನಿಮಿತ್ತಕಾರಣವು ಅದೃಷ್ಟವು, ಯಾವಾಗ ಈ ಪ್ರತಿಬಿಂಬಕ್ಕೆ ತನ್ನ ಬಿಂಬ ಬ್ರಹ್ಮಗೊಡನೆ ಏಕತ್ವವು ಪ್ರತೀತವಾಗುವುದೋ, ಆಗ ಅದರ ಪ್ರತಿಬಿಂಬ ಭಾವ ಜೀವಭಾವವು ನಿವೃತ್ತವಾಗುವುದು. ಪರಂತು ಯಾವ ಪರಿಯಂತರ ಪ್ರಾರಬ್ಧರೂಪ ಉಪಾಧಿನಿಮಿತ್ತವು ಇದೆಯೋ ಆಪರಿಯಂತರ ಬಾಧಿತವಾದ ಜಗತ್‌ಸಹಿತ ಈ ಜೀವದ ಜೀವಭಾವರಹಿತ ಜೀವದ ಸ್ವರೂಪದ ಪ್ರತೀತಿಯಾಗುವುದು. ಯಾವಾಗ ಪ್ರಾರಬ್ಧದ ಅಂತವಾಗುವದೋ ಆಗ ಪ್ರತೀತಿಯ ಅಭಾವವಾಗಿ ಕೇವಲ ಶುದ್ಧಬ್ರಹ್ಮವು ಅವಶೇಷ ಉಳಿಯುವದು, ಇದೇ ಅದರ ವಿದೇಹಮೋಕ್ಷವು.

ಈಪಕ್ಷದಲ್ಲಿ ಸ್ವಪ್ನವತ್ ಮುಖ್ಯ ಏಕಜೀವದ ಅಂಗೀಕಾರವಿದೆ. ಮತ್ತು ಯಾವ ಅನೇಕ ಜೀವಗಳು ಪ್ರತೀತವಾಗುವುವೋ, ಇವು ಜೀವಾಭಾಸಗಳಾಗಿವೆ. ಇದರಲ್ಲಿ ಮೂರುಸತ್ತೆಗಳ ಅಂಗೀಕಾರವಿದೆ. ಅದರಿಂದ ಇದು ಸಹ ವ್ಯಾವಹಾರಿಕ ಪಕ್ಷವೆಂದೆನ್ನುತ್ತಾರೆ. ಪರಂತು ಅನ್ಯ ಸರ್ವವ್ಯಾವಹಾರಿಕ ಪಕ್ಷಗಳಲ್ಲಿ ಈ ಪಕ್ಷವು ಉತ್ತಮವಾಗಿದೆ.

ಈರೀತಿಯಿಂದ ಆಭಾಸವಾದದ ಮತ್ತು ಪ್ರತಿಬಿಂಬವಾದದ ಭೇದವಿದೆ.

॥೪೪೨॥ ಎಷ್ಟೋ ಗ್ರಂಥಗಳಲ್ಲಿ (೧) ಶುದ್ಧಸತ್ವಗುಣ ಸಹಿತ ಮಾಯಾ ವಿಶಿಷ್ಟಚೇತನವು ಈಶ್ವರನೆಂದೆನ್ನುತ್ತಾರೆ. ಮತ್ತು (೨) ಮಲಿನಸತ್ವ ಗುಣ ಸಹಿತ ಅಂತಃಕರಣದ ಉಪಾದಾನ ಅವಿದ್ಯೆಯ ಅಂಶವಿಶಿಷ್ಟಚೇತನವು ಜೀವವೆಂದೆನ್ನುತ್ತಾರೆ. ಇವಕ್ಕೇ ಅವಚ್ಛೇದವೆನ್ನುತ್ತಾರೆ.



೧

ಸರ್ವವೇದಾಂತದ ಪ್ರಕ್ರಿಯೆಗಳು ಅದ್ವೈತ ಆತ್ಮನನ್ನು ತಿಳಿಸುವದಕ್ಕಾಗಿವೆ. ಅದರಿಂದ ಯಾವ ಪ್ರಕ್ರಿಯೆಯಿಂದ ಜಿಜ್ಞಾಸುವಿಗೆ ಬೋಧವಾಗುವುದೋ, ಅದೇ ಅವನಿಗೆ ಸಮೀಚೀನವಾದದ್ದು. ತಥಾಪಿ ವಾಕ್ಯವೃತ್ತಿ ಮತ್ತು ಉಪದೇಶಸಹಸ್ರಿಯಲ್ಲಿ ಭಾಷ್ಯಕಾರನು ಆಭಾಸವಾದವನ್ನೇ ಬರೆದಿರುವನು. ಅದರಿಂದ ಆಭಾಸವಾದವು ಮುಖ್ಯವದೆ.

ಟಿಪ್ಪಣಿ. ೧. ಇಲ್ಲಿ ಸರ್ವ ಎಂಬ ಶಬ್ದದಿಂದ ಕಾರ್ಯಕಾರಣ ಉಪಾಧಿವಾದ ಅವಚ್ಛಿನ್ನ, ಅನವಚ್ಛಿನ್ನವಾದ ಮತ್ತು ಸೃಷ್ಟಿವಾದ ಮೊದಲಾದ ಪಕ್ಷಗಳ ಗ್ರಹಣವಿದೆ. ವೇದಾಂತದ ಅನೇಕ ಪಕ್ಷಗಳ ಅನುವಾದವು ಅಪ್ಪಯ್ಯ ದೀಕ್ಷಿತಕೃತ ಸಿದ್ಧಾಂತಲೇಶದಲ್ಲಿ ಹಾಗೂ ವೃತ್ತಿಪ್ರಭಾಕರದ ಅಷ್ಟಮಪ್ರಕಾಶದಲ್ಲಿಯೂ ಮಾಡಲ್ಪಟ್ಟಿದೆ.

॥೪೪೩॥ ನಾಲ್ಕು ಮಹಾವಾಕ್ಯಗಳಲ್ಲಿ ಭಾಗತ್ಯಾಗದ ಪ್ರದರ್ಶನವು

೧ ಮಾಯಾ (೨) ಮಾಯೆಯಲ್ಲಿ ಆಭಾಸ, ಮತ್ತು (೩) ಮಾಯೆಯ ಅಧಿಷ್ಠಾನವಾದ ಚೇತನ ಈ ಸರ್ವಶಕ್ತಿ ಸರ್ವಜ್ಞತ್ವ ಮೊದಲಾದ ಧರ್ಮಸಹಿತ ಈಶ್ವರನಿದ್ದಾನೆ. ಇದೇ 'ತತ್'ಪದದ ವಾಚ್ಯವು. ಮತ್ತು

೨. [೧] ವ್ಯಷ್ಟಿ ಅವಿದ್ಯಾ [೨] ಅದರಲ್ಲಿ ಆಭಾಸ, ಮತ್ತು [೩] ಇದರ ಅಧಿಷ್ಠಾನ ಚೇತನ ಅಲ್ಪಶಕ್ತಿ, ಅಲ್ಪಜ್ಞತ್ವ ಮೊದಲಾದ ಧರ್ಮಸಹಿತ, ಜೀವನಿದೆ. ಇದು "ತ್ವಂ" ಪದದ ವಾಚ್ಯವು.

ಈ ಎರಡಕ್ಕೂ "ತತ್ವಮಸಿ" ಎಂಬ ವಾಕ್ಯದಿಂದ ಏಕತ್ವವನ್ನು ಬೋಧನಮಾಡಿದ್ದಾರೆ. ಅದು ಸಂಭವಿಸುವುದಿಲ್ಲ. ಅದರಿಂದ (೧) ಆಭಾಸ ಸಹಿತ ಮಾಯಾ, ಮತ್ತು ಮಾಯಾಕೃತ ಸರ್ವಶಕ್ತಿ, ಸರ್ವಜ್ಞತ್ವಾದಿಕ ಧರ್ಮ ಇಷ್ಟು ವಾಚ್ಯಭಾಗಗಳನ್ನು ತ್ಯಾಗಮಾಡಿ, ಚೇತನಭಾಗದಲ್ಲಿ "ತತ್" ಪದದ ಭಾಗತ್ಯಾಗ ಲಕ್ಷಣ (೨) ಇದರಂತೆ ಆಭಾಸಸಹಿತ ಅವಿದ್ಯಾ ಅಂಶ, ಮತ್ತು ಅವಿದ್ಯಾಕೃತ ಅಲ್ಪಶಕ್ತಿ, ಅಲ್ಪಜ್ಞತ್ವಾದಿ ಧರ್ಮ, 'ತ್ವಂ'ಪದದ ವಾಚ್ಯಭಾಗ ಇವುಗಳನ್ನು ತ್ಯಾಗಮಾಡಿ, ಚೇತನಭಾಗದಲ್ಲಿ "ತ್ವಂ" ಪದದ ಭಾಗತ್ಯಾಗ ಲಕ್ಷಣ.

ಈ ರೀತಿಯಿಂದ ಭಾಗತ್ಯಾಗ ಲಕ್ಷಣದಿಂದ (೧) ಈಶ್ವರ ಮತ್ತು ಜೀವ ಸ್ವರೂಪದಲ್ಲಿ ಲಕ್ಷ್ಯವಾದ ಚೇತನಭಾಗಗಳ ಏಕತ್ವವನ್ನು "ತತ್ವಮಸಿ" ೧ ಮಹಾವಾಕ್ಯವು ಬೋಧನಮಾಡುವದು.

೨
೨. ಇದರಂತೆ "ಅಯಮಾತ್ಮಾ ಬ್ರಹ್ಮ" ಈ ಮಹಾವಾಕ್ಯದಲ್ಲಿ (೧) ಆತ್ಮಾ ಎಂಬ ಪದವು ಜೀವದ ವಾಚ್ಯವು. ಮತ್ತು [೨] ಬ್ರಹ್ಮಪದವು ಈಶ್ವರ ವಾಚ್ಯವಾಗಿದೆ. ಬ್ರಹ್ಮಪದವು ಶುದ್ಧವಾಚ್ಯವು ಅಲ್ಲ. ಈಶ್ವರನೇ ವಾಚ್ಯವು. ಇದು ಚತುರ್ಥತರಂಗವಲ್ಲಿ ಪ್ರತಿಪಾದನ ಮಾಡಲ್ಪಟ್ಟಿರುತ್ತದೆ. ಪೂರ್ವವತ್ ಎರಡೂ ಪದಗಳ ಲಕ್ಷಣಾ ಇದೆ. (೩) ಲಕ್ಷ್ಯಅರ್ಥವು ಪರೋಕ್ಷವಲ್ಲ. ಈಅರ್ಥವನ್ನು ತಿಳಿಸುವುದರ ಸಲುವಾಗಿ ಅಯಂ ಪದವದೆ. 'ಅಯಂ' ಅ...
೪
ಪರೆ ಎಲ್ಲದರ ಅಪರೋಕ್ಷ ಆತ್ಮಾಬ್ರಹ್ಮವಿದೆ, ಇದು ವಾಕ್ಯದ ಅರ್ಥವು.

೩. 'ಅಹಂಬ್ರಹ್ಮಾಸ್ಮಿ' ಈಮಹಾವಾಕ್ಯದಲ್ಲಿ (೨]ಅಹಂ ಪದವು ಜೀವ ವಾಚ್ಯವು, ಮತ್ತು [೨]ಬ್ರಹ್ಮಪದವು ಈಶವಾಚ್ಯವು, ಎರಡೂ ಪದಗಳ ಚೇತನ ಭಾಗದಲ್ಲಿ ಲಕ್ಷಣ "ನಾನು ಬ್ರಹ್ಮನಿರುವೆನು," ಈ ವಾಕ್ಯದ ಅರ್ಥವು.

೨೪
೪. "ಪ್ರಜ್ಞಾನಮಾನಂದ ಬ್ರಹ್ಮ" ಈ ಮಹಾವಾಕ್ಯದಲ್ಲಿ (೧) ಪ್ರಜ್ಞಾನಪದದ ವಾಚ್ಯವು ಜೀವವು. [೨] ಬ್ರಹ್ಮಪದದ ವಾಚ್ಯವು ಈಶವು. ಪೂರ್ವವತ್ ಲಕ್ಷಣವು (೩) ಲಕ್ಷ್ಯವಾದ ಬ್ರಹ್ಮಾತ್ಮಾ, ಇದು ಆನಂದ ಗುಣವುಳ್ಳದ್ದು ಅಲ್ಲ. ಆದರೆ ಆನಂದರೂಪವು ಎಂಬ ಅರ್ಥವನ್ನು ತಿಳಿಸುವದಕ್ಕಾಗಿ ಆನಂದಪದವಿದೆ.

ಆತ್ಮದಿಂದ ಅಭಿನ್ನಬ್ರಹ್ಮವು ಆನಂದ ರೂಪವು. ಇದು ವಾಕ್ಯದ ಅರ್ಥವು.

ಹೇಗೆ ಮಹಾವಾಕ್ಯಗಳಲ್ಲಿ ಭಾಗತ್ಯಾಗ ಲಕ್ಷಣವಿದೆಯೋ ಅದರಂತೆ ಅನ್ಯವಾಕ್ಯಗಳಲ್ಲಿ ಸತ್ಯ, ಜ್ಞಾನ, ಆನಂದಪದಗಳು ಸಹ ಶುದ್ಧಬ್ರಹ್ಮನನ್ನು ಭಾಗತ್ಯಾಗ ಲಕ್ಷಣದಿಂದ ಬೋಧನ ಮಾಡುವುವು, ಶಕ್ತಿಯಿಂದ ಅಲ್ಲ. ಕಾರಣವೇನೆಂದರೆ, ಶುದ್ಧಬ್ರಹ್ಮವು ಯಾವಪದದ ವಾಚ್ಯವೂ ಅಲ್ಲ: ಇದು ಸಿದ್ಧಾಂತವು. ಅದರಿಂದ ಸರ್ವಪದಗಳು ವಿಶಿಷ್ಟದ ವಾಚಕಗಳು, ಮತ್ತು ಶುದ್ಧದ ಲಕ್ಷಕಗಳಾಗಿವೆ.

೧. ಮಾಯೆಯ ಅಪೇಕ್ಷಿಕ ಸತ್ಯತೆ, ಮತ್ತು ಚೇತನದ ನಿರಪೇಕ್ಷಿಕ ಸತ್ಯತೆಯು ಕೂಡಲಾಗಿ ಸತ್‌ಪದದ ವಾಚ್ಯವು. ನಿರಪೇಕ್ಷಿಕ ಸತ್ಯತೆ ಲಕ್ಷ್ಯವು.



೨. ಬುದ್ಧಿವೃತ್ತಿರೂಪ ಜ್ಞಾನ, ಮತ್ತು ಸ್ವಯಂಪ್ರಕಾಶ ಜ್ಞಾನ, ...ಊ ಕೂಡಲು ಜ್ಞಾನಪದದ ವಾಚ್ಯವು; ಮತ್ತು ಸ್ವಯಂಪ್ರಕಾಶ ...ಗಲಕ್ಷ್ಯವು.

೩. ವಿಷಯ ಸಂಬಂಧ ಜನ್ಯಸುಖಾಕಾರ ಸಾತ್ವಿಕ ಅಂತಃಕರಣದ ...ತ್ತಿಯು, ಮತ್ತು ಪರಮಪ್ರೇಮಾಸ್ಪದ ಸ್ವರೂಪವು, ಈ ಎರಡೂ ಮಿಶ್ರ...ಗಲು ಆನಂದಪದದ ವಾಚ್ಯವು, ಮತ್ತು ವೃತ್ತಿಭಾಗವನ್ನು ತ್ಯಾಗಮಾ... ಸ್ವರೂಪಭಾಗ ಲಕ್ಷ್ಯವು.

ಈ ರೀತಿಯಿಂದ ಸರ್ವಪದಗಳ ಶುದ್ಧದಲ್ಲಿ ಲಕ್ಷಣಾ ಸಂಕ್ಷೇಪ ...ೀರಕದಲ್ಲಿ ಪ್ರತಿಪಾದನ ಮಾಡಿರುತ್ತದೆ.

...ಪ್ಪಣಿ. ೧. ಇದು ಉಪದೇಶ ವಾಕ್ಯವೆನ್ನುವರು ಇದರಿಂದ ಭಿನ್ನವಾದ ಮೂರು ವಾಕ್ಯಗಳಿಗೆ ಅನುಭವವಾಕ್ಯವೆನ್ನುವರು.

... ಇದು ಅಥರ್ವಣವೇದದ ಮಾಂಡೂಕ್ಯೋಪನಿಷದ್ಗತ ಮಹಾವಾಕ್ಯವು. ಇದರ ವಿಶೇಷ ಪ್ರಸಂಗವನ್ನು ಪಂಡಿತ ಪೀತಾಂಬರಜಿಯವರು ಶ್ರೀಪಂಚದಶಿಯ ಮಹಾವಾಕ್ಯ ವಿವೇಕದ ಟಿಪ್ಪಣಿಯಲ್ಲಿಯೂ ಬೃಹದಾರಣ್ಯಕದ ಭಾಷಾ ಟೀಕೆಯಲ್ಲಿಯೂ ಉಲ್ಲೇಖಿಸಿರುವರು.

... ಅಪರೋಕ್ಷವು ಎರಡು ಪ್ರಕಾರವಾಗಿದೆ. ಒಂದು ಸ್ವಯಂಪ್ರಕಾಶವಾಗಿರುವದರಿಂದ ಬುದ್ಧಿರೂಪ ಜ್ಞಾನದ ವಿಷಯವಾದ ಆತ್ಮದ ಸ್ವರೂಪವು, ಇದು ಅಪರೋಕ್ಷವು. ಎರಡನೆಯದು "ನಾನು ಸ್ವಪ್ರಕಾಶ ಆತ್ಮನಾಗಿರುವೆನು." ಈ ರೀತಿಯಿಂದ ಬುದ್ಧಿಯಲ್ಲಿ ಅವಲೋಕನ ಮಾಡುವದು, ಇದು ಸಹಾ ಅಪರೋಕ್ಷವೆಂದು ಎನ್ನುತ್ತಾರೆ.

ಇವುಗಳಲ್ಲಿ ಪ್ರಥಮ ಅಪರೋಕ್ಷ ನಿತ್ಯ (ಸದಾವಿದ್ಯಮಾನ)ವಾಗಿದೆ. ಮತ್ತು ಎರಡನೇ [ಬುದ್ಧಿವೃತ್ತಿರೂಪ] ಅಪರೋಕ್ಷ ಅನಿತ್ಯ (ಎಂದಾದರೂ ಆಗತಕ್ಕಂಥಾದ್ದು) ವಾಗಿದೆ.

೪. ಇದು ಯಜುರ್ವೇದದ ಬೃಹದಾರಣ್ಯಕ ಉಪನಿಷದ್ಗತ ಮಹಾವಾಕ್ಯ, ಇದರ ವಿಶೇಷ ಪ್ರಸಂಗವನ್ನು ಪಂಡಿತ ಪೀತಾಂಬರಜಿಯವರು ಶ್ರೀ ಪಂಚದಶಿಯ ಮಹಾವಾಕ್ಯ ವಿವೇಕದ ಟಿಪ್ಪಣಿಯಲ್ಲಿಯೂ ಬೃಹದಾರಣ್ಯಕ ಭಾಷಾ ಟೀಕೆಯಲ್ಲಿಯೂ ಉಲ್ಲೇಖಿಸಿರುವರು.

೫. ಇದು ಋಗ್ವೇದದ ಐತರೇಯ ಉಪನಿಷತ್ತಿನ ಮಹಾವಾಕ್ಯವು. ಇದರ ವಿಶೇಷ ಪ್ರಸಂಗವನ್ನು ಪಂಡಿತ ಪೀತಾಂಬರಜಿಯವರು ಶ್ರೀ ಪಂಚದಶಿಯ ಮಹಾವಾಕ್ಯ ವಿವೇಕದ ಟಿಪ್ಪಣಿಯಲ್ಲಿ ಉಲ್ಲೇಖಿಸಿದ್ದಾರೆ.

॥೪೪೪॥ ಉಕ್ತ ಅರ್ಥ ಸಂಗ್ರಹ ॥

॥ ಕವಿತ್ವ ॥

"ಗಂಗಾಮೈ ಗ್ರಾಮ,, ಜಹತಿಲಚ್ಛನಾ ಯೂ ಠೌರಲಿಖಿ।
"ಸೋನದಾವೈ,, ಲಚ್ಛನಾ ಅಜಹತಿ ಜನಾಇಯೆ ॥
"ಸೊಈ ಯಹವಸ್ತು,, ಇಹಾಲಚ್ಛನ ಹೈ ಭಾಗತ್ಯಾಗ
ದೂಜೋನಾಮ ಜಹತಿ ಅಜಹತಿ ಸುನಾಈಯೆ ॥
"ತತ್ವಮಸಿ" ಆದಿ ಮಹಾವಾಕ್ಯನಮ್ಮೆ ಭಾಗತ್ಯಾಗ।
ಲಚ್ಛನಾ ನ ಜಹತಿ ಅಜಹತಿ ಬತಾಈಯೆ ॥
ಬ್ರಹ್ಮ ಕಾಹು ಪದಕೊ ನ ವಾಚ್ಯಯಹೂ ಬಖಾನೈವೇದ।
ಯಾತೈ ಸರ್ವಪದನಮೈ ರೀತಿಯಹೂ ಲಖಾ ಇಯೆ ॥೪೩॥

ಅರ್ಥ॥ "ಗಂಗಾವಲ್ಲಿ ಗ್ರಾಮವದೆ" ಈ ಸ್ಥಳದಲ್ಲಿ ಜಹತ್ ಲಕ್ಷಣವು, "ಶೋಣವು ಧಾವಿಸುವುದು" ಈವಾಕ್ಯದಲ್ಲಿ ಅಜಹತ್ ಲಕ್ಷಣವು, "ಅದು ಇದಾಗಿದೆ" ಎಂಬ ವಾಕ್ಯದಲ್ಲಿ ಭಾಗತ್ಯಾಗ ಲಕ್ಷಣವಾಗುವದು. ಇದಕ್ಕೆ ಜಹತಿ, ಅಜಹತಿ ಲಕ್ಷಣವೆಂದು ಎರಡನೇ ನಾಮವು ಇದೆ. "ತತ್ವಮಸಿ" ಮೊದಲಾದ ಮಹಾವಾಕ್ಯಗಳಲ್ಲಿ ಜಹತಿ, ಅಜಹತಿ ಲಕ್ಷಣಗಳೆರಡನ್ನೂ ಬಿಟ್ಟು, ಭಾಗತ್ಯಾಗ ಲಕ್ಷಣವಾಗುವದೆಂಬದನ್ನು ತಿಳಿಸಿದೆನು, ಬ್ರಹ್ಮವು ಯಾವ ಪದದ ವಾಚ್ಯವೂ ಅಲ್ಲವೆಂದು ವೇದವು ಹೇಳುತ್ತದೆ. ಆದಕಾರಣ ಸರ್ವಪದಗಳಲ್ಲಿ ಇದೇ ಪ್ರಕಾರವನ್ನು ನೀನಾದರೂ ತಿಳಿ.

॥ ಕವಿತ್ವ ॥

ಮಾಯಾ ಮಾಂಹಿ ಸತ್ಯತಾ ಜು ಔರಭಾಂತಿ ಭಾಖಿಯತ
ಬ್ರಹ್ಮಮಾಂಹಿ ಸತ್ಯತಾ ಸು ಔರಭಾಂತಿ ಭಾಖಿಯೆ ॥
ದೋಉ ಮಿಲೀ ಸತ್ಯಪದ ವಾಚ್ಯಮುನಿ ಭಾಖತ ಹೈ।
ಬ್ರಹ್ಮಮಾಂಹಿ ಸತ್ಯತಾ ಸುಲಚ್ಛ್ಯಭಾಗ ರಾಖಿಯೆ ॥
ಬುದ್ಧಿವೃತ್ತಿ ಸಂವಿತ ದ್ವೈಮಿಲೆ ಜ್ಞಾನಪದವಾಚ್ಯ।
ಸಂವಿತ ಸ್ವರೂಪ ಲಚ್ಛ್ಯ ಬುದ್ಧಿವೃತ್ತಿ ನಾಖಿಯೆ ॥
ಆತ್ಮ ಔ ವಿಷೈಕೊ ಸುಖ ವಾಚ್ಯಪದ ಆನಂದಕೊ।
ವಿಷೈಸುಖ ತ್ಯಾಗಿ ಅತ್ಮಸುಖ ಲಚ್ಛೀ ಅಖಿಯೆ ॥೪೪॥

ಅರ್ಥ॥ ಮಾಯೆಯಲ್ಲಿಯ ಅಪೇಕ್ಷಿಕ ಸತ್, ಮತ್ತು ಚೈತನ ದ ನಿ-



...ಕ್ಷ ಸತ್ ಇವೆರಡೂ ಒಂದಾಗಲು ಸತ್‌ಪದದ ವಾಚ್ಯವಾಗುವುದು. ...ದರಲ್ಲಿ ನಿರಪೇಕ್ಷ ಸತ್ ಲಕ್ಷ್ಯವು, ಸ್ವಯಂಪ್ರಕಾಶ ಪೂರ್ಣಜ್ಞಾನ, ಮ... ಬುದ್ಧಿವೃತ್ತಿಯು ಜ್ಞಾನ ಏಕತ್ರವಾಗಲು ಜ್ಞಾನಪದದ ವಾಚ್ಯವೆಂದು ...ಳಿ. ಇದರಲ್ಲಿ ಸ್ವಯಂಪ್ರಕಾಶ ಜ್ಞಾನವು ಲಕ್ಷ್ಯವದೆ. ವಿಷಯ ಸಂಬಂ...ಧದ ಸುಖಾಕೃತಿ, ಸಾತ್ವಿಕ ಅಂತಃಕರಣದ ವೃತ್ತಿ, ಮತ್ತು ಪರಪ್ರೇಮಾ...ದಸ್ವರೂಪಸ್ಥಿತಿ, ಇವು ಏಕತ್ರವಾಗಲು ಆನಂದಪದದ ವಾಚ್ಯವಾಗು...ವು. ಇದರಲ್ಲಿ ವೃತ್ತಿಭಾಗವನ್ನು ತ್ಯಾಗಮಾಡಿ, ಪರಮಪ್ರೇಮಾಸ್ಪದತ್ವ ...ರ್ಣವು ಆನಂದಪದದ ಲಕ್ಷ್ಯವೆಂದು ತಿಳಿ. ಈ ಪ್ರಕಾರ ಸರ್ವಪದಗಳ ...ಯೂ ತಿಳಿ? ಶುದ್ಧಾಂಶವು ಪೂರ್ಣಲಕ್ಷ್ಯವು, ಭಾಗತ್ಯಾಗ ಲಕ್ಷಣದಿಂದ ...ಸಮ್ಮತ ಪ್ರಮಾಣವನ್ನು ಹೇಳಿದೆನು.

॥೪೪೫॥ ಪ್ರಶ್ನೆ. ಎರಡೂ ಪದಗಳಲ್ಲಿ ಲಕ್ಷಣವನ್ನು ಅಂಗೀ ಕರಿಸುವದು ನಿಷ್ಫಲವು.

...ಮಹಾವಾಕ್ಯಗಳಲ್ಲಿ ವಿರೋಧವನ್ನು ನಿವೃತ್ತಿಮಾಡುವುದರ ಸಲುವಾಗಿ ...ರಡೂ ಪದಗಳಲ್ಲಿ ಲಕ್ಷಣವನ್ನು ಅಂಗೀಕರಿಸಬೇಕು. ಈಗ ಕೆಲವರು ಅನ್ನು...ವೇನೆಂದರೆ;-ಒಂದೇ ಪದದಲ್ಲಿ ಲಕ್ಷಣವನ್ನು ಅಂಗೀಕರಿಸುವ ಪ್ರಯೋ...ನಿಲ್ಲ.

॥ದೋಹಾ॥

ಏಕಹಿ ಪದನ್ಮೈ ಲಚ್ಛನಾ। ಮಾನೈ ನಹೀ ವಿರೋಧ॥
ದೋಯ ಪದನಮ್ಮೆ ಲಚ್ಛನಾ। ನಿಷ್ಫಲ ಕಹತ ಸುಬೋಧ ॥

ಟೀಕಾ॥ ಎಲೌ ಸುಜ್ಞನೇ? ಎರಡು ಪದಗಳಲ್ಲಿ ಲಕ್ಷಣವು ನಿಷ್ಫಲವೆಂದು ...ನ್ನುತ್ತಾರೆ. ಕಾರಣವೇನೆಂದರೆ, ಒಂದೇ ಪದದಲ್ಲಿ ಲಕ್ಷಣವನ್ನು ಅಂಗೀಕ...ರಿಸುವುದರಿಂದ ವಿರೋಧ ನಿವೃತ್ತವಾಗುತ್ತದೆ. ಇದರ ಭಾವಾರ್ಥವೇನೆಂ...ದರೆ, ಯದ್ಯಪಿ ಸರ್ವಜ್ಞತ್ವಾದಿ ವಿಶಿಷ್ಟದ ಅಲ್ಪಜ್ಞತ್ವಾದಿ ವಿಶಿಷ್ಟದೊಡನೆ ...ಏಕತ್ವವು ಸಂಭವಿಸುವದಿಲ್ಲ. ತಥಾಪಿ ಒಂದು ಪದದ ಲಕ್ಷ್ಯವಾದ ...ವಸ್ತುವಿಗೆ ಅದರ ವಿಶಿಷ್ಟದೊಡನೆ ಏಕತ್ವವು ಸಂಭವಿಸುತ್ತದೆ. ಇದಕ್ಕೆ ದೃ...ಷ್ಟಾಂತ;-(೧) "ಶೂದ್ರಮನುಷ್ಯ ಬ್ರಾಹ್ಮಣನಿದ್ದಾನೆ" ಈ ರೀತಿಯಿಂದ ...ಶೂದ್ರತ್ವ ಧರ್ಮವಿಶಿಷ್ಟ ಮನುಷ್ಯನಿಗೆ, ಬ್ರಾಹ್ಮಣತ್ವ ಧರ್ಮವಿಶಿಷ್ಟದ ...ಏಕತ್ವವನ್ನು ಹೇಳುವದು ವಿರುದ್ಧವು. ಮತ್ತು(೨) "ಮನುಷ್ಯ ಬ್ರಾಹ್ಮ...ಣನಿದ್ದಾನೆ" ಈ ರೀತಿಯಿಂದ ಶೂದ್ರತ್ವ ಧರ್ಮರಹಿತ ಶುದ್ಧಮನುಷ್ಯನಿಗೆ

ಬ್ರಾಹ್ಮಣತ್ವ ವಿಶಿಷ್ಟನನ್ನು ಹೇಳುವದರಿಂದ ವಿರೋಧವಿಲ್ಲ. ಇದರಂತೆ(೧) ಅಲ್ಪಜ್ಞತ್ವ ಮೊದಲಾದ ಧರ್ಮವಿಶಿಷ್ಟಚೇತನಕ್ಕೂ, ಮತ್ತು ಸರ್ವಜ್ಞತ್ವಾದಿ ಧರ್ಮವಿಶಿಷ್ಟಕ್ಕೂ ಏಕತ್ವವು ವಿರುದ್ಧವದೆ. (೨) ಪರಂತು ಜೀವ ವಾಚಕಪದ ಮತ್ತು ಈಶ ವಾಚಕಪದ ಚೇತನಗಳಲ್ಲಿ ಲಕ್ಷಣಗಳಿಂದ ಚೇತನಮಾತ್ರದ ಸರ್ವಜ್ಞತ್ವಾದಿ ಧರ್ಮವಿಶಿಷ್ಟದೊಡನೆ, ಅಥವಾ ಅಲ್ಪಜ್ಞತ್ವಾದಿ ಧರ್ಮವಿಶಿಷ್ಟದೊಡನೆ ಏಕತ್ವವನ್ನು ಹೇಳುವುದರಿಂದ ವಿರೋಧವಿಲ್ಲ; ಅದರಿಂದ ಎರಡು ಪದಗಳಲ್ಲಿ ಲಕ್ಷಣೆಯನ್ನು ಅಂಗೀಕರಿಸುವ ವಿಷಯದಲ್ಲಿ ಯಾವ ಯುಕ್ತಿಯೂ ಇಲ್ಲ.

ಗತಪ್ರಶ್ನೆಯ ಉತ್ತರ ॥೪೪೬--೪೫೦॥

॥೪೪೬॥ ಎರಡೂ ಪದಗಳಲ್ಲಿ ಲಕ್ಷಣಾ ಸಫಲವದೆ.

ಸಮಾಧಾನ ॥ ಕವಿತ್ತ

ಲಚ್ಛನಾ ಜೊ ಕಹ್ಯೆ ಏಕ ಪದಮಾಂಹಿ ತಾಕೂಯಹ
ಪೂಛಿ ದೋಯುಪಡನಮ್ಯೆ ಕೌನಸ್ಯೆಮ್ಯೆ ಲಚ್ಛನಾ ॥
ಪ್ರಥಮ ವಾ ದ್ವಿತೀಯಮ್ಯೆ ಕಹ್ಯೆ ತಾಹಿ ಭಾಖಿ ಯಹ
ವಾಕ್ಯನಕೊ ಹೋಯಗೊವಿರೋಧ ಮೂಢಲಚ್ಛನಾ॥
ತೀನಿವಾಕ್ಯ ಮಧ್ಯ ಜೀವವಾಚಕ ಪ್ರಥಮಪದ।
"ತತ್ವಮಸಿ" ಯಾಮ್ಯೆ ಆದಿಪದ ಈಸಲಚ್ಛನಾ॥
ಪ್ರಥಮ ವಾ ಧ್ವಿತೀಯಕೊ ನೇಮನಹಿ ಬನ್ಯೆಯಾತ್ಯೆ।
ಭಾಖತದ್ವೈಪದನಮ್ಯೆ ಲಚ್ಛನಾ ಸುಲಚ್ಛನಾ ॥೪೪೬॥

ಟೀಕಾ॥ ಒಂದೇಪದದಲ್ಲಿ ಲಕ್ಷಣ ಅಂಗೀಕಾರ ಮಾಡುವವರನ್ನು ಕುರಿತು ಪ್ರಶ್ನೆಯೇನೆಂದರೆ, ಎರಡು ಪದಗಳಲ್ಲಿಯು ಯಾವ ಪದದಲ್ಲಿ ಲಕ್ಷಣಾ ಇದೆ? ಅದಕ್ಕೆ ಅವರು ಹೀಗೆ ಹೇಳುವರು (೧) ಸರ್ವಮಹಾವಾಕ್ಯಗಳ ಪ್ರಥಮ ಪದದಲ್ಲಿ ಲಕ್ಷಣಾ ಇದೆ. ಎರಡನೇ ಪದದಲ್ಲಿ ಇಲ್ಲ(೨) ಅಥವಾ ದ್ವಿತೀಯ ಪದದಲ್ಲಿ ಲಕ್ಷಣಾ ಸರ್ವವಾಕ್ಯಗಳಲ್ಲಿ ಇದೆ. ಪ್ರಥಮ ಪದದಲ್ಲಿ ಇಲ್ಲ.

ಎಲೈ ಶಿಷ್ಯನೇ? ಅವರಿಗೆ ಹೀಗೆ ಹೇಳಬೇಕು, ಎಲೈ ಮೂಢರೇ! ಪ್ರಥಮ ಅಥವಾ ದ್ವಿತೀಯ ಪದದಲ್ಲಿ ನಿಯಮಿತವಾಗಿ ಸರ್ವವಾಕ್ಯಗಳಲ್ಲಿ ಲಕ್ಷಣಾ ಅಂಗೀಕರಿಸಿದರೆ, ವಾಕ್ಯಗಳಲ್ಲಿ ಪರಸ್ಪರ ವಿರೋಧವುಂಟಾಗುವದು. ಕಾರಣ ವೇನೆಂದರೆ, (೧) ಮೂರು ವಾಕ್ಯಗಳ ಮಧ್ಯದಲ್ಲಿ "ಅಹಂ ಬ್ರಹ್ಮಾಸ್ಮಿ" "ಪ್ರಜ್ಞಾನ ಮಾನಂದಂ ಬ್ರಹ್ಮ" "ಅಯಮಾತ್ಮಾ ಬ್ರಹ್ಮ"



ಮೂರು ವಾಕ್ಯಗಳಲ್ಲಿ ಜೀವವಾಚಕ ಪದವು ಪ್ರಥಮ ಅಂದರೆ ಪೂರ್ವವಾಗಿದೆ. ಮತ್ತು "ತತ್ವಮಸಿ" ಎಂಬ ವಾಕ್ಯದಲ್ಲಿ ಆದಿಪದ ಅಂದರೆ ಮನು ಪದವು ಈಶಲಕ್ಷಣ ಅಂದರೆ ಈಶ್ವರನ ಬೋಧವಾಗಿದೆ.

[೧] ಅದರಿಂದ ಸರ್ವವಾಕ್ಯಗಳ ಪೂರ್ವಪದದಲ್ಲಿ ಲಕ್ಷವನ್ನು ಗೀಕರಿಸಿದರೆ ಮೂರು ವಾಕ್ಯಗಳ ಅರ್ಥವು ಹೀಗೆ ಆಗುವದಲ್ಲಾ? ಚೇತ ವೇ ಸರ್ವಜ್ಞತ್ವಾದಿ ವಿಶಿಷ್ಟ ಅಂಶ; ಸರ್ವವೂ ಈಶ್ವರ ರೂಪವು. ಮತ್ತು (೨) ತ್ವಮಸಿ' ವಾಕ್ಯಕ್ಕೆ ಆಗುವ ಅರ್ಥವು ಯಾವುದೆಂದರೆ, 'ಚೇತನವು ಅಲ್ಪ ತ್ವಾದಿ ವಿಶಿಷ್ಟಸಂಸಾರೀ ಜೀವರೂಪವು. ಕಾರಣವೇನೆಂದರೆ, ಮೂರು ವಾಕ್ಯಗಳಲ್ಲಿಯೂ ಪೂರ್ವಪದವು ಜೀವವಾಚಕವು. ಇವುಗಳ ಚೇತನ ಭಾಗದಲ್ಲಿ ಲಕ್ಷಣಾ ಮತ್ತು ದ್ವಿತೀಯವಾದ ಈಶವಾಚಕಪದ ಇವುಗಳ ವಾಚ್ಯದ ಗ್ರಹಣ, ಮತ್ತು 'ತತ್ವಮಸಿ'ಯಲ್ಲಿ ಆದಿ ಪದ ಈಶ ವಾಚಕ. ಇದರ ಚೇತನ ಭಾಗದಲ್ಲಿ ಲಕ್ಷಣಾ ಮತ್ತು ದ್ವಿತಿಯ ಜೀವವಾಚಕಪದ ಇದರ ವಾಚ್ಯದ ಗ್ರಹಣ. ಈ ರೀತಿಯಿಂದ ಲಕ್ಷಣವನ್ನು ನಿಯಮದಿಂದ ಮಾಡ ವಾಕ್ಯಗಳ ಪರಸ್ಪರ ವಿರೋಧವಾಗುವುದು.

ಇದರಂತೆಯೇ ಸರ್ವವಾಕ್ಯಗಳ ದ್ವಿತೀಯ ಪದದಲ್ಲಿ ಲಕ್ಷಣಾ ಅಂಗೀಕರಿಸಿದರೆ, [೧] ಮೂರೂ ವಾಕ್ಯಗಳಲ್ಲಿ ಪೂರ್ವದಲ್ಲಿಯ ಜೀವಪದ ಇದರ ವಾಚ್ಯದ ಗ್ರಹಣ ಮತ್ತು ಉತ್ತರ ಈಶಪದದ ಚೇತನಭಾಗದಲ್ಲಿ ಲಕ್ಷಣಾ ದರಿಂದ ಅಲ್ಪಜ್ಞತ್ವಾದಿ ಧರ್ಮ ವಿಶಿಷ್ಟ ಚೇತನವು. ಹೀಗೆ ಮೂರೂ ವಾಕ್ಯಗಳ ಅರ್ಥವಾಗಬಹುದು. ಮತ್ತು (೨) "ತತ್ವಮಸಿ" ಯಲ್ಲಿ ಆದಿ ಈಶಪದ, ಅದರ ವಾಚ್ಯದ ಗ್ರಹಣ ಮತ್ತು ದ್ವಿತೀಯ ಜೀವಪದದ ಚೈತನ್ಯ ಭಾಗದಲ್ಲಿ ಲಕ್ಷಣಾ, ಅದರಿಂದ ಸರ್ವಜ್ಞತ್ವಾದಿ ಧರ್ಮ ವಿಶಿಷ್ಟ ಚೇತನವಿದೆ. ಮು "ತತ್ವಮಸಿ" ವಾಕ್ಯದ ಅರ್ಥವಾಗುವುದರಿಂದ ಪರಸ್ಪರ ವಿರೋಧವಾಗುವುದು.

ಈ ಪ್ರಕಾರವಾಗಿ ಪ್ರಥಮ ಇಲ್ಲವೆ ದ್ವಿತೀಯ ಪದದಲ್ಲಿ ಲಕ್ಷಣ ನಿಯಮವು ಸಂಭವಿಸುವುದಿಲ್ಲ. ಅದರಿಂದ ಸುಜ್ಞರಾದ ಆಚಾರ್ಯರು ಎರಡು ಪದಗಳಲ್ಲಿಯೂ ಲಕ್ಷಣವನ್ನು ಅಂಗೀಕರಿಸುವರು. ಮತ್ತು

॥೪೪೭॥ ಈಶವಾಚಕ ಪದದಲ್ಲಿ ಲಕ್ಷಣಾ ಅದೆ. ಇದರಉತ್ತರ.

ಕೆಲವರು ಹೀಗೆಂದರೆ;- ಪ್ರಥಮಪದ, ಅಥವಾ ದ್ವಿತೀಯ ಪದದಲ್ಲಿ ಲಕ್ಷಣವಿರುವುದೆಂಬ ನಿಯಮವಿಲ್ಲ. ಆದರೆ ಸರ್ವವಾಕ್ಯಗಳಲ್ಲಿ ಈಶ್ವರವಾಚಕಪದದಲ್ಲಿಯೇ ಲಕ್ಷಣವನ್ನು ಸ್ವೀಕರಿಸುವರು. ಈ ಈಶ್ವರ ವಾಚಕವ

ಪೂರ್ವಪದದಲ್ಲಿಯಾಗಲಿ ಇಲ್ಲವೆ ಉತ್ತರಪದದಲ್ಲಿಯಾಗಲಿ ಇದ್ದರೂ ವಾಕ್ಯ ಗಳಲ್ಲಿ ಪರಸ್ಪರವಿರೋಧವಿಲ್ಲ, ಇವರ ಸಮಾಧಾನವು ಕೆಳಗಿನ ದೋಹಾದಲ್ಲಿ

॥ ದೋಹಾ ॥

ಈಸಪದಹಿ ಲಚ್ಛಕ ಕಹ್ಯೆ । ಸಬ ಅನರ್ಥಕೀ ಖಾನಿ॥
ಜ್ಞೇಯ ಹೋಯ ಶ್ರುತಿವಾಕ್ಯಮ್ಯೆ। ಹ್ವೈ ಪುರುಷಾರಥಹಾನಿ

ಟೀಕಾ॥ ಒಂದು ಪಕ್ಷದಲ್ಲಿ ಈಶ್ವರ ವಾಚಕ ಪದದಲ್ಲಿ ಲಕ್ಷಣವ ಹೇಳಿದರೆ ಸರ್ವ ಅನರ್ಥ, ಅಲ್ಪಜ್ಞತ್ವ, ಪರಾಧೀನತ್ವ, ಜನ್ಮ, ಮರಣ ಮೊ ದಲಾದ ದುಃಖಗಳ ಸಾಧನ ಇವುಗಳ ಮೂಲಸ್ಥಾನವಾದ ಸಂಸಾರೀಜೀ ವು ಶ್ರುತಿವಾಕ್ಯಗಳಲ್ಲಿಜ್ಞೇಯವಾಗಿ ಪುರುಷಾರ್ಥಅಂದರೆ ಮೋಕ್ಷದ ಹಾ ಯಾಗುವುದು. ಇದರ ಭಾವಾರ್ಥವೇನೆಂದರೆ- ಈಶ್ವರವಾಚಕಪದದಲ್ಲಿ ಜೀ ಲಕ್ಷಣಾ ಅಂಗೀಕರಿಸಿದರೆ ಮಹಾವಾಕ್ಯಗಳ ಅರ್ಥವು ಹೀಗೆ ಆಗುವದ ತತ್‌ಪದದ ಲಕ್ಷ್ಯವಾದ ಅದ್ವಯ, ಅಸಂಗ, ಮಾಯಾಮಲರಹಿತ ಚೇತನ ಕಾಮುಕರ್ಮ ಅವಿದ್ಯಾಧೀನ, ಅಲ್ಪಜ್ಞ, ಅಲ್ಪಶಕ್ತಿ, ಪರಿಚ್ಛಿನ್ನ, ಪುಣ್ಯಪಾ ಸುಖ, ದುಃಖ, ಜನ್ಮ, ಮರಣ, ಗಮನಾಗಮನ ಮೊದಲಾದ ಅನಂತ ಅನ್ಥಗಳ ಪಾತ್ರವಾಗಿದೆ" ಹೀಗೆ ಮಹಾವಾಕ್ಯಗಳ ಅರ್ಥವನ್ನು ಅಂಗೀಕರಿಸಿದ ಜ್ಞಾಸುಗಳಿಗೆ ಇದೇ ಅರ್ಥದಲ್ಲಿ ಬುದ್ಧಿಯ ಸ್ಥಿತಿಯನ್ನು ಮಾಡಬೇಕಾ ತು; ಮತ್ತು ಯಾವ ಅರ್ಥದಲ್ಲಿ ಬುದ್ಧಿಯ ಸ್ಥಿತಿಯು ಇರುವುದೋ ಅದೇ ತಿಯು ಪ್ರಾಣವಿಯೋಗಾನಂತರ ಅವರಿಗೆ ಪ್ರಾಪ್ತವಾಗುವುದು. ಅದರಿಂ ವೇದವಾಕ್ಯವಿಚಾರದಿಂದ ಮುಮುಕ್ಷುಗಳಿಗೆ ಅನರ್ಥದ ಪ್ರಾಪ್ತಿಯೇ ಆ ತು, ಆನಂದದ ಪ್ರಾಪ್ತಿಯು ಆಗಲಾರದು. ಈ ಕಾರಣದಸಲುವಾಗಿ ಈಶ್ವ ವಾಚಕ ಪದದಲ್ಲಿ ಲಕ್ಷಣಾ ಇದೆ, ಜೀವವಾಚಕದಲ್ಲಿ ಇಲ್ಲ ಎಂಬ ಸಿದ್ಧಾಂ ಮವು ಅಸಂಗತವು.

---

ಜೀವವಾಚಕ ಪದದಲ್ಲಿ ಲಕ್ಷಣಾ ಇದೆ ಯೆಂಬದರ ಉತ್ತರ

ಒಂದು ಪಕ್ಷದಲ್ಲಿ ಹೀಗೆ ಎಂದರೆ;-ಸರ್ವ ಮಹಾವಾಕ್ಯಗಳಲ್ಲಿ ಯಾವ ಜೀವವಾಚಕ ಪದಗಳಿರುವವೋ ಅವುಗಳಲ್ಲಿ ಲಕ್ಷಣಾ ಇದೆ, ಈಶವಾಚಕ ಪ ದಗಳಲ್ಲಿ ಇಲ್ಲ ಅದರಿಂದ ಪುರುಷಾರ್ಥದ ಹಾನಿಯು ಇಲ್ಲ. ಕಾರಣವೇನೆಂದರೆ [illegible] ಹೀಗೆ ಆಗುವದು; "ತ್ವಂ ಪದದ ಲಕ್ಷ್ಯವಾದ ಚೇತನ [illegible] ಸರ್ವಜ್ಞ ಸ್ವತಂತ್ರ ಜನ್ಮಾದಿ ಬಂಧರಹಿತ ಈಶ್ವರರೂಪವಾಗಿದೆ" ಈ ಅರ್ಥವ



ಬುದ್ಧಿಯ ಸ್ಥಿತಿಯಿಂದ ಜಿಜ್ಞಾಸುಗಳಿಗೆ ಅತಿ ಉತ್ತಮ ಈಶ್ವರಭಾ ವಪ್ರಾಪ್ತಿಯೇ ಆಗುವದು. ಅದರಿಂದ ಜೀವವಾಚಕಪದದಲ್ಲಿ ಲಕ್ಷಣವ ವು ಯಥಾರ್ಥವಿದೆ. ಇದಕ್ಕೆ-

॥ ಸಮಾಧಾನ ॥ ॥ ದೋಹಾ ॥

ತ್ವಂಪದ ಲಚ್ಛ್ಯತ ಕಹು । ಕ್ಯೆಸ್ಯೆ ಈಸ ಸ್ವರೂಪ ? ॥
ತಾತೈ ದೋಪದ ಲಚ್ಛನಾ । ಭಾಖಿತ ಜತಿವರ ಭೂಪ ॥೪೭॥

ಟೀಕಾ॥ ತ್ವಂ ಪದದ ಲಕ್ಷ್ಯವಾದ ಸಾಕ್ಷೀ ಈಶ್ವರರೂಪವು ಹೇಗೆ ಇದನ್ನು ಹೇಳು? ತ್ವಂ ಪದದ ಲಕ್ಷ್ಯಕ್ಕೆ ಈಶ್ವರನೆನ್ನುವದು ಸಂಭವಿಸುವದಿಲ್ಲ. ಜತಿವರ ಯತಿ, ಸನ್ಯಾಸಿಗಳಲ್ಲಿ ವರ ಅಂದರೆ ಶ್ರೇಷ್ಠ. ಇವರ ಭೂಪ ಅಂದ ರೆ ಸ್ವಾಮಿ, ಇವರು ಎರಡು ಪದಗಳಲ್ಲಿ ಲಕ್ಷಣಾ ಒಪ್ಪಿಕೊಳ್ಳುವರು.

ಇದರ ಭಾವಾರ್ಥವು ಹೀಗೆ ಇರುವದು;-ಜೀವವಾಚಕ ಪದದಲ್ಲಿ ಲ ಕ್ಷಣಾ ಒಪ್ಪಿಕೊಂಡು, ಈಶ್ವರವಾಚಕ ಪದದಲ್ಲಿ ಇಲ್ಲವೆಂದು ಎನ್ನುವವರಿಗೆ ಕೇಳತಕ್ಕದ್ದೇನೆಂದರೆ, ತ್ವಂ ಪದದ ಲಕ್ಷಣವು ವ್ಯಾಪಕಚೇತನದಲ್ಲಿ ಇದೆಯೋ ಅಥವಾ (೨) ಎಷ್ಟು ದೇಶದಲ್ಲಿ ಜೀವದ ಉಪಾಧಿಯು ಇದೆಯೋ ಅಷ್ಟು ದೇಶದಲ್ಲಿ ಸ್ಥಿತವಾದ ಸಾಕ್ಷೀಚೇತನದಲ್ಲಿ ತ್ವಂ ಪದದ ಲಕ್ಷಣವಿದೆಯೊ ವ್ಯಾಪಕಚೇತನದಲ್ಲಿ ತ್ವಂ ಪದದ ಲಕ್ಷಣವನ್ನು ಹೇಳಿದರೆ ಸಂಭವಿಸು ವದಿಲ್ಲ. ಕಾರಣವೇನೆಂದರೆ, ವಾಚ್ಯಅರ್ಥದಲ್ಲಿ ಯಾವುದರ ಪ್ರವೇಶವಿರು ವದೋ ಅದರಲ್ಲಿ ಭಾಗತ್ಯಾಗ ಲಕ್ಷಣವಾಗುವದು. ಮತ್ತು ವಾಚ್ಯದಲ್ಲಿ ವ್ಯಾಪಕಚೇತನದ ಪ್ರವೇಶವಿಲ್ಲ. ಆದರೆ ಜೀವತ್ವದ ಉಪಾಧಿ ದೇಶದಲ್ಲಿ ಸ್ಥಿತವಾದ ಸಾಕ್ಷೀಚೇತನದ ಪ್ರವೇಶವು ವಾಚ್ಯದಲ್ಲಿ ಇದೆ. ಅದರಿಂದ ಸಾಕ್ಷೀಚೇತನದಲ್ಲಿಯೇ ತ್ವಂ ಪದದ ಲಕ್ಷಣವಿದೆ. ವ್ಯಾಪಕಚೇತನದಲ್ಲಿ ಸರ್ವರ ಹೃದಯದ ಪ್ರೇರಣೆ, ಮತ್ತು ಪ್ರಪಂಚದಲ್ಲಿ ವ್ಯಾಪಕತ್ವಾದಿಕ ಈಶ್ವರಧರ್ಮಗಳ ಅತ್ಯಂತ ಸಂಭವವಿದೆ. ಈ ಸಾಕ್ಷೀಚೇತನದಲ್ಲಿ

ಮತ್ತು-

೨. ಮಾಯಾ ರಹಿತನಿಗೆ ಮಾಯಾವಿಶಿಷ್ಟನೆಂದು ಹೇಳುವುದು ಅಸಂ ಭವವಾದದ್ದು. ದಂಡರಹಿತನಿಗೆ ದಂಡೀಯೆಂದೂ, ಸಂಸ್ಕಾರರಹಿತ ದ್ವಿಜ ಬಾಲಕನಿಗೆ ಸಂಸ್ಕಾರ ವಿಶಿಷ್ಟನೆಂದೂ ಹೇಳುವದು ಅಸಂಭವವು. ಅದರಿಂದ ಸಾಕ್ಷೀಚೇತನವು ಈಶ್ವರನಿಂದ ಅಭೇದವೆಂದು ಹೇಳಿದರೆ ಮಹಾವಾಕ್ಯಗ ಳು ಅಸಂಭವಾರ್ಥ ಪ್ರತಿಪಾದಕಗಳಾಗುವವು. ಮತ್ತು-

||೪೪೯|| ಎರಡೂ ಪದಗಳಲ್ಲಿ ಲಕ್ಷಣಾ ಮತ್ತು ಓತಪ್ರೋತಭಾವ

ಎರಡೂ ಪದಗಳಲ್ಲಿ ಲಕ್ಷಣಾ ಅಂಗೀಕರಿಸಲು ದೋಷವಿಲ್ಲ. ಕಾರಣ ವೇನೆಂದರೆ, ಯಾವ ಏಕತ್ವದ ವಿರೋಧಧರ್ಮಗಳು ಇವೆಯೋ, ಅವುಗಳೆ ಲ್ಲವನ್ನು ತ್ಯಜಿಸಿ; ಎರಡು ಪದಗಳಲ್ಲಿ ಪ್ರಕಾಶರೂಪ ಚೇತನವಾದ ವಾಚ್ಯ ಭಾಗವು ಈ ಸರ್ವ ಧರ್ಮರಹಿತ ಚೇತನದಲ್ಲಿ ಎರಡೂ ಪದಗಳ ಲಕ್ಷ್ಯ ವಾಗಿದೆ, ಉಪಾಧಿ ಮತ್ತು ಉಪಾಧಿಕೃತ ಧರ್ಮದಿಂದ ಚೇತನದ ಭೇದವು ಸ್ವರೂಪದಿಂದ ಇಲ್ಲ. ಉಪಾಧಿ ಮತ್ತು ಉಪಾಧಿಕೃತ ಧರ್ಮಗಳ ತ್ಯಾಗಮಾ ಡುವದರಿಂದ ಎರಡೂ ಪದಗಳ ಲಕ್ಷ್ಯ ಚೇತನದ ಏಕತ್ವವು ಸಂಭವಿಸುವದು ಹೇಗೆ ? ಘಟಾಕಾಶದಲ್ಲಿ ಘಟದೃಷ್ಟಿಯನ್ನು ತ್ಯಜಿಸಿ, ಮಠವಿಶಿಷ್ಟ ಆಕಾ ದಿಂದ ಏಕತ್ವವು ಸಂಭವಿಸುವದಿಲ್ಲ; ಮತ್ತು ಮಠ ದೃಷ್ಟಿಯನ್ನು ತ್ಯಾಗಮಾ ಡುವುದರಿಂದ ಏಕತ್ವವು ಸಂಭವಿಸುವುದು.

|| ದೋಹಾ ||

ತತ್ ತ್ವಂ ತ್ವಂ ತತ್ ರೀತಿಯಹ । ಸಬವಾಕ್ಯನಮ್ಹೆ ಜಾನಿ ||
ಜಾತ್ಯೆ ಹೋಯ ಪರೋಛತಾ । ಪರಿಚ್ಛಿನ್ನತಾ ಹಾನಿ ||೪೯||

ಟೀಕಾ|| ಸರ್ವವಾಕ್ಯಗಳಲ್ಲಿ "ತತ್,ತ್ವಂ" "ತ್ವಂ,ತತ್" ಈ ರೀತಿ ೧ ಯಿಂದ ಓತಪ್ರೋತಭಾವದ ರೀತಿಯನ್ನು ತಿಳಿ! ಈ ಓತಪ್ರೋತಭಾವದಿಂ ೨ ದ ವಾಕ್ಯದ ಅರ್ಥದಲ್ಲಿ ಪರೋಕ್ಷ ಮತ್ತು ಪರಿಚ್ಛಿನ್ನತಾ ಭ್ರಾಂತಿಯ ಹಾ ನಿಯು ಆಗುವದು.

೧. "ತತ್ ತ್ವಂ" ಈ ವಾಕ್ಯದಿಂದ ತತ್ಪದದ ಅರ್ಥಕ್ಕೆ ತ್ವಂ ಪದದ ಅರ್ಥದಿಂದ ಅಭೇದವನ್ನು ಹೇಳಿದಂತಾಯಿತು. ಈ ತ್ವಂ ಪದದ ಅರ್ಥವು ಸಾಕ್ಷೀ ನಿತ್ಯ ಅಪರೋಕ್ಷವಾಗಿದೆ. ಆದರಿಂದ ಪರೋಕ್ಷತಾ ಭ್ರಾಂತಿಯ ಹಾನಿಯು. ಮತ್ತು-

೨. "ತ್ವಂ ತತ್" ಈವಾಕ್ಯದಿಂದ ತ್ವಂ ಪದದ ಅರ್ಥಕ್ಕೆ ತತ್ ಪದದ ಅರ್ಥದಿಂದ ಅಭೇದವನ್ನು ಹೇಳಿದಂತಾಯಿತು. ಈ ತತ್ಪದದ ಅರ್ಥವು ವ್ಯಾಪಕವು. ಆದರಿಂದ ಪರಿಚ್ಛಿನ್ನತಾ ಭ್ರಾಂತಿಯ ಹಾನಿಯು.

೧. ಇದರಂತೆ (೧) "ಅಹಂ ಬ್ರಹ್ಮ" (೨) "ಪ್ರಜ್ಞಾನಂ ಬ್ರಹ್ಮ" (೩) "ಆತ್ಮಾ ಬ್ರಹ್ಮ" ಇದರಿಂದ ಪರಿಚ್ಛಿನ್ನದ ಹಾನಿಯು.



೨. ಮತ್ತು (೧) "ಬ್ರಹ್ಮ ಅಹಂ" (೨) "ಬ್ರಹ್ಮಪ್ರಜ್ಞಾನಂ" (೩) "ಬ್ರಹ್ಮ ಆತ್ಮಾ" ಇದರಿಂದ ಪರೋಕ್ಷತಾ ಹಾನಿಯು.

ದೃಷ್ಟಾಂತ—(೧) ಗಮನ ಮತ್ತು ಆಗಮನರೂಪ ಪರಿಚಯದ ಹೊರತು, ಮಾರ್ಗದ ಸಮ್ಯಕ್‌ಜ್ಞಾನವಾಗುವುದಿಲ್ಲ. ಅದರಂತೆ ಓತಪ್ರೋತ ಭಾವದ ಹೊರತು ಸಮ್ಯಕ್ ಅಭೇದ ಜ್ಞಾನವಾಗುವುದಿಲ್ಲ, ಆದರಿಂದ ಮಹಾವಾಕ್ಯದ ಉಪದೇಶವಾದ ಬಳಿಕ ಜಿಜ್ಞಾಸುವಿಗೆ ಓತಪ್ರೋತಭಾವವು ಕರ್ತವ್ಯವು. ಇದಕ್ಕೇ ಅನ್ವಯ. ಮತ್ತು ವ್ಯತಿರೇಕವೆಂದೂ ಎನ್ನುತ್ತಾರೆ.

೨)ಇಲ್ಲಿ ಈ ಪ್ರಶ್ನೆಯುಉಂಟಾಗುತ್ತದೆ-ಮಹಾವಾಕ್ಯದ ಉಪದೇಶವಾದ ಬಳಿಕ್ಕ ಜಿಜ್ಞಾಸುವಿಗೆ ಬ್ರಹ್ಮ ಮತ್ತುಆತ್ಮದಲ್ಲಿ ಪರೋಕ್ಷತಾ, ಮತ್ತುಪರಿಚ್ಛಿನ್ನತಾ ಭ್ರಾಂತಿಯು ಪ್ರತೀತವಾಗುವುದು.ಇದುಕಾರಣದ ಹೊರತು ಸಂಭವಿಸುವು ದಿಲ್ಲ.ಆದರೆ ಬ್ರಹ್ಮದಲ್ಲಿ ಸ್ಥಿತಮಾಯಾ, ಮತ್ತು ಆತ್ಮಾದಲ್ಲಿ ಸ್ಥಿತ ಅವಿದ್ಯಾ ಭ್ರಾಂತಿಯಕಾರಣದಿಂದ ಸಂಭವಿಸುವುವು. ಈಮಾಯಾ ಅವಿದ್ಯಗಳು ಬ್ರಹ ಮತ್ತು ಆತ್ಮದ ಆಶ್ರಿತವಾಗಿ ಮೊದಲು ಇದ್ದುವು. ಅವು ಯಾವಾಗ ಜಿಜ್ಞಾಸುಗಳು "ತತ್ ತ್ವಂ" ಪದಾರ್ಥದ ಶೋಧನಮಾಡಿದರೋ ಆಗ ಎರಡೂ ನಷ್ಟವಾದುವು.

ಹೇಗೆ ಘಟಸ್ವರೂಪದ ವಿಚಾರಮಾಡಿದ ಬಳಿಕ, ಘಟನಿಷ್ಠ ಅವಿದ್ಯೆಯು ಇರುವು ದಿಲ್ಲವೋ, ಹಾಗೆ ಬ್ರಹ್ಮಮತ್ತು ಆತ್ಮದ ವಿಚಾರಮಾಡಿದ ಬಳಿಕ, ಇವುಗಳಲ್ಲಿ ಸ್ಥಿತವಾದ ಮಾಯಾ ಅವಿದ್ಯೆಯು ಉಳಿಯುವುದಿಲ್ಲ, ಆದರೆ ಈ ಅಧಿಕಾರಿಯ ದೃಷ್ಟಿಯಿಂದ ಬಾಧಿತವಾಗುವುದು. ಮತ್ತು ತೃತೀಯಚೇತನದ ಅಭಾವವಿದೆ. ಚೇತನದ ಹೊರತು ಅನ್ಯಜಡವಸ್ತುವಿನ ಆಶ್ರಿತವಾಗಿ ಮಾಯಾ ಅವಿದ್ಯೆಯು ಇರುವುದಿಲ್ಲ. ಮಾಯಾ ಅವಿದ್ಯೆಯ ಸ್ಥಿತಿಯಹೊರತು, ಉಕ್ತ ಎರಡು ಪ್ರಕಾರದ ಭ್ರಾಂತಿಯು ಸಂಭವಿಸುವುದಿಲ್ಲ;ಮತ್ತು ಜಿಜ್ಞಾಸುವಿನಚಿತ್ತದಲ್ಲಿ ಪ್ರತೀಯಮಾನವಾದ ಭ್ರಾಂತಿಗೆ ಮಾಯಾಅವಿದ್ಯೆಯ ಹೊರತು ಅನ್ಯ ಗತಿ[ಕಾರಣ]ಯು ಸಂಭವಿಸುವದಿಲ್ಲ. ಈ ಅರ್ಥಾಪತ್ತಿ ಪ್ರಮಾಣದಿಂದ ಮಾಯಾ ಅವಿದ್ಯೆಯ ಸ್ಥಿತಿಯ ಕಲ್ಪನೆಯು ಆಗುವದು. ಅದರಿಂದ ಮಹಾವಾಕ್ಯದ ಉಪದೇಶವಾದ ಬಳಿಕ ಈ ಮಾಯಾ ಅವಿದ್ಯೆಯು ಎಲ್ಲಿಸ್ಥಿತವಾಗಿ ಪರೋಕ್ಷತಾಪರಿಚ್ಛಿನ್ನತಾ ಭ್ರಾಂತಿಯನ್ನು ಹುಟ್ಟಿಸುವದು! ಎಂಬ ಪ್ರಶ್ನೆಯಿದೆ. ಇದಕ್ಕೆ ಉತ್ತರವೇನೆಂದರೆ, ಯದ್ಯಪಿ ಪದಾರ್ಥಶೋಧನದ ಅನಂತರ ಜ್ಞಾತ[ವಿಚಾರಿತ]ವಾದ ಬ್ರಹ್ಮ, ಮತ್ತು ಆತ್ಮ, ಇವುಗಳಲ್ಲಿ ಮಾಯಾ ಅವಿದ್ಯೆಗಳು ಸಂಭವಿಸುವದಿಲ್ಲ. ತಥಾಪಿ ಮಹಾವಾಕ್ಯದ ಅರ್ಥರೂಪ ಬ್ರಹ್ಮ ಆತ್ಮದ ಏಕತ್ವವು ಸಮ್ಯಕ್ ಜ್ಞಾತವಾಗುವದಿಲ್ಲ. ಆದರೆ ಅಜ್ಞಾತವಾಗಿದೆ. ಈ ಏಕತ್ವದಲ್ಲಿ ಮಾಯಾ ಅವಿದ್ಯಾಸ್ಥಿತವಾಗಿ ಪರೋಕ್ಷತಾರೂಪ ಪರಿಚ್ಛಿನ್ನತಾರೂಪ ಭ್ರಾಂತಿಯು ಉತ್ಪನ್ನವಾಗುವುದು. ಈ ಭ್ರಾಂತಿಯ ನಿವಾರಣಾರ್ಥವಾಗಿ ಓತಪ್ರೋತಭಾವವು ಕರ್ತವ್ಯವು. ಓತಪ್ರೋತಭಾವ

ದಿಂದ ಮಾಡಲ್ಪಟ್ಟ ಏಕತ್ವದ ಸಮ್ಯಕ್ ಜ್ಞಾನವಾಗಿ ಮಾಯಾ ಅವಿದ್ಯೆಯ ನಿವೃತ್ತಿದ್ವಾರಾ ಪರೋಕ್ಷತಾ ಪರಿಚ್ಛಿನ್ನತಾರೂಪ ಭ್ರಾಂತಿಯು ನಿವೃತ್ತಿಯು ಆಗುವದು.

॥ ದೋಹಾ ॥

ಜೀವ ಬ್ರಹ್ಮಕೀ ಏಕತಾ । ಕಹತ ವೇದ ಸ್ಮೃತಿ ಬೈನ ॥
ಸಿಷ್ಯ ತಹಾ ಪಹಿ ಚಾನಿಯೆ । ಭಾಗತ್ಯಾಗಕೀ ಸೈನ ॥

ಟೀಕಾ॥ ಎಲೌ ಶಿಷ್ಯನೇ ? ಜೀವ ಮತ್ತು ಬ್ರಹ್ಮದ ಏಕತ್ವವನ್ನು ಸರ್ವ ವೇದಸ್ಮೃತಿಗಳು ಹೇಳುತ್ತಿರುವವು. ಈ ವಿಷಯದಲ್ಲಿ ಭಾಗತ್ಯಾಗದ ಲಕ್ಷಣವನ್ನು ತಿಳಿ.

॥೪೫೦॥ ಗ್ರಂಥ [೩೩೩ರಲ್ಲಿ ಉಕ್ತ]ದ ಸಮಾಪ್ತಿ.

॥ ದೋಹಾ ॥

ಅಸ ಸಿಸ ಗುರು ಉಪದೇಸ ಸುನಿ । ಭೌ ತತಕಾಲ ನಿಹಾಲ ॥
ಭಲೈ ವಿಚಾರೈ ಯಾಹಿ ಜೋ । ತಾಕೆ ನಸತ ಜಂಜಾಲ ॥೫೧॥

ಅರ್ಥ॥ ಈ ಪ್ರಕಾರದ ಗುರೂಪದೇಶವನ್ನು ಕೇಳಿ, ಶಿಷ್ಯನು ತತ್ಕಾಲದಲ್ಲಿ ಕೃತಕೃತ್ಯನಾದನು. ಇದರ ಯಥಾರ್ಥ ವಿಚಾರವನ್ನು ಯಾರು ಮಾಡುವರೋ ಅವರಿಗೆ ಸರ್ವದುಃಖಗಳ ನಾಶವಾಗುವದು.

॥ ಸೋರಠಾ ॥

ಮಿಥ್ಯಾಗುರು ಸುರಬಾನಿ । ಕಿಯೊ ಗ್ರಂಥ ಉಪದೇಸ ಯಹ ॥
ಸುನತ ಕರತ ತಮಹಾನಿ । ಯಹ ತಿಂಕೀ ಭಾಷಾ ಕರೀ ॥೫೨॥

ಅರ್ಥ॥ ಗ್ರಂಥವನ್ನು ಮಿಥ್ಯಾಗುರುವು ಸಂಸ್ಕೃತದಿಂದ ಉಪದೇಶ ಮಾಡಿದನು. ಈ ಗ್ರಂಥದ ಶ್ರವಣದಿಂದ ಅಜ್ಞಾನ ನಾಶವಾಗುವದು. ಈ ಗ್ರಂಥವನ್ನು ಸ್ವಭಾಷೆಯಲ್ಲಿ ಯಥಾರ್ಥವಾಗಿ ವರ್ಣಿಸಿದೆನು.

॥ ದೋಹಾ ॥

ಅಗ್ರುಧದೇವಕೂ ಸ್ವಪ್ನಮೆ । ಯಹಕಿಯ ಗುರು ಉಪದೇಸ॥
ನಸ್ಯೊ ನ ತಹು ದುಖ ಮೂಲ ವಹ। ಮಿಥ್ಯಾ ಬನಕೊ ವೇಸ॥

ಅರ್ಥ॥ ಸ್ವಪ್ನದಲ್ಲಿ ಅಗ್ರಧ ದೇವನಿಗೆ ನಿಶ್ಚಿತವಾಗಿ ಈ ಉಪದೇಶವನ್ನು ಮಾಡಿದನು. ಇದು ಮಿಥ್ಯಾ ವನರೂಪದಿಂದ ಭಾಸಮಾನವಾಗುವುದರಿಂದ ದುಃಖಮೂಲವು ನಿಶ್ಶೇಷವಾಗಿ ನಶಿಸುವುದಿಲ್ಲ.



॥೫೧॥ ಪ್ರಶ್ನೆ. ಅರ್ಥಸಹಿತ ಗ್ರಂಥವನ್ನು ಪಠನಮಾಡಿದರೂ ಸಹ, ಮನಸ್ಸು ದುಃಖದಮೂಲವಾಗಿಭಾಸಿಸುವುದು.

॥ ಅಗ್ರುಧ ಉವಾಚ ॥

॥ ಚೌಪಾಈ ॥

ಭಗವನ ಯಹ ತುಮ ಗ್ರಂಥ ಪಢಾಯೊ ।
ಅರ್ಥಸಹಿತ ಸೊ ಮೊ ಹಿಯ ಆಯೊ ॥
ಬನ ದುಖ ಮೂಲ ತಊ ಮುಹಿಭಾಸೈ ।
ಕಹು ಉಪಾಯ ಜಾತೈ ಯಹ ನಾಸೈ ॥೫೪॥

ಅರ್ಥ॥ ಭೋ ಭಗವನ್ ! ನೀವು ಈಗ್ರಂಥವನ್ನು ಉಪದೇಶಮಾಡಿದಿರಿ; ಅದನ್ನು ನಾನು ಅರ್ಥಸಹಿತವಾಗಿ ಕೇಳಿದೆನು. ಆದರೂ ನನಗೆ ವನದುಃಖಮೂಲವು ಭಾಸಿಸುವುದು. ಈ ದುಃಖವು ಯಾವ ಉಪಾಯದಿಂದ ನಾಶವಾಗುವದೆಂಬುದನ್ನು ಹೇಳಬೇಕು.

ಗತ ಪ್ರಶ್ನೆಯ ಉತ್ತರ ॥೪೫೨—೪೫೩॥

॥೪೫೨॥ ವನದ ನಾಶಕ ಹೇತುವು ಇದೇ (ಉಕ್ತ.) ಅಗ್ರಧದೇವನ ಸ್ವಪ್ನದ ಸಮಾಪ್ತಿ (ನಾಶ)

॥ ಚೌಪಾಈ ॥

ಬೋಲೆ ಗುರು ಸುನಿ ಸಿಷಕೀ ಬಾನಿ ।
ಸುನಿ ಸಿಷ ಹ್ವೈ ಜಾತೈ ಬನ ಹಾನೀ
ಅಸ ಉಪಾಯ ಕೊ ಔರ ನಹೀ ಹೈ ।
ಬನಕಾ ನಾಸಕ ಹೇತು ಯಹೀ ಹೈ ॥೫೫॥

ಅರ್ಥ—ಶಿಷ್ಯನ ವಚನಗಳನ್ನು ಲಾಲಿಸಿ, ಗುರುವು ಹೇಳುವನು. ಎಲೌಶಿಷ್ಯನೇ ಕೇಳು, ಯಾವುದರಿಂದ ವನದ ನಾಶವಾಗುವುದೋ,ಅಂತಹ ಅನ್ಯ ಉಪಾಯವು ಇಲ್ಲ. ವನನಾಶವಾಗಲಿಕ್ಕೆ ಇದೇ ಹೇತುವಾಗಿರುವುದು.

॥ ಚೌಪಾಈ ॥

ಮಹಾವಾಕ್ಯಕೊ ಅರ್ಥ ವಿಚಾರಹು ।

" ಮ್ಯೆ ಅಗ್ರಥ,, ಯೂ ಟೇರಿ ಪುಕಾರಹು ॥
ಸುನಿ ಪುನಿ ವಾಕ್ಯ ವಿಚಾರೆ ಚೇಲಾ ।
" ಅಹಂ ಅಗ್ರಥ,, ಯುಹ ದೀನೋ ಹೇಲಾ ॥೫೬॥

ಅರ್ಥ—ಮಹಾ ವಾಕ್ಯದ ಅರ್ಥವನ್ನು ವಿಚಾರಮಾಡಿ, ನಾನು ಅಗ್ರ ಥನೆಂದು ಗರ್ಜಿಸಿ ಹೇಳಿದನು. ಪುನಃ ಶಿಷ್ಯವಾಕ್ಯವನ್ನು ಕೇಳಿ, ವಿಚಾರಿ, ನಾನು ಅಗ್ರಥನೆಂದು ಗರ್ಜಿಸಿದನು.

॥ ಚೌಪಾಈ ॥

ನಿದ್ರಾ ಗಈ ನೈನ ಪರಕಾಸೆ
ಬನ ಗುರು ಗ್ರಂಥ ಸಬ್ಬೆವಹ ನಾಸೆ ॥
ಭಯೋ ಸುಖೀಬನದುಖ ವಿಸರಾಯೊ ।
ಹುತೊ ಅಗ್ರಥ ನಿಜರೂಪ ಸು ಪಾಯೊ ॥೫೭॥

ಅರ್ಥ—ನಿದ್ರೆಯು ಹೋಯಿತು, ನೇತ್ರಗಳು ಪ್ರಕಾಶಿತವಾದವು. ವ ನಗುರು ಗ್ರಂಥ ಇವೆಲ್ಲವೂ ನಾಶವಾಗುವುವು. ಸುಖವುಳಿಗಲಲುದುಃಖವಿಸ್ಮೃ ತಿಯಾಗುವುದು. ನಾನು ಅಗ್ರಥನೆಂದು ಗರ್ಜಿಸಿ ಹೇಳುವನು,

॥ ೪೫೩ ॥ ಮಿಥ್ಯಾಗುರು ವೇದದಿಂದ ಅಜ್ಞಾನ ಜನ್ಯ ಮಿಥ್ಯಾ ಜಗತ್ತಿನ ಪರಿಹಾರ ವಾಗುವುದು.

॥ ದೋಹಾ ॥

ಅಗ್ರಥದೇವಮ್ಯೆ ನೀಂದತ । ಭೌಬನದುಖ ಜಿಹಿ ರೀತಿ ॥
ಆತಮುಮ್ಯೆ ಅಜ್ಞಾನ ತ್ಯೆ । ತ್ಯೂ ಜಗದುಖ ಪ್ರತೀತಿ ॥ ೫೮ ॥

ಅರ್ಥ—ಅಗ್ರಥ ದೇವನಗೆ ನಿದ್ರೆಯಿಂದ ಯಾವ ರೀತಿಯಿಂದ ವನ ದುಃಖವುಂಟಾಯಿತೆಂಬದನ್ನು ತಿಳಿ. ಆತ್ಮದಲ್ಲಿ ಅಜ್ಞಾನದಿಂದ ಜಗತ್ತು ದುಃಖ ಪ್ರತೀತಿಯಿಂದ ಭಾನವಾಗುವುದು.

॥ ದೋಹಾ ॥

ಜ್ಯೂ ಮಿಥ್ಯಾ ಗುರು ಗ್ರಂಥತ್ಯೆ। ಮಿಥ್ಯಾ ಬನ ಸಂಹಾರ ॥
ತ್ಯೂ ಮಿಥ್ಯಾ ಗುರು ವೇದತ್ಯೆ । ಮಿಥ್ಯಾಜಗ ಪರಿ ಹಾರ ॥೫೯॥

ಅರ್ಥ॥ ಮಿಥ್ಯಾ ಗುರು ಗ್ರಂಥದಿಂದ, ಮಿಥ್ಯಾವನ ಸಂಹಾರವಾಗು ತೆ, ಮಿಥ್ಯಾ ಗುರುವೇದದಿಂದ ಮಿಥ್ಯಾ ಜಗ ದುಃಖವು ನಾಶವಾಗುತ್ತದೆ



॥ದೋಹಾ॥

ಲಚ್ಛ್ಯಅರ್ಥ ಲಖಿ ವಾಕ್ಯಕೊ। ಹ್ವೈಜಿಜ್ಞಾಸು ನಿಹಾಲ ॥
ನಿರಾವರನ ಸೊ ಅಪ ಹೈ । ದಾದೂ ದೀನ ದಯಾಲ ॥೬೦॥

ಅರ್ಥ॥ ವಾಕ್ಯದ ಲಕ್ಷ್ಯಾರ್ಥವನ್ನು ತಿಳಿದು, ಜಿಜ್ಞಾಸುಗಳು ಪೂರ್ಣ ವಾಗಿ ಕೃತಕೃತ್ಯರಾಗುವರು. ದೀನದಯಾಳುವಾದ ದಾದೂ ಗುರುವು ನಿರಾವರಣನು. ಅವನೇ ಪರಿಪೂರ್ಣನು.

ಇತಿ ಶ್ರೀ ವಿಚಾರ ಸಾಗರದಲ್ಲಿ ಗುರುವೇದಾದಿ ಸಾಧನ
ಮಿಥ್ಯಾ ವರ್ಣನ ನಾಮ ಷಷ್ಠತರಂಗವು
ಸಮಾಪ್ತವಾದುದು.



ಓಂ

॥ ವಿಘ್ನೇಶಾಯನಮಃ ॥

# ಸಟೀಕಾ, ತಾತ್ಪರ್ಯ, ವಿವರಣ ಸಹಿತ

# ವಿ ಚಾ ರ ಸಾ ಗ ರ.

## ಸಪ್ತಮತರಂಗ

॥ ಜೀವನ್ಮುಕ್ತಿ ವಿದೇಹಮುಕ್ತಿ ವರ್ಣನಮ್ ॥

ಟಿಪ್ಪಣಿ. ೧, ಜೀವನ್ಮುಕ್ತಿಯ ಲಕ್ಷಣವನ್ನು ಮುಂದೆ ೪೭೬ನೇ ಅಂಕಿಯ ವಿಷಯದಲ್ಲಿ ಹೇಳುವೆವು. ೨. ವಿದೇಹಮುಕ್ತಿಯ ಲಕ್ಷಣವನ್ನು ಮುಂದೆ ೫೦೦ನೇ ಅಂಕಿಯ ವಿಷಯದಲ್ಲಿ ಹೇಳುವೆವು.

॥ ದೋ ೯ ಹಾ ॥

॥೪೫೪॥ ಜ್ಞಾನಿಯ ವ್ಯವಹಾರದಲ್ಲಿ ನಿಯಮವಿಲ್ಲ.

ಉತ್ತಮ ಮಧ್ಯ ಕನಿಷ್ಠತಿಹು। ಮುನಿ ಅಸ ಗುರು ಉಪದೇಸ
ಬ್ರಹ್ಮ ಆತ್ಮ ಉತ್ತಮ ಲಖ್ಯೋ। ರಹ್ಯೋನ ಸಂಸೈ ಲೇಸ॥

ಟೀಕಾ॥ ಗುರುವು ಮೂವರಿಗೂ ಯದ್ಯಪಿ ಉಪದೇಶ ಮಾಡಿದಾಗ್ಯೂ ತತ್ವ ದರ್ಶಿಗೆ ಗುರೂಪದೇಶದಿಂದ ಸಾಕ್ಷಾತ್ಕಾರವು ಉತ್ತಮವಾಗಿ ಆಯಿತು.

॥ ದೋ ೯ ಹಾ ॥

ಭ್ರಮನ ಕರತ ಜ್ಯೂ ಪವನತೈ । ಸೂಕೊ ಪೀಪರ ಪಾತ॥
ಸೇಸಕರ್ಮ ಪ್ರಾರಬ್ಧತೈ । ಕ್ರಿಯಾ ಕರತ ದರಸಾತ ॥೨॥

ಅರ್ಥ॥ ವೃಕ್ಷದ ಶುಷ್ಕಪರ್ಣವು ಪವನವೇಗದಿಂದ ಹೇಗೆ ಭ್ರಮಿಸುವುದೋ ಹಾಗೆ ಶೇಷಕರ್ಮ ಪ್ರಾರಬ್ಧದಿಂದ ಕ್ರಿಯೆಯನ್ನು ಮಾಡುತ್ತಾನೆಂದು ತಿಳಿ ! ॥೨॥



॥ದೋಹಾ॥

ಬಹುಕ ಚಢ ರಥ ಬಾಜಿ ಗಜ । ಬಾಗ ಬಗೀಚೆ ದೇಖಿ ॥
ಪಾದ ಪುನಿ ನಿಕಲೆ । ಫಿರ ಆವತ ತಿಹಿ ಲೇಖಿ ।

ಅರ್ಥ॥ ಒಮ್ಮೊಮ್ಮೆ ರಥ, ಗಜ, ತುರಗಾದಿಗಳನ್ನು ಆರೋಹಣ ಮಾಡಿಕೊಂಡು ವನ ಉಪವನಗಳನ್ನು ನೋಡುವನು; ಒಮ್ಮೊಮ್ಮೆ ಬರಿಗಾಲಿನಿಂದಲೇ ಸಂಚರಿಸುತ್ತ ಮರಳಿ ಬರುವನು ॥೩॥

॥ ದೋ ೯ ಹಾ ॥

ವಿಧ ವೇಷ ಸಜ್ಯಾ ಸಯನ । ಉತ್ತಮಭೋಜನ ಭೋಗ ॥
ಬಹುಕ ಅನಸನ ಗಿರಿ ಗುಹಾ । ರಜನಿ ಸಿಲಾ ಸಂಯೋಗ ॥

ಅರ್ಥ॥ ಒಮ್ಮೊಮ್ಮೆ ಬಗೆಬಗೆಯ ಸಜ್ಜಾಗೃಹದಲ್ಲಿ ಉತ್ತಮಭೋಜನ, ಉತ್ತಮ ಭೋಗವನ್ನು ಅನುಭವಿಸುವನು. ಒಮ್ಮೊಮ್ಮೆ ಅನ್ನವಿಲ್ಲದೆ ಗಿರಿಗಹ್ವರದಲ್ಲಿ ಕಳೆವ, ರಾತ್ರಿಯಲ್ಲಿ ಶಿಲಾತಲದ ಮೇಲೆ ಶಯನ ಮಾಡುವನು.

॥ ದೋ ೯ ಹಾ ॥

ಕರೀಪ್ರನಾಮ ಪೂಜನ ಕರತ । ಕಹು ಜನ ಲಾಖ ಹಜಾರ ॥
ಉಭೈ ಲೋಕತೈ ಭ್ರಷ್ಟ ಲಖಿ । ಕಹತ ಕರ್ಮಿ ಧಿಕ್ಕಾರ ॥೫॥

ಅರ್ಥ॥ ಒಮ್ಮೊಮ್ಮೆ ಸಾವಿರಾರು, ಅಥವಾ ಲಕ್ಷ್ಯಸಂಖ್ಯಾಕನಾಗಿ ಜನರು ಪ್ರಣಾಮ ಮಾಡಿ ಪೂಜಿಸುವರು. ಒಮ್ಮೊಮ್ಮೆ ಕರ್ಮಿಗಳು ಉಭಯ ಲೋಕಭ್ರಷ್ಟನೆಂದು ಧಿಕ್ಕರಿಸುವರು. ॥೫॥

॥ ದೋ ೯ ಹಾ ॥

ಜೊ ತಾಕೀ ಪೂಜಾ ಕರತ । ಸಂಚಿತ ಸುಕೃತ ಸು ಲೇತ ॥
ದೋಷ ದೃಷ್ಟಿ ತಿಹಿ ಜೊ ಲಖೈ । ತಾಹಿ ಪಾಪಫಲ ದೇತ ॥೬॥

ಅರ್ಥ॥ ಯಾವ ಪ್ರಾಣಿಗಳು ಆ ಜ್ಞಾನಿಯನ್ನು ಪೂಜಿಸುವರೋ, ಅವರ ಸಂಚಿತದಲ್ಲಿ ಸುಕೃತ ಅಧಿಕವಾಗುವುದು. ಅವನನ್ನು ಯಾರು ದೋಷದೃಷ್ಟಿಯಿಂದ ನೋಡುವರೋ ಅವರಿಗೆ ಪಾಪಫಲ ಉಂಟಾಗುವುದು.

॥ ದೋಹಾ ॥

ಏಸೈ ತಾಕೆ ದೇಹಕೊ । ಬಿನಾ ನಿಯಮ ವ್ಯವಹಾರ ॥
ಕಬಹು ನ ಭ್ರಮ ಸಂದೇಹ ಹ್ವೈ । ಲಹ್ಯೋ ತತ್ವ ನಿರ್ಧಾರ॥

ಅರ್ಥ|| ಹೀಗೆ ಜ್ಞಾನಿಗಳ ದೇಹದ ವ್ಯವಹಾರವು ಅನಿಯಮಿತವಾಗಿ ಇರುವುದು. ಅವರಲ್ಲಿ ಎಂದೂ ಭ್ರಮ ಸಂದೇಹವು ಸಂಚರಿಸುವುದಿಲ್ಲ. ಸಂಪೂರ್ಣ ತತ್ವ ನಿರ್ಧಾರವನ್ನು ತಿಳಿದಿರುವರು.||೭||

|| ದೋಹಾ ||

ನಹಿ ತಾಕೂ ಕರ್ತವ್ಯ ಕಛು । ಭಯೊ ಭೇದ ಭ್ರಮ ನಾಸ ।
ಉಪಜ್ಯೊ ವೇದಪ್ರಮಾನ ತೈ । ಅದ್ವಯ ಬ್ರಹ್ಮಪ್ರಕಾಸ ||

ಅರ್ಥ|| ಅವರಿಗೆ ಕಿಂಚಿತ್ತಾದರೂ ಕರ್ತವ್ಯವಿಲ್ಲ, ಅವರ ಭೇದಭ್ರಮವೆಲ್ಲ ನಾಶವಾಗಿರುವದು. ವೇದಪ್ರಮಾಣದಿಂದ ಅದ್ವಯವಾದ ಸ್ವಪ್ರಕಾಶವಾದ ಪೂರ್ಣಬ್ರಹ್ಮ ಜ್ಞಾನವು ಉತ್ಪನ್ನವಾಗುವುದು. ||೮||

ಜ್ಞಾನಿಯ ವ್ಯವಹಾರದಲ್ಲಿ ನಿಯಮದ ಆಕ್ಷೇಪವು ೪೫೫-೪೬೩

||೪೫೫|| ಜ್ಞಾನಿಗೆ ಸಮಾಧಿ, ಮತ್ತು ಶರೀರ ನಿರ್ವಾಹಕ್ಕಿಂತಲೂ ಅಧಿಕ ಅಪ್ರವೃತ್ತಿಯ ನಿಯಮಗಳ ಆಕ್ಷೇಪವು.

||೪೫೫—೪೫೬|| ||ದೋಹಾ||

ಜ್ಞಾನೀಕೆ ವ್ಯವಹಾರ ಮೈ । ಕೋಊ ಕಹತ ಹೈ ನೇಮ ||
ತ್ರಿಪುಟಿ ತಜ್ಯೆ ದುಖ ಹೇತು ಲಖಿ । ಲಹ್ಯೆ ಸಮಾಧಿ ಸಪ್ರೇಮ||೯||

ಅರ್ಥ|| ಕೆಲಕೆಲವರು ಜ್ಞಾನಿಗಳ ವ್ಯವಹಾರದಲ್ಲಿ ನಿಶ್ಚಯವಾಗಿ ನಿಯಮವನ್ನು ಹೇಳುತ್ತಾರೆ. ಅದು ಸರಿಯಲ್ಲ. ಏಕೆಂದರೆ, ತ್ರಿಪುಟಿಯು ದುಃಖಕ್ಕೆ ಕಾರಣಭೂತವಾದದ್ದೆಂದು ತಿಳಿದು, ಅದನ್ನು ಬಿಟ್ಟು, ಸ್ವಪ್ರಯತ್ನದಿಂದ ಸಮಾಧಿಯನ್ನು ಮಾಡುವರು.

|| ದೋಹಾ ||

ಹ್ವೈ ಕಿಂಚಿತ ವ್ಯವಹಾರ ಜೊ । ಭಿಚ್ಛಾಸನ ಜಲಪಾನ ।
ಭೂಲ್ಯೆ ನಾಹಿ ಸಮಾಧಿಸುಖ । ಹ್ವೈ ತ್ರಿಪುಟೀತೈ ಗ್ಲಾನ ||೧೦||

ಅರ್ಥ|| ಜ್ಞಾನಿಗಳ ವ್ಯವಹಾರವು ಕಿಂಚಿತ್ ಭಿಕ್ಷಾನ್ನ ಭೋಜನ, ಜಲಪಾನದ ವಿಷಯವಾಗಿ ಇರುವುದು; ಆದರೆ ಅವರು ಸಮಾಧಿಸುಖವನ್ನು ಮರೆಯುವುದಿಲ್ಲ. ತ್ರಿಪುಟಿಯಿಂದ ಗ್ಲಾನಿಯುಂಟಾಗುವುದು. ||೧೦||

|| ದೋಹಾ ||

ಲಹ್ಯೆ ಪ್ರಯತ್ನ ಸಮಾಧಿಕೊ । ಪುನಿ ಜ್ಞಾನೀ ಇಹ ಹೇತ ||
ಜೊ ಸಮಾಧಿಸುಖ ತಜಿ ಭ್ರಮತ । ನರ ಕೂಕರ ಖರಪ್ರೇತ||

ಅರ್ಥ|| ಜ್ಞಾನಿಗಳು ಪ್ರಯತ್ನ ಪೂರ್ವಕವಾಗಿ ಸಮಾಧಿಸುಖವನ್ನು ಹೊಂದುವರು. ಯಾವನು ಸಮಾಧಿಸುಖವನ್ನು ತ್ಯಜಿಸಿ ಭ್ರಮಣಮಾಡುವನೋ ಆ ಮನುಷ್ಯನು ಸಾಕ್ಷಾತ್ ಶ್ವಾನನೆಂದು ತಿಳಿ. ||೧೧||

|| ದೋಹಾ ||

ಗೌಡಪಾದ ಮುನಿ ಕಾರಿಕಾ । ಲಿಖ್ಯೊ ಸಮಾಧಿ ಪ್ರಕಾರ ||
ಜ್ಞಾನೀ ತಜೀ ವಿಚ್ಛೇಪ ಯೂ । ಲಹ್ಯೆ ಸಕಲ ಸುಖಸಾರ ||

ಅರ್ಥ|| ಗೌಡಪಾದಮುನಿವರರ ಕಾರಿಕಾದಲ್ಲಿ ಸಮಾಧಿಪ್ರಕಾರವನ್ನು ಹೇಳಿರುವರು. ಅದರಂತೆ ಆಚರಿಸಿ ಜ್ಞಾನಿಗಳು ವಿಕ್ಷೇಪವನ್ನು ತ್ಯಾಜ್ಯಮಾಡಿ ಸಕಲಸುಖ ಸರ್ವಸ್ವವನ್ನು ಹೊಂದುವರು. ||೧೨||

|| ದೋಹಾ ||

ಅಷ್ಟಅಂಗ ಬಿನ ಹೋತ ನಹಿ । ಸೊ ಸಮಾಧಿಸುಖ ಮೂಲ ||
ಅಷ್ಟಅಂಗ ತೆ ಅಬ ಸುನೊ । ಜೆ ಸಮಾಧಿ ಅನುಕೂಲ ||೧೩||

ಅರ್ಥ|| ಸಮಾಧಿಸುಖ ಉಂಟಾಗಬೇಕಾದರೆ, ಅಷ್ಟಾಂಗವಿಲ್ಲದೆ ಆಗಲಾರದು; ಅಷ್ಟಾಂಗಗಳೇ ಸಮಾಧಿಸುಖದ ಮೂಲವಾದ್ದರಿಂದ ಆಅಷ್ಟಾಂಗಗಳನ್ನೇ ವರ್ಣಿಸುವೆನು. ಸಾವಧಾನಚಿತ್ತದಿಂದ ಕೇಳು. ||೧೩||

|| ದೋಹಾ ||

ಪಾಂಚಪಾಂಚ ಯಮನಿಯಮ ಲಖಿ ಆಸನ ಬಹುತ ಪ್ರಕಾರ
ಪ್ರಾನಾಯಾಮ ಅನೇಕವಿಧ । ಪ್ರತ್ಯಾಹಾರ ವಿಚಾರ ||೧೪||

ಅರ್ಥ|| ಐದೈದು ಯಮ ನಿಯಮಗಳುಂಟು: ಆಸನಗಳು ಬಹುಪ್ರಕಾರವಾಗಿರುವವು. ಅನೇಕವಿಧ ಪ್ರಾಣಾಯಾಮಗಳನ್ನು ಮಾಡಿ, ಪ್ರತ್ಯಾಹಾರವನ್ನು ತಿಳಿಯಬೇಕು. ||೧೪||

|| ದೋಹಾ ||

ಭಯೋ ಧಾರನಾ ಧ್ಯಾನಪುನಿ । ಅರು ಸವಿಕಲ್ಪ ಸಮಾಧಿ ||
ಅಷ್ಟಅಂಗ ಯೋ ಸಾಧಿಕೆ । ನಿರ್ವಿಕಲ್ಪ ಆರಾಧಿ ||೧೫||

ಅರ್ಥ || ಆರನೆಯದು ಧಾರಣಾ, ಏಳನೆಯದು ಧ್ಯಾನ, ಎಂಟನೆಯದು ಸವಿಕಲ್ಪ ಸಮಾಧಿಯು. ಈಅಷ್ಟಾಂಗ ಸಾಧನಗಳಿಂದ ನಿರ್ವಿಕಲ್ಪಸಮಾಧಿಯನ್ನು ಆರಾಧಿಸಬೇಕು. ||೧೫||

॥ ದೋಹಾ ॥

ಸುನಿ ಸಮಾಧಿ ಕರ್ತವ್ಯತಾ । ತತ್ವದೃಷ್ಟಿ ಹಸಿ ದೇತ॥
ಉತ್ತರ ಕಛು ಭಾಖತ ನಹೀ । ಲಖಿ ತಿಹಿ ಬಕತ ಸಪ್ರೇತ॥೧೬॥

ಅರ್ಥ॥ ಸಮಾಧಿ ಕರ್ತವ್ಯವನ್ನು ಕೇಳಿ, ತತ್ವದೃಷ್ಟಿಯು ನಗಲಾರಂಭಿಸಿದನು. ಅವನಿಗೆ ಉತ್ತರವನ್ನೇನೂ ಹೇಳದೆ ಪಿಶಾಚವತ್ ಬಡಬಡಿಸುತ್ತಿರುವನೆಂದು ಅನ್ಯರು ಎನ್ನುವರು. ॥೧೬॥

ಟೀಕಾ॥ ಸಪ್ರೇತ ಅಂದರೆ ಪ್ರೇತಸಹಿತ ಭೂತಾವೇಶವುಳ್ಳವನು ಹೇಗೆ ಬಡಬಡಿಸುವನೋ, ಹಾಗೆ ಅನ್ಯಥಾ ಹೇಳಿದ್ದನ್ನು ಕೇಳಿ, ತತ್ವದೃಷ್ಟಿಯು ನಕ್ಕಿರುವನು.

ಈ ಎಲ್ಲ ದೋಹಾಗಳ ಅಭಿಪ್ರಾಯವೇನೆಂದರೆ- ಜ್ಞಾನಿಗಳ ಶರೀರ ವ್ಯವಹಾರದ ನಿಯಮವಿಲ್ಲ. ಕಾರಣವೇನೆಂದರೆ ಜ್ಞಾನಿಗಳ ಸ್ವರೂಪದಲ್ಲಿ ಅಜ್ಞಾನ, ಮತ್ತು ಅದರ ಕಾರ್ಯವಾದ ಭೇದಭ್ರಾಂತಿ,ಮತ್ತು ಭ್ರಮದ ಕಾರ್ಯಗಳಾದ ರಾಗದ್ವೇಷಾದಿಗಳು ಇರುವುದಿಲ್ಲ. ಆದರೆ ಜ್ಞಾನಿಗಳ ಪ್ರಾರಬ್ಧಕರ್ಮವು ಸಹ ಶೇಷವಾಗಿ ಇರುವುದು. ಆ ಕರ್ಮಶೇಷವೇ ಅವರ ವ್ಯವಹಾರ ವಿಷಯಕ್ಕೆ ನಿಮಿತ್ತವಾಗಿರುವುದು. ಈ ಪ್ರಾರಬ್ಧಕರ್ಮವು ಪುರುಷ ಭೇದದಿಂದ ಅನೇಕವಿಧವಾಗಿರುವುದು; ಅದರಿಂದ ಜ್ಞಾನಿಯ ಪ್ರಾರಬ್ಧಕರ್ಮ ಜನ್ಯವ್ಯವಹಾರದ ನಿಯಮವಿಲ್ಲ. ಹೀಗೆ ಸಿದ್ಧಾಂತಪಕ್ಷವಿರುವುದು.

ಕೆಲವರು ಹೀಗೆ ಎನ್ನುತ್ತಾರೆ;- ಜ್ಞಾನಿಗಳ[೧] ವ್ಯವಹಾರದಲ್ಲಿ ಅನ್ಯ ಯಾವ ಕರ್ಮದ ನಿಯಮವೂ ಇಲ್ಲ. ಆದರೆ ನಿವೃತ್ತಿಯ ನಿಯಮವಿದೆ. ಮತ್ತು ಪ್ರವೃತ್ತಿಯಾದರೂ ದೇಹಸಂರಕ್ಷಣದಸಲುವಾಗಿಭಿಕ್ಷಾ ಸ್ನಾನಶೌಚಾದಿಗಳಮಟ್ಟಿಗೆ ಆಗಬೇಕು, ಅಧಿಕವಾಗಬಾರದು, ಕಾರಣವೇನೆಂದರೆ, ಜ್ಞಾನೋತ್ಪತ್ತಿಯ ಪೂರ್ವದಲ್ಲಿ ಜಿಜ್ಞಾಸಾಕಾಲದಲ್ಲಿ, ವಿಷಯಗಳಲ್ಲಿ ದೋಷದೃಷ್ಟಿಯಿಂದ ವೈರಾಗ್ಯವಿರುತ್ತದೆ. ಈ ವೈರಾಗ್ಯವು ಜ್ಞಾನೋತ್ಪತ್ತಿಯಾದ ಬಳಿಕ ಸಹ ವಿಷಯಗಳಲ್ಲಿ ದೋಷದೃಷ್ಟಿಯಿಂದ ಮತ್ತು ಮಿಥ್ಯಾಬುದ್ಧಿಯಿಂದ ಇರುತ್ತದೆ.(೧)ಅಪರೋಕ್ಷರೂಪದಿಂದ ಮಿಥ್ಯಾವೆಂದು ತಿಳಿದ ಪದಾರ್ಥಗಳಲ್ಲಿ ಸತ್ಯಬುದ್ಧಿಯುಂಟಾಗುವುದಿಲ್ಲ. (೨)ದೋಷದೃಷ್ಟಿಯಿಂದ ರಾಗ ಉಂಟಾಗುವುದಿಲ್ಲ. ಮತ್ತು ಪ್ರವೃತ್ತಿಯು ರಾಗದಿಂದವುಂಟಾಗುತ್ತದೆ. ಜ್ಞಾನಿಗೆ ರಾಗವು ಸಂಭವಿಸುವದಿಲ್ಲ. ಅದರಿಂದ ಪ್ರವೃತ್ತಿಯುಂಟಾಗುವುದಿಲ್ಲ. ಶರೀರ ನಿರ್ವಾಹಕ ಭೋಜನಾದಿಗಳಲ್ಲಿ ಪ್ರವೃತ್ತಿಯು ರಾಗದಹೊರ



ಪ್ರಾರಬ್ಧಕರ್ಮದಿಂದ ಸಂಭವಿಸುತ್ತದೆ.

ಕರ್ಮವು (೧) ಸಂಚಿತ. (೨) ಆಗಾಮಿ, (೩) ಪ್ರಾರಬ್ಧ, ಎಂದುತ್ರಿವಿಧವಾಗಿರುವುದು. ಇವುಗಳಲ್ಲಿ(೧) ಪೂರ್ವಶರೀರಗಳಲ್ಲಿ ಫಲಾರಂಭ ರಹಿತವಾಗಿ ಮಾಡಿದ ಯಾವಕರ್ಮಗಳಿರುವವೋ, ಅವುಗಳಿಗೆ ಸಂಚಿತ ಕರ್ಮಗಳೆನ್ನುತ್ತಾರೆ.

(೨)ಭವಿಷ್ಯತ್[೨] ಕರ್ಮಗಳಿಗೆ ಆಗಾಮಿ ಯೆನ್ನುತ್ತಾರೆ. (೩) ಭೂತ ಶರೀರಗಳಲ್ಲಿ ಮಾಡಿದ ವರ್ತಮಾನ ಶರೀರದ ಹೇತುವಾದ ಕರ್ಮಕ್ಕೆ ಪ್ರಾರಬ್ಧ ವೆನ್ನುತ್ತಾರೆ.

ಇವುಗಳಲ್ಲಿ (೧) ಸಂಚಿತಕರ್ಮದ ನಾಶವು ಜ್ಞಾನದಿಂದ ಆಗುವುದು. (೨) ಜ್ಞಾನಿಗೆ ಆತ್ಮದಲ್ಲಿ ಕರ್ತೃತ್ವ ಭ್ರಾಂತಿಯು ಇಲ್ಲ. ಅದರಿಂದ ಅವನಿಗೆ ಆಗಾಮಿ ಕರ್ಮದ ಸಂಭವವಿಲ್ಲ.ಮತ್ತು(೩) ಯಾವ ಪ್ರಾರಬ್ಧಕರ್ಮವು ಜ್ಞಾನಿಯ ಶರೀರದ ಆರಂಭಮಾಡಿರುವುದೋ ಅದೇ ಪ್ರಾರಬ್ಧಕರ್ಮವು, ಶರೀರ ರಕ್ಷಣೆಯ ಸಾಧನಗಳಾದ ಭಿಕ್ಷಾದಿಗಳಲ್ಲಿ ಪ್ರವೃತ್ತಿಯನ್ನುಂಟುಮಾಡುವುದು. ಕಾರಣ ಪ್ರಾರಬ್ಧಕರ್ಮದ ನಾಶವು ಭೋಗಿಸದ ಹೊರತು ಆಗುವುದಿಲ್ಲ. ಮತ್ತು ಕೆಲಕೆಲವು ಗ್ರಂಥಗಳಲ್ಲಿ- "ಸಂಚಿತ ಆಗಾಮಿ ಕರ್ಮಗಳಂತೆ" ಜ್ಞಾನಿಯ ಪ್ರಾರಬ್ಧಕರ್ಮವೂ ಸಹ ಉಳಿಯುವುದಿಲ್ಲ.ಅದರಿಂದ ಭೋಜನಾದಿ ಪ್ರವೃತ್ತಿಗಳು ಸಹ ಜ್ಞಾನಿಗೆ ಸಂಭವಿಸುವದಿಲ್ಲ. ಹೀಗೆ ಉಲ್ಲೇಖಿಸಿರುವುದು. ಇದರ ಅಭಿಪ್ರಾಯವೇನೆಂದರೆ;-ಜ್ಞಾನಿಯ ದೃಷ್ಟಿಯಿಂದ ಆತ್ಮದಲ್ಲಿ ಕರ್ಮ ಮತ್ತು ಅದರ ಫಲದ ಸಂಬಂಧವಿಲ್ಲ. ಅದರಿಂದ ಆತ್ಮದಲ್ಲಿ ಸರ್ವಕರ್ಮದ ನಿಷೇಧ ಅಭಿಪ್ರಾಯದಿಂದ ಪ್ರಾರಬ್ಧದ ನಿಷೇಧವು ಮಾಡಲ್ಪಟ್ಟಿದೆ. ಮತ್ತು ಜ್ಞಾನೋತ್ಪತ್ತಿಯ ಪೂರ್ವದಲ್ಲಿ ಮಾಡಿದ ಪ್ರಾರಬ್ಧದ ಭೋಗವು ಜ್ಞಾನಿಯ ಶರೀರಕ್ಕೆ ಆಗುವುದಿಲ್ಲ. ಈ ಅಭಿಪ್ರಾಯದಿಂದ ಪ್ರಾರಬ್ಧದ ನಿಷೇಧವನ್ನು ಹೇಳಲಿಲ್ಲ.ಕಾರಣವೇನೆಂದರೆ, ಸೂತ್ರಕಾರನು ಉಲ್ಲೇಖಿಸಿರುವದೇನೆಂದರೆ, (೧) ಜ್ಞಾನಿಯ ಸಂಚಿತ ಕರ್ಮದ ನಾಶವು ಜ್ಞಾನದಿಂದ ಆಗುವುದು. (೨) ಆಗಾಮಿ ಕರ್ಮದ ಸಂಬಂಧವು ಆಗುವುದಿಲ್ಲ. (೩) ಪ್ರಾರಬ್ಧ ಕರ್ಮವು ಭೋಗದಿಂದ ನಾಶವಾಗುವುದು.

ಅದರಿಂದ ಪ್ರಾರಬ್ಧದ ಬಲದಿಂದ ಶರೀರನಿರ್ವಾಹಕ್ರಿಯೆಯು ಜ್ಞಾನಿಗೆ ಉಂಟಾಗುವುದು. ಅಧಿಕ ಕ್ರಿಯೆಯು ಆಗುವುದಿಲ್ಲ.

ಟಿಪ್ಪಣಿ. ೧, ಕೇವಲ ಸನ್ಯಾಸಿಗಳೇ ಜ್ಞಾನದ ಮುಖ್ಯ ಅಧಿಕಾರಿಗಳೆಂದು ತಿಳಿಯತಕ್ಕ ಶಂಕರಾನಂದಸ್ವಾಮಿ ಮೊದಲಾದವರು

೨]ವರ್ತಮಾನ ಶರೀರದಲ್ಲಿ ಮಾಡಿದ ಕರ್ಮಕ್ಕೆ ಆಗಾಮಿ ಕರ್ಮವೆನ್ನುತ್ತಾರೆ.
೩] ಅಪರೋಕ್ಷಾನುಭೂತಿ, ಮತ್ತು, ವಿವೇಕ ಚೂಡಾಮಣಿ ಮೊದಲಾದ ಗ್ರಂಥಗಳಲ್ಲಿ.

॥೪೫೬॥ ಕರ್ಮವು ಅನೇಕ ವಿಧವಾಗಿರುವುದು. ಯಾವಾಗ ಒಂದೇ ಕರ್ಮವು ಅನೇಕ ಶರೀರಗಳ ಆರಂಭಕ ವಿರುವದೋ, ಇಂಥ ಕರ್ಮದಿಂದ ರಚಿತವಾದ ಪ್ರಥಮ ಶರೀರದಲ್ಲಿ ಯಾವಾಗ ಜ್ಞಾನವಾಗುವುದೋ, ಆಗ ಜ್ಞಾನಿಗೆಅನ್ಯಶರೀರದ ಪ್ರಾಪ್ತಿಯು ಆಗ ಬೇಕು. ಕಾವೇನೆಂದರೆ ಫಲದ ಅನುಭವನ್ನು ಯಾವುದು ಮಾಡಿರುವುದೋ, ಅದಕ್ಕೆ ಪ್ರಾರಬ್ಧವೆನ್ನುತ್ತಾರೆ. ಅದರ ನಾಶವು ಭೋಗ ದಿಂದ ಹೊರತು ಆಗುವುದಿಲ್ಲ. ಅನೇಕ ಶರೀರಗಳ ಕಾರಣವು ಕರ್ಮವೇ ಆಗಿರುವುದು. ಅದು ಯಾವ ಪ್ರಥಮಶರೀರವನ್ನು ಉತ್ಪ ಮಾಡಿರುವುದೋ,ಆ ಶರೀರದಲ್ಲಿ ಜ್ಞಾನವುಂಟಾಗಲು ಜ್ಞಾನಾನಂತರದಲ್ಲಿ ಆ ಕರ್ಮದ ಫಲವು ಅನ್ಯಶರೀರ ಪ್ರಾಪ್ತಿಯಾಗಲು ಶೇಷವಾಗಿ ಇರುವುದು ಆದರಿಂದ ಜ್ಞಾನಿಗೂಸಹ ಅನ್ಯಶರೀರದ ಪ್ರಾಪ್ತಿಯು ಆಗಲೇಬೇಕು.ಮತ್ತು

॥೪೫೭॥ ಕೆಲವರು ಹೀಗೆ ಎಂದರೆ:- "ಪ್ರಾರಬ್ಧ ಕರ್ಮದ ಫಲದಿಂದ ಎಷ್ಟು ಶರೀರಗಳು ಪ್ರಾಪ್ತವಾಗತಕ್ಕವುಗಳಾಗಿರುವವೋ, ಅಷ್ಟು ಶರೀರಗಳುಜ್ಞಾನಿಗೂ ಸಹ ಪ್ರಾಪ್ತವಾಗುವುವು. ಪ್ರಾರಬ್ಧ ಭೋಗಕ್ಕಿಂತಲೂ ಅಧಿಕವಾಗಿ ಪ್ರಾಪ್ತವಾಗುವುದಿಲ್ಲ. ಅದರಿಂದ ಜ್ಞಾನವು ಸಹ, ಸಫಲವಾಗುವುದು" ಹೀಗೆ ಎನ್ನುವದು ಸಂಭವಿಸುವುದಿಲ್ಲ, ಕಾರಣವೇನೆಂದರೆ:- "ಜ್ಞಾನಿಯ ಪ್ರಾಣವು ಅನ್ಯಲೋಕದಲ್ಲಿ ಅಥವಾ ಇಹಲೋಕದ ಅನ್ಯಶರೀರದಲ್ಲಿ ಗಮನ ಮಾಡುವುದಿಲ್ಲ"
೧
ಎಂಬದಾಗಿ ವೇದಗಳು ಸಾರುತ್ತಿರುವುವು. ಆದರೆ ಆತ್ಮಸ್ವರೂಪದಲ್ಲಿಅಂತಃಕರಣವು ಇಂದ್ರಿಯಸಹಿತ ಲೀನವಾಗುವುದು. ಮತ್ತು ಪ್ರಾಣಗಮನದ ಹೊರತು ಅನ್ಯಶರೀರದ ಪ್ರಾಪ್ತಿಯು ಸಂಭವಿಸುವುದಿಲ್ಲ. ಆದರಿಂದ ಜ್ಞಾನಿಗೆ ಪ್ರಾರಬ್ಧ ಶೇಷದಿಂದ ಅನ್ಯಶರೀರ ಪ್ರಾಪ್ತಿಯಾಗುವುದು. ಈ ಪ್ರತಿಪಾದನವು ಸಂಭವಿಸುವುದಿಲ್ಲ.

ಈ ಸಮಾಧಾನವಿದೆ. ಅನೇಕ ಶರೀರಾರಂಭಕ ಒಂದೇಕರ್ಮವಿದ್ದ ಅಲ್ಲಿ ಅಂತ್ಯಶರೀರದಲ್ಲಿ ಜ್ಞಾನವಾಗುತ್ತದೆ. ಪೂರ್ವಶರೀರದಲ್ಲಿ ಜ್ಞಾನವಾಗುದವುದಿಲ್ಲ. ಕಾರಣವೇನೆಂದರೆ,ಅನೇಕಶರೀರದ ಆರಂಭಕ ಪ್ರಾರಬ್ಧವು ಜ್ಞಾನ ಪ್ರತಿಬಂಧಕವಾಗಿದೆ. ಹೇಗೆ (೧) ವಿಷಯಗಳಲ್ಲಿ ಆಸಕ್ತಿ (೨) ಬುದ್ಧಿಮಾಂದತ್ವ



ಭೇದವಾದಿಯ ವಚನಗಳಲ್ಲಿ ವಿಶ್ವಾಸ.ಇವುಹೇಗೆಪ್ರತಿಬಂಧಕಗಳಾಗಿರುವವೋ,ಹಾಗೆ ವಿಲಕ್ಷಣಪ್ರಾರಬ್ಧವು ಸಹಜ್ಞಾನದ ಪ್ರತಿಬಂಧಕವು.ಮತ್ತು ಜ್ಞಾನದ ಪ್ರತಿಬಂಧಕವಿದ್ದರು ಸಹ ಜ್ಞಾನಸಾಧನಗಳಾದ ಶ್ರವಣಾದಿಗಳಾಗಲು ಅವನಿಗೆ ಪ್ರತಿಬಂಧಕ ನಿವೃತ್ತಿಯಾದ ಬಳಿಕ ಪೂರ್ವಕೃತ ಶ್ರವಣಾದಿಗಳಿಂದ ಅನ್ಯಶರೀರದಲ್ಲಿ ಜ್ಞಾನವಾಗುವುದು. ಹೇಗೆಂದರೆ ವಾಮದೇವನು ಪೂರ್ವಜನ್ಮದ ಶ್ರವಣಾದಿಗಳನ್ನು ಮಾಡಿದನು. ಆಗ ಪ್ರಾರಬ್ಧದ ಫಲವಾದ ಒಂದು ಶೇಷವಾಗಿ ಇದ್ದದ್ದರಿಂದ ಜ್ಞಾನೋತ್ಪತಿಯಾಗಲಿಲ್ಲ. ಆದರೆ ಶ್ರವಣಾದಿಗಳನ್ನು ಮಾಡುತ್ತಿದ್ದ ವರ್ತಮಾನ ಶರೀರವು ಶೇಷವಾಗಿ ಇದ್ದದ್ದರಿಂದ ಜ್ಞಾನೋತ್ಪತ್ತಿಯಾಗಲಿಲ್ಲ. ಆದರೆ ಶ್ರವಣಾದಿಗಳನ್ನು ಮಾಡುತ್ತಿದ್ದ ವರ್ತಮಾನ ಶರೀರವು ಪಾತವಾಗಿ ಅನ್ಯಶರೀರ ಪ್ರಾಪ್ತಿಯಾದ ಕೂಡಲೆ ಪೂರ್ವಕೃತ ಶ್ರವಣಾದಿಗಳಿಂದಲೇ ಗರ್ಭದಲ್ಲಿಯೇ ಜ್ಞಾನೋದಯವಾಯಿತು. ಆದರಿಂದ ಜ್ಞಾನೋದಯಾನಂತರ ಅನ್ಯಶರೀರ ಪ್ರಾಪ್ತಿಯು ಸಂಭವಿಸುವುದಿಲ್ಲ. ಮತ್ತು ವರ್ತಮಾನ ಶರೀರದ ಚೇಷ್ಟೆಯು ಪ್ರಾರಬ್ಧದಿಂದ ಆಗುತ್ತದೆ. ಆಗ ಎಷ್ಟು ಚೇಷ್ಟೆಯು ಶರೀರದ ನಿರ್ವಾಹಕ ವಿರುವುದೋ,ಅಷ್ಟೇ ಆಗುವುದು. ರಾಗಜನ್ಯ ಅಧಿಕ ಚೇಷ್ಟೆಯು ಆಗುವುದಿಲ್ಲ. ಅದರಿಂದ ಸರ್ವಪ್ರವೃತ್ತಿರಹಿತ ಜ್ಞಾನೀ ಆಗುವನು.

ಟಿಪ್ಪಣಿ—೧ 'ನತಸ್ಯಪ್ರಾಣಾ ವುತ್ಕ್ರಾಮಂತೇ ಹ್ಯತ್ರೈವ ಸಮವಲೀಯಂತೆ' ಈ ಜ್ಞಾನಿಯ ಪ್ರಾಣವು ಗಮನ ಮಾಡುವದಿಲ್ಲ,ಆದರೆ ಇಲ್ಲಿ ಮರಣದಸ್ಥಾನದಲ್ಲಯೇ ಲೀನವಾಗುವದು],, ಇತ್ಯಾದಿ ವೇದವಾಕ್ಯಗಳು ಸಾರುತ್ತಿರುವವು. ೨ ಜ್ಞಾನದ ತ್ರಿವಿಧ ಬಂಧಗಳ ನಿವೃತ್ತಿಯು ಉಪಾಯ ಸಹಿತ ವರ್ಣನವು ಶ್ರೀಪಂಚದಶಿಯ ಧ್ಯಾನದೀಪದಲ್ಲ ಉಲ್ಲೇಖಿಸಲ್ಪಟ್ಟಿರುವದು; ಮತ್ತು ಇದರ ನಾಮ ಮಾತ್ರ ಕಥನವನ್ನು ಈ ಪೂರ್ವದಲ್ಲಿ ಪಂಚಮತರಂಗದ ಟಿಪ್ಪಣಿಯಲ್ಲಿ ವಿವರಿಸಿರುವೆವು.

೩ ಜನ್ಮಾಂತರದ ಹೇತುವು ಪ್ರಾರಬ್ಧಶೇಷವು,

೪ ಇಲ್ಲ "ವಾಮದೇವ,, ಶಬ್ದದಿಂದ ಋಷಭದೇವನ ಪುತ್ರ ಭರತರಾಜನಗ್ರಹವಿದೆ. ಭರತನಿಗಾದರೂ ಮೂರು ಜನ್ಮಗಳ ಪ್ರಾರಬ್ಧ ಶೇಷವಿದ್ದುದರಿಂದ ಜ್ಞಾನೋತ್ಪತ್ತಿಯಾಗಲಿಲ್ಲ. ಆ ಮೇಲೆ ಮೂರನೇ ಜನ್ಮದಲ್ಲಿ ಉಪದೇಶದ ಹೊರ್ತು ಪೂರ್ವಕೃತ ವಿಚಾರದಿಂದ ಜ್ಞಾನವಾಯಿತು.

॥೪೫೮॥ ಈರೀತಿಯಿಂದ ನಿವೃತ್ತಿಪ್ರಧಾನ ಜ್ಞಾನಿಯ ವ್ಯವಹಾರವು ಆಗುವುದು. ಈ ವಿಷಯದಲ್ಲಿ ಹೀಗೆ ಆಕ್ಷೇಪಣೆ ಇರುವುದು:-"ಮನಸ್ಸಿನಸ್ವ
೧
ಭಾವವು ಅತಿಚಂಚಲವು. ಮನಸ್ಸಿನ ನಿರಾಲಂಬ ಸ್ಥಿತಿಯು ಸಂಭವಿಸುವು

೨
ದಿಲ್ಲ. ಏನಾದರೂ ಆಲಂಬನೆಯಿಂದ ಮನದ ಸ್ಥಿತಿಯಾಗುತ್ತದೆ. ಆದರಿಂದ ಮನಸ್ಸಿಗೆ ಏನಾದರೊಂದು ಆಲಂಬದ ಪ್ರಾಪ್ತಿ ನಿಮಿತ್ತವಾಗಿಯೇ ಜ್ಞಾನಿಯದಗೆ ಪ್ರವೃತ್ತಿಯಾಗುವುದು" ಈ ಆಕ್ಷೇಪಣೆಗೆ ಸಮಾಧಾನವೇನೆಂದರೆ, ಯದ್ಯಪಿ ಸಮಾಧಿಹೀನ ಪುರುಷನ ಮನಸ್ಸು ಚಂಚಲವಾಗುತ್ತದೆ, ತಥಾಪಿ ಸಮಾಧಿಯಿಂದ ಮನಸ್ಸಿನ ವಿಜಯವಾಗುವುದು. ಮತ್ತು ಜ್ಞಾನವಂತನು ಸಮಾಧಿಯಲ್ಲಿ ಸ್ಥಿತನಾಗುವನು. ಅದರಿಂದ ಜ್ಞಾನಿಗೆ ಪ್ರವೃತ್ತಿಯು ಇಲ್ಲ.

ಟಿಪ್ಪಣಿ—೧. ಆಶ್ರಯರಹಿತ, ೨. ಆಶ್ರಯದಿಂದ.

||೫೫೯|| ಸಮಾಧಿಯ ಅಷ್ಟ ಅಂಗಗಳು ||೫೫೯—೫೬೬||

ಈ ಸಮಾಧಿಯು ಈ ಕೆಳಗೆ ವಿವರಿಸಿದ ಅಷ್ಟಾಂಗಗಳಿಂದ ಆಗುವುದು. (೧) ಯಮ, (೨) ನಿಯಮ, (೩) ಆಸನ, (೪) ಪ್ರಾಣಾಯಾಮ (೫) ಪ್ರತ್ಯಾಹಾರ, (೬) ಧಾರಣಾ, (೭) ಧ್ಯಾನ, (೮) ಸವಿಕಲ್ಪಸಮಾಧಿ.

||೫೬೦|| (೧) ಅಹಿಂಸಾ, (೨) ಸತ್ಯ, (೩) ಅಸ್ತೇಯ, (೪) ಬ್ರಹ್ಮಚರ್ಯ, (೫) ಅಪರಿಗ್ರಹ, ಈ ಐದಕ್ಕೆ ಯಮ, ಎನ್ನಬೇಕು.

||೫೬೧|| ೧ ಶೌಚ, ೨ ಸಂತೋಷ, ೩ ತಪ, ೪ ಸ್ವಾಧ್ಯಾಯ ೫ ಈಶ್ವರ ಪ್ರಣಿಧಾನ, ಈ ಐದಕ್ಕೆ ನಿಯಮವೆನ್ನಬೇಕು. ಮತ್ತು ಜ್ಞಾನಸಮುದ್ರವೆಂಬ ಗ್ರಂಥದಲ್ಲಿ ಹತ್ತುಪ್ರಕಾರದ ಯಮ, ಮತ್ತು ಹತ್ತು ಪ್ರಕಾರದ ನಿಯಮವನ್ನು ಹೇಳಿದ್ದಾರೆ. ಇದನ್ನು ಪುರಾಣರೀತಿಯಿಂದ ವರ್ಣಿಸಿದ್ದಾರೆ. ವೇದಾಂತ ಸಾಂಪ್ರದಾಯದಲ್ಲಿ ಯಮ ನಿಯಮಗಳು ಐದೈದು ಪ್ರಕಾರವೆಂದು ವರ್ಣಿಸಿರುವರು.

||೫೬೨|| ಆಸನದ ಭೇದಗಳು ಅಸಂಖ್ಯಾಕ ಅವೆ. ಅವುಗಳಲ್ಲಿ ೧ ಸ್ವಸ್ತಿಕ, ೨ ಗೋಮುಖ, ೩ ವೀರ, ೪ ಕೂರ್ಮ, ೫ ಪದ್ಮ, ೬ ಕುಕ್ಕುಟ, ೭ ಉತ್ತಾನ, ೮ ಕೂರ್ಮಕ, ೯ ಧನುಷ, ೧೦ ಮತ್ಸ್ಯ, ೧೧ ಪಶ್ಚಿಮತಾನ ೧೨ ಮಯೂರ, ೧೩ ಸರ್ವಾಂಗ, ೧೪ ಸಿಂಹ, ೧೫ ಭದ್ರ, ೧೬ ಸಿದ್ಧ ಇವೇ ಮೊದಲಾದ ಎಂಭತ್ತುನಾಲ್ಕು ಆಸನಗಳನ್ನು ಯೋಗಗ್ರಂಥಗಳಲ್ಲಿ ಉಲ್ಲೇಖಿಸಿರುವರು. ಮತ್ತು ಇವುಗಳ ಲಕ್ಷಣವನ್ನು ಸಹಾ ಅಲ್ಲಿಯೇ ವರ್ಣಿಸಿದ್ದಾರೆ. ಗ್ರಂಥದ ವಿಸ್ತಾರಭಯದಿಂದಲೂ ಹಾಗೂ ವೇದಾಂತದಲ್ಲಿ



ಗಳ ಪ್ರಯೋಜನವು ವಿಶೇಷವಾಗಿ ಇಲ್ಲದ್ದರಿಂದಲೂ ಅವುಗಳ ಲಕ್ಷಣ ವಿವರಿಸಿರುವುದಿಲ್ಲ. ಮೇಲೆ ವಿವರಿಸಿದ ಹದಿನಾರುವಿಧ ಆಸನಗಳಲ್ಲಿ ಸಿಂಹ, ಭದ್ರ, ಪದ್ಮ, ಸಿದ್ಧ ಎಂಬ ಈ ನಾಲ್ಕು ಆಸನಗಳೇ ಶ್ರೇಷ್ಠವಾಗಿರುವುವು. ಈ ನಾಲ್ಕರಲ್ಲಿ ಸಹಾ ಸಿದ್ಧಾಸನವು ಅತ್ಯಂತ ಪ್ರಧಾನವು. ಇದರ ಲಕ್ಷಣವೇನೆಂದರೆ, ವಾಮಪಾದದ ಹಿಮ್ಮಡಿಯನ್ನು ಗುದ, ಶಿಶ್ನದ ಸಂಧಿಯ ಮಧ್ಯದಲ್ಲಿ ಒತ್ತಿಹಿಡಿದು ದಕ್ಷಿಣಪಾದದ ಹಿಮ್ಮಡಿಯನ್ನು ಶಿಶ್ನದ ಊರ್ಧ್ವ ಭಾಗದಲ್ಲಿ ಒತ್ತಿ ಹಿಡಿದು, ಭೃಕುಟಿಯ ಮಧ್ಯದಲ್ಲಿ ದೃಷ್ಟಿಯನ್ನಿಟ್ಟು, ಸ್ಥಾಣುವತ್ ಸರಳ ನಿಶ್ಚಲಶರೀರದ ಸ್ಥಿತಿಗೆ ಸಿದ್ಧಾಸನವೆನ್ನುತ್ತಾರೆ. ಮತ್ತು ಕೆಲವರು ಹೀಗೆ ಹೇಳುತ್ತಾರೆ-ವಾಮಪಾದದ ತುದಿಯನ್ನು ಗುದ, ಶಿಶ್ನಗಳ ಸಂಧಿಯಲ್ಲಿ ಹಚ್ಚಬಾರದು. ಆದರೆ ಶಿಶ್ನದ ಊರ್ಧ್ವದಲ್ಲಿ ಹಚ್ಚಬೇಕು, ಅದರ ಊರ್ಧ್ವ ದಕ್ಷಿಣ ತುದಿಯನ್ನು ಇಡಿಯಬೇಕು. ಪೂರ್ವದಲ್ಲಿ ಹೇಳಿದ ಪ್ರಕಾರಕ್ಕಿಂತಲೂ ಇದು ಶ್ರೇಷ್ಠವಾಗಿರುವುದು. ಕಾರಣವೇನೆಂದರೆ;-ಕೆಲವು ಆಸನಗಳು ರೋಗನಾಶಕವಾಗಿವೆ. ಮತ್ತು ಬೇರೆ ಕೆಲವು ಆಸನಗಳು ಪ್ರಾಣಾಯಾಮಾದಿ ಸಮಾಧಿಗಳ ಅಂಗವಾಗಿರುವುವು. ಮತ್ತು ಸಿದ್ಧಾಸನವು ಸಮಾಧಿಕಾಲದಲ್ಲಿ ಆಗುವುದು. ಅದರ ಅತಿಮುಖ್ಯವಾಗಿದೆ, ಇದಕ್ಕೇ ವಜ್ರಾಸನ, ಮುಕ್ತಾಸನ ಗುಪ್ತಾಸನವೆಂಬೂ ಎನ್ನುತ್ತಾರೆ.

ಟಿಪ್ಪಣಿ—೧. ಸ್ಥಾಣು ಅಂದರೆ ಸ್ತಂಭದಂತೆ.

||೫೬೩|| ಆಸನಸಿದ್ಧಿಯಾದ ತರುವಾಯ. ಪ್ರಾಣಾಯಾಮವನ್ನು ಸಂಪಾದಿಸಬೇಕು. ಈ ಪ್ರಾಣಾಯಾಮವು ಅನೇಕವಿಧವಾಗಿದೆ; ತಥಾಪಿ ಸಂಕ್ಷೇಪದಿಂದ ಅದರ ಲಕ್ಷಣವನ್ನು ಹೇಳುವೆನು. (೧) ನಾಸಿಕದ ವಾಮಭಿಪ್ರದ್ವಾರದಿಂದ ಇಡಾ ನಾಮಕ ನಾಡಿಯಿಂದ ವಾಯುವನ್ನು ಪೂರ್ಣಮಾಡಲು ಅದಕ್ಕೆ ಪೂರಕವೆನ್ನುತ್ತಾರೆ. (೨) ದಕ್ಷಿಣ ದ್ವಾರದಿಂದ ಬಿಡುವದಕ್ಕೆ ರೇಚಕವೆನ್ನುತ್ತಾರೆ. (೩) ಸುಷುಮ್ನಾ ನಾಡಿಯಿಂದ ಸ್ತಂಭನಮಾಡುವದಕ್ಕೆ ಕುಂಭಕವೆನ್ನುತ್ತಾರೆ. ಈ ರೀತಿಯಿಂದ ಪೂರಕ, ರೇಚಕ, ಕುಂಭಕಕ್ಕೆ ಪ್ರಾಣಾಯಾಮವೆನ್ನುತ್ತಾರೆ. ಈ ಪ್ರಾಣಾಯಾಮವು ಎರಡು ವಿಧವಾಗಿದೆ (೧) ಅಗರ್ಭ, (೨) ಸಗರ್ಭ, (೧) ಪ್ರಣವೋಚ್ಚಾರಣ ರಹಿತ ಪ್ರಾಣಾಯಾಮಕ್ಕೆ ಅಗರ್ಭವೆನ್ನುತ್ತಾರೆ. (೨) ಪ್ರಣವೋಚ್ಚಾರಣಸಹಿತ ಪ್ರಾಣಾಯಾಮಕ್ಕೆ ಸಗರ್ಭವೆನ್ನುತ್ತಾರೆ.

ಟಿಪ್ಪಣಿ ೧. ಸರ್ವಹಠಯೋಗದಲ್ಲಿ ಪ್ರಾಣಾಯಾಮವು ಅಂತರಭಾವವದೆ. ಅದುಃದ ಆ ಪ್ರಾಣಾಯಾಮದ ರೀತಿಯನ್ನು "ಹಠಯೋಗಪ್ರದೀಪಿಕಾ" ಮೊದಲಾದ ಗ್ರಂಥಗಳಲ್ಲಿ ಸ್ಪಷ್ಟ ವಿವರಿಸಲ್ಪಟ್ಟದೆ.

||೪೬೪|| (೧) ವಿಷಯಗಳಿಂದ ಸಕಲ ಇಂದ್ರಿಯಗಳ ನಿರೋಧಮಾಡುವದಕ್ಕೆ ಪ್ರತ್ಯಾಹಾರವೆನ್ನುತ್ತಾರೆ. (೨) ಅಂತರಾಯ ರಹಿತ ಅಂತಃಕರಣದ ಸ್ಥಿತಿಗೆ ಧಾರಣಾ ಎನ್ನುತ್ತಾರೆ. (೩) ಅಂತರಾಯ ಸಹಿತ ಅದ್ವಿತೀಯ ವಸ್ತುವಿನಲ್ಲಿಯ ಅಂತಃಕರಣದ ಪ್ರವಾಹಕ್ಕೆ ಧ್ಯಾನವೆನ್ನುತ್ತಾರೆ.

||೪೬೫|| ವ್ಯುತ್ಥಾನಸಂಸ್ಕಾರದ ತಿರಸ್ಕಾರ, ಮತ್ತು ನಿರೋಧಸಂಸ್ಕಾರದ ಪ್ರಕಟತ್ವವಾಗಲು, ಉಂಟಾದ ಅಂತಃಕರಣದ ಏಕಾಗ್ರತಾರೂಪ ಪರಿಣಾಮಕ್ಕೆ ಸಮಾಧಿಯೆನ್ನುತ್ತಾರೆ. ಈ ಸಮಾಧಿಯು (೧) ಸವಿಕಲ್ಪಸಮಾಧಿ, (೨) ನಿರ್ವಿಕಲ್ಪಸಮಾಧಿ ಎಂದು ಎರಡು ವಿಧವಾಗಿದೆ.

(೧) ಜ್ಞಾತಾ, ಜ್ಞಾನ, ಜ್ಞೇಯರೂಪ ತ್ರಿಪುಟಿಯ ಭಾನ ಸಹಿತ ಅದ್ವಿತೀಯ ಬ್ರಹ್ಮದಲ್ಲಿ ಅಂತಃಕರಣದ ವೃತ್ತಿಯ ಸ್ಥಿತಿಯೇ ಸವಿಕಲ್ಪಸಮಾಧಿಯು. ಈ ಸವಿಕಲ್ಪ ಸಮಾಧಿಯಲ್ಲಿ (೧) ಶಬ್ದಾನುವಿದ್ಧ, (೨) ಶಬ್ದಾನನುವಿದ್ಧ ಎಂದು ಎರಡು ವಿಧಗಳಿರುವವು. (೧) "ಅಹಂಬ್ರಹ್ಮಾಸ್ಮಿ" ಎಂಬ ಶಬ್ದದಿಂದ ಅನುವಿದ್ಧ ಅಂದರೆ ಸಹಿತವಾದದ್ದಕ್ಕೆ ಶಬ್ದಾನುವಿದ್ಧವೆನ್ನುವರು. (೨) ಶಬ್ದರಹಿತವಾದದ್ದಕ್ಕೆ ಶಬ್ದಾನನುವಿದ್ಧವೆನ್ನುವರು.

[೨] ತ್ರಿಪುಟೀಭಾನರಹಿತ ಅಖಂಡ ಬ್ರಹ್ಮಾಕಾರ ಅಂತಃಕರಣದ ವೃತ್ತಿಯ ಸ್ಥಿತಿಗೆ ನಿರ್ವಿಕಲ್ಪಸಮಾಧಿ ಎನ್ನುವರು.

ಈರೀತಿಯಿಂದ ಸವಿಕಲ್ಪ ಮತ್ತು ನಿರ್ವಿಕಲ್ಪಸಮಾಧಿಯ ಭೇದವಿರುವುದು. ಇವುಗಳಲ್ಲಿ [೧] ಸವಿಕಲ್ಪಸಮಾಧಿಯು ಸಾಧನವು. [೨] ನಿರ್ವಿಕಲ್ಪಸಮಾಧಿಯು ಫಲವು.

[೧] ಸಾಧನರೂಪ ಸವಿಕಲ್ಪ ಸಮಾಧಿಯಲ್ಲಿ ಯದ್ಯಪಿ ತ್ರಿಪುಟೀರೂಪ ದ್ವೈತವು ಪ್ರತೀತವಾಗುತ್ತದೆ. ತಥಾಪಿ ಈ ದ್ವೈತವು ಈರೀತಿಯಿಂದ ಬ್ರಹ್ಮರೂಪವಾಗಿ ಪ್ರತೀತವಾಗುವುದು. ಹೇಗೆಂದರೆ-ಮೃತ್ತಿಕಾವಿಕಾರಕ್ಕೆ ಮೃತ್ತಿಕಾರೂಪವೆಂದು ತಿಳಿದರೂ ವಿವೇಕಿಗೆ ಮೃತ್ತಿಕೆಯ ವಿಕಾರವಾದ ಘಟಾದಿಗಳು ಸಹ ಪ್ರತೀತವಾಗುವುವು, ಮತ್ತು ಮೃತ್ತಿಕಾರೂಪವೂ ಪ್ರತೀತವಾಗುವುದು. ಇದರಂತೆ ಸವಿಕಲ್ಪಸಮಾಧಿಯಲ್ಲಿ ತ್ರಿಪುಟೀದ್ವೈತ ಬ್ರಹ್ಮರೂಪವೂ ಪ್ರತೀತವಾಗುವುದು.



(೨) ನಿರ್ವಿಕಲ್ಪ ಸಮಾಧಿಯಲ್ಲಿ ಸಹ ಸವಿಕಲ್ಪ ಸಮಾಧಿಯಂತೆ ತ್ರಿಪುಟೀರೂಪ ದ್ವೈತವು ವಿದ್ಯಮಾನವಾಗಿದ್ದರೂ ತ್ರಿಪುಟೀ ದ್ವೈತದ ಪ್ರತೀತಿಯು ಆಗುವದಿಲ್ಲ. ಜಲದಲ್ಲಿ ಲವಣವನ್ನು ಮಿಶ್ರಮಾಡಲು, ಆ ಲವಣವು ಜಲದಲ್ಲಿ ವಿದ್ಯಮಾನವಾಗಿದ್ದರೂ ನೇತ್ರದಿಂದ ಲವಣಪ್ರತೀತಿಯು ಸರ್ವಥಾ ಆಗುವದಿಲ್ಲ.

ಈ ರೀತಿಯಿಂದ ಸವಿಕಲ್ಪ ನಿರ್ವಿಕಲ್ಪಗಳ ಭೇದವು. (೧) ಸವಿಕಲ್ಪ ಸಮಾಧಿಯಲ್ಲಿ ಬ್ರಹ್ಮರೂಪದಿಂದ ದ್ವೈತದ ಪ್ರತೀತಿಯೂ ಮತ್ತು (೨) ನಿರ್ವಿಕಲ್ಪ ಸಮಾಧಿಯಲ್ಲಿ ತ್ರಿಪುಟೀರೂಪ ದ್ವೈತದ ಅಪ್ರತೀತಿಯೂ, ಸಿದ್ಧವಾಯಿತು.

||೪೬೬|| ಸುಷುಪ್ತಿಯಿಂದ ನಿರ್ವಿಕಲ್ಪ ಸಮಾಧಿಯ ಭೇದವು,

(೧) ಸುಷುಪ್ತಿಯಲ್ಲಿ ಅಂತಃಕರಣದ ಬ್ರಹ್ಮಾಕಾರವೃತ್ತಿಯ ಅಭಾವವಾಗುವದು. (೨) ನಿರ್ವಿಕಲ್ಪ ಸಮಾಧಿಯಲ್ಲಿ ಅಂತಃಕರಣದ ವೃತ್ತಿಯು ಬ್ರಹ್ಮಾಕಾರವೇ ಆಗಿರುವುದು. ಅಭಾವವಾಗಿರುವದಿಲ್ಲ. ಈ ರೀತಿಯಿಂದ (೧) ಸುಷುಪ್ತಿಯಲ್ಲಿಯಂತೂ ವೃತ್ತಿಸಹಿತ ಅಂತಃಕರಣದ ಅಭಾವವಾ[೧]ಗಿರುವದು. ಮತ್ತು (೨) ನಿರ್ವಿಕಲ್ಪ ಸಮಾಧಿಯಲ್ಲಿ ವೃತ್ತಿಸಹಿತ ಅಂತಃಕರಣದ ಭಾವವಿದೆ. ಅದರ ಪ್ರತೀತಿಯು ಆಗುವದಿಲ್ಲ.

ನಿರ್ವಿಕಲ್ಪ ಸಮಾಧಿಯಲ್ಲಿ ಅಂತಕರಣದ ಯಾವ ಬ್ರಹ್ಮಾಕಾರ ವೃತ್ತಿಯಾಗುವದೋ, ಅದರ ಸಾಧನವು ಸವಿಕಲ್ಪಸಮಾಧಿಯ ಅಭ್ಯಾಸವು. [illegible] ಸಾಧನರೂಪ ಅಷ್ಟಾಂಗಗಳಲ್ಲಿ ಸವಿಕಲ್ಪ ಸಮಾಧಿಯನ್ನು [illegible]ಮಾಡಿರುವರು. ನಿರ್ವಿಕಲ್ಪ ಸಮಾಧಿಯ ಫಲವು.

ಟಿಪ್ಪಣಿ. ೧. ಸಮಾಧಿಯಲ್ಲಿ ಅಂತಃಕರಣದ ಅಭಾವವುಂಟಾದರೆ ಯೋಗಿಯ ದೇಹವು ನಿದ್ರಾಲೋಲುಪನಂತೆ ಕೆಳಗೆ ಬೀಳಬೇಕು, ಹಾಗೆ ಬೀಳುವದಿಲ್ಲ. ಅದರಿಂದ ಸಮಾಧಿಯಲ್ಲಿ ಅಂತಃಕರಣವಿರಲೇಬೇಕು. ಎಂದು ತಿಳಿಯುವದು.

||೪೬೭|| ನಿರ್ವಿಕಲ್ಪ ಸಮಾಧಿಯ ಎರಡು ವಿಧಗಳು.

ಈ ನಿರ್ವಿಕಲ್ಪ ಸಮಾಧಿಯು (೧) ಅದ್ವೈತ ಭಾವನಾರೂಪ, [೨] ಅದ್ವೈತಾವಸ್ಥಾನರೂಪ ಎಂದು ಎರಡು ವಿಧವಾಗಿರುವದು. [೧] ಅದ್ವೈತ ಬ್ರಹ್ಮಾಕಾರವು ಅಂತಃಕರಣದ ಅಜ್ಞಾನವೃತ್ತಿ ಸಹಿತವಾಗುತ್ತದೆ, ಇದಕ್ಕೆ ಅದ್ವೈತಭಾವನಾರೂಪ ನಿರ್ವಿಕಲ್ಪಸಮಾಧಿ ಎನ್ನುತ್ತಾರೆ. (೨) ಈ ಸಮಾ

ಧಿಯಲ್ಲಿ ಅಭ್ಯಾಸವು ಅಧಿಕವಾಗುವದರಿಂದ ಬ್ರಹ್ಮಾಕಾರವೃತ್ತಿಯು ಪ್ರಶಾಂತವಾಗುವದು, ಅದರಿಂದ ವೃತ್ತಿರಹಿತಕ್ಕೆ ಅದ್ವೈತ ಅವಸ್ಥಾನರೂಪ ನಿರ್ವಿಕಲ್ಪ ಸಮಾಧಿ ಎನ್ನುತ್ತಾರೆ,

ಹೇಗೆ ತಪ್ತಲೋಹದಮೇಲೆ ಜಲಬಿಂದುವು ಬೀಳಲು ಅದು ತಪ್ತಲೋಹದಲ್ಲಿ ಪ್ರವೇಶವಾಗುವಂತೆ ಅದ್ವೈತ ಭಾವನಾರೂಪ ಸಮಾಧಿಯ ದೃಢ ಅಭ್ಯಾಸದಿಂದ[೧] ಅತ್ಯಂತ[೨] ಪ್ರಕಾಶಮಾನ ಬ್ರಹ್ಮದಲ್ಲಿ ವೃತ್ತಿಯು ಲಯವಾಗುವುದು. ಈ ಅದ್ವೈತಾವಸ್ಥಾನರೂಪ ನಿರ್ವಿಕಲ್ಪ ಸಮಾಧಿಯು ಅದರ ಸಾಧನವದೆ.

ಟಿಪ್ಪಣಿ. ೧, ಅದರಿಂದ ಈಅದ್ವೈತ ಭಾವನಾರೂಪ ನಿರ್ವಿಕಲ್ಪ ಸಮಾಧಿಯು ೨. ಈ ಅದ್ವೈತ ಸ್ಥಾನರೂಪ ನಿರ್ವಿಕಲ್ಪ ಸಮಾಧಿಯೂ ಜ್ಞಾನದ ಸಪ್ತಮ ಭೂಮಿಕಾರೂಪ ಯೋಗದ ಪರಮ ಅವಧಿಯಾಗಿಗಿದೆ.

## ||೪೬೮|| ಅದ್ವೈತಾವಸ್ಥಾನರೂಪ ಸಮಾಧಿಗೂ, ಸುಷುಪ್ತಿಗೂ ಭೇದ.

ಅದ್ವೈತಾವಸ್ಥಾನರೂಪ ಸಮಾಧಿಗೂ ಮತ್ತು ಸುಷುಪ್ತಿಗೂ ಇರುವ ಭೇದವೇನೆಂದರೆ-[೧] ಸುಷುಪ್ತಿಯಲ್ಲಿ ವೃತ್ತಿಯ ಲಯವು ಅಜ್ಞಾನದಲ್ಲಿ[೧] ಆಗುವದು. [೨] ಅದ್ವೈತಾವಸ್ಥಾನ ಸಮಾಧಿಯಲ್ಲಿ ವೃತ್ತಿಯ ಲಯವು ಬ್ರಹ್ಮಪ್ರಕಾಶದಲ್ಲಿ ಆಗುವದು. ಮತ್ತು (೧] ಸುಷುಪ್ತಿಯ ಆನಂದವು ಅಜ್ಞಾನಾವೃತವು. ಮತ್ತು [೨] ಸಮಾಧಿಯಲ್ಲಿ ನಿರಾವರಣ ಬ್ರಹ್ಮಾನಂದದ ಭಾನಉಂಟಾಗುವದು.

ಟಿಪ್ಪಣಿ. ೧. ಇಲ್ಲಿ ಇರುವ ರಹಸ್ಯವೇನೆಂದರೆ, ಯದ್ಯಪಿ ಉಕ್ತಸಮಾಧಿಯಲ್ಲಿ ನಿಶ್ಶೇಷ ರಜ ತಮದ ತಿರೋಧಾನದಿಂದ ಆವಿರ್ಭಾವವನ್ನು ಹೊಂದಿದಂಥ ಶುದ್ಧ ಸತ್ವ ಗುಣರೂಪ ಉಪಾದಾನದಲ್ಲಿಯೇ ವೃತ್ತಿಯ ಲಯವು ಸಂಭವಿಸುವದು, ನಿರ್ವಿಕಾರ ಬ್ರಹ್ಮಪ್ರಕಾಶದಲ್ಲಿ ಇಲ್ಲ. ತಪ್ತಲೋಹದಲ್ಲಿ ಜಲಬಿಂದುವಿನ ಲಯದ ದೃಷ್ಟಾಂತವನ್ನು ಹೇಳಿದೆ. ಅದರಲ್ಲಿಯಾದರೂ ವಿಚಾರದೃಷ್ಟಿಯಿಂದ ಪಾರ್ಥಿವ ಲೋಹದಲ್ಲಿ ಜಲಬಿಂದುವಿನ ಲಯವಿಲ್ಲ. ಆದರೆ ಜಲದ ಉಪಾದಾನವಾದ ಅಗ್ನಿಮಾತ್ರದಲ್ಲಿ ಜಲಬಿಂದುವಿನ ಲಯವಾಗುವುದು. ಅದು ತಪ್ತಲೋಹದಲ್ಲಿ ಉಪಚಾರ ಕಥನವಾಗುವದು. ತಥಾಪಿ ಬ್ರಹ್ಮಪ್ರಕಾಶದ ಭಾನರೂಪ ನಿಮಿತ್ತದಿಂದ ವೃತ್ತಿಯ ಲಯವು ಆಗುತ್ತದೆ ಅದರಿಂದ ಉಪಚಾರದಿಂದ ಬ್ರಹ್ಮಪ್ರಕಾಶದಲ್ಲಿ ಲಯವನ್ನು ಹೇಳಿದೆ.

ಇಲ್ಲವೆ ಈ ಸಮಾಧಿಯುಳ್ಳ ಬ್ರಹ್ಮವಿದ್ವರಿಷ್ಠನ ದೃಷ್ಟಿಯಿಂದ ಗುಣಾದಿಗಳು ಪ್ರ



ತೀತವಾಗುವದಿಲ್ಲ. ಆದರೆ ಶುದ್ಧಬ್ರಹ್ಮವು ಪ್ರತೀತವಾಗುತ್ತದೆ. ಅಲ್ಲಿ ಈ (ಬ್ರಹ್ಮವಿವರ್ತ) ವೃತ್ತಿ [ದೃಷ್ಟಿ)ಯ ಅಭಾವ ಉಂಟಾಗುವದರಿಂದ ಬ್ರಹ್ಮ ಪ್ರಕಾಶದಲ್ಲಿ ವೃತ್ತಿಯ ಲಯವನ್ನು ಹೇಳಿದೆ.

## ||೪೬೯|| ನಿರ್ವಿಕಲ್ಪ ಸಮಾಧಿಗೆ ಲಯ, ವಿಕ್ಷೇಪ, ಕಷಾಯ, ಮತ್ತು ರಸಾಸ್ವಾದ, ಈ ನಾಲ್ಕು ವಿಘ್ನಗಳು. ||೪೬೯-೪೭೨||

ನಿರ್ವಿಕಲ್ಪ ಸಮಾಧಿಯಲ್ಲಿ ನಾಲ್ಕು ವಿಘ್ನಗಳುಂಟಾಗುವುವು. ಅವುಗಳ ತ್ಯಾಗಮಾಡುವುದರ ಸಲುವಾಗಿ ಆ ವಿಘ್ನಗಳ ಸ್ವರೂಪವನ್ನು ವರ್ಣಿಸುವೆನು. (೧] ಲಯ, (೨] ವಿಕ್ಷೇಪ, (೩) ರಸಾಸ್ವಾದ.

(೧) ಆಲಸ್ಯದಿಂದಾಗಲಿ, ಅಥವಾ ನಿದ್ರೆಯಿಂದಾಗಲಿ ಉಂಟಾಗುವ ವೃತ್ತಿಯ ಅಭಾವಕ್ಕೆ ಲಯವೆನ್ನುತ್ತಾರೆ. ಈ ಲಯದಿಂದ ಸುಷುಪ್ತಿಯಂತೆ ಅವಸ್ಥೆಯಾಗುವುದು. ಬ್ರಹ್ಮಾನಂದದ ಭಾನವಾಗುವುದಿಲ್ಲ. ಆದರಿಂದ ನಿದ್ರಾ, ಆಲಸ್ಯಾದಿಗಳ ನಿಮಿತ್ತದಿಂದ ವೃತ್ತಿಯು ಯಾವಾಗ ತನ್ನ ಉಪಾದಾನವಾದ ಅಂತಃಕರಣದಲ್ಲಿ ಲಯವಾಗುವ ಲಕ್ಷಣವುಕಂಡುಬರುವದೋ ಆಗ ಯೋಗಿಗಳು ಸಾವಧಾನರಾಗಿ ನಿದ್ರಾದಿಗಳನ್ನು ಅವರೋಧಿಸಿ, ವೃತ್ತಿಯನ್ನು ಜಾಗ್ರತೆಪಡಿಸುವರು. ಈ ರೀತಿಯಿಂದ ಲಯರೂಪ ವಿಘ್ನದ ವಿರೋಧವಾದ ನಿದ್ರಾಲಸ್ಯಾದಿಗಳ ನಿರೋಧ ಸಹಿತ ವೃತ್ತಿಯ ಪ್ರವಾಹರೂಪ ಸ್ಮರಣಕ್ಕೆ ಗೌಡಪಾದಾಚಾರ್ಯರು ಚಿತ್ತಸಂಬೋಧನವೆಂದು ಹೇಳಿದ್ದಾರೆ.

ಟಿಪ್ಪಣಿ. ೧. ಈ ಅರ್ಥವು ಗೌಡಪಾದಾಚಾರ್ಯಕೃತ ಮಾಂಡೂಕ್ಯೋಪನಿಷತ್ತಿನ ಕಾರಿಕಾದಲ್ಲಿ ಉಲ್ಲೇಖಿಸಲ್ಪಟ್ಟದೆ. ಅದನ್ನೇ ವೇದಾಂತದೀಪಿಕಾನಾಮ ಭಾಷಾಟೀಕಾದಲ್ಲಿ ಪಂಡಿತ ಶ್ರೀ ಪೀತಾಂಬರಜಿಯವರು ಉಲ್ಲೇಖಿಸಿದ್ದಾರೆ.

||೪೭೦|| ೨. ವಿಕ್ಷೇಪದ ಅರ್ಥವೇನೆಂದರೆ;— ಮಾರ್ಜಾರಾದಿಗಳ ಭಯದಿಂದ ಗುಬ್ಬಿ ಮೊದಲಾದ ಪಕ್ಷಿಗಳು ಗೃಹದಲ್ಲಿ ಪ್ರವೇಶಮಾಡುವವು. ಆಗ ಭಯವ್ಯಾಕುಲತ್ವದಿಂದ ಅವುಗಳಿಗೆ ಗೃಹಾಂತರ್ಗತ ಸ್ಥಾನವು ತತ್ಕಾಲದಲ್ಲಿ ಕಾಣಿಸುವುದಿಲ್ಲ, ಆದರಿಂದ ಪುನಃ ಹೊರಗೆ ಬಂದು ಮರಣದ ದುಃಖಕ್ಕೆ ಗುರಿಯಾಗುವವು. ಇದರಂತೆ ಅನಾತ್ಮ ದುಃಖಗಳ ಕಾರಣವನ್ನು ತಿಳಿದು, ಅದ್ವೈತಾನಂದವನ್ನು ವಿಷಯವನ್ನಾಗಿ ಮಾಡುವುದರ ಸಲುವಾಗಿ ಪ್ರವೃತ್ತವಾದ ಯಾವ ವೃತ್ತಿ, ಆ ವೃತ್ತಿಯ ವಿಷಯವಾದ ಚೈತನ್ಯವು ಇದು ಅತಿಸೂಕ್ಷ್ಮವಾಗಿದೆ. ಅದರಿಂದ ಕಿಂಚಿತ್‌ಕಾಲ ವೃತ್ತಿಯ ಸ್ಥಿತಿಯು ಹೊರತು ತತ್ಕಾಲಕ್ಕೇ ಚೈತನ್ಯಸ್ವರೂಪ ಆನಂದದ ಲಾಭವು ಆಗುವುದಿಲ್ಲ, ಅದರಿಂದ ವೃತ್ತಿಯು ಬಹಿರ್ಮುಖವಾಗುತ್ತದೆ. ಈ ಪ್ರಕಾರ

ವಾಗಿ ಬಹಿರ್ಮುಖವಾದ ವೃತ್ತಿಗೆ ವಿಕ್ಷೇಪವೆನ್ನಬೇಕು. ಈ ವೃತ್ತಿಯ ಸ್ಥಿರತೆಯ ಹೊರತು ಸ್ವರೂಪಾನಂದದ ಲಾಭವಾಗುವುದು; ಆದರಿಂದ ಅಂತರ್ಮುಖವೃತ್ತಿಯಾದಾಗ, ಯಾವ ಪರಿಯಂತರ ವೃತ್ತಿಯು ಬ್ರಹ್ಮಾಕಾರವಾಗುವದಿಲ್ಲವೋ ಆ ಪರಿಯಂತರ ಬಾಹ್ಯಪದಾರ್ಥದಲ್ಲಿ ದೋಷಭಾವನೆಯಿಂದ ಯೋಗಿಗಳು ವೃತ್ತಿಯನ್ನು ಬಹಿರ್ಮುಖವಾಗಗೊಡಬಾರದು. ಆದರೆ ವೃತ್ತಿಯನ್ನು ಅಂತರ್ಮುಖವಾಗಿಯೆ ಸ್ಥಾಪನಮಾಡಬೇಕು. ವಿಕ್ಷೇಪವಿಘ್ನವು ವಿರೋಧವಾದ ಯೋಗಿಯ ಪ್ರಯತ್ನಕ್ಕೆ ಗೌಡಪಾದಾಚಾರ್ಯರು ಸಮಾಧಿದು ಎನ್ನುತ್ತಾರೆ.

॥೪೭೧॥ ರಾಗಾದಿರ್ ದೋಷಕ್ಕೆ ಕಷಾಯವೆನ್ನುತ್ತಾರೆ. ರಾಗಾದಿಗಳು ಎರಡು ವಿಧವಾಗಿರುವವು. (೧) ಬಾಹ್ಯ, (೨) ಆಂತರ.

(೧) ಪುತ್ರ, ಸ್ತ್ರೀ, ಧನ, ಮೊದಲಾದ ಎಷ್ಟು ವಿಷಯಗಳು ವರ್ತಮಾನಕಾಲದಲ್ಲಿ ಇರುವವೋ, ಅವುಗಳಿಗೆ ಬಾಹ್ಯವೆನ್ನುತ್ತಾರೆ.

(೨) ಭೂತ ಅಥವಾ ಭವಿಷ್ಯತ್ ಚಿಂತನರೂಪ ಮನೋರಾಜ್ಯಕ್ಕೆ ಆಂತರವೆನ್ನುತ್ತಾರೆ.

ಈ ಎರಡೂ ಪ್ರಕಾರದ ರಾಗಾದಿ ದೋಷಗಳು ಸಮಾಧಿಯಲ್ಲಿ ಪ್ರವೃತ್ತನಾದ ಯೋಗಿಯಲ್ಲಿ ಸಂಭವಿಸುವುದಿಲ್ಲ. ಕಾರಣವೇನೆಂದರೆ, ಚಿತ್ತದ ಐದು ಭೂಮಿಕೆಗಳಿರುವವು. ಅವು ಯಾವವೆಂದರೆ, (೧) ಕ್ಷೇಪತಾ, (೨) ಮೂಢತ್ವ, (೩) ವಿಕ್ಷೇಪತ್ವ, (೪) ಏಕಾಗ್ರತ್ವ [೫) ನಿರೋಧತ್ವ.

(೧) ಲೋಕವಾಸನಾ, ದೇಹವಾಸನಾ, ಶಾಸ್ತ್ರವಾಸನಾ, ಮೊದಲಾದ ರಜೋಗುಣದ ಪರಿಣಾಮವಾದ ದೃಢ ಅನಾತ್ಮವಾಸನಾ, ಇದಕ್ಕೆ ಕ್ಷೇಪತಾ, ಎನ್ನಬೇಕು. (೨) ನಿದ್ರಾ ಆಲಸ್ಯ ಮೊದಲಾದ ತಮೋಗುಣ ಪರಿಣಾಮಕ್ಕೆ ಮೂಢತ್ವವೆನ್ನಬೇಕು. ೩. ಧ್ಯಾನದಲ್ಲಿ ಪ್ರವೃತ್ತವಾದ ಚಿತ್ತವು ಕದಾಚಿತ್ ಬಾಹ್ಯಪ್ರವೃತ್ತಿಯುಳ್ಳದ್ದಾಗಲು ಅದಕ್ಕೆ ವಿಕ್ಷೇಪತ್ವವೆನ್ನಬೇಕು. (೪) ಅಂತಃಕರಣದ ಅತೀತ ಪರಿಣಾಮವು ಮತ್ತು ವರ್ತಮಾನ ಪರಿಣಾಮವು ಸಮಾನಾಕಾರ ಉಳ್ಳದ್ದಾಗಲು ಅದಕ್ಕೆ ಏಕಾಗ್ರತ್ವವೆನ್ನಬೇಕು.

ಈ ಏಕಾಗ್ರತ್ವದ ಲಕ್ಷಣವನ್ನು ಯೋಗಸೂತ್ರದಲ್ಲಿ ಪತಂಜಲ ಮುನಿಯು ಹೇಳಿರುವನು. ಅದರ ಲಕ್ಷಣವೇನೆಂದರೆ, ಸಮಾಧಿ ಕಾಲದಲ್ಲಿ ಯೋಗಿಯ ಅಂತಃಕರಣದಲ್ಲಿ ಏಕಾಗ್ರತ್ವವುಂಟಾಗುವದು. ಈ ಏಕಾಗ್ರತ್ವವು ವೃತ್ತಿಯ ಅಭಾವರೂಪವಲ್ಲ. ಆದರೆ ಎಷ್ಟು ಅಂತಃಕರಣದ ಪರಿಣಾಮವು



ಸಮಾಧಿಕಾಲದಲ್ಲಿ ಆಗುವದೋ ಅದೆಲ್ಲವು ಬ್ರಹ್ಮವನ್ನೇ ವಿಷಯವನ್ನಾಗಿ ಮಾಡುತ್ತದೆ. ಅದರಿಂದ ಅಂತಃಕರಣದ ಅತೀತಪರಿಣಾಮವು ಮತ್ತು ವರ್ತಮಾನಪರಿಣಾಮವು ಕೇವಲ ಬ್ರಹ್ಮಾಕಾರವಾಗುವುದರಿಂದ ಸಮಾನಾಕಾರವಾಗುವುವು.

(೫) ಈ ಏಕಾಗ್ರತ್ವದ ವೃದ್ಧಿಗೆ ನಿರೋಧವೆನ್ನುವರು. ಈ ಐದು ಭೂಮಿಕೆಗಳು ಅಂತಃಕರಣಕ್ಕೆ ಇವೆ.

ಈ ಐದು ಭೂಮಿಕಾಸಹಿತವಾದ ಅಂತಃಕರಣಕ್ಕೆ (೧)ಕ್ಷಿಪ್ತ,(೨] ಮೂಢ, [೩] ವಿಕ್ಷಿಪ್ತ, [೪] ಏಕಾಗ್ರ, (೫) ನಿರುದ್ಧ, ಎಂಬ ನಾಮಗಳು ಇವುಗಳಲ್ಲಿ ೧-೨ ಕ್ಷಿಪ್ತ ಮತ್ತು ಮೂಢ ಅಂತಃಕರಣಗಳಿಗೆ ಸಮಾಧಿಯಲ್ಲಿ ಅಧಿಕಾರವಿಲ್ಲ. ೩ ವಿಕ್ಷಿಪ್ತ ಅಂತಃಕರಣಕ್ಕೆ ಅಧಿಕಾರವುಂಟು. ೪-೫ ಏಕಾಗ್ರ ಮತ್ತು ನಿರುದ್ಧ ಅಂತಃಕರಣಗಳು ಸಮಾಧಿಕಾಲದಲ್ಲಿ ಉಂಟಾಗುವುವು ಎಂದು ಯೋಗಗ್ರಂಥದಲ್ಲಿ ಹೇಳಿದ್ದಾರೆ.

ರಾಗಾದ ದೋಷಸಹಿತ ಅಂತಃಕರಣವೇ ಕ್ಷಿಪ್ತವೆಂಬುದು. ಈ ಕ್ಷಿಪ್ತ ಅಂತಃಕರಣಕ್ಕೆ ಯೋಗದಲ್ಲಿ ಅಧಿಕಾರವಿಲ್ಲ ಆದರಿಂದ ರಾಗಾದಿ ದೋಷರೂಪ ಕಷಾಯವು ಸಮಾಧಿಗೆ ವಿಘ್ನವಾಗಿದೆ, ಎಂದು ಹೇಳುವುದು ಸಂಭವಿಸುವುದು ಹೇಗೆ? ಇದಕ್ಕೆ ಸಮಾಧಾನವೇನೆಂದರೆ- ಬಾಹ್ಯ ಅಥವಾ ಆಂತರದಲ್ಲಿನ ರಾಗಾದಿಗಳು ಕ್ಷಿಪ್ತ ಅಂತಃಕರಣದಲ್ಲಿಯೇ ಇರುತ್ತವೆ. ಇವುಗಳಿಗೆ ಅಧಿಕಾರವು ಸಹಾ ಇಲ್ಲ. ಆದರೂ ಅನೇಕ ಜನ್ಮಗಳಲ್ಲಿ ಪೂರ್ವದಲ್ಲಿ ಅನುಭವಿಸಿದ ಬಾಹ್ಯ ಆಂತರ ರಾಗದ್ವೇಷಗಳ ಸೂಕ್ಷ್ಮಸಂಸ್ಕಾರವು ವಿಕ್ಷಿಪ್ತಾದಿಕ ಅಂತಃಕರಣದಲ್ಲಿ ಸಹ ಸಂಭವಿಸುತ್ತವೆ, ಆದರಿಂದ ರಾಗದ್ವೇಷಗಳನಾಮವು ಕಷಾಯವಲ್ಲ, ಆದರೆ ರಾಗದ್ವೇಷಾದಿಗಳ ಸಂಸ್ಕಾರಕ್ಕೆ ಕಷಾಯವೆನ್ನುತ್ತಾರೆ. ಈ ಸಂಸ್ಕಾರವು ಅಂತಃಕರಣದಲ್ಲಿ ಯಾವ ಪರಿಯಂತರವಿರುವುದೋ ಆ ಪರಿಯಂತರ ನಿವೃತ್ತವಾಗುವುದಿಲ್ಲ. ಆದರಿಂದ ಸಮಾಧಿಕಾಲದಲ್ಲಿ ಸಹಾ ಅಂತಃಕರಣದಲ್ಲಿ ಸಂಭವಿಸುವುವು. ಆದರೆ ರಾಗದ್ವೇಷಾದಿಗಳ ಉದ್ಭೂತ ಸಂಸ್ಕಾರವು ಸಮಾಧಿಯ ವಿರೋಧವು. ಅನುದ್ಭೂತವು ವಿರೋಧಿಯಲ್ಲ, ಪ್ರಕಟವಾದದ್ದಕ್ಕೆ ಉದ್ಭೂತವೆನ್ನುವರು, ಅಪ್ರಕಟವಿದ್ದದ್ದಕ್ಕೆ ಅನುದ್ಭೂತವೆನ್ನುವರು.

ಸಮಾಧಿಯಲ್ಲಿ ಪ್ರವೃತ್ತನಾದ ಯೋಗಿಗೆ ರಾಗದ್ವೇಷ ಸಂಸ್ಕಾರಗಳ

ಪ್ರಕಟತೆಯು ಉಂಟಾದರೆ ವಿಷಯದೋಷ ದರ್ಶನದಿಂದ ಪ್ರತಿಬಂಧ ಮಾಡಬೇಕು.

ವಿಕ್ಷೇಪಕ್ಕೂ, ಕಷಾಯಕ್ಕೂ ಇರುವ ಭೇದವೇನೆಂದರೆ ೧ ಬಾಹ್ಯ ವಿಷಯಾಕಾರ ವೃತ್ತಿಗೆ ವಿಕ್ಷೇಪವೆನ್ನುತ್ತಾರೆ. ಮತ್ತು ೨ ಯೋಗಿಯ ಪ್ರಯತ್ನದಿಂದ ಯಾವಾಗ ವೃತ್ತಿಯು ಅಂತರ್ಮುಖವಾಗುತ್ತದೆಯೋ ಆಗ ರಾಗಾದಿಗಳ ಉದ್ಭೂತಸಂಸ್ಕಾರದಿಂದ ಅಂತರ್ಮುಖವಾದ ವೃತ್ತಿಯು ಸ್ತಬ್ಧವಾಗುತ್ತದೆ. ಬ್ರಹ್ಮವನ್ನು ವಿಷಯವನ್ನಾಗಿ ಮಾಡುವುದಿಲ್ಲ. ಇದನ್ನೇ ಕಷಾಯವೆನ್ನುತ್ತಾರೆ. ವಿಷಯದಲ್ಲಿ ದೋಷ ದರ್ಶನಸಹಿತ ಯೋಗಿಯ ಪ್ರಯತ್ನದಿಂದ ಕಷಾಯವಿಘ್ನದ ನಿವೃತ್ತಿಯು ಆಗುವುದು.

ಟಿಪ್ಪಣಿ—[೧] “ಯಾವಜನರೂ ನನ್ನ ನಿಂದೆಯನ್ನು ಮಾಡಕೂಡದು, ಆದರೆ ಸರ್ವರೂ ಸ್ತುತಿಯನ್ನೇ ಮಾಡಬೇಕು,, ಎಂಬ ಆಗ್ರಹದ ದೃಢಸಂಸ್ಕಾರವು ಲೋಕವಾಸನೆಯಾಗಿದೆ.

[೨) ಸ್ಥೂಲ ಇಲ್ಲವೆ ಸೂಕ್ಷ್ಮದೇಹದ ರೋಗಾದಿರೂಪ, ಅಥವಾ ಪಾಪರೂಪ ಮಲದನಿವಾರಣೆಯನ್ನು ಔಷಧಾದಿಗಳಿಂದಾಗಲೀ, ಅಥವಾ ತೀರ್ಥಾಟನದಿಂದಾಗಲಿ ಮಾಡುವನು. ಮತ್ತು ಇವುಗಳ ವಿಷಯದಲ್ಲಿ “ಶೋಭೆ, ಪುಷ್ಟ್ಯಾದಿರೂಪ ಇಲ್ಲವೆ ಪುಣ್ಯರೂಪಗುಣದ ಸಂಪಾದನಮಾಡೇನು,, ಎಂಬ ಆಗ್ರಹದ ದೃಢಸಂಸ್ಕಾರವೇ ದೇಹವಾಸನೆಯಾಗಿದೆ.

೩ ಸರ್ವಶಾಸ್ತ್ರಗಳ ಪಾಠವನ್ನು, ಅಥವ ಅರ್ಥವನ್ನು ಅಥವ ಆಯಾ ಶಾಸ್ತ್ರೋಕ್ತ ಆಚರಣಗಳನ್ನು ನಾನು ಧಾರಣಮಾಡುವೆನು ',ಎಂಬ ಆಗ್ರಹದ ದೃಢಸಂಸ್ಕಾರವೇ ಶಾಸ್ತ್ರವಾಸನೆಯಾಗಿದೆ.

೪ ಯಾವ ಪುರುಷನಿಗೆ ರಾಜಸನ್ನಿಧಾನಕ್ಕೆ ಹೋಗಲು ಅಧಿಕಾರವಿರುವುದೋ ಅವನಿಗೆ ದ್ವಾರರಕ್ಷಕನು ವಿಘ್ನ ಮಾಡಿದನು, ಎಂಬ ಕಥನವು ಸಂಭವಿಸುವುದು. ಮತ್ತು ಯಾವನಿಗೆ ಅಲ್ಲಿ ಹೋಗುವದಕ್ಕೆ ಅಧಿಕಾರವಿಲ್ಲವೋ ಅವನಿಗೆ ದ್ವಾರರಕ್ಷಕನು ವಿಘ್ನಮಾಡಿದನು ಎಂಬ ಕಥನವು ಸಂಭವಿಸುವುದಿಲ್ಲ. ಇದರಂತೆ ಕ್ಷಿಪ್ತ ಅಂತಃಕರಣಕ್ಕೆ ಸಮಾಧಿಯಲ್ಲಿ ಅಧಿಕಾರವುಂಟಾಗಲು ಅದಕ್ಕೆ ರಾಗಾದಿ ದೋಷರೂಪ ಕಷಾಯವು ಸಮಾಧಿಯ ವಿಘ್ನವಾಗುವುವು. ಆದರಿಂದ ಯಾವ ಕ್ಷಿಪ್ತ ಅಂತಃಕರಣಕ್ಕೆ ಸಮಾಧಿಯಲ್ಲಿ ಅಧಿಕಾರವಿಲ್ಲ, ಅದಕ್ಕೆ ರಾಗಾದಿ ದೋಷರೂಪ ಕಷಾಯವು ಸಮಾಧಿಯ ವಿಘ್ನ ಎಂದು ಹೇಳುವುದು ಸಂಭವಿಸುವುದಿಲ್ಲ. ಇಲ್ಲಿ ಈ ಪ್ರಕ್ರಿಯೆಇದೆ- ೧ ಉದ್ಯುಕ್ತ, ೨ ಆಶಾರೂಪ, ಮತ್ತು ೩ ವಾಸನಾ ರೂಪ ಭೇದಗಳಿಂದ ರಾಗ ಮೊದಲಾದ ಮೂರು ಭ್ರಾಂತಿಗಳು ಇವೆ. ೧ ಬಾಹ್ಯಪ್ರವೃತ್ತಿಯು ಸಾಧನವಾದ ರಾಗಾದಿಗಳಿಗೆ ಉದ್ಯುಕ್ತರಾಗವೆನ್ನುತ್ತಾರೆ. ಇದಕ್ಕೇ ಬಾಹ್ಯರಾಗವೆಂದೂ ಎನ್ನುವರು. ಮತ್ತು ೨ ಮನೋರಾಜ್ಯರೂಪ ರಾಗಾದಿಗಳಿಗೆ ಆಶಾರೂಪ ರಾಗವೆನುತ್ತಾರೆ. ಇದಕ್ಕೇ ಆಂತರರಾಗವೆಂದೂ ಎನ್ನುವರು. ಮತ್ತು ೩ ಜನ್ಮಾಂತರಗಳಲ್ಲಿ ಪೂರ್ವದಲ್ಲಿ ಅನುಭವಮಾಡಿದ ರಾಗಾದಿಗಳ ಸಂಸ್ಕಾರಕ್ಕೆ ವಾಸನಾರೂಪ ರಾಗವೆಂದು ಎನ್ನುತ್ತಾರೆ, ಇದರಲ್ಲಿ ವಾಸನಾರೂಪ ರಾಗವು ಉದ್ಭೂತ ಮತ್ತು ಅನುದ್ಭೂತ ಭೇದದಿಂದ ಎರಡು ಬಗೆಯಾಗಿದೆ.



ಈ ಅರ್ಥವನ್ನು ಜೀವನ್ಮುಕ್ತಿ ವಿವೇಕನಾಮ ಗ್ರಂಥದಲ್ಲಿ ವಿದ್ಯಾರಣ್ಯಸ್ವಾಮಿಗಳು ಉಲ್ಲೇಖಿಸಿರುವರು.

ಇದರಲ್ಲಿ ಈ ಕೆಳಗಿನ ದೃಷ್ಟಾಂತವಿದೆ. ಹೇಗೆ ರಾಜನ ದರ್ಶನಾರ್ಥಿಯಾಗಿ ಗೃಹದಿಂದ ಹೊರಬಿದ್ದ ಒಬ್ಬಾನೊಬ್ಬ ಧನಿಕನಿಗೆ ರಾಜದ್ವಾರದಲ್ಲಿ ಜಾಗ್ರತೆಯಿಂದ ನಿಂತುಕೊಂಡ ಒಬ್ಬರಕ್ಷಕನು ಆತಂಕಪಡಿಸುವನೋ, ಹಾಗೆ ಸರ್ವ ವಿಷಯಗಳಿಂದ ಉಪರಾಮವನ್ನು ಹೊಂದಿ, ನಿರ್ವಿಕಲ್ಪಸಮಾಧಿಯ ಆನಂದಾರ್ಥವಾಗಿ ಅಂತರ್ಮುಖನಾದ ಯೋಗಿಯ ಮನಸ್ಸಿಗೆ ಮಧ್ಯದಲ್ಲಿ [ಸಮಾಧಿ ಆನಂದಲಾಭ ವಾಗುವ ಪೂರ್ವದಲ್ಲಿ] ಉದ್ಭೂತ ರಾಗಾದಿಗಳ ಸಂಸ್ಕಾರರೂಪ ಕಷಾಯವು ಆತಂಕವನ್ನು ಮಾಡುವುದು. ಅದರಿಂದ ಇದು ಸಮಾಧಿಯ ವಿಘ್ನವಿದೆ.

||೪೭|| ೪. ರಸಾಸ್ವಾದದ ಅರ್ಥವು ಕೆಳಗೆ ಬರೆದಹಾಗೆ ಇರುವುದು, ಯೋಗಿಗೆ ಬ್ರಹ್ಮಾನಂದದ ಅನುಭವವೂ, ಮತ್ತು ವಿಕ್ಷೇಪರೂಪ ದುಃಖನಿವೃತ್ತಿಯ ಅನುಭವವೂ ಆಗುತ್ತದೆ. ಮತ್ತು ಕೆಲವರಿಗೆ ದುಃಖದ ನಿವೃತ್ತಿಯು ಸಹ ಆನಂದವಾಗುತ್ತದೆ. ಭಾರವಾಹಕನಾದ ಪುರುಷನಿಗೆ ಭಾರವನ್ನು ಇಳಿಸುವುದರಿಂದ ಆನಂದವಾಗುತ್ತದೆ. ಆ ಆನಂದದಲ್ಲಿ ಬೇರೆಯಾವ ವಿಷಯದ ಇಚ್ಛೆಯೂ ಇರುವುದಿಲ್ಲ. ಆದರೆ ಭಾರಜನ್ಯದುಃಖದ ನಿವೃತ್ತಿಯಿಂದ “ನನಗೆ ಆನಂದವಾಯಿತು” ಎಂದು ಎನ್ನುತಾನೆ. ಇದರಿಂದ ದುಃಖದನಿವೃತ್ತಿಯು ಸಹ ಆನಂದದಕಾರಣವಾಗಿದೆ. ಇದರಂತೆ ಯೋಗಿಗೆ ಸಮಾಧಿಯಲ್ಲಿ ವಿಕ್ಷೇಪಜನ್ಯ ದುಃಖದ ನಿವೃತ್ತಿಯಿಂದ ಯಾವ ಆನಂದವಾಗುವುದೋ ಅದರ ಅನುಭವಕ್ಕೆ ರಸಾಸ್ವಾದವೆನ್ನುತ್ತಾರೆ.

ದುಃಖ ನಿವೃತ್ತಿಜನ್ಯ ಆನಂದದ ಅನುಭವದಿಂದಲೇ ಯೋಗಿಯು ತೃಪ್ತಬುದ್ಧಿಯನ್ನುಂಟು ಮಾಡಿಕೊಂಡರೆ ಸಕಲ ಉಪಾಧಿರಹಿತ ಬ್ರಹ್ಮಾಕಾರ ವೃತ್ತಿಯ ಅಭಾವದಿಂದ ಬ್ರಹ್ಮಾನಂದದ ಅನುಭವವು ಸಮಾಧಿಯಲ್ಲಿ ಆಗಲಾರದು. ಈ ಕಾರಣದಸಲುವಾಗಿ ದುಃಖನಿವೃತ್ತಿಜನ್ಯ ಆನಂದದ ಅನುಭವರೂಪ ರಸಾಸ್ವಾದವು ಸಹ ಸಮಾಧಿಯಲ್ಲಿ ವಿಘ್ನವು.

ವಾಂಛಿತಪ್ರಾಪ್ತಿಯು ಹೊರತು ಸಹ ವಿರೋಧದ ನಿವೃತ್ತಿಯಿಂದ ಆನಂದದ ಉತ್ಪತ್ತಿಯಲ್ಲಿ ಅನ್ಯದೃಷ್ಟಾಂತವು, ಭೂಗತವಾಗಿ ಮಹಾನಿಧಿಯುಇದೆ.

ಆ ನಿಧಿಯು ಅತ್ಯಂತ ವಿಷಯುಕ್ತನಾದ ಸರ್ಪದಿಂದ ರಕ್ಷಿತವಾಗಿದೆ. ಈ ನಿಧಿಪ್ರಾಪ್ತಿಗಿಂತ ಪೂರ್ವದಲ್ಲಿ ನಿಧಿಪ್ರಾಪ್ತಿಗೆ ವಿರೋಧವಾದ ಸರ್ಪದ ನಿವೃತ್ತಿಯಿಂದ ಆನಂದವಾಗುವುದು. ಈ ಆನಂದದಲ್ಲಿಯೇ ಸಾಧಕನಿಗೆ ಅಲಂಬುದ್ಧಿಯುಂಟಾದರೆ ಉದ್ಯೋಗತ್ಯಾಗದಿಂದ ನಿಧಿಪ್ರಾಪ್ತಿಯ ಮಹಾನಂದವು ಹೇಗೆ ಪ್ರಾಪ್ತವಾಗುವುದಿಲ್ಲವೋ, ಹಾಗೆ ಅದ್ವೈತಬ್ರಹ್ಮ ನಿಧಿ ಇದೆ. ದೇಹಾದಿಕ ಅನಾತ್ಮಪದಾರ್ಥಗಳ ಪ್ರತೀತಿರೂಪ ವಿಕ್ಷೇಪ ಸರ್ಪವಿದೆ, ವಿಕ್ಷೇಪ ಸರ್ಪನಿವೃತ್ತಿಜನ್ಯ ಅವಾಂತರ ರಸ ಆನಂದಾನುಭವ ರೂಪ ಆಸ್ವಾದನವು, ನಿಧಿರೂಪ ಅದ್ವೈತ ಬ್ರಹ್ಮಪ್ರಾಪ್ತಿಜನ್ಯ ಮಹಾನಂದದ ಪ್ರಾಪ್ತಿಗೆ ಪ್ರತಿಬಂಧವಾಗುವುದರಿಂದ ವಿಘ್ನವೆನ್ನುತ್ತಾರೆ.

ಅಥವಾ ರಸಾಸ್ವಾದದ ಇನ್ನೊಂದು ಅರ್ಥವಿದೆ, ಸವಿಕಲ್ಪಸಮಾಧಿಯನಂತರ ನಿರ್ವಿಕಲ್ಪ ಸಮಾಧಿಯಾಗುತ್ತದೆ, ಮತ್ತು ಸವಿಕಲ್ಪಸಮಾಧಿಯಲ್ಲಿ ತ್ರಿಪುಟಿಯು ಪ್ರತೀತವಾಗುತ್ತದೆ. ಆದರಿಂದ ಸವಿಕಲ್ಪಸಮಾಧಿಯ ಆನಂದವು ತ್ರಿಪುಟೀರೂಪ ಉಪಾಧಿಸಹಿತವಾಗುವುದರಿಂದ ಸೋಪಾಧಿಕವೆನ್ನುತ್ತಾರೆ. ಮತ್ತು ನಿರ್ವಿಕಲ್ಪಸಮಾಧಿಯಲ್ಲಿ ನಿರುಪಾಧಿಕ ಆನಂದವಿದೆ. ಈ ಪ್ರಕಾರದಿಂದ ಸವಿಕಲ್ಪಸಮಾಧಿಯ ಉತ್ತರದಲ್ಲಿ ನಿರ್ವಿಕಲ್ಪಸಮಾಧಿಯ ಆರಂಭದಲ್ಲಿ ಸವಿಕಲ್ಪಸಮಾಧಿಯ ತ್ಯಾಗವು ಸೋಪಾಧಿಕ ಆನಂದದೊಡನೆ ಆಗುವದಿಲ್ಲ. ಆದರೆ ಅದರ ಅನುಭವಮಾಡುವದಕ್ಕೇ ರಸಾಸ್ವಾದವೆನ್ನುತ್ತಾರೆ. ಈ ಕಾರಣದಿಂದ ವಿಕ್ಷೇಪನಿವೃತ್ತಿಜನ್ಯ ಆನಂದಾನುಭವವು, ಅಥವಾ ಸವಿಕಲ್ಪ ಸಮಾಧಿಯ ಆನಂದಾನುಭವವು ಇವುಗಳಿಗೆ ರಸಾಸ್ವಾದವೆನ್ನಬೇಕು. ಈ ಎರಡೂ ಬಗೆಯ ರಸಾಸ್ವಾದವು ನಿರ್ವಿಕಲ್ಪಸಮಾಧಿಯ ಪರಮಾನಂದ ಅನುಭವಕ್ಕೆ ವಿರೋಧಿಯಾಗುವುದರಿಂದ ವಿಘ್ನವಾಗಿದೆ, ಆದರಿಂದ ಇದನ್ನು ತ್ಯಾಗಮಾಡಬೇಕು. ಹೀಗೆ ನಿರ್ವಿಕಲ್ಪಸಮಾಧಿಯಲ್ಲಿ ನಾಲ್ಕು ವಿಘ್ನಗಳುಂಟಾಗುತ್ತವೆ. ಈ ನಾಲ್ಕು ವಿಘ್ನಗಳು ಸಮಾಧಿಯ ಆರಂಭದಲ್ಲಿ ಆಗುವವು.

## ॥೪೭೩॥ ಜ್ಞಾನಿಯ ಬಾಹ್ಯಪ್ರವೃತ್ತಿಯ ಅಸಂಭವದ ಆಕ್ಷೇಪದ ಸಮಾಪ್ತಿ.

ಸಾವಧಾನತೆಯಿಂದ ನಾಲ್ಕು ವಿಘ್ನಗಳನ್ನು ಅತಿಕ್ರಮಿಸಿ ಸಮಾಧಿಯಲ್ಲಿ ಪರಮಾನಂದವನ್ನು ಯಾವ ವಿದ್ವಾಂಸನು ಅನುಭವಿಸುವನೋ ಅವನನ್ನು ಜೀವನ್ಮುಕ್ತನೆನ್ನುತ್ತಾರೆ



ಈ ಪ್ರಕಾರದಿಂದ ಜ್ಞಾನಿಯ ಚಿತ್ತವು ನಿರಾಲಂಬವಾಗುವದಿಲ್ಲ. ಯಾವಾಗ ಪ್ರಾರಬ್ಧ ಬಲದಿಂದ ಸಮಾಧಿಯಿಂದ ಉತ್ಥಾನವಾಗುವದೋ ಆಗ ಸಮಾಧಿಯಲ್ಲಿ ಪರಮಾನಂದ ಅನುಭವದ ಸ್ಮೃತಿಯು ಉಂಟಾಗುತ್ತದೆ. ಆದರಿಂದ ಉತ್ಥಾನಕಾಲದಲ್ಲಿ ಸಹ ಜ್ಞಾನಿಯ ಚಿತ್ತವು ನಿರಾಲಂಬವಾಗಿರುವದಿಲ್ಲ. ಮತ್ತು ಜ್ಞಾನಿಗೆ ಭೋಜನಾದಿಗಳಲ್ಲಿ ಉಂಟಾಗುವ ಪ್ರವೃತ್ತಿಯು ಸಹ ಕೇವಲ ಪ್ರಾರಬ್ಧದಿಂದ ಆಗುತ್ತದೆ. ಆದರೆ ಭೋಜನಾದಿಕ ವ್ಯವಹಾರದಲ್ಲಿ ಜ್ಞಾನಿಯು ಖೇದದಿಂದ ಪ್ರವೃತ್ತನಾಗುತ್ತಾನೆ. ಕಾರಣವೇನೆಂದರೆ, ಭೋಜನಾದಿಗಳಲ್ಲಿ ಪ್ರವೃತ್ತಿಯು ಸಹ ಸಮಾಧಿಸುಖಕ್ಕೆ ವಿರೋಧವು; ಯಾವನಿಗೆ ಭೋಜನಾದಿ ಶರೀರನಿರ್ವಾಹ ಪ್ರವೃತ್ತಿಯು ಸಹ ಖೇದರೂಪವಾಗಿ ಪ್ರತೀತವಾಗುವದೋ, ಅವನಿಗೆ ಅಧಿಕ ಪ್ರವೃತ್ತಿಯುಂಟಾಗುವುವು. ಈ ಪ್ರಕಾರ ಬಹುಮಂದಿ ಆಚಾರ್ಯರು ಈ ಪಕ್ಷವನ್ನು ಉಲ್ಲೇಖಿಸಿರುವರು. ಮತ್ತು ಜೀವನ್ಮುಕ್ತಿಯ ಆನಂದವು ಸಹ ಬಾಹ್ಯಪ್ರವೃತ್ತಿಯಲ್ಲಿ ಆಗುವುದಿಲ್ಲ; ಆದರೆ ನಿವೃತ್ತಿಯಲ್ಲಿ ಆಗುವುದು. ಈ ಕಾರಣದಿಂದ ಜೀವನ್ಮುಕ್ತಿ ಸುಖಾರ್ಥಿಯಾದ ಜ್ಞಾನಿಗೆ ಬಾಹ್ಯಪ್ರವೃತ್ತಿಯು ಸಂಭವಿಸುವುದಿಲ್ಲ.

## ಅಂಕ ೪೫೫-೪೭೩ರ ಪರಿಯಂತರ ಬಂದ ಆಕ್ಷೇಪಗಳ ಸಮಾಧಾನವು. ॥೪೭೪-೪೭೮॥

## ॥೪೭೪॥ ಜ್ಞಾನಿಯು ನಿರಂಕುಶನಾಗಿದ್ದಾನೆ. ಪ್ರಾರಬ್ಧದಿಂದ ವ್ಯವಹಾರಸಿದ್ಧಿ.

೧

ತಥಾಪಿ ಜ್ಞಾನಿಯು ನಿವೃತ್ತಿಯ ನಿಯಮವನ್ನು ಹೇಳುವದು ಅಸಂಭವವು; ಏಕೆಂದರೆ;-ನಿವೃತ್ತಿಯಲ್ಲಿ ಅಥವ ಪ್ರವೃತ್ತಿಯಲ್ಲಿ ವೇದದ ಆಜ್ಞಾರೂಪ ವಿಧಿಯು ಜ್ಞಾನಿಗೆ ಇರುವುದಿಲ್ಲ. ಆದರಿಂದ ಜ್ಞಾನಿಯ ವ್ಯವಹಾರದಲ್ಲಿ ನಿಯಮವನ್ನು ತಿಳಿಯಬೇಕು. ಹೀಗೆಯೂ ಇಲ್ಲ. ಆದರಿಂದ ಜ್ಞಾನಿಯು ನಿರಂಕುಶನು. ಅವನ ವ್ಯವಹಾರವು ಪ್ರಾರಬ್ಧದಿಂದ ಆಗುವದು. (೧) ಯಾವ ಜ್ಞಾನಿಯ ಪ್ರಾರಬ್ಧವು ಭಿಕ್ಷಾಭೋಜನ ಮಾತ್ರ ಫಲದ ಇಚ್ಛೆಯಲ್ಲಿ ಇರುವುದೋ, ಅವನಿಗೆ ಭಿಕ್ಷಾಭೋಜನ ಮಾತ್ರದಲ್ಲಿ ಪ್ರವೃತ್ತಿಯು ಆಗುವದು. (೨) ಯಾವನ ಪ್ರಾರಬ್ಧವು ಅಧಿಕಭೋಗದ ಹೇತುವಾಗಿರುವುದೋ ಅವನಿಗೆ ಅಧಿಕಪ್ರವೃತ್ತಿಯು ಆಗುವದು. ಮತ್ತು-

ಕೆಲವರು ಹೀಗೆ ಎನ್ನುತ್ತಾರೆ;- ಯಾವನ ಪ್ರಾರಬ್ಧವು ಭಿಕ್ಷಾ ಭೋಜನಮಾತ್ರದ ಹೇತುವಾಗಿರುವುದೋ, ಅವನಿಗೆ ಜ್ಞಾನವಾಗುತ್ತದೆ. ಅಧಿಕ ವ್ಯವಹಾರದ ಹೇತುವು ಯಾವನ ಪ್ರಾರಬ್ಧದಲ್ಲಿ ಇರುವುದೋ, ಅವನಿಗೆ ಜ್ಞಾನ ಉಂಟಾಗುವುದಿಲ್ಲ. ಅದರಿಂದ ಭಿಕ್ಷಾ ಭೋಜನಾದಿ ವ್ಯವಹಾರಕ್ಕಿಂತ ಅಧಿಕ ವ್ಯವಹಾರವು ಜ್ಞಾನಿಗೆ ಆಗುವುದಿಲ್ಲ. ಯಾವನಿಗೆ ಅಧಿಕ ಪ್ರವೃತ್ತಿಯು ಆಗುವುದೋ ಅವನು ಜ್ಞಾನಿಯು ಅಲ್ಲ.

ಈ ಆಕ್ಷೇಪಣೆಯು ಅಸಂಭವವಾದದ್ದು; ಕಾರಣವೇನೆಂದರೆ, ಯಾಜ್ಞವಲ್ಕ್ಯ, ಜನಕ ಮೊದಲಾದವರು ಜ್ಞಾನಿಗಳೆಂದು ಹೇಳಿದ್ದಾರೆ. ಯಾಜ್ಞವಲ್ಕ್ಯನು ಸಭಾವಿಜಯದಿಂದ ಧನಸಂಗ್ರಹ ಮಾಡುತ್ತಿದ್ದನೆಂದೂ ಜನಕನು ರಾಜ್ಯಪಾಲನ ಮಾಡುತ್ತಿದ್ದನೆಂದೂ ಉಲ್ಲೇಖವಿದೆ, ಮತ್ತು ವಾಸಿಷ್ಠ ಗ್ರಂಥದಲ್ಲಿ ಅನೇಕ ಜ್ಞಾನೀ ಪುರುಷರ ವ್ಯವಹಾರವನ್ನು ಅನೇಕ ಪ್ರಕಾರವಾಗಿ ವರ್ಣಿಸಿದ್ದಾರೆ. ಈ ಕಾರಣದಿಂದ ಜ್ಞಾನಿಯ ಪ್ರವೃತ್ತಿಯ ಅಥವಾ ನಿವೃತ್ತಿಯ ನಿಯಮವಿಲ್ಲ.

ಯದ್ಯಪಿ ಯಾಜ್ಞವಲ್ಕ್ಯನು ಸಭಾವಿಜಯದನಂತರ ವಿದ್ವತ್ ಸನ್ಯಾಸರೂಪ ನಿವೃತ್ತಿಯನ್ನು ಧಾರಣಮಾಡಿದನು. ಮತ್ತು ಪ್ರವೃತ್ತಿಯಲ್ಲಿ ಗ್ಲಾನಿಯ ಹೇತುವು ಅನೇಕ ದೋಷಗಳಿಗೆ ಕಾರಣವೆಂದು ಹೇಳಿದೆ. ತಥಾಪಿ ಯಾಜ್ಞವಲ್ಕ್ಯನಿಗೆ ವಿದ್ವತ್ ಸನ್ಯಾಸಕ್ಕಿಂತ ಪೂರ್ವದಲ್ಲಿ ಜ್ಞಾನವಿರಲಿಲ್ಲ. ಎಂದು ಹೇಳುವುದು ಅಸಂಭಾವ್ಯವಾದದ್ದು. ಜ್ಞಾನವು ಪ್ರಥಮದಲ್ಲಿಯೇ ಇತ್ತು; ಆದರೆ ವಿದ್ವತ್ ಸನ್ಯಾಸಕ್ಕಿಂತ ಪೂರ್ವದಲ್ಲಿ ಜೀವನ್ಮುಕ್ತಿಯ ಆನಂದವು ಪ್ರಾಪ್ತವಾಗಲಿಲ್ಲ. ಅದರಿಂದ ಜೀವನ್ಮುಕ್ತಿಯ ಸಲುವಾಗಿ ಸರ್ವಸಂಗ್ರಹದ ತ್ಯಾಗಮಾಡಿದನು. ಯಾಜ್ಞವಲ್ಕ್ಯನ ಪ್ರಾರಬ್ಧವು ಕೆಲವು ಕಾಲ ಅಧಿಕ ಭೋಗದ ಹೇತುವಾಗಿಯೂ ಉತ್ತರಕಾಲವು ನ್ಯೂನಭೋಗದ ಹೇತುವಾಗಿಯೂ ಇತ್ತು; ಅದರಿಂದ ಪ್ರಥಮದಲ್ಲಿ ಯಾಜ್ಞವಲ್ಕ್ಯನಿಗೆ ಗ್ಲಾನಿಯ ಹೊರತು ಅಧಿಕಭೋಗವೂ, ಮುಂದೆ ಗ್ಲಾನಿಯಿಂದ ಸರ್ವಭೋಗಗಳ ತ್ಯಾಗವೂ ಉಂಟಾಯಿತು. ಮತ್ತು (೧) ಜನಕನ ಪ್ರಾರಬ್ಧವು ಮರಣಪರಿಯಂತರ ರಾಜ್ಯಪಾಲನಾದಿಕ ಸಮೃದ್ಧಿ ಭೋಗದ ಹೇತುವೂ ಆಗಿತ್ತು. ಅದರಿಂದ ಸರ್ವದಾ ತ್ಯಾಗದ ಅನುಭವವೇ ಆಯಿತು. ಭೋಗದಲ್ಲಿ ಗ್ಲಾನಿಯು ಉಂಟಾಗಲೇ ಇಲ್ಲ. ಮತ್ತು [೨) ವಾಮದೇವಾದಿಗಳ ಪ್ರಾರಬ್ಧವು ನ್ಯೂನ ಭೋಗದ ಹೇತುವಾಗಿತ್ತು. ಅದರಿಂದ ಸರ್ವದಾ ಭೋಗದಲ್ಲಿ ಗ್ಲಾನಿಯಿಂದ ಅಧಿಕ ಪ್ರವೃತ್ತಿಯು ಆಗಲಿಲ್ಲ. ಮತ್ತು [೩] ವಾಸಿಷ್ಠದಲ್ಲಿ ಶಿಖಿಧ್ವಜ



[illegible]ಗೆ ಜ್ಞಾನಾನಂತರ ಅಧಿಕ ಪ್ರವೃತ್ತಿಯುಂಟಾಯಿತೆಂದೂ ಉಲ್ಲೇಖವಿದೆ.

ಈ ಪ್ರಕಾರವಾಗಿ ಜ್ಞಾನೀಪುರುಷರ ವ್ಯವಹಾರವು ಅನೇಕ ವಿಧವಾಗಿ [illegible]ಹೇಳಲ್ಪಟ್ಟದೆ. ಈ ಸರ್ವರಿಗೂ ಜ್ಞಾನವು ಸಮವಾಗಿಯೇ ಇದೆ; ಮತ್ತು [illegible]ಅದರ ಫಲವಾದ ಮೋಕ್ಷವೂ ಸಹ ಸಮಾನವು. ಆದರೆ ಪ್ರಾರಬ್ಧಭೇದದಿಂದ [illegible]ವ್ಯವಹಾರದ ಭೇದವಿದೆ. ವ್ಯವಹಾರದ ನ್ಯೂನತೆಯಿಂದ ಜೀವನ್ಮುಕ್ತಿಯ [illegible]ಸುಖದ ಅಧಿಕತ್ವವು ಮತ್ತು ವ್ಯವಹಾರ ಅಧಿಕತ್ವದಿಂದ ಜೀವನ್ಮುಕ್ತಿಯ ಸುಖದ ನ್ಯೂನತೆಯೂ ಆಗುತ್ತದೆ.

[illegible]ಪ್ಪಣಿ. ೧. ಇನ್ನೂ ಇಲ್ಲಿಂದ ಗ್ರಂಥಕಾರನು ಪೂರ್ವೋಕ್ತ ಜ್ಞಾನಿಗಳ ನಿವೃತ್ತಿಯ ನಿಯಮದಲ್ಲಿಯ ಆಕ್ಷೇಪಣೆಯ ಸಮಾಧಾನವನ್ನು ಹೇಳುತ್ತಾನೆ.

೨. ಇಲ್ಲಿ ಈ ಸಾಂಪ್ರದಾಯಿಕ ಶ್ಲೋಕವಿದೆ.

ಶ್ಲೋ॥ ಕೃಷ್ಣೋ ಭೋಗೀ ಶುಕಸ್ತ್ಯಾಗೀ। ರಾಜಾನೌ ಜನಕರಾಘವೌ ॥
ವಸಿಷ್ಠಃ ಕರ್ಮಕರ್ತಾ ಚ। ತವಿತೆ ಜ್ಞಾನಿನಃ ಸಮಾಃ ॥೧॥

ಇದರ ಅರ್ಥ॥ ಕೃಷ್ಣನು ಭೋಗಿಯೂ, ಶುಕದೇವನು ತ್ಯಾಗಿಯೂ, ಜನಕನೂ ಮತ್ತು ರಾಮಚಂದ್ರನು ರಾಜರೂ, ವಸಿಷ್ಠ ಮುನಿಯು ಕರ್ಮಕರ್ತೃವೂ ಆಗಿರುವರು.

ಈ ಪ್ರಕಾರವಾಗಿ ಅವರವರ ಪ್ರಾರಬ್ಧ ಭೇದದಿಂದ ವಿಲಕ್ಷಣ ವ್ಯವಹಾರವು ಉಂಟಾಯಿತು. ತಥಾಪಿ ಅವರೂ ಮತ್ತು ಇವರೂ ಆಧುನಿಕ ಜ್ಞಾನಿಗಳೂ ಸಮಾನರು.

ಮೇಲೆ ಹೇಳಿದ ಅರ್ಥ ಪ್ರತಿಪಾದಕವಾದ ವಿಶ್ಲೋಂದು ಶ್ಲೋಕವು ಚಿತ್ರದೀಪಿಕೆಯಲ್ಲಿ ಇದೆ.

ಶ್ಲೋ॥ ಆರಬ್ಧಕರ್ಮನಾನಾತ್ವಾ। ದ್ಬುಧಾನಾಮನ್ಯಥಾನ್ಯಥಾ ॥
ವರ್ತನಂ ತೇನ ಶಾಸ್ತ್ರಾರ್ಥೆ। ಭ್ರಮಿತವ್ಯಂ ನ ಪಂಡಿತೈಃ ॥೨॥
ಸ್ವಸ್ವಕರ್ಮಾನುಸಾರೇಣ ॥ ವರ್ತತಾಂ ತೆ ಯಥಾತಥಾ ॥
ಅವಿಶಿಷ್ಟಃ ಸರ್ವಬೋಧಃ। ಸಮಾ ಮುಕ್ತಿ ರಿತಿಸ್ಥಿತಿಃ ॥೩॥

ಅರ್ಥ॥ ಪ್ರಾರಬ್ಧ ಕರ್ಮವು ಅನೇಕ ವಿಧವಾಗಿರುವದರಿಂದ ಜ್ಞಾನಿಗಳ ವರ್ತನವು ಬೇರೆಬೇರೆ ವಿಧವಾಗಿರುವದು. ಅದರಿಂದ ಪಂಡಿತಜನರು ದೃಢಬೋಧದಿಂದ ಮೋಕ್ಷಪ್ರತಿಪಾದಕ ಶಾಸ್ತ್ರಗಳ ಅರ್ಥದ ವಿಷಯದಲ್ಲಿ ಭ್ರಾಂತರಾಗುವುದು ಯೋಗ್ಯವಲ್ಲ ॥೨॥

ಜ್ಞಾನಿಗಳು ತಮ್ಮತಮ್ಮ ಕರ್ಮದ ಅನುಸಾರದಿಂದ ಸಲಕ್ಷಣ ವರ್ತನವುಳ್ಳವರಾಗಿದ್ದರೂ ಸರ್ವರ ಬೋಧವೂ ಸಮಾನವಿದೆ. ಮತ್ತು ಮುಕ್ತಿಯು ಸಮಾನವು, ಈಸ್ಥಿತಿಯು ಶಾಸ್ತ್ರ ಮತ್ತು ವಿದ್ವಾಂಸರ ನಿರ್ಧಾರವಾಗಿದೆ. ॥೩॥

||೪೬೫|| ಜ್ಞಾನಿಗೆ ವಿದೇಹ ಮೋಕ್ಷ ತ್ಯಾಗ ಅಥವಾ ಪರಲೋಕದ ಇಚ್ಛೆಯು ಉಂಟಾಗುವುದಿಲ್ಲ,

ಕೆಲವರು ಈ ಆಕ್ಷೇಪಣೆಯನ್ನು ಮಾಡುವರು;- ಯಾವನು ಜೀವನ್ಮುಕ್ತಿಯ ಸುಖವನ್ನು ತ್ಯಾಗಮಾಡಿ, ಸುಚ್ಛ ಭೋಗಗಳಲ್ಲಿ ಪ್ರವೃತ್ತನಾಗ್ತವನೋ, ಅವನು ವಿದೇಹಮೋಕ್ಷವನ್ನು ಸಹಾ ತ್ಯಾಗಮಾಡಿ ವೈಕುಂಠಾದಿ ಲೋಕಗಳ ಇಚ್ಛೆಯುಳ್ಳವನಾಗಿ ಆಯಾ ಲೋಕಗಳಿಗೆ ಹೋಗುವನು.

ಈ ಆಕ್ಷೇಪಣೆಯು ಸಮಂಜಸವಾದದ್ದಲ್ಲ. ಕಾರಣವೇನೆಂದರೆ, (೧) ಜೀವನ್ಮುಕ್ತಿಯ ಸುಖದ ತ್ಯಾಗವೂ, ಮತ್ತು ಭೋಗಗಳಲ್ಲಿ ಪ್ರವೃತ್ತಿಯೂ ಪ್ರಾರಬ್ಧ ಬಲದಿಂದ ಜ್ಞಾನಿಗೆ ಸಂಭವಿಸುತ್ತವೆ. ಮತ್ತು (೨) ವಿದೇಹಮೋಕ್ಷದ ತ್ಯಾಗವೂ ಮತ್ತು ಪರಲೋಕಗಮನವೂ ಸಂಭವಿಸುವುದಿಲ್ಲ. ಕಾರಣವೇನೆಂದರೆ;-

(೧) ಜ್ಞಾನಿಯ ಪ್ರಾಣವು ಹೊರಗೆ ಗಮನ ಮಾಡುವುದಿಲ್ಲ. ಈ ವಿಷಯದಲ್ಲಿ 'ನತಸ್ಯಪ್ರಾಣಾ ಉತ್ಕ್ರಾಮಂತಿ' ಎಂಬ ವೇದ ವಾಕ್ಯವಿರುವುದು. ಪರಲೋಕ ಗಮನವು ಸಂಭವಿಸುವುದಿಲ್ಲ. ಮತ್ತು [೨) ವಿದೇಹ ಮೋಕ್ಷದ ತ್ಯಾಗವು ಸಹ ಸಂಭವಿಸುವುದಿಲ್ಲ. ಕಾರಣವೇನೆಂದರೆ, ಜ್ಞಾನದಿಂದ ಅಜ್ಞಾನ ನಿವೃತ್ತಿಯಾಗಿ ಪ್ರಾರಬ್ಧ ಭೋಗಾನಂತರ ಸ್ಥೂಲ ಸೂಕ್ಷ್ಮ ಶರೀರಾಕಾರ ಅಜ್ಞಾನವು ಚೇತನದಲ್ಲಿ ಲಯವಾಗುವದಕ್ಕೆ ವಿದೇಹ ಮೋಕ್ಷವೆನ್ನುತ್ತಾರೆ. ಇದು ಅವಶ್ಯವಾಗುತ್ತದೆ. ಒಂದು ಪ್ರಸಂಗದಲ್ಲಿ ಮೂಲಾಜ್ಞಾನವು ಶೇಷವಿರಲು ಅಥವಾ ನಷ್ಟ ಅಜ್ಞಾನವು ಪುನಃ ಉತ್ಪತ್ತಿಯಾಗಲು ವಿದೇಹ ಮೋಕ್ಷದ ಅಭಾವವಾಗುವುದು. ಈ ಮೂಲಜ್ಞಾನದ ವಿರೋಧಿ ಜ್ಞಾನವು ಅವನಿಗೆ ಇರುವುದರಿಂದ ಅಜ್ಞಾನವು ಶೇಷವಾಗಿ ಉಳಿಯುವುದಿಲ್ಲ. ಮತ್ತು ಪ್ರಮಾಣದಿಂದ ನಾಶವಾದ ಅಜ್ಞಾನವು ಪುನಃ ಉತ್ಪತ್ತಿಯಾಗುವುದಿಲ್ಲ. ಆದರಿಂದ ವಿದೇಹಮೋಕ್ಷದ ಅಭಾವವು ಆಗುವುದಿಲ್ಲ. ಮತ್ತು [೩) ವಿದೇಹ ಮೋಕ್ಷದ ತ್ಯಾಗದಲ್ಲಿ ಅಥವಾ ಪರಲೋಕಗಮನದಲ್ಲಿ ಜ್ಞಾನಿಯ ಇಚ್ಛೆಯು ಸಂಭವಿಸುವದಿಲ್ಲ. ಕಾರಣವೇನೆಂದರೆ, (೧) ಜ್ಞಾನಿಗೆ ಇಚ್ಛೆಯು ಕೇವಲ ಪ್ರಾರಬ್ಧದಿಂದ ಆಗುವುದು, ಎಷ್ಟು ಸಾಮಗ್ರಿಯ ಹೊರತು ಪ್ರಾರಬ್ಧದ ಭೋಗವು ಸಂಭವಿಸುವುದಿಲ್ಲವೋ, ಅಷ್ಟು ಸಾಮಗ್ರಿಗಳನ್ನು ಪ್ರಾರಬ್ಧವು ರಚನೆಮಾಡುವುದು; ಇಚ್ಛೆಯಹೊರತು ಭೋಗವು ಸಂಭವಿಸುವುದಿಲ್ಲ. ಈ ಕಾರಣದಿಂದ ಜ್ಞಾನಿಯ ಇಚ್ಛೆಯು ಸಹಾ ಪ್ರಾರಬ್ಧದ ಬಲವು. ಮತ್ತು (೨) ಅನ್ಯಲೋಕದಲ್ಲಿ ಅಥವಾ ಇಹಲೋಕದಲ್ಲಿ ಅನ್ಯಶರೀರದ ಸಂಬಂಧವು ಜ್ಞಾನಿಗೆ ಪ್ರಾರಬ್ಧದಿಂದ ಸಹ ಆಗುವುದಿಲ್ಲ. ಈ ಸಂಗತಿಯನ್ನು ಈ ಗ್ರಂಥವದಲ್ಲಿ ಇದೇ ತರಂಗದಲ್ಲಿ ಪ್ರತಿಪಾದನಮಾಡಿದ್ದೇವೆ. ಈ ಕಾರಣದಿಂದ ಜ್ಞಾನಿಗೆ ಪ್ರಾರಬ್ಧದಿಂದ ವಿದೇಹಮೋಕ್ಷ ತ್ಯಾಗದ ಅಥವ ಪರಲೋಕಗಮನದ ಇಚ್ಛೆಯು ಆಗುವುದಿಲ್ಲ.



ಟಿಪ್ಪಣಿ—(೧) ಈ ಆಕ್ಷೇಪಣೆಯನ್ನು ದ್ವೈತವಿವೇಕದಲ್ಲಿ ವಿದ್ಯಾರಣ್ಯಸ್ವಾಮಿಗಳವರು ಬರೆದಿರುವರು.

(೨) ದ್ವೈತವಿವೇಕದಲ್ಲಿ ಪೂರ್ವೋಕ್ತ ಶಂಕಾರೂಪ ತರ್ಕದ ಕರ್ತೃವಾದ ವಿದ್ಯಾ
ರಣ್ಯ ಸ್ವಾಮಿ ಗಳಿಗೆ ಮಂದಪ್ರಾರಬ್ಧದಿಂದ ಭೋಗಾದಿಗಳಲ್ಲಿ ಪ್ರವೃತ್ತನಾ
ದ ಜ್ಞಾನಿಗೆ ವಿದೇಹಮೋಕ್ಷತ್ಯಾಗದ ಅಥವ ಪರಲೋಕಗಮನದ ಇಚ್ಛೆ
ಯು ಆಗುವುದು ಎಂಬ ಅರ್ಥವಿಷಯದಲ್ಲಿ ಅಭಿಪ್ರಾಯವಲ್ಲ, ಆದರೆ ಪ್ರ
ಯತ್ನ ರಹಿತನಾದ ಯಾವ ಜ್ಞಾನಿಯಿರುವನೋ, ಅವನಿಗೆ ಯಥೇಷ್ಟಾಚ
ರಣದ ಹೇತುವು ಭೋಗಾದಿಗಳ ಆಸಕ್ತಿಯನ್ನು ಬಿಡಿಸಿ, ಜೀವನ್ಮುಕ್ತಿಯ
ಸುಖದ ವಿಷಯದಲ್ಲಿ ಆಸಕ್ತನನ್ನಾಗಿ ಮಾಡುವುದರಲ್ಲಿ ಇದರ ಅಭಿಪ್ರಾಯ
ವು. ಹೇಗೆಂದರೆ, ರೋಗಿಷ್ಠ ಪದಾರ್ಥವನ್ನು ಭಕ್ಷಿಸುತ್ತಿದ್ದ ಪುತ್ರನನ್ನು ಕುರಿತು
ವನ ಪರಮಹಿತೇಚ್ಛುವಾದ ಜನನಿಯು "ಎಲೌ ಪುತ್ರನೇ! ನೀನು ಆರೋ
ಗ್ಯದ ಇಚ್ಛೆಯನ್ನು ತ್ಯಜಿಸಿ, ನೋಡುವುದಕ್ಕೆ ಸುಂದರವಾಗಿದ್ದ ಈರೋಗಿ
ಷ್ಠಪದಾರ್ಥಗಳನ್ನು ವಿವೇಕವನ್ನು ಬಿಟ್ಟು ಭಕ್ಷಿಸುತ್ತಿರುವಿ! ಎಂದಮೇಲೆ
ವಂಚಕರಿಂದ ಮಾಡಲ್ಪಟ್ಟ ವಿಷಯುಕ್ತ ಉಂಡೆಯನ್ನು ಭಕ್ಷಿಸುವ ಲೋಭ
ದಿಂದ ನೀನು ಜೀವದಿಂದ ಇರಬೇಕೆಂಬ ಆಶೆಯನ್ನು ಸಹಾ ತ್ಯಾಗಮಾಡ
ಬಹುದು "ಎಂದು ಹೇಳುತ್ತಿರುವ ಮಾತೆಯ ಇಚ್ಛೆಯು "ಪುತ್ರನಿಗೆ ಜೀ
ವನ ತ್ಯಾಗಮತ್ತು ವಿಷಯುಕ್ತ ಉಂಡೆಯ ಭಕ್ಷಣ ಇಚ್ಛೆಯು ಇರುವು
ದು,, ಈ ಅರ್ಥದಲ್ಲಿ ಅಭಿಪ್ರಾಯವಲ್ಲ. ಆದರೆ ತರ್ಕದಿಂದ ರೋಗದ ಸಾ
ಧನವಾದ ರೋಗಿಷ್ಠ ಪದಾರ್ಥಗಳ ಭಕ್ಷಣದ ಆಶೆಯನ್ನು ನಿವಾರಣಮಾಡಿ,
ಆರೋಗ್ಯದಲ್ಲಿ ಆಸಕ್ತನನ್ನಾಗಿ ಮಾಡುವ ವಿಷಯದಲ್ಲಿ ಅಭಿಪ್ರಾಯವಿದೆ.
ಇದರಂತೆ ವಿದ್ಯಾರಣ್ಯಸ್ವಾಮಿಗಳ ಅಭಿಪ್ರಾಯವು" ಸಹ ವಿವೇಕವನ್ನು ಬಿಟ್ಟು,
ಮಂದಪ್ರಾರಬ್ಧದ ಫಲದಲ್ಲಿ ಸಹಾಯಕ ವಾಸನೆಯಿಂದ ಇಲ್ಲವೆ ಕೇವಲ
ವಾಸನೆ ಯಿಂದ ವಿಕ್ಷೇಪದ ಹೇತುವಾದ ಕಾಮಾದಿಗಳ ಪರವಶತಾ ರೂಪ
ಪ್ರಮಾದಕ್ಕೆ ಗುರಿಯಾಗುತ್ತಿದ್ದ ಜ್ಞಾನಿಗೆ, ಜೀವನ್ಮುಕ್ತಿರೂಪ ಜೀವನದ ತ್ಯಾಗದ
ಮತ್ತು ಪರಲೋಕ ಭೋಗದ ಇಚ್ಛೆಯು ಉಂಟು ಈ ಅರ್ಥದಲ್ಲಿ ಇರುವು
ದಿಲ್ಲ. ಆದರೆ ಅನಿಷ್ಟಾಪಾದನರೂಪ ತರ್ಕದಿಂದ ಅವನಿಗೆ ಯಥೇಷ್ಟಾಚರಣ
ರೂಪ ರೋಗದ ಹೇತುವಾದ ಭೋಗದಲ್ಲಿಯ ಪ್ರವೃತ್ತಿಯನ್ನು ಬಿಡಿಸಿ ಜೀ
ವನ್ನು ಬಿಡಿಸಿ ಜೀವನ್ಮುಕ್ತಿಯ ವಿಲಕ್ಷಣ ಸುಖರೂಪ ಆರೋಗ್ಯದಲ್ಲಿ ಆಸ
ಕ್ತನನ್ನಾಗಿ ಮಾಡುವ ವಿಷಯದಲ್ಲಿ ಅಭಿಪ್ರಾಯವಿರು ವುದು.

ದೃಢಬೋಧವುಳ್ಳವನು ಮೋಕ್ಷದ ಇಚ್ಛೆಯಿಂದ ರಹಿತನಾದರೂ ಸಹ, ಮುಕ್ತನಾಗುವನು. ಈ ಅರ್ಥದಲ್ಲಿ ಭಾಷ್ಯಕಾರನ ವಚನವು ಪ್ರಮಾಣವು.

ಶ್ಲೋಕ ॥ ದೇಹಾತ್ಮ ಜ್ಞಾನವುಜ್ಞಾನಂ ದೇಹಾತ್ಮಜ್ಞಾನಬಾಧಕಂ॥
ಆತ್ಮನೇವ ಭವೇದ್ಯಸ್ಯ ಸ ನೇಚ್ಛನ್ನಪಿ ಮುಚ್ಯತೇ ॥೧॥

ಅರ್ಥ—ಅಜ್ಞಾನಿಗೆ ದೇಹದಲ್ಲಿ ಆತ್ಮಬುದ್ಧಿವತ್, ಯಾವನಿಗೆ ದೇಹದಲ್ಲಿ ಆತ್ಮಜ್ಞಾನದ ಬಾಧಕ ಜ್ಞಾನವು ಬ್ರಹ್ಮದಿಂದ ಅಭಿನ್ನವಾದ ಆತ್ಮದಲ್ಲಿ ಆಗುವದೊ ಅವನು ವೃಕ್ಷದಿಂದ ಬಿಡಲ್ಪಟ್ಟ ಹಸ್ತವುಳ್ಳ ಮನುಷ್ಯನಂತೆ, ಇಚ್ಛೆಯುಳ್ಳವನಾಗವಿದ್ದರೂ ಸಹ ಮುಕ್ತನಾಗುವನು ॥೧॥ ಮತ್ತು.

ಹೇಗೆ ಸ್ವಪ್ನದಿಂದ ಜಾಗ್ರತನಾದ ಪುರುಷನಿಗೆ ಸ್ವಪ್ನಭ್ರಾಂತಿಯ ನಿವೃತ್ತಿಯ ತ್ಯಾಗದಲ್ಲಿ, ಮತ್ತು ಸ್ವಪ್ನಗತ ಪರಲೋಕದ ಗಮನದಲ್ಲಿ ಇಚ್ಛೆಯು ಸಂಭವಿಸುವುದಿಲ್ಲವೊ, ಹಾಗೆ ಜ್ಞಾನಿಗೆ ಬಂಧಭ್ರಾಂತಿಯ ನಿವೃತ್ತಿರೂಪ ವಿದೇಹ ಮೋಕ್ಷದ ತ್ಯಾಗದಲ್ಲಿ ಮತ್ತು ಸ್ವರ್ಗಾದಿ ಪರಲೋಕಗಳ ಗಮನದಲ್ಲಿ ಇಚ್ಛೆಯು ಸಂಭವಿಸುವದಿಲ್ಲ.

## ॥೪೭೬॥ ಜ್ಞಾನಿಯ ಮಂದ ಪ್ರಾರಬ್ಧದಿಂದ ಜೀವನ್ಮುಕ್ತಿ ಸುಖದ ವಿರೋಧಿ ಪ್ರವೃತ್ತಿ.

ಜೀವನ್ಮುಕ್ತಿ ಸುಖದ ವಿರೋಧಿಯಾದ ಅಧಿಕ ಭೋಗಗಳ ಇಚ್ಛೆಯು ವರ್ತಮಾನ ಶರೀರದಲ್ಲಿ ಭಿಕ್ಷಾ ಭೋಜನಾದಿಗಳಂತೆ ಜನಕಾದಿಗಳಿಗೆ ಸಂಭವಿಸುತ್ತದೆ.

ಈ ಸ್ಥಾನದಲ್ಲಿ ಈ ರಹಸ್ಯವಿದೆ;- ಜ್ಞಾನಿಯ ಬಾಹ್ಯಪ್ರವೃತ್ತಿಯು ಜೀವನ್ಮುಕ್ತಿಯ ವಿರೋಧವಲ್ಲ; ಆದರೆ ಜೀವನ್ಮುಕ್ತಿಯ ವಿಲಕ್ಷಣಸುಖದ ವಿರೋಧಿಯಾಗಿದೆ. ಕಾರಣವೇನೆಂದರೆ ಆತ್ಮಾ ನಿತ್ಯಮುಕ್ತವು;ಅವಿದ್ಯೆಯಿಂದ ಬಂಧ ಪ್ರತೀತವಾಗುತ್ತದೆ. ಯಾವಕಾಲದಲ್ಲಿ ಜ್ಞಾನವಾಗುವುದೋ ಆ ಕಾಲದಲ್ಲಿಯೇ ಅವಿದ್ಯಾಕೃತ ಬಂಧಭ್ರಮೆಯು ನಷ್ಟವಾಗುವುದು. ಜ್ಞಾನವಾದ ನಂತರ ಪುನಃ ಬಂಧಭ್ರಾಂತಿಯು ಆಗುವುದಿಲ್ಲ. ಶರೀರ ಸಹ ವರ್ತಮಾನವಿದ್ದು ಯಾವನಿಗೆ ಬಂಧಭ್ರಮೆಯ ಅಭಾವವಿರುವುದೋ, ಅವನು ಜೀವನ್ಮುಕ್ತನು. ದೇಹಾದಿಗಳ ಪ್ರವೃತ್ತಿಯಲ್ಲಿ ಹಾಗೂ ನಿವೃತ್ತಿಯಲ್ಲಿ ಜ್ಞಾನಿಗೆ ಆತ್ಮದಲ್ಲಿ ಬಂಧಭ್ರಾಂತಿಯುಆಗುವುದಿಲ್ಲ;ಆದರಿಂದಬಾಹ್ಯಪ್ರವೃತ್ತಿಯಿಂದ ಸಹ ಜೀವನ್ಮುಕ್ತಿಯು ದೂರವಾಗುವುದಿಲ್ಲ; ಆದರೂ ಸಹ ಬಾಹ್ಯಪ್ರವೃತ್ತಿಯಲ್ಲಿ ಜೀವನ್ಮುಕ್ತನಿಗೆ ವಿಲಕ್ಷಣಸುಖವು ಆಗುವುದಿಲ್ಲ, ಏಕಾಗ್ರತಾರೂಪ ಅಂತಃಕರಣದ ಪರಿಣಾಮದಿಂದ ಸುಖವಾಗುವುದು. ಈ ಏಕಾಗ್ರತಾ ಪರಿಣಾಮವು ಬಾಹ್ಯವೃತ್ತಿಯಲ್ಲಿ ಆಗುವುದಿಲ್ಲ.



ಈ ಪ್ರಕರದಿಂದ ಪ್ರಾರಬ್ಧಭೇದದಿಂದ ಜ್ಞಾನೀಪುರುಷನ ವ್ಯವಹಾರ ಅನೇಕ ಪ್ರಕಾರವಾಗಿದೆ. ಪರಂತು ಯಾವನ ಪ್ರಾರಬ್ಧವು ಅಧಿಕ ಪ್ರವೃತ್ತಿಯ[೧] ಹೇತುವಾಗಿರುವದೋ, ಅದಕ್ಕೆ ಮಂದ ಪ್ರಾರಬ್ಧವೆನ್ನುತ್ತಾರೆ. ಕಾರಣವೇನೆಂದರೆ, ಅಧಿಕ ಪ್ರವೃತ್ತಿಯು ಏಕಾಗ್ರತೆಯ ವಿರೋಧಿಯು; ಮತ್ತು ಏಕಾಗ್ರತೆಯ ನಿರುಪಾಧಿಕ ಆನಂದವು ಪ್ರತೀತವಾಗುವದಿಲ್ಲ. ಇದನ್ನು ಸಮಾಧಿನಿರೂಪಣದಲ್ಲಿ ಹೇಳಿದೆ.

ಟಿಪ್ಪಣಿ. [೧] ಹೇಗೆ ಸರ್ವ ಪೃಥ್ವಿಯ ರಾಜ್ಯವು ಪ್ರಾಪ್ತವಾದ ಪುರುಷನಿಗೆ ರೋಗದ ಕಾರಣವು, ಪ್ರಾರಬ್ಧ ಭೋಗದ ವಿರೋಧಿಯಾಗುವದರಿಂದ ಮಂದವೆನ್ನುತ್ತಾರೆ, ಹಾಗೆಯೇ ಅವಿದ್ಯಾ ತತ್ಕಾರ್ಯ ರೂಪ ಶತ್ರುಗಳನ್ನು ಸಂಹರಿಸಿ, ಬ್ರಹ್ಮಭಾವವನ್ನು ಹೊಂದಿದಂಥ ಜ್ಞಾನಿಗೆ ಅಧಿಕ ಪ್ರವೃತ್ತಿಯ ಕಾರಣವಾದ ಪ್ರಾರಬ್ಧವು ಏಕಾಗ್ರತೆಯ ವಿರೋಧಿಯಾಗುವುದರಿಂದ ಮಂದವೆನ್ನುತ್ತಾರೆ.

ಇಲ್ಲಿ ಮಂದಪದಕ್ಕೆ ನಿಕೃಷ್ಟ ಅರ್ಥವಿದೆ. ಶಿಥಿಲ ಅರ್ಥವು ಇಲ್ಲ. ಕಾರಣವೇನೆಂದರೆ, ಉಕ್ತ ರಾಜನು ಶಿಥಿಲ ಪ್ರಾರಬ್ಧಜನ್ಯ ಸುಸಾಧ್ಯ ಅಥವಾ ಕಷ್ಟಸಾಧ್ಯ ರೋಗವನ್ನು ಔಷಧ ಮೊದಲಾದ ಪ್ರಯತ್ನದಿಂದ ನಿವೃತ್ತಿಮಾಡಿಕೊಳ್ಳುವನು. ಪರಂತು ತೀವ್ರತರ ಪ್ರಾರಬ್ಧಜನ್ಯ ಅಸಾಧ್ಯರೋಗದ ನಿವೃತ್ತಿಯನ್ನು ಮಾಡಿಕೊಳ್ಳುವುದು, ಅವನಿಂದ ಅಶಕ್ಯವು. ಇದರಂತೆ ಶಿಥಿಲ ಪ್ರಾರಬ್ಧದ ಫಲರೂಪ ಪ್ರವೃತ್ತಿಯನ್ನು ಜ್ಞಾನಿಯು ಜೀವನ್ಮುಕ್ತಿ ಸುಖಾರ್ಥವಾಗಿ ವಾಸನಾ [ರಾಗದ್ವೇಷ] ನಿವಾರಣರೂಪ ಪ್ರಯತ್ನದಿಂದ ದೂರಮಾಡುವನು ಆದರೆ ತೀವ್ರತರ ಪ್ರಾರಬ್ಧದ ಫಲರೂಪ ಪ್ರವೃತ್ತಿಯ ನಿವಾರಣವನ್ನು ಮಾಡುವದಕ್ಕೆ ಅವನಿಂದ ಅಶಕ್ಯವು. ಈ ರೀತಿಯಾಗಿ ವ್ಯವಸ್ಥೆಯಿಂದ ಮಾಡಿದ ಪ್ರಾರಬ್ಧ ಮತ್ತು ಪುರುಷಾರ್ಥಗಳೆರಡೂ ಸಫಲವಾಗುವುವು. ಅದರಿಂದ ಅಧಿಕಪ್ರವೃತ್ತಿಯ ಹೇತುವಾದ ಪ್ರಾರಬ್ಧವು ಶಿಥಿಲವಿರುವದಿಲ್ಲ. ಆದರೆ ನಿಕೃಷ್ಟವು. ಅದರಿಂದ ಮಂದವೆಂದು ಹೇಳಿದ್ದಾರೆ.

## ॥೪೭೭॥ ಜ್ಞಾನಿಯ ವ್ಯವಹಾರದ ಅನಿಯಮವು. ೪೭೭-೪೭೮

ಈ ಪೂರ್ವದಲ್ಲಿ ಹೇಳಿದ "ಜ್ಞಾನಿ[೧]ಯಾದವನಿಗೆ ಸರ್ವ ಅನಾತ್ಮ ಪದಾರ್ಥದಲ್ಲಿ ಮಿಥ್ಯಾಬುದ್ಧಿಯು ಆಗುವುದು, ರಾಗವು ಉಂಟಾಗುವುದಿಲ್ಲ; ಅದರಿಂದ ಪ್ರವೃತ್ತಿಯು ಸಂಭವಿಸುವದಿಲ್ಲ." ಈ ಆಕ್ಷೇಪಣೆಯು ಸಂಭವಿಸುವದಿಲ್ಲ. ಕಾರಣವೇನೆಂದರೆ, ದೇಹದಲ್ಲಿ ಮಿಥ್ಯಾಬುದ್ಧಿಯು ಸಹ ಜ್ಞಾನಿಗೆ ಇರುವುದು. ಆದರೂ ದೇಹಕ್ಕೆ ಅನುಕೂಲವಾದ ಭಿಕ್ಷಾದಿಗಳಲ್ಲಿ ಕೇವಲ

ಪ್ರಾರಬ್ಧದಿಂದ ಪ್ರವೃತ್ತಿಯಾಗುತ್ತದೆ. ಇದರಂತೆ ಯಾವನಿಗೆ ಅಧಿಕಭೋಗದ ಪ್ರಾರಬ್ಧವಿರುವದೋ, ಆಜ್ಞಾನಿಗೆ ಅಧಿಕ ಪ್ರವೃತ್ತಿಯು ಸಹ ಆಗುವುದು. ಹೇಗೆ ಜಾದೂಗಾರನು ಮಾಡುವ ಚಮತ್ಕಾರಗಳೆಲ್ಲ ಮಿಥ್ಯವೆಂದು ತಿಳಿದರೂ ಸಹ ಸರ್ವಜನರ ಪ್ರವೃತ್ತಿಯು ತದ್ವಿಷಯದಲ್ಲಿ ಆಗುವುದೋ, ಅದರಂತೆ ಸರ್ವಪದಾರ್ಥಗಳಲ್ಲಿ ಜ್ಞಾನಿಗೆ ಮಿಥ್ಯಾಬುದ್ಧಿಯುಂಟಾದರೂ ಸಹ ಪ್ರವೃತ್ತಿಯು ಸಂಭವಿಸುತ್ತದೆ.

ಟಿಪ್ಪಣಿ. (೧) ಈ ಪೂರ್ವದಲ್ಲಿ ಷಷ್ಟತರಂಗದ ೪೦೬ನೇ ಅಂಕಿಯ ವಿಷಯದಲ್ಲಿ ಹೇಳಿದೆ.

---

ಒಂದು ಪ್ರಸಂಗದಲ್ಲಿ ಹೀಗೆ ಎಂದರೆ, ಯಾವನಿಗೆ ಯಾವ ಪದಾರ್ಥದಲ್ಲಿ ದೋಷದೃಷ್ಟಿಯು ಉಂಟಾಗುವುದೋ, ಅದರ ವಿಷಯದಲ್ಲಿ ಆ ಪುರುಷನಿಗೆ ಪ್ರವೃತ್ತಿಯುಂಟಾಗುವುದಿಲ್ಲ. ಜ್ಞಾನಿಗೆ ಅನಾತ್ಮ ಪದಾರ್ಥಗಳಲ್ಲಿ ದೋಷದೃಷ್ಟಿಯುಂಟಾಗಿರುವುದು. ರಾಗವುಂಟಾಗಿರುವುದಿಲ್ಲ; ಆದರಿಂದ ಪ್ರವೃತ್ತಿಯು ಸಂಭವಿಸುವುದಿಲ್ಲ.

ಇದು ಸಹ ಸಮಂಜಸವಾದದ್ದಲ್ಲ; ಕಾರಣವೇನೆಂದರೆ, ಅಪಥ್ಯಸೇವನೆಯಲ್ಲಿ ರೋಗಿಯು ಅನ್ವಯ ವ್ಯತಿರೇಕದಿಂದ ದೋಷದ ನಿಶ್ಚಯವನ್ನು ಮಾಡಿರುವನು. ಆದರೆ ಅಪಥ್ಯಸೇವನಾ ವಿಷಯದಲ್ಲಿಯೇ ಪ್ರಾರಬ್ಧದಿಂದ[೧] ಹೇಗೆರೋಗಿಯ ಪ್ರವೃತ್ತಿಯಾಗುವುದೋ, ಹಾಗೆ ಪ್ರಾರಬ್ಧದಿಂದ ಜ್ಞಾನಿಗೆ ಸರ್ವ ವ್ಯವಹಾರದಲ್ಲಿ ಪ್ರವೃತ್ತಿಯು ದೋಷದೃಷ್ಟಿಯುಂಟಾದರೂ ಸಹ ಸಂಭವಿಸುತ್ತದೆ. ಈರೀತಿಯಿಂದ ಜ್ಞಾನಿಯ ವ್ಯವಹಾರದ[೨] ನಿಯಮವಿಲ್ಲ.

ಇದೇ ಪಕ್ಷವನ್ನು ವಿದ್ಯಾರಣ್ಯಸ್ವಾಮಿಗಳು ತೃಪ್ತಿದೀಪದಲ್ಲಿ[೩] ವಿಸ್ತಾರದಿಂದ ಪ್ರತಿಪಾದನಮಾಡಿದ್ದಾರೆ. ಈ ಕಾರಣದಿಂದ ತತ್ವದೃಷ್ಟಿಯ ವ್ಯವಹಾರವು ನಿಯಮರಹಿತವಾಗಿದೆ. ಸಮಾಧಿರೂಪ ನಿಯಮದ ವಿಧಿಯನ್ನು ಕೇಳಿ, ತತ್ವದರ್ಶಿಯು ನಗುತ್ತಿರುವನು.

---

ಟಿಪ್ಪಣಿ. (೧) ಪ್ರಾರಬ್ಧ ಕರ್ಮವು (೧] ಮಂದ [೨] ತೀವ್ರ (೩) ತೀವ್ರತರ ಎಂದು ತ್ರಿವಿಧವಾಗಿರುವದು.

[೧] ಯಾವನಿಗೆ ಉಪಾದೇಯ ಫಲವು ಭಿಕ್ಷಾನ್ನವತ್ ಅಧಿಕ ಪ್ರಯತ್ನದಿಂದ ಪ್ರಾಪ್ತವಾಗುವದೊ ಮತ್ತು ಯಾವನಿಗೆ ಅಕಸ್ಮಾತ್ ಪ್ರಾಪ್ತವಾದ ಹೇಯ ಫಲವು ಸುಸಾಧ್ಯರೋಗವತ್ ಅಲ್ಪಪ್ರಯತ್ನದಿಂದ ನಿವೃತ್ತವಾಗುವುದೆ ಇಂತಹನ



---

ಪ್ರಾರಬ್ಧಕ್ಕೆ ಮಂದಪ್ರಾರಬ್ಧವೆನ್ನಬೇಕು. [೨) ಒಬ್ಬನಿಗೆ ಉಪಾಧೇಯ ಫಲವು ನಿಮಂತ್ರಣದ ಅನ್ನದಂತೆ ಅಲ್ಪ ಪ್ರಯತ್ನದಿಂದ ಪ್ರಾಪ್ತವಾಗುವುದು. ಮತ್ತು ಅಕಸ್ಮಾತ್ ಪ್ರಾಪ್ತವಾದ ಹೇಯಫಲವು ಕಷ್ಟಸಾಧ್ಯ ರೋಗವತ್ ಅಧಿಕ ಪ್ರಯತ್ನದಿಂದ ನಿವೃತ್ತವಾಗುವುದು. ಇಂಥ ಯಾವ ಪ್ರಾರಬ್ಧವಿರುವುದೋ ಅದಕ್ಕೆ ತೀವ್ರಪ್ರಾರಬ್ಧವೆನ್ನಬೇಕು. ಮತ್ತು [೩] ಯಾವನಿಗೆ ಉಪಾದೇಯ ಫಲವು ಕುಳಿತಲ್ಲಿಯೇ ಪ್ರಾಪ್ತವಾದ ಅನ್ನದಂತೆ ಪ್ರಯತ್ನವಿಲ್ಲದೆಯೇ ತನ್ನಷ್ಟಕ್ಕೆ ತಾನೇ ಪ್ರಾಪ್ತವಾಗುವದೋ ಮತ್ತು ಯಾವನಿಗೆ ಬಲಾತ್ಕಾರದಿಂದ ಪ್ರಾಪ್ತವಾದ ಹೇಯಫಲವು ಬಲಿಯಿಂದ ಪುಷ್ಟವಾದ ಕಾಕವತ್ ಮರಣಾಂತ ಪ್ರಯತ್ನದಿಂದ ಸಹಾ ನಿವೃತ್ತವಾಗುವದಿಲ್ಲವೊ ಇಂಥ ಯಾವ ಪ್ರಾರಬ್ಧವಿರುವುದೋ, ಅದಕ್ಕೆ ತೀವ್ರತರ ಪ್ರಾರಬ್ಧವೆನ್ನಬೇಕು.

ಪ್ರಕಾರವಾಗಿ ಮಂದ ಮತ್ತು ತೀವ್ರಪ್ರಾರಬ್ಧದ ಫಲವು ಪ್ರಯತ್ನಾಧೀನವಾಗಿದೆ. ಈ ಪ್ರಯತ್ನದ ಸಾಧನವು ಶುಭವಾಸನೆಯುಳ್ಳದ್ದಾಗಿದೆ, ಈ ವಾಸನಾದ ನಿವೃತ್ತಿಯು ಸಹ ಪುರುಷಾರ್ಥದಿಂದ [ಪುರುಷನ ಪ್ರಯತ್ನದಿಂದ] ಆಗುವುದು. ಇವುಗಳಲ್ಲಿ—

(೧] ಶುಭವಾಸನೆಯ ನಿವೃತ್ತಿಯು ಕುಸತ್ಸಂಗ ಮೊದಲಾದ ಪುರುಷಾರ್ಥದಿಂದ ಆಗುವುದು. ಮತ್ತು ೨. ಅಶುಭವಾಸನೆಯ ನಿವೃತ್ತಿಯು ಸತ್ಸಂಗ ಮತ್ತು ವಿವೇಕ ಜ್ಞಾನಾದಿಗಳಿಂದ ಆಗುವದು. ಮತ್ತು ೨. ಅಶುಭವಾಸನೆಯ ನಿವೃತ್ತಿಯು ಸತ್ಸಂಗ ಮತ್ತು ವಿವೇಕ ಜ್ಞಾನಾದಿಗಳಿಂದ ಆಗುವುದು.

ದರಿಂದ ಜ್ಞಾನಿಯು ಸತ್ಸಂಗ ಮತ್ತು ವಿವೇಕಜ್ಞಾನಾದಿ ಗುಣಗಳಿಂದ ಸಂಪನ್ನನಾಗಿರುವನು. ಅದರಿಂದ ಅವನ ಚಿತ್ತದಲ್ಲಿ ಯಾವ ಅಶುಭ ಪ್ರವೃತ್ತಿಯ ಇಚ್ಛೆಯೂ ಅಶುಭವಾಸನೆಯೂ ಉಂಟಾಗುವುದಿಲ್ಲ, ಆದರೆ ಶುಭಪ್ರವೃತ್ತಿಯ ಇಚ್ಛೆಯೂ ಶುಭವಾಸನೆಯೂ ಉಂಟಾಗುವುದು.ಅದರಿಂದ ಈ ಜ್ಞಾನಿಗೆ ಮಂದ ಮತ್ತು ತೀವ್ರಪ್ರಾರಬ್ಧದ ನಿಷಿದ್ಧಪಕ್ಷದಲ್ಲಿ ವಿಧಿನಿಷೇಧ ಜನ್ಯವಾದ ಗುಣ ದೋಷಬುದ್ಧಿಯ ಅಭಾವ ಉಂಟಾದರೂ ಸಹ ಶುಭವಾಸನಾರೂಪ ಸ್ವಭಾವದಿಂದಲೇ ಡಾಂಭಿಕ ವೈಷ್ಣವನಂತೆ ಸಹ ಬ್ರಾಹ್ಮಣಾದಿಕ ಬಾಲಕರಂತೆ ಪ್ರವೃತ್ತಿಯು ಸಂಭವಿಸುವುದಿಲ್ಲ. ಆದರೆ ನಿವೃತ್ತಿಯೇ ಸಂಭವಿಸುವುದು ಮತ್ತು. ರೋಗಿಗೆ ಅನ್ವಯ ವ್ಯತಿರೇಕದಿಂದ ದೋಷನಿಶ್ಚಯ ಉಂಟಾದರೂ ಸಹ ಅಪಥ್ಯ ಸೇವನೆಯಲ್ಲಿಯೇ ಪ್ರವೃತ್ತಿಯಾಗುವುದು.ಆದರೆ ಪ್ರಯತ್ನಶೀಲರೋಗಿಗೆ ಆಗುವುದಿಲ್ಲ. ಜಿಹ್ವಾಲೋಲುಪ ಪ್ರಯತ್ನರಹಿತ ರೋಗಿಗೆ ಅಪಥ್ಯಸೇವನೆಯಲ್ಲಿ ಪ್ರವೃತ್ತಿಯು ಆಗುವುದು. ಮತ್ತು ಪ್ರಯತ್ನಶೀಲ ರೋಗಿಗೂ ಸಹ ಅಪಥ್ಯ ಸೇವನೆಯಲ್ಲಿ ಪ್ರವೃತ್ತಿಯಾಗುವುದು ಇದು ತೀವ್ರತರ ಪ್ರಾರಬ್ಧದ ಫಲವು ಈ ರೀತಿಯಿಂದ ದೋಷ ನಿಶ್ಚಯರೂಪ ಮತ್ತು ಮಿಥ್ಯಾತ್ವ ನಿಶ್ಚಯರೂಪ ದೃಢವಿವೇಕಯುಕ್ತ ಜ್ಞಾನಿಯು ಮಂದ ಅಥವಾ ತೀವ್ರಪ್ರಾರಬ್ಧದ ಫಲಭೂತ ಯಥೇ

ಸ್ವಾಚರಣರೂಪ ನಿಷಿದ್ಧ ಪ್ರವೃತ್ತಿಯು ಸಂಭವಿಸುವುದಿಲ್ಲ.

ಪ್ರಾರಬ್ಧದ ಭಕ್ತರು ಹೇಳುವದೇನೆಂದರೆ, ಪ್ರಾರಬ್ಧದ ಫಲವು ಸರ್ವಥಾ ಅನಿವಾರ್ಯವು ಆದರಿಂದ ಪುರುಷಪ್ರಯತ್ನವೂ ವ್ಯರ್ಥವು.

ಈ ಕಥನವು ಅಸಮಂಜಸವಾದದ್ದು. ಕಾರಣವೇನೆಂದರೆ ಹೀಗೆ ಆದಪಕ್ಷದಲ್ಲಿ ಸರ್ವಜ್ಞರಚಿತ ವೈದ್ಯಶಾಸ್ತ್ರ, ಮಂತ್ರಶಾಸ್ತ್ರ, ಮತ್ತು ಯೋಗಶಾಸ್ತ್ರ ಮೊದಲಾದ ಉಪಾಯ ಬೋಧಕ ಗ್ರಂಥಗಳೆಲ್ಲವೂ ವ್ಯರ್ಥವಾಗುವುವು. ಮತ್ತು ದೃಷ್ಟಫಲದ ಸಾಧನೋಪಾಯಗಳ ಬೋಧಕಗಳಾದ ಈ ಶಾಸ್ತ್ರಗಳು ವ್ಯರ್ಥವೆಂದು ಹೇಳುವದು ಸರಿಯಲ್ಲ. ಈ ವ್ಯವಸ್ಥೆಯಿಂದ ಪ್ರಾರಬ್ಧ ಮತ್ತು ಪುರುಷಾರ್ಥಗಳೆರಡೂ ಸಫಲವಾಗುವವು ಇದು ವಾಸಿಷ್ಠ ಮೊದಲಾದ ಉತ್ತಮ ಗ್ರಂಥಗಳ ಮತವು.

ಇಲ್ಲಿ ಇನ್ನೂ ಕಿಂಚಿತ್ ವಿಚಾರವಿದೆ, ಅದನ್ನು ಪಂಡಿತ ಪೀತಾಂಬರಜಿಯವರು ಪ್ರಮಾದ ಮುದ್ಗರದಲ್ಲಿ ಉಲ್ಲೇಖಿರುವರು. ಇಲ್ಲಿ ಪ್ರಸಂಗವಶಾತ್ ದಿಶಾಮಾತ್ರ ತೋರಿಸಿರುವರು.

೨. ಇಲ್ಲಿ ಈ ಅಭಿಪ್ರಾಯವಿದೆ. ಸ್ವಾಧೀನ ಕಾರ್ಯದಲ್ಲಿ ನಿಯಮವಿರುವದು. ಪರಾಧೀನ ಕಾರ್ಯದಲ್ಲಿ ನಿಯಮವು ಸಂಭವಿಸುವದಿಲ್ಲ. ಅದರಿಂದ ಜ್ಞಾನಿಯ ಶರೀರದ ವ್ಯವಹಾರವು ಅನೇಕ ಪ್ರಾರಬ್ಧಗಳ ಅಧೀನವು. ಅದರಿಂದ ಕೈಯಿಂದ ಬಿಟ್ಟಬಾಣವು ವೇಗದ ಅಧೀನವಾಗಿ ಗಂತವ್ಯವೇಧವತ್ ಪ್ರಾರಬ್ಧದ ಅಧೀನವಾದ ಜ್ಞಾನಿಯ ದೇಹದ ವ್ಯವಹಾರದ ನಿಯಮವು ಸಂಭವಿಸುವದಿಲ್ಲ.

ಯದ್ಯಪಿ ರಾಗಾದಿವಾಸನೆಗಳನ್ನು ಆತಂಕಪಡಿಸಿದ ಸ್ವಾಧೀನಚಿತ್ತರಾದ ಎಷ್ಟೋ ಜ್ಞಾನಿಗಳು ಮಂದ ಇಲ್ಲವೆ ತೀವ್ರಪ್ರಾರಬ್ಧದ ಫಲರೂಪ ಶರೀರದ ವ್ಯವಹಾರವನ್ನು ನಿಯಮದಲ್ಲಿಯೇ ಇಟ್ಟಿರುವರು. ತಥಾಪಿ ತೀವ್ರತರ ಪ್ರಾರಬ್ಧದ ಫಲರೂಪ ಶರೀರದ ವ್ಯವಹಾರದ ನಿಯಮವು ಜ್ಞಾನಿಯಿಂದ ಸಹ ಆಗುವುದಿಲ್ಲ.

೩. ಜ್ಞಾನಿಗೆ ಪ್ರೀತಿಯ ಹೊರತು ಪ್ರಾರಬ್ಧಭೋಗವು ಉಂಟಾಗುವುದು. ಮತ್ತು ಈ ಪ್ರಾರಬ್ಧವು ಇಚ್ಛಾ, ಅನಿಚ್ಛಾ, ಮತ್ತು ಪರೇಚ್ಛಾ ಎಂಬ ಭೇದಗಳಿಂದ ತ್ರಿವಿಧವಾಗಿರುವುದು. ಈ ಅರ್ಥವನ್ನು ಶ್ರೀವಿದ್ಯಾರಣ್ಯ ಸ್ವಾಮಿಗಳವರು ತೃಪ್ತಿದೀಪದಲ್ಲಿ ೧೪೩ರಿಂದ ೧೭೦ನೇ ಶ್ಲೋಕ ಪರಿಯಂತರ ಉಲ್ಲೇಖಿಸಿರುವರು.ಅದನ್ನು ತಿಳಿದುಕೊಳ್ಳುವ ಇಚ್ಛೆಯು ಯಾರಿಗೆ ಉಂಟಾಗುವುದೋ, ಅವರು ಅಲ್ಲಿ ನೋಡಿಕೊಳ್ಳಬೇಕು. ವಿಸ್ತಾರಭಯದಿಂದ ಇಲ್ಲಿ ಬರೆದಿರುವುದಿಲ್ಲ.

## ॥೪೭೯॥ ತತ್ವದೃಷ್ಟಿಯ ದೇಶಾದಿ ಅಪೇಕ್ಷಾರಹಿತ ದೇಹಪಾತವು. ॥೪೭೯—೪೪೦॥

॥ ದೋಹಾ ॥

ಭ್ರಮನ ಕರತ ಕಛು ಕಾಲಯೂ । ತತ್ವದೃಷ್ಟಿಸುಜ್ಞಾನ ॥
ಭೋಗೌ ನಿಜಪ್ರಾರಬ್ಧತಬ । ಲೀನ ಭಯೆ ತಿಹಿ ಪ್ರಾನ ॥೧೬॥



ಟೀಕಾ॥ (೧) ಪ್ರಾರಬ್ಧ ಭೋಗಾನಂತರ ಜ್ಞಾನಿಯ ಪ್ರಾಣವುಗಮನಿಸುವುದಿಲ್ಲ; ಅದರಿಂದ ತತ್ವದರ್ಶಿಯ ಪ್ರಾಣವು ಲೀನವಾಯಿತು, ಎಂದು ಹೇಳಿದರು. ಮತ್ತು (೨)ಜ್ಞಾನಿಯ ಶರೀರತ್ಯಾಗದಲ್ಲಿ ಕಾಲವಿಶೇಷದ ಅಪೇಕ್ಷೆಯು ಇಲ್ಲ. ಉತ್ತರಾಯಣ, ಅಥವಾ ದಕ್ಷಿಣಾಯನದಲ್ಲಿ ದೇಹಪಾತವಾದರೂ ಸಹ ಸರ್ವಥಾ ಮುಕ್ತನಾಗಿದ್ದಾನೆ. (೩) ಇದರಂತೆ ದೇಶವಿಶೇಷದ ಅಪೇಕ್ಷೆಯೂ ಇಲ್ಲ,ಕಾಶಿ ಮೊದಲಾದ ಪುಣ್ಯದೇಶದಲ್ಲಿ ಅಥವಾ ಮಲಿನ ದೇಶದಲ್ಲಿ ಜ್ಞಾನಿಯ ದೇಹಪಾತವಾದರೂ ಸರ್ವಥಾ ಮುಕ್ತನಾಗಿದ್ದಾನೆ॥. ಇದರಂತೆ ಆಸನವಿಶೇಷದ ಅಪೇಕ್ಷೆಯೂ ಇಲ್ಲ. ಪೃಥ್ವಿಯಮೇಲೆಯಾಗಲಿ, ಮಂಚಿಗೆಯಮೇಲೆ ಯಾಗಲಿ, ಅಥವಾ ಸಿದ್ಧಾಸನದಲ್ಲಿಯಾಗಲಿ ದೇಹಪಾತವಾದರೂ ಜ್ಞಾನಿಯು ಮುಕ್ತನು. (೫)ಇದರಂತೆ ಸಾವಧಾನದಿಂದ ಬ್ರಹ್ಮಚಿಂತನಮಾಡುವ ಕಾಲದಲ್ಲಿಯಾಗಲಿ, ಅಥವಾ ರೋಗಪೀಡಿತನಾಗಿ ಹಾಹಾ ಶಬ್ದಮಾಡುತ್ತಿರುವ ಕಾಲದಲ್ಲಿಯಾಗಲಿ, ದೇಹಪಾತವಾದರೂ ಸರ್ವಥಾಮುಕ್ತನಾಗಿದ್ದಾನೆ. ಕಾರಣವೇನೆಂದರೆ ಯಾವಕಾಲದಲ್ಲಿ ಜ್ಞಾನದಿಂದ ಅಜ್ಞಾನನಿವೃತ್ತಿಯಾಯಿತೋ ಆ ಕಾಲದಲ್ಲಿಯೇ ಜ್ಞಾನಿಯು ಮುಕ್ತನಾದನು. ಈ ಕಾರಣದಿಂದ ಜ್ಞಾನಿಗೆ ವಿದೇಹಮೋಕ್ಷದಲ್ಲಿ ದೇಶ, ಕಾಲ, ಆಸನಾದಿಗಳ ಅಪೇಕ್ಷೆಯು ಇಲ್ಲ. ಜ್ಞಾನಿಗೆಹೇಗೆ ದೇಹಪಾತದಲ್ಲಿ ದೇಶಕಾಲಾದಿಗಳ ಅಪೇಕ್ಷೆಯು ಇಲ್ಲವೋ ಹಾಗೆಜ್ಞಾನನಿಮಿತ್ತಶ್ರವಣದಲ್ಲಿ ಸಹ ದೇಶಕಾಲ ಆಸನಾದಿಗಳ ಅಪೇಕ್ಷೆಯು ಇಲ್ಲ.

ಟಿಪ್ಪಣಿ—(೧) ಇಲ್ಲಿ ಈ ಸಾಂಪ್ರದಾಯಿಕ ವಚನವಿದೆ.

ಶ್ಲೋ॥ ದೇಹಃ ಪತತು ವಾ ಕಾಶ್ಯಾಂ । ಶ್ವಪಚಸ್ಯ ಗೃಹೇಥವಾ ॥
ಜ್ಞಾನಸಂಪ್ರಾಪ್ತಿ ಸಮಯೇ । ಸರ್ವಥಾ ಮುಕ್ತ ಏವಸಃ ॥೧॥

ಇದರ ಅರ್ಥ—ಜ್ಞಾನಿಯ ದೇಹವು ಕಾಶಿಯಲ್ಲಿಯೇ ಬೀಳಲಿ, ಅಥವಾ ಚಾಂಡಾಲ ಗೃಹದಲ್ಲಿಯೇ ಬೀಳಲಿ,ಪರಂತು ಜ್ಞಾನಪ್ರಾಪ್ತಿಯ ಸಮಯದಲ್ಲಿಬಂಧಭ್ರಾಂತಿಯ ನಿವೃತ್ತಿಯಿಂದ ಅಜ್ಞಾನಿಯು ಸರ್ವಥಾ (ಸರ್ವಪ್ರಕಾರದಿಂದ) ಮುಕ್ತನೇ ಆಗಿರುವನು ॥೧॥

೨ ಈ ಅರ್ಥವನ್ನು ವಿದ್ಯಾರಣ್ಯಸ್ವಾಮಿಗಳವರು ಸಹ ಭೂತವಿವೇಕದ ಅಂತ್ಯದಲ್ಲಿ ಉಲ್ಲೇಖಿಸಿರುವರು.

## ॥೪೪೦॥ ಉಪಾಸಕನಿಗೆ ದೇಶಕಾಲಾದಿಗಳ ಅಪೇಕ್ಷೆಯು ಇದೆ

ಯದ್ಯಪಿ ಭೀಷ್ಮಾದಿಗಳು ಜ್ಞಾನಿಗಳಾಗಿದ್ದಾಗ್ಯೂ ಭೀಷ್ಮಾಚಾರ್ಯರು ಉತ್ತರಾಯಣದ ಹೊರತು ಪ್ರಾಣತ್ಯಾಗವನ್ನುಮಾಡಲಿಲ್ಲ. ತಥಾಪಿಭೀಷ್ಮಾ

ದಿಗಳು ಅಧಿಕಾರೀ ಪುರುಷರಾದ್ದರಿಂದ ಉಪಾಸಕರಿಗೆ ಉಪದೇಶ ಸಂಪ್ರದಾಯದಸಲುವಾಗಿ, ಕಾಲವಿಶೇಷದ ಪ್ರತೀಕ್ಷೆಯನ್ನು ಮಾಡಿದರು. ಮತ್ತು ವಸಿಷ್ಠ ಭೀಷ್ಮಾದಿಗಳು ಅಧಿಕಾರಿಗಳಾಗಿದ್ದರು. ಅದರಿಂದ ಅವರಿಗೆ ಅನೇಕ ಜನ್ಮಗಳು ಆಗಿದ್ದವು. ಕಾರಣವೇನೆಂದರೆ;- ಅಧಿಕಾರೀ ಪುರುಷರಿಗೆ ಒಂದು ಕಲ್ಪಪರಿಯಂತರ ಪ್ರಾರಬ್ಧವಿದೆ, ಕಲ್ಪಾಂತ್ಯದ ಹೊರತು ವಿದೇಹಮೋಕ್ಷವಾಗುವುದಿಲ್ಲ. ಮತ್ತು ಕಲ್ಪದ ಮಧ್ಯಭಾಗದಲ್ಲಿ ಅವರಿಗೆ ಇಚ್ಛಾಬಲದಿಂದ ಅನೇಕಶರೀರಗಳು ಪ್ರಾಪ್ತವಾಗುವುವು. ತಥಾಪಿ ಆತ್ಮಸ್ವರೂಪದಲ್ಲಿ ಅವರಿಗೆ ಜನ್ಮಮರಣ ಭ್ರಾಂತಿಯುಇಲ್ಲ. ಈ ಕಾರಣದಿಂದ ಜೀವನ್ಮುಕ್ತರಾಗಿರುವರು. ಈಅಧಿಕಾರೀ ಪುರುಷರ ಸಂಪೂರ್ಣವ್ಯವಹಾರವು ಅನ್ಯೋಪದೇಶ ನಿಮಿತ್ತವಾಗಿಯೇ ಇದೆ. ಮತ್ತು ಅನ್ಯಜ್ಞಾನಿಯ ವ್ಯವಹಾರದ ಯಾವನಿಯಮವೂ ಇಲ್ಲ. ಈ ಅಭಿಪ್ರಾಯದಿಂದ ತತ್ವದರ್ಶಿಯ ದೇಹಪಾತವಿಷಯದಲ್ಲಿ ದೇಶಕಾಲ ಆಸನಾದಿಗಳನ್ನು ಕಿಂಚಿತ್ತಾದರೂ ಹೇಳಲಿಲ್ಲ.

॥೪೮೧॥ ಅದೃಷ್ಟಿಯ ದೇಶಾದಿಕ ಅಪೇಕ್ಷಾ ರಹಿತ ದೇಹಪಾತವು.

॥ ದೋಹಾ ॥

ದೂಜೊ ಸಿಷ್ಯ ಅದೃಷ್ಟಿ ತಿಹಿ । ಗಂಗಾತಟ ಸುಭ ಥಾನ ॥
ದೇಸ ಇಕಂತ ಪವಿತ್ರ ಅತಿ । ಕಿಯೊ ಬ್ರಹ್ಮಕೊ ಧ್ಯಾನ ॥೧೯॥
ಸಾಸ್ತ್ರರೀತಿ ತಜಿ ದೇಹಕೂ । ಪೂರವ ಕಹ್ಯೊ ಜು ರಾಹ॥
ಜಾಯ ಮಿಲ್ಯೊಸೊ ಬ್ರಹ್ಮತೈ । ಪಾಯೊ ಅಧಿಕ ಉಛಾಹ॥

ಟೀಕಾ॥ ಜ್ಞಾನಿಗೆ ಹೇಗೆ ದೇಶಕಾಲಗಳ ಅಪೇಕ್ಷೆಯು ಇಲ್ಲವೋ,ಅದಕ್ಕೆ ವಿಪರೀತವಾಗಿ ಉಪಾಸಕನಿಗೆ ಇರುವುವೆಂದು ತಿಳಿ. ಉತ್ತಮದೇಶವಲ್ಲಿ ಉತ್ತಮವಾದ ಉತ್ತರಾಯಣಾದಿಕ ಕಾಲದಲ್ಲಿ ಉಪಾಸಕನು ಶರೀರವನ್ನು ಯಾವಾಗ ಬಿಡುವನೋ, ಆಗ ಉಪಾಸನೆಯ ಫಲವು ಆಗುವದು. ಮತ್ತು ಜ್ಞಾನಿಗೆ ಮರಣಸಮಯದಲ್ಲಿ ಸಾವಧಾನತೆಯಿಂದ ಜ್ಞೇಯದಸ್ಮೃತಿಯ ಅಪೇಕ್ಷೆಯು ಇಲ್ಲ. ಉಪಾಸಕನಿಗೆ ಮರಣ ಸಮಯದಲ್ಲಿ ಧ್ಯೇಯದ ಸ್ವರೂಪದ ಸ್ಮೃತಿಯ ಅಪೇಕ್ಷೆಯು ಇದೆ. (೧) ಯಾವ ಧ್ಯೇಯದಧ್ಯಾನವನ್ನು ಪೂರ್ವದಲ್ಲಿ ಮಾಡಿದ್ದನೋ ಆ ಧ್ಯೇಯದಸ್ಮೃತಿಯು ಮರಣಸಮಯದಲ್ಲಿ ಉಂಟಾದರೆ ಉಪಾಸನೆಯ ಫಲವುಂಟಾಗುವುದು. (೨) ಹೇಗೆ ಧ್ಯೇಯದ ಸ್ಮೃತಿಯ ಅಪೇಕ್ಷೆಯಿರುವುದೋ ಹಾಗೆ ಧ್ಯೇಯಬ್ರಹ್ಮದ ಪ್ರಾಪ್ತಿಯ ಮಾರ್ಗದ (ಪಂಚಮತರಂಗದಲ್ಲಿ ಹೇಳಿದಂತೆ) ಸ್ಮೃತಿಯು ಸಹಜೇಕ್ಷಿತ



ವೇನೆಂದರೆ, ಮಾರ್ಗಚಿಂತನವು ಸಹ ಉಪಾಸನೆಯ ಅಂಗವಾಗಿದೆ. ಜ್ಞಾನನಿಮಿತ್ತ ಶ್ರವಣದಲ್ಲಿ ದೇಶಕಾಲಆಸನಗಳ ಅಪೇಕ್ಷೆಯು ಧ್ಯಾನದಲ್ಲಿ ಉತ್ತಮದೇಶ, ನಿರಂತರ ಕಾಲ, ಸಿದ್ಧಾದಿಕ ಆಸನಗಳ ಅಪೇಕ್ಷೆಯು ಇದೆ. ಈಕಾರಣದಿಂದ ಅದೃಷ್ಟಿಗೆ ಉತ್ತಮದೇಶವಾದ ಗಂಗಾತೀರದಲ್ಲಿ ವಾಸವೂ, ಮತ್ತು ಮರಣಸಮಯದಲ್ಲಿ ಯೋಗಶಾಸ್ತ್ರರೀತಿಯ ದೇಹಪಾತವೂ ಹೇಳಲ್ಪಟ್ಟದೆ.

ತರ್ಕದೃಷ್ಟಿಯ ನಿಶ್ಚಯವು, ವಿದ್ಯೆಯ ಅಷ್ಟಾದಶ ಪ್ರಸ್ಥಾನವು. ॥ ೪೮೨—೪೯೧ ॥

೪೮೨ ॥ ಸರ್ವಶಾಸ್ತ್ರಗಳಿಗೂ ಬ್ರಹ್ಮಜ್ಞಾನದ ಇಚ್ಛೆಯು.

॥ ದೋಹಾ ॥

ತರ್ಕದೃಷ್ಟಿ ಪುನಿ ತೀಸರೊ । ಲಹಿ ಗುರುಮುಖ ಉಪದೇಸ॥
ಅಷ್ಟಾದಸಪ್ರಸ್ಥಾನ ಜನ । ಅವಗಾಹನ ಕರಿ ಬೇಸ ॥೨೦॥
ಜೇತಿ ಬಾನೀ ವೈಖರೀ । ತಾಕೊ ಅಲಂ ಪಿಛಾನ ॥
ಹೇತು ಮುಕ್ತಿಕೊ ಜ್ಞಾನ ಲಖಿ । ಅದ್ವಯ ನಿಶ್ಚಯ ಜ್ಞಾನ॥

ಟೀಕಾ ॥ ತರ್ಕದೃಷ್ಟಿ ನಾಮಕ ತೃತೀಯ ಶಿಷ್ಯನು ಗುರುದ್ವಾರಾ ಉಪದೇಶ ಶ್ರವಣವನ್ನುಮಾಡಿ, ಆಮೇಲೆ ಶ್ರವಣಮಾಡಿದ ಅರ್ಥವಿಷಯದ ಅನ್ಯಶಾಸ್ತ್ರಗಳ ವಿರೋಧವನ್ನುನಿವೃತ್ತಮಾಡಿಕೊಳ್ಳುವುದರ ಸಲುವಾಗಿ ಸರ್ವಶಾಸ್ತ್ರಗಳ ಅಭಿಪ್ರಾಯವನ್ನು ತಿಳಿದುಕೊಂಡು ಈ ರೀತಿಯಿಂದ ನಿಶ್ಚಯಮಾಡಿದನು (೧) ಸಕಲಶಾಸ್ತ್ರಗಳ ಪರಮಪ್ರಯೋಜನವು ಮೋಕ್ಷ. (೨) ಮೋಕ್ಷದ ಸಾಧನವು ಜ್ಞಾನವಾಗಿದೆ. (೩) ಈ ಜ್ಞಾನವು ಅದ್ವಯ ನಿಶ್ಚಯರೂಪವಾಗಿದೆ. (೪) ಭೇದನಿಶ್ಚವು ಯಥಾರ್ಥ ಜ್ಞಾನವಲ್ಲ. (೫) ಸರ್ವಶಾಸ್ತ್ರಗಳು ಸಾಕ್ಷಾತ್ ಅಥವಾ ಪರಂಪರೆಯಿಂದ ಬ್ರಹ್ಮಜ್ಞಾನದ ಕಾರಣವಾಗಿವೆ.

(೧) ಯದ್ಯಪಿ ಸಂಸ್ಕೃತ ವೈಖರೀವಾಣಿಯ ಅಷ್ಟಾದಶಪ್ರಸ್ಥಾನಗಳು ಇವೆ. ಅವುಗಳಲ್ಲಿ ಕೆಲವು ಕರ್ಮವನ್ನು ಪ್ರತಿಪಾದನಮಾಡುವವು.(೨) ಕೆಲವು ವಿಷಯಸುಖದ ಉಪಾಯಗಳನ್ನು ಪ್ರತಿಪಾದನಮಾಡುವವು. (೩) ಕೆಲವು

ಬ್ರಹ್ಮನಿಂದ ಭಿನ್ನವಾಗಿದ್ದ ದೇವತೋಪಾಸನಾ ಬೋಧಕಗಳಾಗಿವೆ.[೪] ಇವರಂತೆ ಜ್ಞಾನನಿಮಿತ್ತವಾಗಿ ನ್ಯಾಯ, ಸಾಂಖ್ಯ ಮೊದಲಾದ ಶಾಸ್ತ್ರಗಳೂ ಇವೆ. ಅವು ಸಹ ಭೇದಜ್ಞಾನಕ್ಕೇ ಯಥಾರ್ಥ ಜ್ಞಾನವೆನ್ನುತ್ತವೆ. ಈ ಕಾರಣದಿಂದ ಸರ್ವಕ್ಕೂ ಅದ್ವೈತಬ್ರಹ್ಮದ ಬೋಧಕತ್ವವು ಸಂಭವಿಸುವುದಿಲ್ಲ.

ತಥಾಪಿ ಸಕಲಸಾಲಶಾಸ್ತ್ರಗಳ ಕರ್ತೃಗಳು ಸರ್ವಜ್ಞ, ಮತ್ತು ಕೃಪಾಳುಗಳಾಗಿರುವುದರಿಂದ ಅವರುಮಾಡಿದ ಮೂಲಸೂತ್ರಗಳ ಅರ್ಥವು ವೇದಾನುಸಾರವಾಗಿಯೇ ಇದೆ. ಆದರೆ ಆಸೂತ್ರಗಳ ವ್ಯಾಖ್ಯಾನ ಕರ್ತರು ಭ್ರಾಂತರಾಗಿದ್ದುದರಿಂದ ಮೂಲ ಸೂತ್ರಕಾರರ ಅಭಿಪ್ರಾಯಕ್ಕೆ ವಿಲಕ್ಷಣವಾಗಿ ಅರ್ಥಮಾಡಿದ್ದಾರೆ.

ಇದನ್ನು ತರ್ಕದೃಷ್ಟಿಯು ಉತ್ತಮ ಸಂಸ್ಕಾರದಿಂದ ನಿಶ್ಚಯ ಮಾಡಿದನು.

## ||೪೮೩|| ವಿದ್ಯೆಯ ಅಷ್ಟಾದಶ ಪ್ರಸ್ಥಾನಗಳು,

ವಿದ್ಯೆಯ ಅಷ್ಟಾದಶ ಪ್ರಸ್ಥಾನಗಳು ಯಾವುವೆಂದರೆ- ನಾಲ್ಕು ವೇದಗಳು, ನಾಲ್ಕು ಉಪವೇದಗಳು, ಆರು ವೇದಾಂಗಗಳು, ಪುರಾಣ, ನ್ಯಾಯ, ಮೀಮಾಂಸಾ, ಧರ್ಮಶಾಸ್ತ್ರ, ಈರೀತಿಯಾಗಿ ವೈಖರೀವಾಣೀರೂಪ ವಿದ್ಯೆ[೧]ಯ ಹದಿನೆಂಟು ಭೇದಗಳು ಇವೆ, ಇವುಗಳಿಗೆ ಪ್ರಸ್ಥಾನಗಳೆನ್ನುತ್ತಾರೆ.

ಟಿಪ್ಪಣಿ—೧. ವಿದ್ಯೆಯ ಅಂಗಕ್ಕೆ ಪ್ರಸ್ಥಾನವೆನ್ನುತ್ತಾರೆ. ವಿದ್ಯೆಯ ಹದಿನೆಂಟು ಪ್ರಸ್ಥಾನಗಳು ಅಗ್ನಿ ಪುರಾಣದ ಆರಂಭದಲ್ಲಿಯೂ, ಮತ್ತು ಮಧುಸೂದನಸ್ವಾಮಿಕೃತ ಪ್ರಸ್ಥಾನ ಭೇದದಲ್ಲಿಯೂ ವಿವರಿಸಲ್ಪಟ್ಟಿವೆ.

## ||೪೮೪|| ಬ್ರಹ್ಮಜ್ಞಾನದಲ್ಲಿ ನಾಲ್ಕುವೇದಗಳತಾತ್ಪರ್ಯವು.

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಎಂಬ ನಾಲ್ಕುವೇದಗಳು. ಅವುಗಳಲ್ಲಿ (೧) ಕೆಲವು ವಚನಗಳು ಜ್ಞೇಯಬ್ರಹ್ಮವನ್ನು ಬೋಧನೆಮಾಡುವುವು. (೨) ಕೆಲವು ಧ್ಯೇಯವನ್ನು ಬೋಧ ಮಾಡುವುವು. (೩) ಕೆಲವು ಕರ್ಮವನ್ನು ಬೋಧಿಸುವುವು. ಕರ್ಮಬೋಧಕವಾದ ಯಾವ ವೇದವಚನಗಳಿರುವುವೋ ಅವುಗಳ ಪ್ರಯೋಜನವು ಸಹಾ ಅಂತಃಕರಣ ಶುದ್ಧಿದ್ವಾರ ಜ್ಞಾನವೇ ಆಗಿದೆ. ಮತ್ತು ಪ್ರವೃತ್ತಿಯಲ್ಲಿ ಯಾವ ವೇದವಚನಗಳ ಅಭಿಪ್ರಾಯವೂ ಇಲ್ಲ. ಆದರೆ ನಿಷಿದ್ಧ ಸ್ವಾಭಾವಿಕಪ್ರವೃತ್ತಿಯಿಂದ ಪ್ರತಿಬಂ



...ಮಾಡುವ ವಿಷಯದಲ್ಲಿ ಇವುಗಳ ಅಭಿಪ್ರಾಯವಿದೆ. ಈ ಕಾರಣದಿಂದ ...ಚಾರಕರ್ಮದ ಪ್ರತಿಪಾದಕವಾದ ಅಥರ್ವಣವೇದದ ಅಭಿಪ್ರಾಯವು ಸಹ ...ತ್ತಿಯಲ್ಲಿಯೇ ಇದೆ. ಯಾವನು ದ್ವೇಷದಿಂದ ಶತೃವನ್ನು ಹೊಡೆಯುವ ...ಷಯದಲ್ಲಿ ಪ್ರವೃತ್ತನಾಗುವನೋ ಅವನು ವಿಷಪ್ರಯೋಗದಿಂದ ಅಥವಾ ...ಯಿಂದ ಶತೃವನ್ನು ಕೊಲ್ಲಬಾರದು. ಈ ಕಾರಣದ ಸಲುವಾಗಿ ಅಭಿಚಾ...ರ್ಮವಾದ ಶ್ಯೇನಯಾಗಾದಿಗಳನ್ನು ಹೇಳಿರುತ್ತದೆ. ಶತೃವನ್ನು ಕೊಲ್ಲುವ ...ದ್ದೇಶ್ಯವಾಗಿ ಯಾವ ಕರ್ಮವಿರುವುದೋ, ಅದಕ್ಕೆ ಅಭಿಚಾರವೆನ್ನುತ್ತಾರೆ. ...ಗೆ ಶ್ಯೇನ ನಾಮಕ ಯಜ್ಞವಿದೆ.

ಶ್ಯೇನಯಾಗದ ಬೋಧಕವಾದ ಯಾವ ವೇದವಚನವಿರುವುದೋ, ...ದ ಅರ್ಥವು ಇದು ಅಲ್ಲ, ಶತೃಮಾರಣ ಕಾಮನೆಯುಳ್ಳವನು ಶ್ಯೇನಯಾ...ಲ್ಲಿ ಪ್ರವೃತ್ತನಾಗಲಿ, ಆದರೆ ಶತೃವನ್ನು ಕೊಲ್ಲುವ ಇಚ್ಛೆಯು ಯಾವ...ಗೆ ಉತ್ಪನ್ನವಾಗುವುದೋ, ಅವನು ಶ್ಯೇನಯಾಗದಿಂದ ಭಿನ್ನವಾದ ವಿಷ...ದಾನ ಮೊದಲಾದ ಶತೃಗಳನ್ನು ಕೊಲ್ಲುವ ಉಪಾಯದಲ್ಲಿ ಪ್ರವೃತ್ತನಾಗು...ವುದಿಲ್ಲ. ಈರೀತಿಯಿಂದ ದ್ವೇಷದಿಂದ ಪ್ರಾಪ್ತವಾದ ವಿಷವನ್ನು ಕೊಡುವ ಉಪಾಯದಿಂದನಿವೃತ್ತಿಮಾಡುವುದಲ್ಲಿ ಶ್ಯೇನಯಾಗ ಬೋಧಕವಚನದ ಅಭಿಪ್ರಾಯವಿದೆ, ಪ್ರವೃತ್ತಿಯಲ್ಲಿ ಇಲ್ಲ. ಕಾರಣವೇನೆಂದರೆ-ಪ್ರವೃತ್ತಿಯು ದ್ವೇಷ...ದಿಂದ ಪ್ರಾಪ್ತವಾದುದು, ಯಾವದು ಅನ್ಯದರಿಂದ ಪ್ರಾಪ್ತವಾಗುವುದೋ ...ದರಲ್ಲಿ ವಾಕ್ಯದ ಅಭಿಪ್ರಾಯವಿಲ್ಲ.

ಈರೀತಿಯಿಂದ ಸರ್ವ ಅಥರ್ವಣವೇದ ನಿವೃತ್ತಿಯಲ್ಲಿ ತಾತ್ಪರ್ಯವಿದೆ. ...ನ್ನು ಉಳಿದ ಮೂರುವೇದಗಳಲ್ಲಿ ಕರ್ಮಬೋಧಕ ವಾಕ್ಯಗಳ ಉಪಯೋ...ವು ಅಂತಃಕರಣ ಶುದ್ಧಿದ್ವಾರ ಜ್ಞಾನವಲ್ಲಿ ಎಂದು ಸ್ಪಷ್ಟವು.

...ಪ್ಪಣಿ—೧. ವಿಷವನ್ನು ಅನ್ನಾದಿಗಳಲ್ಲಿ ಬೆರಸಿ, ಆ ಅನ್ನವನ್ನು ಶತೃವಿಗೆ ತಿನ್ನಿಸಿ ಅದರಿಂದ ಕೊಲ್ಲುವಉಪಾಯ.

೨. "ಪರಿಣೀತಭಾರ್ಯೆಯ ಸಂಗಡ ಸಂಗಮಾಡಬೇಕು,, ೨ ಋತುಮತಿ ಭಾರ್ಯೆಯ ಸಂಗಮಾಡಬೇಕು. ೩ ಹುತಶೇಷ ಹೋಮಮಾಡಿ ಉಳಿದ ಮಾಂಸದ ಭಕ್ಷಣಮಾಡಬೇಕು. ಮತ್ತು ೪ ಸೂತ್ರಾಮಣಿಯಾಗದಲ್ಲಿ ಸುರಾಪಾನಮಾಡಬೇಕು.,, ಇತ್ಯಾದಿ ವೇದಗಳ ವಿಧಿವಚನಗಳು, ಅನ್ಯಕಾರಣ(ಮೋಹದಿಂದ) ಪ್ರಾಪ್ತಗಳಾದ. ಸರ್ವ ಸ್ತ್ರೀಯರಸಂಗ ಅಥವಾ ಸರ್ವದಾ ಪರಿಣೀತ ಸ್ತ್ರೀಯಸಂಗ, ಇಲ್ಲವೆ ಮಾಂಸ ಮದ್ಯಗಳ ಸೇವನೆಗಳು ಇವುಗಳಲ್ಲಿ ಪ್ರವೃತ್ತಿಯನ್ನು ...ಟುಮಾಡುವ ವಿಷಯದಲ್ಲಿ ಇಲ್ಲ. ಆದರೆ ಅವುಗಳಲ್ಲಿ ಸ್ವಾಭಾವಿಕ

ವಾದ ಯಾವ ಪ್ರವೃತ್ತಿಯು ಇದೆಯೋ, ಅದನ್ನು ಸಂಕೋಚಮಾಡಿ ನಿವೃತ್ತಿಯ ವಿಷಯವಾಗಿ ಅಭಿಪ್ರಾಯವಿದೆ. ಆದರಿಂದ ಆ ವೇದವಾಕ್ಯಗಳು ಪರಿಸಂಖ್ಯಾವಿಧಿರೂಪಗಳಾಗಿವೆ. ಇದರಂತೆ ಶ್ಯೇನಯಾಗ ಬೋಧಕ ಅಥರ್ವಣವೇದದ ವಚನದ ಅಭಿಪ್ರಾಯವೂ ಸಹ ದ್ವೇಷದಿಂದ ಪ್ರಾಪ್ತ ಶತ್ರುಮಾರಣದಲ್ಲಿ ಇಲ್ಲ. ಆದರೆ ಈ ಸ್ವಾಭಾವಿಕ ಪ್ರವೃತ್ತಿಯನ್ನು ಆತಂಕಪಡಿಸುವ ಉದ್ದಿಶ್ಯಸಾಗಿಯೂ ಮತ್ತು ವಿಷಪಾನಾದಿ ಉಪಾಯಗಳಿಂದ ನಿವೃತ್ತಿಯಾಗಬೇಕೆಂಬುದರ ಸಲುವಾಗಿಯೂ ಇರುತ್ತದೆ. ಇದರಂತೆ ಈ ಶ್ಯೇನಯಾಗ ಬೋಧಕ ವಚನವೂ ಸಹ ಪರಿಸಂಖ್ಯಾವಿಧಿರೂಪವು. ಬೇರೆ ವಿಧವಾಗಿ ಉಂಟಾಗುವ ಅರ್ಥದ ಸಂಕೋಚನಿಮಿತ್ತ ಬೋಧಕ ವೇದವಚನಗಳು ಪರಿಸಂಖ್ಯಾರೂಪವೆನ್ನಿಸಿಕೊಳ್ಳುತ್ತವೆ. ಈ ವಿಧಿವಚನಗಳ ಸವಿಸ್ತರ ವರ್ಣವು ವೇದಾಂತಪದಾರ್ಥ ಮಂಜೂಷವೆಂಬ ಗ್ರಂಥದಲ್ಲಿ ವಿವರಿಸಲ್ಪಟ್ಟಿರುವುದು.

## ॥೪೮೫॥ ಬ್ರಹ್ಮಜ್ಞಾನದಲ್ಲಿ ನಾಲ್ಕು ಉಪವೇದಗಳ ತಾತ್ಪರ್ಯವು.

ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥವೇದ ಎಂಬ ನಾಲ್ಕು ಉಪವೇದಗಳು ಇರುತ್ತವೆ. ಇವುಗಳಲ್ಲಿ (೧] ಆಯುರ್ವೇದದ ಕರ್ತೃಗಳು ಬ್ರಹ್ಮ, ಪ್ರಜಾಪತಿ, ಅಶ್ವಿನೀಕುಮಾರರು, ಧನ್ವಂತರಿ ಮೊದಲಾದವರು ಇರುವರು. ಚರಕ, ವಾಗ್ಭಟ, ಮೊದಲಾದ ಚಿಕಿತ್ಸಾ ಶಾಸ್ತ್ರಗಳು ಸಹಾ ಆಯುರ್ವೇದವೇ ಆಗಿರುತ್ತವೆ. ಮತ್ತು ವಾತ್ಸ್ಯಾಯನಕೃತ ಕಾಮಶಾಸ್ತ್ರವು ಸಹ ಆಯುರ್ವೇದದ ಅಂತರ್ಭೂತವಾಗಿದೆ. ಕಾರಣವೇನೆಂದರೆ;-ಕಾಮಶಾಸ್ತ್ರದ ವಿಷಯವಾದ ವಾಜೀಕರಣ ಸ್ತಂಭನಾದಿಗಳು ಸಹ ಚರಕದಲ್ಲಿ ಕಥನಮಾಡಲ್ಪಟ್ಟಿರುತ್ತವೆ. ಈ ಆಯುರ್ವೇದದ ಅಭಿಪ್ರಾಯವು ವೈರಾಗ್ಯದಲ್ಲಿ ಸಹಾ ಇದೆ. ಕಾರಣವೇನೆಂದರೆ, ಆಯುರ್ವೇದದರೀತಿಯಿಂದ ರೋಗಾದಿಗಳ ನಿವೃತ್ತಿಯಾದರೂ ಸಹ ಪುನಃ ಉತ್ಪನ್ನವಾಗುವುವು. ಆದರಿಂದ ಲೌಕಿಕ ಉಪಾಯವು ತುಚ್ಛವಿದೆ ಎಂಬ ಅರ್ಥದಲ್ಲಿ ಆಯುರ್ವೇದದ ಅಭಿಪ್ರಾಯವಿದೆ, ಮತ್ತು ಔಷಧದಾನಾದಿಗಳಿಂದ ಪುಣ್ಯಪ್ರಾಪ್ತವಾಗಿ ಅಂತಃಕರಣದ ಶುದ್ಧಿದ್ವಾರ ಜ್ಞಾನದಲ್ಲಿ ಉಪಯೋಗವಿದೆ. ಇದರಂತೆ-

೨. ವಿಶ್ವಾಮಿತ್ರಕೃತ ಧನುರ್ವೇದದಲ್ಲಿ ಆಯುಧನಿರೂಪಣವು ಮಾಡಲ್ಪಟ್ಟಿದೆ. ಆಯುಧಗಳು ನಾಲ್ಕುಪ್ರಕಾರದ ವಿರುವುವು. ಅವು ಯಾವುವೆಂದರೆ.-(೧) ಮುಕ್ತ (೨) ಅಮುಕ್ತ (೩) ಮುಕ್ತಾಮುಕ್ತ (೪) ಯಂತ್ರಮುಕ್ತ.

(೧) ಚಕ್ರಾದಿಗಳನ್ನು ಹಸ್ತದಿಂದ ಒಗೆಯಬೇಕಾಗುತ್ತದೆ,ಆದರಿಂದ ಅವುಗಳಿಗೆ ಮುಕ್ತವೆಂಬ ಹೆಸರು. (೨) ಖಡ್ಗಾದಿಗಳಿಗೆ ಅಮುಕ್ತವೆನ್ನುತ್ತಾರೆ. [೩) ಭರ್ಜಿ ಮೊದಲಾದವುಗಳಿಗೆ ಮುಕ್ತಾಮುಕ್ತಗಳೆನ್ನುತ್ತಾರೆ.



ಬಾಣ, ಇಲ್ಲವೆ ಗುಂಡು ಮೊದಲಾದವುಗಳಿಗೆ ಯಂತ್ರಮುಕ್ತವೆನ್ನು ರೆ. ಈಪ್ರಕಾರದಿಂದ ನಾಲ್ಕು ಪ್ರಕಾರದ ಆಯುಧಗಳಿವೆ. ಇವುಗಳಲ್ಲಿ (೧) ಮುಕ್ತ ಆಯುಧಗಳಿಗೆ ಅಸ್ತ್ರವೆಂದು ಹೇಳುವರು. (೨) ಅ ಕ್ತ ಆಯುಧಗಳಿಗೆ ಶಸ್ತ್ರವೆನ್ನುತ್ತಾರೆ.

ಈ ನಾಲ್ಕು ಪ್ರಕಾರದ ಆಯುಧಗಳಿಗೆ ಬ್ರಹ್ಮ, ವಿಷ್ಣು, ಪಶುಪತಿ, ಪ್ರ ಪತಿ, ಅಗ್ನಿ, ವರುಣ ಮೊದಲಾದ ದೇವತೆಗಳನ್ನು ಮಂತ್ರಸಹ ವರ್ಣಿಸಿ ರೆ. ಕ್ಷತ್ರಿಯ ಕುಮಾರ, ಮತ್ತು ಇವರ ಅನುಸಾರಿಗಳಾದ ಬ್ರಾಹ್ಮಣಾ ಗಳು ಸಹ ಅಧಿಕಾರಿಗಳೆಂದು ಹೇಳಿದ್ದಾರೆ. ಇದರಲ್ಲಿ ನಾಲ್ಕು ಭೇದಗ ಉಂಟು. (೧) ಪದಾತಿ, (೨) ರಥಾರೂಢ, (೩) ಅಶ್ವಾರೂಢ, (೪) ಗಜಾ ಢ ಮತ್ತು ಯುದ್ಧದಲ್ಲಿ ಶಕುನ ಮಂಗಲವೆಂದು ಹೇಳಿದ್ದಾರೆ.

(೧) ಇಷ್ಟು ಅರ್ಥಗಳನ್ನು ಧನುರ್ವೇದದ ಪ್ರಥಮ ಪಾದದಲ್ಲಿ ನಿರೂಪಿ ದ್ದಾರೆ. (೨) ಆಚಾರ್ಯರ ಲಕ್ಷಣ, ಹಾಗೂ ಆಚಾರ್ಯರಿಂದ ಶಸ್ತ್ರಗಳ ಹಣದ ರೀತಿಯು ಧನುರ್ವೇದದ ದ್ವಿತೀಯ ಪಾದದಲ್ಲಿ ವಿವರಿಸಲ್ಪಟ್ಟಿವೆ, ) ಗುರುಸಂಪ್ರದಾಯದಿಂದ ಪ್ರಾಪ್ತವಾದ ಶಸ್ತ್ರಗಳ ಅಭ್ಯಾಸವನ್ನೂ ಹಾಗೂ ಮಂತ್ರಸಿದ್ಧಿ, ದೇವತಾಸಿದ್ಧಿಯ ಪ್ರಕಾರವನ್ನೂ ತೃತೀಯ ಪಾದ ದಲ್ಲಿ ವಿವರಿಸಲ್ಪಟ್ಟಿವೆ. (೪) ಸಿದ್ಧವಾದ ಮಂತ್ರಗಳ ಪ್ರಯೋಗವನ್ನು ನಾಲ್ಕನೇ ಪಾದದಲ್ಲಿ ವರ್ಣಿಸಿದ್ದಾರೆ.

ಇಷ್ಟು ಅರ್ಥಗಳು ಧನುರ್ವೇದದಲ್ಲಿ ಇರುವುವು. ಇವು ಬ್ರಹ್ಮಾ, ಪ್ರಜಾ ತಿ ಮೊದಲಾದವರಿಂದ ವಿಶ್ವಾಮಿತ್ರನಿಗೆ ಪ್ರಾಪ್ತವಾಗಿರುವವು. ಅವ ಂದ ಪ್ರಕಟಮಾಡಲ್ಪಟ್ಟಿತು. ಆದರೆ ವಿಶ್ವಾಮಿತ್ರನಿಂದಲೇ ಧನುರ್ವೇ ದವು ಉತ್ಪನ್ನವಾಗಿಲ್ಲ,

ದುಷ್ಟರಿಂದ ಚೋರಾದಿಗಳಿಂದ ಪ್ರಜಾಪಾಲನೆಯನ್ನು ಮಾಡುವ ರ್ಮವನ್ನು ಕ್ಷತ್ರಿಯರ ಸಲುವಾಗಿ ಧನುರ್ವೇದದಲ್ಲಿ ಉಪದೇಶಮಾಡಲ್ಪ ಟ್ಟಿದೆ. ಆದರಿಂದ ಅವರಿಗಾದರೂ ಸಹ ಅಂತಃಕರಣ ಶುದ್ಧಿಯುಂಟಾಗಿ ಜ್ಞಾನದ್ವಾರ ಮೋಕ್ಷವುಂಟಾಗಬೇಕೆಂಬ ಅಭಿಪ್ರಾಯವಿದೆ.

೩. ಇದರಂತೆ ಗಾಂಧರ್ವವೇದವು ಭರತನಿಂದ ಪ್ರಕಟಿಸಲ್ಪಟ್ಟಿತು. ಇದರಲ್ಲಿ ಸ್ವರ, ತಾಳ, ಮೂರ್ಛನಾ ಸಹಿತ ಗೀತ, ನೃತ್ಯ, ವಾದ್ಯಗಳ ನಿರೂ ಪಣಗಳನ್ನು ವಿಸ್ತಾರವಾಗಿ ಮಾಡಿಸಿದ್ದಾರೆ. ದೇವತಾರಾಧನವೂ ನಿರ್ವಿಕಲ್ಪ ಸಮಾಧಿಯ ಸಿದ್ಧಿಯೂ ಗಾಂಧರ್ವವೇದದ ಪ್ರಯೋಜನವಾಗಿದೆ. ಆದರಿಂ ದಲೂ ಅಂತಃಕರಣ ಏಕಾಗ್ರತೆಯಿಂದ ಜ್ಞಾನದ್ವಾರಾ ಮೋಕ್ಷದ ಪ್ರಯೋ

ಜನವಿದೆ. ಇದರಂತೆ-

೪. ಅರ್ಥವೇದವು ಸಹಾ ಅನೇಕ ಪ್ರಕಾರವಲ್ಲಿ ಅದೆ. ನೀತಿಶಾಸ್ತ್ರ, ಅಶ್ವಶಾಸ್ತ್ರ, ಶಿಲ್ಪಶಾಸ್ತ್ರ, ಸೂಪಶಾಸ್ತ್ರ,[೧] ಮೊದಲಾದ ಧನಪ್ರಾಪ್ತಿಯ ಉಪಾಯ ಬೋಧಕಶಾಸ್ತ್ರಗಳಿಗೆ ಅರ್ಥವೇದವೆನ್ನುತ್ತಾರೆ. ಧನಪ್ರಾಪ್ತಿಯ ಸಕಲ ಉಪಾಯಗಳಲ್ಲಿ ನಿಪುಣಪುರುಷನಿಗೆ ಸಹ, ಭಾಗ್ಯದ ಹೊರತು, ಧನದಪ್ರಾಪ್ತಿಯು ಆಗುವುದಿಲ್ಲ, ಅದರಿಂದ ಅರ್ಥವೇದದ ತಾತ್ಪರ್ಯವು ಸಹಾ ವೈರಾಗ್ಯದಲ್ಲಿಯೇ ಅದೆ. ಇದರಂತೆ-

ಟಿಪ್ಪಣಿ—೧ ಇದಕ್ಕೇ ಸ್ಥಾಪತ್ಯವೇದವೆಂದೂ ಸಹ ಎನ್ನುತ್ತಾರೆ.

## ॥೪೮೬॥ ನಾಲ್ಕು ವೇದಗಳ ಷಡಂಗಗಳ ಅರ್ಥಸಹಿತ ಪ್ರಯೋಜನವು.

[೧] ಶಿಕ್ಷಾ, (೨) ಕಲ್ಪ, (೩) ವ್ಯಾಕರಣ, (೪) ನಿರುಕ್ತ (೫) ಜ್ಯೋತಿಷ (೬) ಪಿಂಗಲ ಈ ಆರು ಅಂಗಗಳು ವೇದಗಳ ಉಪಯೋಗವಾಗಿರುವದರಿಂದ ವೇದದ ಅಂಗವೆನ್ನುತ್ತಾರೆ. ಇವುಗಳಲ್ಲಿ.

೧. ಶಿಕ್ಷಾದ ಕರ್ತನು ಪಾಣಿನಿಯು ಆಗಿದ್ದಾನೆ, ವೇದದ ಶಬ್ದಗಳಲ್ಲಿಯ ಅಕ್ಷರಗಳ ಸ್ಥಾನದ ಜ್ಞಾನ, ಮತ್ತು ಉದಾತ್ತ,[೧] ಅನುದಾತ್ತ,[೨] ಸ್ವರಿತದ[೩] ಜ್ಞಾನವು ಶಿಕ್ಷೆಯಿಂದಲೇ ಆಗುತ್ತದೆ. ವೇದಗಳ ವ್ಯಾಖ್ಯಾನರೂಪವಾದ ಅನೇಕ ಪ್ರತಿಶಾಖಾ ನಾಮಕ ಗ್ರಂಥಗಳು ಇವೆ. ಅವು ಸಹಾ ಶಿಕ್ಷಾ ಅಂಗದ ಅಂತರ್ಭೂತವಾಗಿವೆ.

೨. ವೇದಭೋಧಿತ ಕರ್ಮಾನುಷ್ಠಾನದ ರೀತಿಯು ಕಲ್ಪಸೂತ್ರದಿಂದ ತಿಳಿದುಬರುತ್ತದೆ. ಯಜ್ಞಮಾಡಿಸತಕ್ಕ ಬ್ರಾಹ್ಮಣನಿಗೆ ಋತ್ವಿಕ್‌ನೆನ್ನುತ್ತಾರೆ. ಅವನು ಮಾಡತಕ್ಕ ಭಿನ್ನಭಿನ್ನವಾದ ಯೋಗ್ಯಕರ್ಮಗಳನ್ನು ಬೋಧಿಸುವಂಥ ವೇದಾಂಗವು ಕಲ್ಪಸೂತ್ರವು. ಈಕಲ್ಪಸೂತ್ರದ ಕರ್ತೃಗಳು ಕಾತ್ಯಾಯನ, ಅಶ್ವಲಾಯನಾದ ಮುನಿಗಳು, ಈ ಕಲ್ಪಸೂತ್ರವು ಸಹ ವೇದದ ಉಪಯೋಗಿಯಾಗಿರುವುದರಿಂದ ವೇದದ ಅಂಗವಾಗಿದೆ.

೩. ವ್ಯಾಕರಣದಿಂದ ವೇದದ ಶಬ್ದಗಳ ಶುದ್ಧತೆಯ ಜ್ಞಾನವಾಗುತ್ತದೆ. ಈವ್ಯಾಕರಣ ಸೂತ್ರರೂಪ ಅಷ್ಟ ಅಧ್ಯಾಯವುಳ್ಳ ಅಂಗವನ್ನು ಪಾಣಿನಿ ನಾಮಕ ಮುನಿಯು ಮಾಡಿದ್ದಾನೆ. ಕಾತ್ಯಾಯನ ಮತ್ತು ಪತಂಜಲಿಯು ಈ ಸೂತ್ರಗಳ ವ್ಯಾಖ್ಯಾನರೂಪ ವಾರ್ತಿಕ ಮತ್ತು ಭಾಷ್ಯವನ್ನು ಮಾಡಿರು



ಮತ್ತು ಯಾವ ವ್ಯಾಕರಣಗಳಿರುವವೋ, ಅವುಗಳಲ್ಲಿ ವೇದಶಬ ...ರವಿಲ್ಲ. ಪುರಾಣಾದಿಗಳಲ್ಲಿ ಅವುಗಳ ಉಪಯೋಗವುಂಟು. ಆದರೆ ...ಕ್ಕೆ ಉಪಯೋಗವಿಲ್ಲ. ಮತ್ತು ಪಾಣಿನೀಕೃತ ವ್ಯಾಕರಣವು ವೇದ ...ಗಳ ಸಿದ್ಧಿಯನ್ನೇ ಮಾಡುತ್ತದೆ. ಈ ಕಾರಣದಿಂದ ವೇದದ ಅಂಗ ...ಗಿದೆ.

... ಯಾಸ್ಕ ನಾಮಕ ಮುನಿಯು ತ್ರಯೋದಶ ಅಧ್ಯಾಯವುಳ್ಳ ನಿರುಕ್ತ ...ಬ ಅಂಗವನ್ನು ರಚಿಸಿದ್ದಾನೆ. ಅದರಲ್ಲಿ ವೇದದ ಮಂತ್ರಗಳಲ್ಲಿಯ ಅಪ್ರ... ಪದಗಳ ಅರ್ಥ ಬೋಧನಾಗುವುದರ ಸಲುವಾಗಿ ನಾಮನಿರೂಪಣೆ...ನ್ನು ಮಾಡಿರುವನು. ಅದರಿಂದ ವೇದಗಳಲ್ಲಿಯ ಅಪ್ರಸಿದ್ಧ ಪದಗಳ ...ರ್ಥ ಜ್ಞಾನದಲ್ಲಿ ಉಪಯೋಗವಾಗುವುದರಿಂದ ನಿರುಕ್ತವು ಸಹಾ ವೇ...ಂಗವಾಗಿದೆ. ಸಂಜ್ಞಾ ಬೋಧಕವಾದ ಪಂಚ ಅಧ್ಯಾಯವುಳ್ಳ ನಿಘಂ...ನಾಮಕ ಗ್ರಂಥವನ್ನು ಯಾಸ್ಕರನು ರಚಿಸಿರುವನು. ಅದು ಸಹ ನಿರು...ದಲ್ಲಿ ಅಂತರ್ಭೂತವಾಗಿದೆ. ಮತ್ತು ಅಮರಸಿಂಹ; ಹೇಮ ಮೊದ...ಲಾದವರು ಸಂಜ್ಞಾಬೋಧಕ ಕೋಶಗಳನ್ನು ರಚಿಸಿರುವರು. ಅವೆಲ್ಲವು ...ರುಕ್ತದ ಅಂತರ್ಭೂತವಾಗಿವೆ.

೫. ಆದಿತ್ಯ ಗರ್ಗಾದಿ ಕೃತ ಜ್ಯೋತಿಷವು ಸಹ ವೇದಾಂಗವಾಗಿದೆ. ಕಾ...ರಣವೇನೆಂದರೆ, ವೈದಿಕ ಕರ್ಮಾರಂಭದಲ್ಲಿ ಕಾಲದ ಜ್ಞಾನವು ಬೇಕು. ಈ ಕಾಲಜ್ಞಾನವು ಜ್ಯೋತಿಷ್ಯದಿಂದ ಆಗುವುದು ಈ ಕಾರಣದಿಂದ ವೇದ...ದ ಅಂಗವಾಗಿದೆ.

೬. ಪಿಂಗಲಮುನಿಯು ಸೂತ್ರ ಅಷ್ಟಾಧ್ಯಾಯದಿಂದ ಛಂದ ನಿರೂಪಣೆ...ಯನ್ನು ಮಾಡಿರುವನು. ಇದರಿಂದ ವೈದಿಕ ಗಾಯಿತ್ರೀ ಮೊದಲಾದ ಛಂ...ದಗಳ ಜ್ಞಾನವಾಗುವುದು. ಈ ಕಾರಣದಿಂದ ಪಿಂಗಲಕೃತ ಸೂತ್ರವು ...ಸಹ ವೇದದ ಅಂಗವು.

ಈ ವೇದದ ಷಡಂಗಗಳಲ್ಲಿ ವೇದೋಪಯೋಗಿಯಾದ ಯಾವ ಅರ್ಥ ...ವಿಲ್ಲವೋ ಅದರ ನಿರೂಪಣವನ್ನು ಸಂಕ್ಷೇಪವಾಗಿ ವಿವರಿಸಲಟ್ಟಿದೆ. ಪ್ರಧಾ...ನ್ಯದಿಂದ ಅಲ್ಲ. ಈ ಕಾರಣದಿಂದ ವೇದಗಳಿಂದ ಯಾವ ಪ್ರಯೋಜನವಿರುವುದೋ ಅದೇ ಪ್ರಯೋಜನವು ಷಡಂಗಗಳಲ್ಲಿಯೂ ಇರುವುದು. ಬೇರೆಇಲ್ಲ.

ಟಿಪ್ಪಣಿ. ೧. ಉಚ್ಚಸ್ವರಕ್ಕೆ ಉದಾತ್ತವೆನ್ನುತ್ತಾರೆ. ೨, ನೀಚಸ್ವರಕ್ಕೆ ಅನುದಾತ್ತವೆನ್ನುತ್ತಾರೆ. ೩. ಸಮಸ್ವರದ ಜ್ಞಾನಕ್ಕೆ ಸ್ವರಿತಕಾಜ್ಞಾನವೆನ್ನುತ್ತಾರೆ.

## ॥೪೮೭॥ ಅಷ್ಟಾದಶ ಪುರಾಣ ಉಪಪುರಾಣಗಳ ಅರ್ಥವು.

ಪುರಾಣಗಳು ಹದಿನೆಂಟು ಇವೆ. ಇವುಗಳನ್ನು ವ್ಯಾಸನಾಮಕ ಋಷಿಯು ರಚಿಸಿದನು. ಅವು ಯಾವವೆಂದರೆ, (೧) ಬ್ರಹ್ಮ (೨) ಪದ್ಮ, (೩) ವೈಷ್ಣವ (೪) ಶೈವ (೫) ಭಾಗವತ (೬) ನಾರದೀಯ (೭) ಮಾರ್ಕಂಡೇಯ (೮) ಆಗ್ನೇಯ (೯) ಭವಿಷ್ಯ (೧೦) ಬ್ರಹ್ಮವೈವರ್ತ (೧೧) ಲೈಂಗ್ಯ (೧೨) ವಾರಾಹ (೧೩) ಸ್ಕಂದ (೧೪) ವಾಮನ (೧೫) ಕೂರ್ಮ (೧೬) ಮಾತ್ಸ್ಯ (೧೭) ಗಾರುಡ (೧೮) ಬ್ರಹ್ಮಾಂಡ.

ಕಾಲೀ ಪುರಾಣ ಮೊದಲಾದ ಬೇರೆ ಅನೇಕ ಪುರಾಣಗಳುಂಟು. ಅವುಗಳಿಗೆಲ್ಲ ಉಪಪುರಾಣಗಳೆನ್ನುವರು. ಕೆಲವರು ಉಪಪುರಾಣಗಳು ಸಹ ಹದಿನೆಂಟೇ ಇರುವವೆಂದು ಎನ್ನುತ್ತಾರೆ. ಇದೇನು ನಿಜವಲ್ಲ. ಉಪಪುರಾಣಗಳು ಅನೇಕವಿರುವವು.

ಭಾಗವತವು ಎರಡು ವಿಧವಾಗಿರುವುದು. (೧) ವೈಷ್ಣವ ಭಾಗವತ, ದೇವೀಭಾಗವತ, ಈ ಎರಡರಲ್ಲಿಯೂ ಹದಿನೆಂಟು ಸಾವಿರ ಶ್ಲೋಕಗಳು ಸಮವಾಗಿಯೇ ಇರುವವು. ಎರಡರಲ್ಲಿಯೂ ಹನ್ನೆರಡೇ ಸ್ಕಂಧಗಳುಂಟು. ಹೀಗೆ ಇದ್ದರೂ ಒಂದು ಪುರಾಣವಾಗಿದೆ, ಮತ್ತೊಂದು ಉಪಪುರಾಣವಾಗಿದೆ. ಎರಡೂ ವ್ಯಾಸಕೃತಗಳಾಗಿವೆ. ಈ ಕಾರಣದಿಂದ ಎರಡು ಭಾಗವತಗಳು ಪ್ರಮಾಣವಾಗಿಯೇ ಇವೆ.

ವ್ಯಾಸಮುನಿಯು ಪುರಾಣಗಳನ್ನು ರಚಿಸಿದಂತೆ ಉಪಪುರಾಣಗಳನ್ನು ಸಹಾ ರಚಿಸಿರುವನು. ಕೆಲವು ಉಪಪುರಾಣಗಳನ್ನು ಪರಾಶರ ಮೊದಲಾದ ಸರ್ವಜ್ಞ ಮುನಿಗಳು ರಚಿಸಿದ್ದಾರೆ. ಈ ಕಾರಣದಿಂದ ಉಪಪುರಾಣಗಳು ಸಹ ಪ್ರಮಾಣವಾಗಿವೆ.

ಉಪನಿಷತ್ತುಗಳಿಗೆ ಯಾವ ಅರ್ಥವುಂಟೋ ಅದೇ ಅರ್ಥವು ಉಪಪುರಾಣ ಸಹಿತ ಪುರಾಣಗಳ ಅರ್ಥವು, ಈ ಸಂಗತಿಯನ್ನು ಮುಂದೆ[೧] ಪ್ರತಿಪಾದನೆ ಮಾಡುವೆವು.

ಟಿಪ್ಪಣಿ. ೧. ಈ ಸಂಗತಿಯ ಪ್ರತಿಪಾದನವನ್ನು ಮುಂದೆ ೫೧೦ ರಿಂದ ೫೧೭ನೆಯುಳ್ಳ ವಿಷಯಗಳಲ್ಲಿ ಮಾಡುವೆವು. ಧರ್ಮಶಾಸ್ತ್ರದಲ್ಲಿ ಕರ್ಮಕಾಂಡದ ಅರ್ಥವಿದೆ. ಮತ್ತು ಪುರಾಣಗಳಲ್ಲಿ ಉಪನಿಷದರೂಪ ಜ್ಞಾನಕಾಂಡದ ಅರ್ಥವಿದೆ. ಈ ಸಂಗತಿಯನ್ನು ಶ್ರೀ ವಿದ್ಯಾರಣ್ಯಸ್ವಾಮಿಯವರು ಸೂತಸಂಹಿತೆಯ ವ್ಯಾಖ್ಯಾನದಲ್ಲಿ ಉಲ್ಲೇಖಿಸಿರುವರು.

## ॥೪೮೮॥ ನ್ಯಾಯ ಮತ್ತು ವೈಶೇಷಿಕ ಸೂತ್ರಗಳ ಫಲ.

ಪಂಚ ಅಧ್ಯಾಯವುಳ್ಳ ನ್ಯಾಯ ಸೂತ್ರವನ್ನು ಗೌತಮ ಮಹರ್ಷಿಯು ರಚಿಸಿದನು. ಇದರಲ್ಲಿ ಯುಕ್ತಿಯು ಪ್ರಧಾನವಾಗಿದೆ. ಯುಕ್ತಿಚಿಂತನದಿಂದ



ಪರೀಕ್ಷಣಬುದ್ಧಿಯು ತೀವ್ರವಾಗುವುದು. ಆಗ ಮನನ ಮಾಡುವದಕ್ಕೆ ಸಾಮರ್ಥ್ಯವುಂಟಾಗುವುದು.[೧] ಈ ಕಾರಣದಿಂದ ಯುಕ್ತಿಪ್ರಧಾನವಾದ ನ್ಯಾಯಸೂತ್ರದ ಮನನದಿಂದ ಸಹಾ ವೇದಾಂತಜನ್ಯ ಜ್ಞಾನದ ಫಲವು ಲಭಿಸುವುದು. ಮತ್ತು ಕಣಾದನಾಮಕ ಮುನಿಯು ಹತ್ತು ಅಧ್ಯಾಯವುಳ್ಳ ವೈಶೇಷಿಕಸೂತ್ರವನ್ನು ರಚಿಸಿರುವನು; ಇದು ನ್ಯಾಯದಲ್ಲಿಯೇ ಅಂತರ್ಭಾವವಾಗಿದೆ.

ಟಿಪ್ಪಣಿ—೨. ನ್ಯಾಯ ಸೂತ್ರದ ಮನನದಿಂದ ವೇದಾಂತಜನ್ಯಜ್ಞಾನದ ಫಲವು ಲಭಿಸುವುದೆಂದು ನ್ಯಾಯಪಾರಂಗತ ಶಿರೋಮಣಿಯಾದ ಭಟ್ಟಾಚಾರ್ಯನು ತನ್ನ ಗ್ರಂಥದಲ್ಲಿ ಉಲ್ಲೇಖಿಸಿರುವನು. ಈ ಕಾರಣದಿಂದ ಇದರ ಉಕ್ತ ಫಲವು ಸಂಭವಿಸುತ್ತದೆ.

## ॥೪೮೯॥ ಧರ್ಮಮೀಮಾಂಸಾ, ಮತ್ತು ಬ್ರಹ್ಮಮೀಮಾಂಸಾ, ಎಂಬ ಎರಡು ಭೇದದಿಂದ ಮೀಮಾಂಸೆಗಳ, ಮತ್ತು ಸಂಕರ್ಷಣಕಾಂಡದ ಫಲವು,

ಮೀಮಾಂಸೆಯಲ್ಲಿ ಎರಡು ಭೇದಗಳುಂಟು;- (೧) ಧರ್ಮಮೀಮಾಂಸಾ (೨) ಬ್ರಹ್ಮಮೀಮಾಂಸಾ.

(೧) ಧರ್ಮಮೀಮಾಂಸೆಗೆ ಪೂರ್ವಮೀಮಾಂಸೆಯೆನ್ನುತ್ತಾರೆ. (೨) ಬ್ರಹ್ಮಮೀಮಾಂಸೆಗೆ ಉತ್ತರ ಮೀಮಾಂಸೆಯೆನ್ನುತ್ತಾರೆ.

೧. ಧರ್ಮಮೀಮಾಂಸೆಯಲ್ಲಿ ಹನ್ನೆರಡು ಅಧ್ಯಾಯಗಳುಂಟು. ಇದನ್ನು ಜೈಮಿನಿಯು ರಚಿಸಿರುವನು. ಇದರಲ್ಲಿ ಕರ್ಮಾನುಷ್ಠಾನದ ರೀತಿಯು ಪ್ರತಿಪಾದಿಸಲ್ಪಟ್ಟಿದೆ. ಈ ಕಾರಣದಿಂದ ನಿಯಮದಿಂದ ಕರ್ಮದಲ್ಲಿಯ ಪ್ರವೃತ್ತಿಯೇ ಧರ್ಮಮೀಮಾಂಸೆಯ ಫಲವಾಗಿದೆ. ಕರ್ಮದಲ್ಲಿಯ ಪ್ರವೃತ್ತಿಯಿಂದ ಅಂತಃಕರಣಶುದ್ಧಿಯೂ, ಈ ಅಂತಃಕರಣ ಶುದ್ಧಿಯಿಂದ ಜ್ಞಾನವೂ, ಜ್ಞಾನದಿಂದ ಮೋಕ್ಷವೂ ಲಭಿಸುವುದಾದ್ದರಿಂದ ಧರ್ಮಮೀಮಾಂಸೆಯ ಫಲವು ಮೋಕ್ಷವಾಗಿದೆ. ಧರ್ಮಮೀಮಾಂಸೆಯ ದ್ವಾದಶ ಅಧ್ಯಾಯಗಳ ಅರ್ಥದಲ್ಲಿ ಪರಸ್ಪರ ಭೇದವಿರುವುದು; ಮತ್ತು ಕಠಿಣವಾಗಿದೆ. ಈ ಕಾರಣದಿಂದ ಬರೆದಿರುವುದಿಲ್ಲ; ಮತ್ತು ಸಂಕರ್ಷಣಕಾಂಡವೆಂಬ ಪಂಚಾಧ್ಯಾಯವುಳ್ಳ ಗ್ರಂಥವನ್ನು ಜೈಮಿನಿಯು ರಚಿಸಿದಾನೆ; ಅದರಲ್ಲಿಯೂ ಉಪಾಸನೆಯನ್ನೇ ಹೇಳಿರುವುದು. ಇದು ಸಹಾ ಧರ್ಮಮೀಮಾಂಸೆಯಲ್ಲಿಯೇ ಅಂತರ್ಭಾವವಾಗಿದೆ. ಇದರಂತೆ

೨. ಬ್ರಹ್ಮಮೀಮಾಂಸೆಯಲ್ಲಿ ನಾಲ್ಕು ಅಧ್ಯಾಯಗಳುಂಟು; ಇದರ ಕರ್ತೃವು ವ್ಯಾಸಮಹರ್ಷಿಯು. ಒಂದೊಂದು ಅಧ್ಯಾಯದಲ್ಲಿ ನಾಲ್ಕು ನಾಲ್ಕು ಪಾದಗಳುಂಟು, ಅದರಲ್ಲಿ [೧] ಪ್ರಥಮಅಧ್ಯಾಯದಲ್ಲಿಯ ಸರ್ವ ಉಪನಿಷದ್ವಾಕ್ಯಕಗಳು ಬ್ರಹ್ಮವನ್ನೇಪ್ರತಿಪಾದನಮಾಡುವುವು,ಅನ್ಯಪ್ರತಿಪಾದನೆ ಮಾಡುವುದಿಲ್ಲ. ಮತ್ತು (೨) ಮಂದಬುದ್ಧಿಗಳಿಗೆ ಉಪನಿಷದ್ವಾಕ್ಯಗಳಲ್ಲಿ ಪರಸ್ಪರ ವಿರೋಧವು ಕಂಡುಬರುತ್ತದೆ. ಈ ವಿರೋಧ ಪರಿಹಾರವು ದ್ವಿತೀಯ ಅಧ್ಯಾಯದಲ್ಲಿ ಮಾಡಲ್ಪಟ್ಟದೆ. ಮತ್ತು (೩) ಜ್ಞಾನ ಹಾಗೂ ಉಪಾಸನೆಯ ಸಾಧನವಿಚಾರವು ತೃತೀಯ ಅಧ್ಯಾಯದಲ್ಲಿ ವಿವರಿಸಲ್ಪಟ್ಟದೆ.(೪) ಜ್ಞಾನೋಪಾಸನೆಯ ಫಲವು ನಾಲ್ಕನೇ ಅಧ್ಯಾಯದಲ್ಲಿ ನಿರೂಪಿಸಲ್ಪಟ್ಟದೆ.

ಈ ಬಹ್ಮಮೀಮಾಂಸಾರೂಪ ಶಾರೀರಕ ಶಾಸ್ತ್ರವೇ ಸರ್ವಶಾಸ್ತ್ರಗಳಲ್ಲಿ ಶ್ರೇಷ್ಠವಾಗಿದೆ,ಮುಮುಕ್ಷುಗಳಿಗೆ ಇದೇ ಉಪಾದೇಯವಾಗಿದೆ. ಯದ್ಯಪಿ ಇದಕ್ಕೆ [೩] ವ್ಯಾಖ್ಯಾನರೂಪ ಗ್ರಂಥಗಳು ಅನೇಕವಿದ್ವಾಸ್ಯೋ ಶ್ರೀಶಂಕರ[೪]ಕೃತ ಭಾಷ್ಯರೂಪ ವ್ಯಾಖ್ಯಾನವು ಮುಮುಕ್ಷುಗಳಿಗೆ ಶ್ರೋತವ್ಯವಾಗಿದೆ ಇದರ ಜ್ಞಾನದ್ವಾರಾ ಮೋಕ್ಷಫಲವು ಸ್ಪಷ್ಟವೇ ಆಗಿದೆ.

---

ಟಿಪ್ಪಣಿ— (೧] ಯಾವುದರಲ್ಲಿ ಧರ್ಮಸಂಬಂಧಿಕವಾದ ವಿಚಾರವುಂಟೋ ಅದಕ್ಕೆ ಧರ್ಮ ಮೀಮಾಂಸೆಯೆಂತಲೂ (೨] ಯಾವುದರಲ್ಲಿ ಬ್ರಹ್ಮವಿಷಯಕವಾದ ವಿಚಾರವುಂಟೋ ಅದಕ್ಕೆ ಬ್ರಹ್ಮಮೀಮಾಂಸೆಯೆಂತಲೂ ಹೆಸರುಂಟು. ೩. ಶಂಕರಾಚಾರ್ಯಕೃತ ಭಾಷ್ಯ, ರಾಮಾನುಜ ಭಾಷ್ಯ ಮಧ್ವಭಾಷ್ಯ ಭಾಸ್ಕರಾಚಾರ್ಯ ಕೃತಭಾಷ್ಯ, ವಿಷ್ಣು ಸ್ವಾಮಿಕೃತ ಭಾಷ್ಯ, ವಿಜ್ಞಾನೇಂದ್ರ ಭಿಕ್ಷುಕೃತಭಾಷ್ಯ, ನೀಲಕಂಠಭಾಷ್ಯ ಇತ್ಯಾದಿ ಭಾಷ್ಯರೂಪ ವ್ಯಾಖ್ಯಾನಗಳು. ೪. ಇಲ್ಲಿ ಭಾಷ್ಯಶಬ್ದದಿಂದ ಶ್ರೀ ಶಂಕರಾಚಾರ್ಯರ ಶಿಷ್ಯ, ಪ್ರಶಿಷ್ಯರು ಮಾಡಿದ ಭಾಷ್ಯ ವ್ಯಾಖ್ಯಾನಗಳ ಗ್ರಹಣವು ಸಹ ಮಾಡಲ್ಪಟ್ಟಿದೆ. ಈ ಭಾಷ್ಯಕ್ಕೆ ವ್ಯಾಖ್ಯಾನಗಳು ಅನೇಕವುಂಟು. ಆ ವ್ಯಾಖ್ಯಾನಗಳ ನಾಮಮಾತ್ರ ಕಥನವನ್ನು ಶ್ರೀಪಂಡಿತ ಪೀತಾಂಬರಜಿಯವರು ಪಂಚದಶಿಯ ತೃಪ್ತಿದೀಪಿಕೆಯ ೧೦೨ನೆ ಶ್ಲೋಕದ ಟಿಪ್ಪಣಿಯಲ್ಲಿ ವಿವರಿಸಿರುವರು. ಜಿಜ್ಞಾಸುಗಳು ಅದರಲ್ಲಿ ನೋಡಿಕೊಳ್ಳಬೇಕು.

## ||೪೯೦|| ಸ್ಮೃತಿ ಮೊದಲಾದ ಗ್ರಂಥಗಳ ಕರ್ತರೂ, ಮತ್ತು ಪ್ರಯೋಜನವೂ,



ಮನು, ಯಾಜ್ಞವಲ್ಕ್ಯ, ವಿಷ್ಣು, ಯಮ, ಅಂಗಿರ, ವಶಿಷ್ಟ, ದಕ್ಷ ...ವರ್ತ, ಶಾತಾತಪ, ಪರಾಶರ, ಗೌತಮ, ಶಂಖಲಿಖಿತ, ಹಾರೀತ, ಆಪ...ಬ, ಶುಕ್ರ, ಬೃಹಸ್ಪತಿ, ವ್ಯಾಸ, ಕಾತ್ಯಾಯನ, ದೇವಲ, ನಾರದ ...ತ್ಯಾದಿ ಸರ್ವಜ್ಞರು ವೇದಾನುಸಾರವಾಗಿ ಸ್ಮೃತಿನಾಮಕ ಗ್ರಂಥಗಳನ್ನು ...ಚಿಸಿರುವರು; ಅವುಗಳಿಗೆ ಧರ್ಮಶಾಸ್ತ್ರಗಳೆನ್ನುತ್ತಾರೆ. ಇವುಗಳಲ್ಲಿ ವರ್ಣಾ...ಮ, ಕಾಯಿಕ, ವಾಚಿಕ, ಮಾನಸಿಕ ಧರ್ಮಗಳ ವಿವೇಚನೆಯುಂಟು. ...ಗಳಿಂದ ಅಂತಃಕರಣ ಶುದ್ಧಿದ್ವಾರಾ ಜ್ಞಾನವುಂಟಾಗಿ ಮೋಕ್ಷಪ್ರಯೋ...ನವುಂಟು. ಇದರಂತೆ-

ವ್ಯಾಸಮಹರ್ಷಿಯು ಮಹಾಭಾರತವನ್ನೂ ವಾಲ್ಮೀಕಿ ಮಹರ್ಷಿಯು ...ರಾಮಾಯಣವನ್ನೂ ರಚಿಸಿರುವರು. ಇವು ಸಹಾ ಧರ್ಮಶಾಸ್ತ್ರದಲ್ಲಿ ...ಅಂತರ್ಭಾವವಾಗಿವೆ. ಮತ್ತು ದೇವತಾರಾಧನ ನಿಮಿತ್ತವಾಗಿ ಯಾವ ...ಮಂತ್ರಶಾಸ್ತ್ರಗಳಿರುವವೋ, ಅವು ಸಹ ಧರ್ಮಶಾಸ್ತ್ರಗಳಲ್ಲಿ ಅಂತರ್ಭಾವ...ವಾಗಿವೆ. ದೇವತಾರಾಧನದಿಂದ ಅಂತಃಕರಣ ಶುದ್ಧಿಯ ಪ್ರಯೋಜನ...ವುಂಟು; ಇದರಂತೆ ಸಾಂಖ್ಯಶಾಸ್ತ್ರ, ಯೋಗಶಾಸ್ತ್ರ, ವೈಷ್ಣವತಂತ್ರ, ...ವತಂತ್ರಾದಿಕಗಳು ಸಹ ಧರ್ಮಶಾಸ್ತ್ರದ ಅಂತರ್ಭೂತವಾಗಿವೆ, ಕಾರಣ ...ವೇನೆಂದರೆ, ಇವುಗಳಲ್ಲಿ ಸಹಾ ಮಾನಸಧರ್ಮ ನಿರೂಪಣೆಯುಂಟು.

...ಟಿಪ್ಪಣಿ. ಉಪಾಸನಾರೂಪ ಧರ್ಮವು.

## ||೪೯೧|| ಸಾಂಖ್ಯಶಾಸ್ತ್ರದ ಫಲವು.

ಕಪಿಲ ಮಹರ್ಷಿಯು ಆರು ಅಧ್ಯಾಯವುಳ್ಳ ಸಾಂಖ್ಯಶಾಸ್ತ್ರವನ್ನು ...ರಚಿಸಿರುವನು. ಆದರ (೧) ಪ್ರಥಮ ಅಧ್ಯಾಯದಲ್ಲಿ ವಿಷಯನಿರೂಪಣೆ...ಯುಂಟು. (೨) ದ್ವಿತೀಯ ಅಧ್ಯಾಯದಲ್ಲಿ ಮಹತ್ತತ್ವ, ಅಹಂಕಾರಾದಿಕ...ಳ ಮುಖ್ಯ ಕಾರ್ಯವನ್ನು ಹೇಳಿದೆ. ತೃತೀಯ ಅಧ್ಯಾಯದಲ್ಲಿ ವಿಷಯ...ರೂಪ ವೈರಾಗ್ಯವನ್ನು ಹೇಳಿದೆ. (೪) ಚತುರ್ಥಾಧ್ಯಾಯದಲ್ಲಿ ವಿರಕ್ತರ ...ಆಖ್ಯಾಯಿಕೆಗಳುಂಟು. (೫) ಪಂಚಮ ಅಧ್ಯಾಯದಲ್ಲಿ ಪರಪಕ್ಷದ ಖಂಡನೆ...ಯುಂಟು. (೬) ಷಷ್ಠಾಧ್ಯಾಯದಲ್ಲಿ ಸಂಕ್ಷೇಪದಿಂದ ಸರ್ವಾರ್ಥಸಂಗ್ರಹ...ವಿರುವುದು.

ಪ್ರಕೃತಿಪುರುಷ ವಿವೇಕದಿಂದ ಪುರುಷನ ಅಸಂಗ ಜ್ಞಾನವು ಸಾಂಖ್ಯ...ಶಾಸ್ತ್ರದ ಪ್ರಯೋಜನವು. ಇದೂ 'ತ್ವಂ'ಪದದ ಲಕ್ಷ್ಯಾರ್ಥ ಶೋಧನದ್ವಾರಾ ...ಮಹಾವಾಕ್ಯಜನ್ಯಜ್ಞಾನದಲ್ಲಿ ಉಪಯೋಗವಾಗುವದರಿಂದ ಮೋಕ್ಷವೇ ...ಫಲವಾಗಿದೆ.

## ॥೪೦೨॥ ಯೋಗಶಾಸ್ತ್ರದ ಫಲ, ಮತ್ತು ಶಾರೀರಕ ಉಕ್ತಿಯಿಂದ ವಿರೋಧ.

ಯೋಗಶಾಸ್ತ್ರವು ನಾಲ್ಕು ಪಾದರೂಪವಾಗಿದೆ; ಪತಂಜಲಿಯು ಇದರ ಕರ್ತೃವಾಗಿರುವನು. ಈ ಪತಂಜಲಿಯು ಮಹಾಶೇಷನ ಅವತಾರವು. ಒಬ್ಬ ಋಷಿಯು ಸಂಧ್ಯಾ ಉಪಾಸನೆಯನ್ನು ಮಾಡುತ್ತಿದ್ದ ಕಾಲದಲ್ಲಿ ಅವನ ಅಂಜಲಿಯಲ್ಲಿ ಪ್ರಕಟವಾಗಿ ಪೃಥ್ವಿಯಲ್ಲಿ ಬಿದ್ದದ್ದರಿಂದ ಪತಂಜಲಿಯೆಂಬ ನಾಮಕರಣವುಂಟಾಯಿತು. ಇವನು (೧) ಶರೀರದ ರೋಗರೂಪೀ ಮಲವನ್ನು ದೂರೀಕರಿಸುವ ಸಲುವಾಗಿ ಚಿಕಿತ್ಸಾಗ್ರಂಥವನ್ನು ರಚಿಸಿದನು. ಮತ್ತು (೨) ಅಶುದ್ಧ ಶಬ್ದದ ಉಚ್ಚಾರಣರೂಪ ವಾಣಿಯ ಮಲವನ್ನು ನಾಶಪಡಿಸುವುದರ ಸಲುವಾಗಿ ಪಾಣಿನೀ ವ್ಯಾಕರಣಕ್ಕೆ ಭಾಷ್ಯವನ್ನು ಬರೆದಿರುವನು. ಇದರಂತೆ [೩] ವಿಕ್ಷೇಪರೂಪ ಅಂತಃಕರಣದ ಮಲದ ನಾಶನಾರ್ಥವಾಗಿ ಯೋಗಸೂತ್ರವನ್ನು ಬರೆದಿರುವನು. ಇದರ ಪ್ರಥಮ ಪಾದದಲ್ಲಿ ಚಿತ್ತವೃತ್ತಿಯ ನಿರೋಧರೂಪ ಸಮಾಧಿ, ಮತ್ತು ಇದರ ಸಾಧನ ಅಭ್ಯಾಸ, ವೈರಾಗ್ಯಾದಿಗಳನ್ನು ವಿವರಿಸಿರುವನು. ಇದರಂತೆ ವಿಕ್ಷಿಪ್ತಚಿತ್ತಕ್ಕೆ ಸಮಾಧಿಯ ಸಾಧನಗಳಾದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿ, ಎಂಬ ಎಂಟು ಸಮಾಧಿಯ ಅಂಗಗಳನ್ನು ದ್ವಿತೀಯ ಪಾದದಲ್ಲಿ ವಿವರಿಸಿರುವನು. ತೃತೀಯ ಪಾದದಲ್ಲಿ ಯೋಗದ ವಿಭೂತಿಯ ವಿವರಣೆಯುಂಟು; ನಾಲ್ಕನೇಪಾದವಲ್ಲಿ ಯೋಗದ ಫಲವಾದ ಮೋಕ್ಷದ ವಿವೇಚನೆಯುಂಟು.

ಈ ರೀತಿಯಿಂದ ಯೋಗಶಾಸ್ತ್ರವು ಸಹಾ ಜ್ಞಾನಸಾಧನ, ನಿಧಿಧ್ಯಾಸನ ಸಂಪಾದನದ್ವಾರಾ ಮೋಕ್ಷದ ಹೇತುವಾಗಿದೆ. ಮತ್ತು-

ಶಾರೀರದ ಸೂತ್ರದಲ್ಲಿ ಸಾಂಖ್ಯ, ಮತ್ತು ಯೋಗಖಂಡನವಿದೆ. ಇದು ಉಪನಿಷದ್ವಿರುದ್ಧವಾದ ತತ್ ವ್ಯಾಖ್ಯಾನದ ಖಂಡನವಾಗಿದೆ. ಸೂತ್ರದಖಂಡನವಲ್ಲ.

## ॥೪೯೩॥ ಪಾಂಚರಾತ್ರ, ಮತ್ತು ಪಾಶುಪತ ತಂತ್ರ ಮೊದಲಾದವುಗಳ ಫಲ.

ನ್ಯಾಯ, ವೈಶೇಷಿಕದ ಖಂಡನವು ಸಹಾ ವಿರುದ್ಧ ವ್ಯಾಖ್ಯಾನಗಳದಾಗಿದೆ. ನಾರದನು ಪಾಂಚರಾತ್ರನಾಮ ತಂತ್ರವನ್ನು ರಚಿಸಿರುವನು. ಅದರಲ್ಲಿವಾಸು



...ವನಲ್ಲಿ ಅಂತಃಕರಣದ ಸ್ಥಾಪನೆಯನ್ನು ಹೇಳಿರುವನು, ಇದರ ಫಲವಾದ ...ಅಂತಃಕರಣದ ಸ್ಥಿರತೆಯಿಂದ ಜ್ಞಾನದ್ವಾರಾ ಮೋಕ್ಷವೇ ಆಗಿರುವದು. ...ವೈಷ್ಣವ ಗ್ರಂಥಗಳು ಪಂಚರಾತ್ರದ ಅಂತರ್ಭೂತವಾಗಿವೆ. ಈಪಂಚ...ತ್ರವು ಧರ್ಮಶಾಸ್ತ್ರದ ಅಂತರ್ಭೂತವಾಗಿದೆ.

ಇದರಂತೆ ಪಾಶುಪತ ತಂತ್ರದಲ್ಲಿ ಪಶುಪತಿಯು ಆರಾಧನವನ್ನು ...ಳಿದೆ. ಇದರ ಕರ್ತನು ಪಶುಪತಿಯು. ಇದರ ಫಲವು ಸಹ ಅಂತಃ...ಣದ ನಿಶ್ಚಲತ್ವದಿಂದ ಮೋಕ್ಷಸಾಧನ ಜ್ಞಾನವು ಆಗಿದೆ.

## ॥೪೯೪॥ ಶೈವಗ್ರಂಥಾದಿಗಳ ಫಲ ಮತ್ತು ವಾಮಮಾರ್ಗ.

ಶೈವ ಗ್ರಂಥಗಳೆಲ್ಲವೂ ಪಾಶುಪತ ತಂತ್ರದ ಅಂತರ್ಭಾವವಾಗಿವೆ. ...ದರಂತೆ ಗಣೇಶ, ಸೂರ್ಯ, ದೇವೀ ಮೊದಲಾದ ದೇವತೆಗಳ ಉಪಾಸ...ನಾಬೋಧಕಗ್ರಂಥಗಳ ಫಲವು ಚಿತ್ತನಿಶ್ಚಲದ್ವಾರಾಜ್ಞಾನವಾಗಿದೆ. ಮತ್ತು ...ರ್ವವೂ ಧರ್ಮಶಾಸ್ತ್ರಾಂತರ್ಗತವಾಗಿವೆ. ಪರಂತು ದೇವಿಯ ಉಪಾಸನಾ...ಬೋಧಕ ಗ್ರಂಥಗಳಲ್ಲಿ ಎರಡು ಸಾಂಪ್ರದಾಯಗಳುಂಟು. ಇವುಗಳಲ್ಲಿ ...ಂದು ದಕ್ಷಿಣ ಸಂಪ್ರದಾಯ, ಮತ್ತೊಂದು ಉತ್ತರ ಸಂಪ್ರದಾಯವಾ...ದೆ. ಉತ್ತರ ಸಂಪ್ರದಾಯಕ್ಕೆ ವಾಮ ಮಾರ್ಗವೆನ್ನುತ್ತಾರೆ. ಇವುಗಳಲ್ಲಿ [೧] ದಕ್ಷಿಣ ಸಂಪ್ರದಾಯದ ರೀತಿಯಿಂದ ಯಾವ ಗ್ರಂಥಗಳಲ್ಲಿ ದೇವಿಯ ಉಪಾಸನೆಯು ಇರುವುದೋ, ಅವೆಲ್ಲವೂ ಧರ್ಮಶಾಸ್ತ್ರಾಂತರ್ಗವಾಗಿವೆ. [೨] ವಾಮಮಾರ್ಗವು ಯಾವಗ್ರಂಥಗಳಲ್ಲಿರುವುದೋ, ಅವು ಧರ್ಮಶಾಸ್ತ್ರಕ್ಕೆ ವಿರುದ್ಧವಾಗಿರುವದರಿಂದ ಅಪ್ರಮಾಣವು ಆಗಿದೆ.

ಯದ್ಯಪಿ ವಾಮಮಂತ್ರವು ಶಿವನಿಂದ ಪ್ರಕಟಿತವಾಗಿದ್ದರೂ ಸಕಲ ...ಶಾಸ್ತ್ರ ಮತ್ತು ವೇದಗಳಿಗೆ ವಿರುದ್ಧವಾಗಿದೆ. ಪ್ರಮಾಣವಲ್ಲ;

ವಿಷ್ಣುವು ಬುದ್ಧಾವತಾರದಿಂದ ನಾಸ್ತಿಕ ಗ್ರಂಥವನ್ನು ಮಾಡಿದನು; ...ವು ವೇದವಿರುದ್ಧವಾದದ್ದು, ಅದರಿಂದ ಪ್ರಮಾಣವಲ್ಲ. ಇದರಂತೆ ಶಿವ...ಕೃತ ವಾಮಮಂತ್ರವು ಸಹ ಅತ್ಯಂತ ವಿರುದ್ಧವು. ಮದಿರಾದಿಕ ಅತ್ಯಂತ ಅಶುದ್ಧ ಪದಾರ್ಥಗಳ ಗ್ರಹಣವನ್ನು ಅದರಲ್ಲಿ ಬರೆದಿದೆ. ಉತ್ತಮ ಪದಾರ್ಥ...ಳ ನಾಮವನ್ನು ಮಲಿನ ಪದಾರ್ಥಗಳಿಗೆ ಕೊಟ್ಟು ಲೋಕವಂಚನಾ ನಿಮಿತ್ತ ಹೇಳಿದ್ದಾನೆ, ಮದಿರೆಗೆ ತೀರ್ಥವೆಂದೂ ಮಾಂಸದ ನಾಮವು ಶುದ್ಧವೆಂ...ದೂ ಮದಿರಾಪಾತ್ರೆಗೆ ಪದ್ಮಾಯೆಂದೂ, ನೀರುಳ್ಳಿಗೆ ವ್ಯಾಸವೆಂದೂ, ಬೆಳ್ಳು...ಳ್ಳಿಗೆ ಶುಕದೇವ ಎಂತಲೂ ಮದಿರವನ್ನು ಸಿದ್ಧಮಾಡುವವನಿಗೆ ದೀಕ್ಷಿತನೆಂ

ದೂ ಇದರಂತೆ ವೇಶ್ಯಾಸೇವಿ[೧], ಚರ್ಮಕಾರಿ ಮೊದಲಾದವರಿಗೂ ಚಾಂಡಾಲಿಯಸೇವಿಗೂ[೨], ಪ್ರಯಾಗವಾಸಿ, ಕಾಶೀವಾಸಿ ಎಂತಲೂ ಹೇಳಿದ್ದಾನೆ. ಮತ್ತು ಭೈರವೀಚಕ್ರದಲ್ಲಿ ಸ್ಥಿತಚಾಂಡಾಲಾದಿಗಳಿಗೆ ಬ್ರಾಹ್ಮಣ ಎಂದು ನಾಮವನ್ನು ಕೊಟ್ಟಿದ್ದಾನೆ. ಮತ್ತು ಅತ್ಯಂತ ವ್ಯಭಿಚಾರಿಣಿಗೆ ಯೋಗಿನಿಯೆಂದೂ ವ್ಯಭಿಚಾರಿಗೆ ಯೋಗಿಯೆಂದೂ ಎನ್ನುತ್ತಾರೆ, ಹೀಗೆ ಅನೇಕ ಪ್ರಕಾರದಿಂದ ಅವನ ನಿಷಿದ್ಧ ವ್ಯವಹಾರವು ಇದೆ. ಪೂಜಾ ಸಮಯದಲ್ಲಿ ಅನೇಕ ದೋಷಯುಕ್ತ ಸ್ತ್ರೀಯರಿಗೆ ಉತ್ತಮಶಕ್ತಿ ಎಂದು ಹೇಳಿದ್ದಾನೆ. ಜಾತಿಯಿಂದ ಚಾಂಡಾಲಿಯೂ ಅತ್ಯಂತ ವ್ಯಭಿಚಾರಿಣಿಯೂ,ರಜಸ್ವಲೆಯೂ ಆಗಿದ್ದ ಸ್ತ್ರೀಗೆ ದೇವೀಬುದ್ಧಿಯಿಂದ ಪೂಜೆಯನ್ನ ಮಾಡಿದ್ದಾನೆ. ಮತ್ತು ಉಚ್ಛಿಷ್ಟ ಮದಿರೆಯನ್ನು ಪಾನಮಾಡಿದ್ದಾನೆ. ಮತ್ತು ಅಧಿಕ ಮದ್ಯಪ್ರಾಶನೆಯಿಂದ ವಮನವನ್ನು ಮಾಡಿಕೊಳ್ಳಲು ಅದನ್ನು ಪೃಥ್ವಿಯಮೇಲೆ ಬೀಳಗೊಡದೆ ಆಚಾರ್ಯಸಹಿತ ಸರ್ವತ್ರ ಸಾವಧಾನತೆಯಿಂದ ಭಕ್ಷಣಮಾಡುವನು. ವಮನಕ್ಕೆ ಭೈರವಿಯೆಂದು ಹೇಳಿದ್ದಾನೆ,ಮತ್ತು ಸ್ತ್ರೀಯ ಜಿಹ್ವೆಯನ್ನಿಟ್ಟು ಮಂತ್ರ ಜಪಮಾಡಿದ್ದಾನೆ, ಮದಿರಾ,ಮಾಂಸ,ಮತ್ಸ್ಯ, ಮುದ್ರಾ, ಮಂತ್ರ ಈ ಪಂಚ"ಮ"ಕಾರಗಳನ್ನುಭೋಗ ಮೋಕ್ಷನಿಮಿತ್ತ ಸೇವನೆ ಮಾಡುವನು. ಪ್ರಥಮ, ದ್ವಿತೀಯ,ತೃತೀಯ "ಮ"ಕಾರದ ಪದಾರ್ಥಗಳಿಗೆ ಅಪ್ರಸಿದ್ಧ ನಾಮದಿಂದ ವ್ಯವಹರಿಸುವನು. ಇವೇ ಮೊದಲಾದ ವಾಮಮಂತ್ರದ ಸಕಲ ವ್ಯವಹಾರವು. ಇಹಲೋಕ ಮತ್ತು ಪರಲೋಕಗಳಿಂದ ಭ್ರಷ್ಟನನ್ನಾಗಿ ಮಾಡುವದು. ಈಕಾರಣದಿಂದ ಕರ್ಣಚ್ಛೇದಿ ಯೋಗಿ, ಮತ್ತು ಅವಧೂತ ಗೋಸಾವಿ, ಅನೇಕ ಸನ್ಯಾಸಿ, ಮತ್ತು ಬ್ರಾಹ್ಮಣಾದಿಗಳು ವಾಮಮಾರ್ಗವನ್ನು ಸೇವನೆಮಾಡುವರು. ಆದರೂ ಲೋಕನಿಂದಿತ, ವೇದನಿಂದಿತವೆಂದು ತಿಳಿದು ಗುಪ್ತವಾಗಿ ಇಡುವರು.

ಅಧಿಕವಾಗಿ ಇನ್ನೇನು ಹೇಳಲಿ; ವಾಮ ತಂತ್ರದ ರೀತಿಯನ್ನು ಕೇಳಿ ಮ್ಲೇಚ್ಛರಿಗೆ ಸಹಾ ರೋಮಾಂಚನಗಳುಂಟಾಗುವುವು; ಇಂಥ ನಿಂದಿತವಾದ ವಾಮತಂತ್ರವಿದೆ. ಸರ್ವಾಂಗದಿಂದ ಅಭಕ್ಷಣವಾಗಿರುವಂಥ ಮತ್ತು ಸರ್ವನಿಂದಿತವಾದ ಮಾರ್ಗಗಳು ವಾಮತಂತ್ರದಲ್ಲಿ ಹೇಳಲ್ಪಟ್ಟವೆ. ಅತಿ ನೀಚ ವ್ಯವಹಾರವನ್ನು ಬರೆಯುವದು ಯೋಗ್ಯವಲ್ಲ. ಈ ಕಾರಣದಿಂದ ವಿಶೇಷ ಪ್ರಕಾರವನ್ನು ಬರೆದಿರುವದಿಲ್ಲ. ಸರ್ವಥಾ ವಾಮತಂತ್ರವು ತ್ಯಜಿಸುವದಕ್ಕೆ ಯೋಗ್ಯವಾಗಿದೆ.



ಪ್ಪಣಿ—೧. ವೇಶ್ಯೆಯರನ್ನು ಸೇವಿಸುತ್ತಿರುವ, ೨. ಚಾಂಡಾಲ ಸ್ತ್ರೀಯನ್ನು ಸೇವಿಸುತ್ತಿರುವ.

## ॥ ೪೯೫ ॥ ನಾಸ್ತಿಕ ಮತ.

ನಾಸ್ತಿಕ ಮತವು ಸಹ ತ್ಯಾಗಮಾಡಲಿಕ್ಕೆ ಯೋಗ್ಯವು. ನಾಸ್ತಿಕರಲ್ಲಿ ರುಭೇದಗಳುಂಟು. ಅವು ಯಾವುವೆಂದರೆ(೧)ಮಾಧ್ಯಮಿಕ (೨)ಯೋಗಾಚಾರ (೩) ಸೌತ್ರಾಂತಿಕ (೪) ವೈಭಾಷಿಕ (೫) ಚಾರ್ವಾಕ(೬) ದಿಗಂಬರ. ವರು ವೇದಗಳನ್ನು ಪ್ರಮಾಣವನ್ನಾಗಿ ತಿಳಿಯುವುದಿಲ್ಲ. ಇವರಲ್ಲಿ ಪರಸ್ಪರ ವಿಲಕ್ಷಣ ಸಿದ್ಧಾಂತಗಳು ಇವೆ.

(೧) ಮಾಧ್ಯಮಿಕರು ಶೂನ್ಯವಾದಿಗಳಾಗಿದ್ದಾರೆ. (೨) ಯೋಗಾಚಾರ ಮತದಲ್ಲಿ ಸರ್ವಪದಾರ್ಥಗಳು ವಿಜ್ಞಾನದಿಂದ ಭಿನ್ನವಿಲ್ಲ. ವಿಜ್ಞಾನವೇ ತತ್ವವು. ಈವಿಜ್ಞಾನವು ಕ್ಷಣಿಕವು. (೩.] ಸೌತ್ರಾಂತಿಕ ಮತದಲ್ಲಿ ವಿಜ್ಞಾನದ ಆಕಾರವು ಬಾಹ್ಯ ಪದಾರ್ಥಗಳ ಹೊರತು ಆಗುವುದಿಲ್ಲ. ಆದರಿಂದ ವಿಜ್ಞಾನದಿಂದಲೇ, ಬಾಹ್ಯಪದಾರ್ಥಗಳ ಅನುಮಾನವಾಗುವುದು. ಈ ರೀತಿಯಿಂದ ಸೌತ್ರಾಂತಿಕ ಮತದಲ್ಲಿ ಅನುಮಾನ ಪ್ರಮಾಣದ ವಿಷಯವು ಬಾಹ್ಯಪದಾರ್ಥಗಳಾಗಿವೆ, ಪ್ರತ್ಯಕ್ಷವಿಲ್ಲ ಮತ್ತು ಸ್ಥಿರವಿಲ್ಲ. ಸಾರಾಂಶ-ಸರ್ವ ಪದಾರ್ಥಗಳು ಕ್ಷಣಿಕವಾಗಿವೆ. ಮತ್ತು(೪) ವೈಭಾಷಿಕ ಮತದಲ್ಲಿ ಬಾಹ್ಯ ಪದಾರ್ಥಗಳಂತೂ ಕ್ಷಣಿಕವಾಗಿವೆ, ಪರಂತು ಪ್ರತ್ಯಕ್ಷ ಪ್ರಮಾಣದ ವಿಷಯವಿದೆ. ಇವೆರಡರಲ್ಲಿ ಇಷ್ಟೇಭೇದವು. ಈ ನಾಲ್ಕು ಮತಗಳು ಸುಗತನವುಗಳಾಗಿವೆ. (೫.] ಚಾರ್ವಾಕ ಮತದಲ್ಲಿ ಪದಾರ್ಥಗಳು ಕ್ಷಣಿಕವಲ್ಲ. ಪರಂತು ಇವರ ಮತದಲ್ಲಿ ದೇಹವು ಆತ್ಮವಾಗಿದೆ, [೬]ದಿಗಂಬರ ಮತದಲ್ಲಿ ದೇಹದಿಂದ ಆತ್ಮಾಭಿನ್ನವು. ಪರಂತು ಎಷ್ಟು ದೇಹದ ಪರಿಮಾಣ ವಿರುವುದೋ, ಅಷ್ಟೇ ಆತ್ಮಾದಪರಿಮಾಣವಿದೆ.

ಈ ಪ್ರಕಾರವಾಗಿ ಪರಸ್ಪರ ಅವರ ಮತದಲ್ಲಿಯೇ ಭೇದವಿದೆ. ಇದಲ್ಲದೆ ಅವರವರಲ್ಲಿಯೇ ಮತದ ವಿಲಕ್ಷಣತ್ವವು ಬಹಳವಾಗಿದೆ. ಸಾರಾಂಶ ಸರ್ವವೂ ವೇದ ವಿರೋಧಿಯಾಗಿರುವುದರಿಂದ ನಾಸ್ತಿಕವಾಗಿದೆ. ಈ ಕಾರಣದಿಂದ ಆ ಮತದ ಉಪಾದಾನವನ್ನೂ ಮತ್ತು ಖಂಡನವನ್ನೂ ವಿಶೇಷವಾಗಿ ಬರೆದಿರುವುದಿಲ್ಲ.

## ॥೪೯೬॥ ಸಾಹಿತ್ಯಾದಿಗಳ ತಾತ್ಪರ್ಯಪೂರ್ವಕ ತರ್ಕದೃಷ್ಟಿಯ ಸಾರಗ್ರಾಹೀ ನಿಶ್ಚಯ.

ವಾಮಮಾರ್ಗ, ಮತ್ತು ನಾಸ್ತಿಕ ಮತಗಳ ಗ್ರಂಥಗಳು ಯದ್ಯಪಿ ಸಂಸ್ಕೃತಭಾಷಾರೂಪವಾಗಿ ಇದ್ದರೂ, ವೇದಬಾಹ್ಯಗಳಾಗಿವೆ. ಈ ಕಾರಣದಿಂದ ವೇದಾನುಸಾರೀ ವಿದ್ಯೆಯ ಪ್ರಸ್ಥಾನಗಳು ಹದಿನೆಂಟೇ ಇರುವುವು. ಮತ್ತು ಮಮ್ಮಟ ಮೊದಲಾದವರು ಸಾಹಿತ್ಯಗ್ರಂಥಗಳನ್ನು ಮಾಡಿರುವರು. ಅವು ಸಹಾ ಕಾಮಶಾಸ್ತ್ರದಲ್ಲಿ ಅಂತರ್ಭಾವವಾಗಿವೆ. ಇದರಂತೆ ಸಕಲ ಕಾವ್ಯಗಳು ಸಹಾ ಕೆಲವು ಕಾಮಶಾಸ್ತ್ರದಲ್ಲಿ ಕೆಲವು ಧರ್ಮಶಾಸ್ತ್ರದಲ್ಲಿ ಅಂತರ್ಭಾವವಾಗಿ ಇವೆ.

ಈ ರೀತಿಯಿಂದ ಅಷ್ಟಾದಶ ವಿದ್ಯೆಯ ಪ್ರಸ್ಥಾನಗಳೆಲ್ಲವೂ ಬ್ರಹ್ಮಜ್ಞಾನದ್ವಾರಾ ಮೋಕ್ಷದ ಸಾಧನಗಳಾಗಿವೆ. ಕೆಲವು ಸಾಕ್ಷಾತ್ ಜ್ಞಾನದಹೇತುವಾಗಿವೆ. ಕೆಲವು ಪರಂಪರೆಯಿಂದ ಜ್ಞಾನದ ಹೇತುವಾಗಿವೆ ಎಂದು ತರ್ಕದೃಷ್ಟಿಯು ಸಕಲ ಶಾಸ್ತ್ರಗಳ ಅಭಿಪ್ರಾಯವನ್ನು ನಿಶ್ಚಯಮಾಡಿದನು.

ಯದ್ಯಪಿ ಉತ್ತರ ಮೀಮಾಂಸೆಯು ಹೊರತು ಸರ್ವ ಶಾಸ್ತ್ರಗಳು ಜಿಜ್ಞಾಸುಗಳಿಗೆ ಹೇಯವಾಗಿವೆ, ಎಂಬದನ್ನು ಶಾರೀರಕದಲ್ಲಿ ಸೂತ್ರಕಾರ, ಭಾಷ್ಯಕಾರರು ಪ್ರತಿಪಾದನ ಮಾಡಿರುವರು. ಈ ಕಾರಣದಿಂದ ಅನ್ಯಶಾಸ್ತ್ರಗಳು ಸಹಾ ಮೋಕ್ಷದ ಉಪಯೋಗಿಗಳಾಗಿವೆ, ಎಂದು ಹೇಳುವುದು ಸಂಭವಿಸುವುದಿಲ್ಲ. ಆದರೂ ಸಾರಗ್ರಾಹೀ ದೃಷ್ಟಿಯಿಂದ ತರ್ಕದೃಷ್ಟಿಯು ಈ ಸಾರವನ್ನು ನಿಶ್ಚಯಮಾಡಿದನು.

ಟಿಪ್ಪಣಿ—೧.ಅಲಂಕಾರ ಗ್ರಂಥ ೨. ನಾಯಕ ಭೇದ ಮತ್ತು ರಸಭೇದ ಮೊದಲಾದ ಅರ್ಥಪ್ರತಿಪಾದಕ ಕಾವ್ಯಗ್ರಂಥಗಳು ೩. ಇಲ್ಲಿ ಒಬ್ಬ ಸಾರಗ್ರಾಹೀ ದೃಷ್ಟಿಯುಳ್ಳಪಂಡಿತನ ವಚನವು ಇದೆ.

ಶ್ಲೋಕ॥ ಭಕ್ತಿಜ್ಞಾನೇಯತ್ರವಿಷ್ಣೋಃ ಯತ್ರವೇದಾಃಪರಾಪ್ರಮಾ।
ಮತಾನಿತಾನಿಸರ್ವಾಣಿ ಜೀವೋದ್ಧಾರಸ್ಯ ಹೇತವಃ ॥೧॥

ಇದರ ಅರ್ಥ-ಯಾವ ಮತದಲ್ಲಿ ವಿಷ್ಣುವಿನ ವ್ಯಾಪಕ ಪರಮಾತ್ಮನ ಭಕ್ತಿ, ಇಲ್ಲವೆ ಜ್ಞಾನವಿರುವುದೋ ಮತ್ತು ಯಾವ ಮತದಲ್ಲಿ ನಾಲ್ಕುವೇದಗಳು ಪರಮ ಪ್ರಮಾಣವಾಗಿರುವುವೋ ಆ ಸರ್ವಮತಗಳು ಸಾಕ್ಷಾತ್ ಇಲ್ಲವೆ ಪರಂಪರೆಯಿಂದ ಜೀವನಗಳ ಉದ್ಧಾರದ ಸಾಧನಗಳಾಗಿವೆ. ॥೧॥

೪೯೭॥ತರ್ಕದೃಷ್ಟಿಗೂ ಒಬ್ಬ ವಿದ್ವಾಂಸನಿಗೂ ಸಂಘಟನೆಯು.



॥ ದೋಹಾ ॥

ಪುನಿ ಪ್ರಸಿದ್ಧ ವಿದ್ವಾನ ಪುನಿ । ಮಿಲ್ಯೋ ಆಪ ತಿಹಿ ಜಾಯ ॥
ನಿಶ್ಚಯ ಅಪನೋ ತಾಹಿತಿಹಿ । ದೀನೋ ಸಕಲ ಸುನಾಯ ॥

ಟೀಕಾ—ಗುರುಮುಖದಿಂದ ಶ್ರವಣ ಮಾಡಿದ ಅರ್ಥದ ವಿಷಯದಲ್ಲಿ ಬುದ್ಧಿಯ ಸ್ಥಿರತ್ವದ ನಿಮಿತ್ತ,ಸಕಲಶಾಸ್ತ್ರಗಳ ಅಭಿಪ್ರಾಯವನ್ನು ವಿಚಾರಿಸಿದರೂ ಸಹ,ಪುನಃ ಸಂದೇಹ ಉತ್ಪನ್ನವಾಯಿತು.ಅದೇನೆಂದರೆ, ಯಾವ ಶಾಸ್ತ್ರಗಳ ಅಭಿಪ್ರಾಯವನ್ನು ನಾನು ನಿಶ್ಚಯ ಮಾಡಿದೆನೋ ಅದೇರೀತಿಯಾಗಿ ಇರುವುದೋ, ಅಥವಾ ಅನ್ಯ ಅಭಿಪ್ರಾಯವಿರುವುದೋ ? ಕಾರಣವೇನೆಂದರೆ, ತರ್ಕದೃಷ್ಟಿಯು ಕನಿಷ್ಠ ಅಧಿಕಾರಿಯಾಗಿರುವುದರಿಂದ ಮೇಲಿಂದ ಮೇಲೆ ಕುತರ್ಕದಿಂದ ಸಂದೇಹ ಉಂಟಾಗಲು, ಅವನು ಆ ಸಂದೇಹ ನಿವೃತ್ತಿಯು ಸಲುವಾಗಿ ಅನ್ಯ ಪಂಡಿತನ ನಿಶ್ಚಯದಿಂದ ತನ್ನ ನಿಶ್ಚಯದ ಏಕತ್ವವನ್ನು ಮಾಡುವುದರ ಸಲುವಾಗಿ ಹೋದನು.

॥ ದೋಹಾ ॥

ತರ್ಕದೃಷ್ಟಿಕೆ ಬೈನ ಸುನಿ । ಸೊ ಬೋಲ್ಯೋ ಬುಧಸಂತ ॥
ಜೊ ಮೋಸೂ ತೈ ಯಹ ಕಹ್ಯೋ। ಸೋಇ ಮುಖ್ಯಸಿದ್ಧಾಂತ ॥
ಸಂಸಯ ಸಕಲ ನಸಾಯ ಯೂ।ಲಹ್ಯೋ ಬ್ರಹ್ಮ ಅಪರೋಛ।
ಜಗ ಜಾನೋ ಜಿನ ಸಬ ಅಸತ।ತೈಸೈ ಬಂಧ ರು ಮೋಛ॥೨೪॥

ಅರ್ಥ—ಆ ಪಂಡಿತರು ತರ್ಕದೃಷ್ಟಿಯ ಸರ್ವ ವಚನಗಳನ್ನು ಶ್ರವಣ ಮಾಡಿ, ನೀನು ಈಗ ಹೇಳಿದ ಸಿದ್ಧಾಂತವೇ ಮುಖ್ಯ ಸಿದ್ಧಾಂತವು ಎಂದು ಹೇಳಿದರು. ಈ ರೀತಿಯಿಂದ ಸಕಲ ಸಂಶಯಗಳ ನಿರಸನವಾಗಿ ಅಪರೋಕ್ಷ ಜ್ಞಾನದಿಂದ ಬ್ರಹ್ಮವನ್ನು ತಿಳಿದು ಸರ್ವಜಗತ್ತು ಮಿಥ್ಯವೆಂದು ನಿಶ್ಚಯಿಸಿದನು. ಇದರಂತೆಯೇ ಬಂಧಮೋಕ್ಷಗಳನ್ನಾದರೂ ತಿಳಿ. ॥೨೪॥

॥ ೪೯೮ ॥ ಜ್ಞಾನಿಗೆ ಇಚ್ಛೆಯ ಸಂಭವವೂ ಮತ್ತು ಇಚ್ಛೆಯ ಅಭಾವದ ಅಭಿಪ್ರಾಯವೂ,

॥ ದೋಹಾ ॥

ಸೇಷ ರಹ್ಯೋ ಪ್ರಾರಬ್ಧಯೂ । ಇಚ್ಛಾಉಪಜೀ ದೇಹ ॥
ಚಲಿ ತತ್ಕಾಲಹಿ ದೇಖಿಯೆ । ಜನನಿ ಜನಕ ಜುತ ಗೇಹ ॥೨೫॥

ಟೀಕಾ ॥ ಜ್ಞಾನಿಯು ಸಕಲವ್ಯವಹಾರವು ಅಜ್ಞಾನಿಯಂತೆ ಪ್ರಾರಬ್ಧದಿಂದ, ಆಗುವುದು ಎಂಬುದನ್ನು ಈ ಪೂರ್ವದಲ್ಲಿ ಹೇಳಿದ್ದೇವೆ. ಅದರಿಂದ ಇಚ್ಛೆಯು ಸಂಭವಿಸುತ್ತದೆ. ಮತ್ತು ಕೆಲವು ಶಾಸ್ತ್ರಗಳಲ್ಲಿ "ಜ್ಞಾನಿಗೆ ಇಚ್ಛೆಯುಂಟಾಗುವುದಿಲ್ಲ;" ಎಂದು ಉಲ್ಲೇಖವಿದೆ. ಇದರ ಅಭಿಪ್ರಾಯವು ಹೀಗೆ ಅಲ್ಲ; ಹೇಗೆಂದರೆ ಜ್ಞಾನಿಯ ಅಂತಃಕರಣವು ಪದಾರ್ಥದ ಇಚ್ಛಾರೂಪ ಪರಿಣಾಮಕ್ಕೆ ಪ್ರಾಪ್ತವಾಗುವುದಿಲ್ಲ. ಕಾರಣವೇನೆಂದರೆ- ಇಚ್ಛಾದಿಗಳು ಅಂತಃಕರಣದ ಸಹಜ ಧರ್ಮವಾಗಿವೆ.

ಯದ್ಯಪಿ ಅಂತಃಕರಣವು ಭೂತಗಳ ಸತ್ವಗುಣದ ಕಾರ್ಯವೆಂದು ಹೇಳಿದ್ದಾರೆ; ತಥಾಪಿ ರಜೋಗುಣ, ತಮೋಗುಣಸಹಿತ ಸತ್ವಗುಣದ ಕಾರ್ಯವಾಗಿದೆ; ಕೇವಲಸತ್ವಗುಣದ್ದಲ್ಲ. ಕೇವಲ ಸತ್ವಗುಣದ ಕಾರ್ಯವಾಗಿದ್ದರೆ ಅಂತಃಕರಣವು ಚಂಚಲಸ್ವಭಾವವುಳ್ಳದ್ದು ಆಗಲಿಕ್ಕೆ ಬಾರದು; ಇದರಂತೆ ಕಾಮ ಕ್ರೋಧಾದಿ ರಾಜಸೀ ವೃತ್ತಿಯೂ, ಮೂಢತ್ವಾದಿಕ ತಾಮಸೀ ವೃತ್ತಿಯೂ ಯಾವ ಅಂತಃಕರಣದಲ್ಲಿಯೂ ಆಗಬಾರದು. ಈಕಾರಣದಿಂದ ಅಂತಃಕರಣವು ಕೇವಲ ಸತ್ವಗುಣದ ಕಾರ್ಯವಲ್ಲ; ಆದರೆ ಅಪ್ರಧಾನ ರಜೋಗುಣ ತಮೋಗುಣ ಸಹಿತ ಪ್ರಧಾನಸತ್ವಗುಣವುಳ್ಳ ಭೂತಗಳಿಂದ ಅಂತಃಕರಣವು ಉತ್ಪನ್ನವಾಗಿದೆ. ಈ ಕಾರಣದಿಂದ ಅಂತಃಕರಣದಲ್ಲಿ ಮೂರೂ ಗುಣಗಳು ಇರುವವು; ಈ ಮೂರು ಗುಣಗಳಾದರೂ ಸಹ ಸರ್ವಪುರುಷರ ಅಂತಃಕರಣದಲ್ಲಿ ಸಮನಾಗಿ ಇರುವುದಿಲ್ಲ. ಹೆಚ್ಚುಕಡಿಮೆಯಾಗಿ ಇರುತ್ತವೆ. ಈಕಾರಣದಿಂದ ಗುಣಗಳ ನ್ಯೂನಾಧಿಕ್ಯದಿಂದ ಸರ್ವರಸ್ವಭಾವವು ವಿಲಕ್ಷಣವಾಗಿರುತ್ತದೆ. ಈ ಪ್ರಕಾರವಾಗಿ ಅಂತಃಕರಣವು ಮೂರು ಗುಣಗಳ ಕಾರ್ಯವಾಗಿದೆ.

ಯಾವಪರಿಯಂತ ಅಂತಃಕರಣವು ಇರುವುದೋ ಆ ಪರಿಯಂತರ ರಜೋಗುಣದ ಪರಿಣಾಮರೂಪ ಇಚ್ಛೆಯ ಅಭಾವವು ಸಂಭವಿಸುವುದಿಲ್ಲ. ಈ ಕಾರಣದಿಂದ ಜ್ಞಾನಿಗೆ ಇಚ್ಛೆಯುಂಟಾಗುವುದಿಲ್ಲ; ಈ ವಾಕ್ಯದ ಅಭಿಪ್ರಾಯವೇನೆಂದರೆ ಜ್ಞಾನಿ, ಮತ್ತು ಅಜ್ಞಾನಿ, ಈ ಉಭಯತ್ರರ ಇಚ್ಛೆಯು ಸಮಾನವುಂಟಾಗುತ್ತದೆ. ಆದರೆ (೧) ಅಜ್ಞಾನಿಯು, ಇಚ್ಛಾದಿಗಳು ಆತ್ಮದ ಧರ್ಮವೆಂದು ತಿಳಿಯುತ್ತಾನೆ. ಮತ್ತು (೨) ಜ್ಞಾನಿಗೆ ಯಾವಕಾಲದಲ್ಲಿ ಇಚ್ಛಾದಿಗಳು ಉಂಟಾಗುವವೋ ಆ ಕಾಲದಲ್ಲಿ ಸಹಾ ಜ್ಞಾನಿಯು ಇಚ್ಛಾದಿ ಧರ್ಮಗಳು ಆತ್ಮದ ಧರ್ಮಗಳೆಂದು ತಿಳಿಯುವುದಿಲ್ಲ. ಆದರೆ ಕಾಮ, ಸಂಕಲ್ಪ, ಸಂದೇಹ, ರಾಗ, ದ್ವೇಷ, ಶ್ರದ್ಧಾ, ಭಯ, ಲಜ್ಜಾ, ಇಚ್ಛಾದಿಗಳು



...ಕರಣದ ಪರಿಣಾಮಗಳಾಗಿವೆ; ಆದರಿಂದ ಅಂತಃಕರಣದ ಧರ್ಮವೆಂದು ...ಯುತ್ತಾನೆ.

ಈಪ್ರಕಾರದಿಂದ ಇಚ್ಛಾದಿಗಳು ಉಂಟಾಗುತ್ತವೆ. ಆದರೂ ಆತ್ಮದ ...ವಾದ ಇಚ್ಛೆಗಳು ಜ್ಞಾನಿಗೆ ಪ್ರತೀತವಾಗುವುದಿಲ್ಲ, ಈ ಕಾರಣದಿಂದ ...ನಿಯಲ್ಲಿ ಇಚ್ಛೆಯ ಅಭಾವವನ್ನು ಹೇಳಿರುತ್ತದೆ. ಇದರಂತೆ ಕಾಯಾ ...ಚಾ ಮನಸ್ಸಿನಿಂದ ಜ್ಞಾನಿಯು ಯಾವ ವ್ಯವಹಾರವನ್ನು ಮಾಡುವನೋ ...ವು ಜ್ಞಾನಿಗೆ ಆತ್ಮದಲ್ಲಿ ಪ್ರತೀತವಾಗುವುದಿಲ್ಲ; ಆದರೆ ಸರ್ವಕ್ರಿಯೆ ...ಮನೋವಾಕ್ಕಾಯಗಳು [೧] ಇವೆ. ಮತ್ತು "ಆತ್ಮ ಅಸಂಗವಿದೆ" ಎಂ ...ಜ್ಞಾನಿಗಳ ನಿಶ್ಚಯವು. ಈಕಾರಣದಿಂದ ಜ್ಞಾನಿಯು ಸರ್ವ ವ್ಯವಹಾರ ...ರ್ತನಾಗಿದ್ದರೂ ಅಕರ್ತೃವಾಗಿರುವನು. ಈ ಕಾರಣದಿಂದಲೇ ಶ್ರುತಿಯಲ್ಲಿ ಜ್ಞಾನೋತ್ಪತ್ತಿಯಾದ ಬಳಿಕ, ವರ್ತಮಾನ ಶರೀರದಲ್ಲಿ ಮಾಡಿದ ಶುಭಾ...ಭಕರ್ಮ, ಇವುಗಳ ಫಲವಾದ ಪುಣ್ಯಪಾಪಗಳ ಸಂಬಂಧವಾಗುವದಿಲ್ಲ. ...ದು ಹೇಳಿದೆ. ಸಾರಾಂಶ-ಪ್ರಾರಬ್ಧಬಲದಿಂದ ಅಜ್ಞಾನಿಯಂತೆ ಸರ್ವವ್ಯವ...ರಗಳು ಮತ್ತು ಅವುಗಳ ಇಚ್ಛೆಗಳು ಜ್ಞಾನಿಗೆ ಸಂಭವಿಸುತ್ತವೆ.

...ಣಿ—೧. ಅಂತಃಕರಣ ಸಹಿತ ಚಿದಾಭಾಸದ.

...॥ ಶುಭಸಂತತಿರಾಜನ ವೃತ್ತಾಂತವು ॥೪೯—೫೦॥

ಶುಭಸಂತತಿ ನಾಮಕ ರಾಜನನ್ನು ತ್ಯಾಗಮಾಡಿ, ಅವನ ಮೂರುಜನ ...ಕ್ಕಳು ಹೊರಟುಹೋದ ಸಂಗತಿಯನ್ನು ಈಪರಿಯಂತ ವಿವರಿಸಿದೆನು. ...ನ್ನುಮುಂದೆ ಶುಭಸಂತತಿಯ ಸಂಗತಿಯನ್ನು ವಿವರಿಸುವೆನು.

॥ ದೋಹಾ ॥

...ತ್ರ ಗಯೆ ಲಖಿ ಗೇಹತ್ಯೆ । ...ತು ಚಿತ ಉಪಜ್ಯೋ ಖೇದ ॥
...ನೋ ರಾಜ ನ ತೀನಿ ತಜ್ಯೋ। ನಹಿ ಯಥಾರ್ಥ ನಿರ್ವೇದ ॥

ಟೀಕಾ॥ ಮೂರುಜನ ಮಕ್ಕಳು ಗೃಹತ್ಯಾಗಮಾಡಿ ಹೋದಕಾಲದಲ್ಲಿ ...ಜನಲ್ಲಿ ತೀವ್ರವೈರಾಗ್ಯದ ಅಭಾವವಿದ್ದುದರಿಂದ ಪುತ್ರವಿಯೋಗದ ...ಖವಾಯಿತು, ಮಂದವೈರಾಗ್ಯವಾದುದರಿಂದ ವಿಷಯಭೋಗದ ಸು... ...ಕ್ಕೆ ಆಗುವುದಿಲ್ಲ; ಮತ್ತು ಇನ್ನು ತಾನೂ ಗೃಹತ್ಯಾಗಮಾಡಿ ಹೋಗಬೇಕೆಂ... ...ಪುತ್ರರು ಹೊರಟುಹೋದ್ದರಿಂದ ಶೂನ್ಯರಾಜ್ಯವನ್ನು ಬಿಡಲು ಸಮ... ...ನಾಗಲಿಲ್ಲ. ಈ ಕಾರಣದಿಂದ ದುಃಖವುಂಟಾಯಿತು. ಪ್ರಸಂಗವಶಾತ್

ಅವನಲ್ಲಿ ತೀವ್ರ ವೈರಾಗ್ಯವಿದ್ದಲ್ಲಿ ಶೂನ್ಯವಾದ ರಾಜ್ಯವನ್ನು ಸಹಾ ಬಿಡು ತ್ತಿದ್ದನು. ಆ ತೀವ್ರವೈರಾಗ್ಯ ಉಂಟಾಗಿರಲಿಲ್ಲ. ಮಂದವೈರಾಗ್ಯವುಂಟಾ ಯಿತು. ಅದರಿಂದ ತ್ಯಜಿಸಲು ಸಮರ್ಥನಾಗಲಿಲ್ಲ, ಮತ್ತು ಭೋಗದಲ್ಲಿ ಆಸ ಕ್ತಿಯಿಲ್ಲವಾದ್ದರಿಂದ ಉಭಯ ಪ್ರಕಾರದಿಂದಲೂ ಖೇದವುಂಟಾಯಿತು. ಮಂದವೈರಾಗ್ಯದ ಫಲವು ಉಪಾಸಕನ ಜಿಜ್ಞಾಸಾ ಎಂದು ಹೇಳಿದ್ದಾರೆ.

---

॥೫೦೦॥ ಶುಭಸಂತತಿಯು ಪಂಡಿತರಿಗೆ ಮಾಡಿದ ಪ್ರಶ್ನೆಯು.

" ಯಾವದೇವನು ಮಲಗದೆ, ಸರ್ವದಾ ಜಾಗ್ರತನಾಗಿರುವನು ? "

॥ ಚೌಪಾಈ ॥

ಸುಭಸಂತತಿ ಹಿತು ಸೂ ಬಡಭಾಗಾ ।
ಭಯೊ ಪ್ರಥಮ ತಿಹಿ ಮಂದವಿರಾಗಾ ॥
ಜಿಜ್ಞಾಸಾ ಉಪಜೀ ಯಹ ತಾಕೂ ।
ದೇವ ಧ್ಯೇಯ ಕೊ ಘ್ಯಾಯಿೂ ಜಾಕೂ ? ॥೨೭॥

ಟೀಕಾ॥ ಶುಭಸಂತತಿ ರಾಜನ ಭಾಗ್ಯವು ಮಹತ್ತರವಾಗಿ ಇದ್ದ ದ್ದರಿಂದ ಅವನಿಗೆ ಪ್ರಥಮದಲ್ಲಿ ಮಂದವೈರಾಗ್ಯವು ಉತ್ಪನ್ನವಾಯಿತು. ಇ ದರಿಂದ ಇನ್ನು ನಾನು ಯಾವ ಉತ್ತಮಧ್ಯೇಯವನ್ನು ಸ್ವೀಕರಿಸಲಿ ? ಎಂ ಬುದಾಗಿ ಜಿಜ್ಞಾಸೆಯು ಉತ್ಪನ್ನವಾಯಿತು.

॥ ಚೌಪಾಈ ॥

ಪಂಡಿತ ನಿರಸೊ ಕರನ ಬುಲಾಯೆ ।
ಯಥಾ ಯೋಗ್ಯ ಆಸನ ಬೈಠಾಯೊ ॥
ಪ್ರಸ್ನ ಕಿಯೊ ಯಹ ಸಬಕೆ ಆಗೈ ।
ಅಸ ಕೊ ದೇವನ ಸೋವೈ ಜಾಗೈ ? ॥೨೮॥

ಅರ್ಥ॥ ಆ ಕೂಡಲೆ ರಾಜ್ಯದೊಳಗಿನ ಶ್ರೇಷ್ಠರಾದ ಪಂಡಿತರನ್ನು ಸನ್ಮಾನಪೂರ್ವಕವಾಗಿಕರೆಯಿಸಿಕೊಂಡು ಉಚಿತಾಸನಗಳಲ್ಲಿ ಕುಳ್ಳಿರಿಸಿ, ಆ ಮೇಲೆ ಅವರನ್ನು ಕುರಿತು"ನಿದ್ರಾ,ಜಾಗೃತಿ ರಹಿತನಾದ ದೇವನುಯಾರು?" ಎಂಬದಾಗಿ ಪ್ರಶ್ನೆಮಾಡಿದನು.

---

॥ ಚೌ ಪಾ ಈ ॥

ಪುರುಷಾರಥ ಹಿತ ಜನ ಜಿಹಿ ಜಾತೆ ।



ಭಕ್ತಿಮಾನಸಕೆ ಮನನ್ಯೆ ರಾತೈ ॥
ಸುನಿ ಯಹ ಪೃಥಿವೀ ಪತಿಕೀ ಬಾನೀ ।
ಇಕ ತಿನಮ್ಯೆ ಬೋಲ್ಯೋ ಸುಜ್ಞಾನೀ ॥೨೯॥

ಅರ್ಥ ॥ ಪುರುಷಾರ್ಥ ಪ್ರಾಪ್ತಿಯ ಸಲುವಾಗಿ ಸರ್ವಜನರು ನಿತ್ಯದಲ್ಲಿ ಯಾವನನ್ನು ಆರಾಧಿಸುವರು; ಮತ್ತು ಭಕ್ತಿಯುತನ ಮನಸ್ಸನ್ನು ಸರ್ವದಾ ಯಾರು ರಕ್ಷಿಸುತ್ತಿರುವರು ? ಎಂದು ಪ್ರಶ್ನೆಮಾಡಿದರೆ ಪೃಥ್ವೀಪತಿಯ ಭಾಷಣವನ್ನು ಕೇಳಿ ಒಬ್ಬ ಪಂಡಿತನು ಉತ್ತರವನ್ನು ಹೇಳಿದನು. ಎಂತೆಂದರೆ

॥ ೫೦೧ ॥ ವಿಷ್ಣು ಉಪಾಸಕನ ಉತ್ತರ.

॥ ಚೌಪಾಈ ॥

ಸುನ ರಾಜಾ ತುಹಿ ಕಹೂ ಸು ದೇವಾ ।
ಶಿವ ವಿರಂಚಿ ಲಾಗೆ ಜಿಹಿ ಸೇವಾ ॥
ಸಂಖ ಚಕ್ರಧಾರೀ ಹಿತಕಾರೀ ।
ಪದ್ಮಗದಾ ಧರ ಪರ ಉಪಕಾರೀ ॥ ೩೦ ॥

ಅರ್ಥ॥ ಮಹಾರಾಜನೇ! ಚಿತ್ತವಿಟ್ಟು ಲಾಲಿಸು; ಶಿವ, ವಿರಂಚಿ(ಬ್ರಹ್ಮ) ಗಳು ಯಾವನಸೇವೆಯನ್ನು ಪ್ರತಿನಿತ್ಯದಲ್ಲಿ ಮಾಡುತ್ತಿರುವರೋ, ಯಾವ ನು ಭಕ್ತಹಿತ ತತ್ಪರನೋ, ಯಾವನು ಶಂಖ, ಚಕ್ರ, ಗದಾ, ಪದ್ಮಧಾರಿಯಾ ಗಿರುವನೋ.

॥ ಚೌಪಾಈ ॥

ಮಂಗಲ ಮೂರ್ತೀ ವಿಸ್ನು ಕೃಪಾಲೂ ॥
ನಿಜ ಸೇವಕ ಲಖಿ ಕರತ ನಿಹಾಲೂ ॥
ಸಕ್ತಿ ಗನೇಸ ಸೂರ ಸಿವ ಜೆ ಹೈ ।
ಸಬ ಅಜ್ಞಾ ತಾಕೀ ಸ್ಯೆ ತೆಹೈ ॥೩೧॥

ಅರ್ಥ॥ ಇಂಥ ಮಂಗಲಮೂರ್ತಿಯಾದ ಶ್ರೀವಿಷ್ಣುವು ನಿಷ್ಠೆಯುಳ್ಳವ ನನ್ನು ಪೂರ್ಣಮಾಡುವನು. ಆದ ಗಿ ಕೃಪಾಳುವು, ಭಕ್ತನ ಸರ್ವಾಭೀಷ್ಟವನ್ನು ಪೂರ್ಣಮಾಡುವನು. ಆದಿ ಶಕ್ತಿಯು, ವಿಘ್ನೇಶ್ವರನು, ಸೂರ್ಯನೂ, ಶಿವನೂ, ಮೊದಲಾದವರು ಸಹಾ ವಿಷ್ಣುವಿನ ಆಜ್ಞಾಂಕಿತರಾಗಿರುವರು.

॥ ಚೌಪಾಈ ॥

ಭಾರತ ಸಕಲಗ್ರಂಥ ಯಹ ಭಾಖ್ಹೈ ।
ಪದ್ಮಪುರಾನ ತಾಪನೀ ಆಖ್ಹೈ ॥

ಅರ್ಥ॥ ತಾಪನೀ ಅಂದರೆ ನೃಸಿಂಹತಾಪನೀ, ರಾಮತಾಪನೀ, ಗೋಪಾಲತಾಪನೀ ಉಪನಿಷತ್ತುಗಳು.

ವಿಸ್ನುರೂಪತೈ ಉಪಜತ ಸಬಹೀ ।
ಪರ್ಹೈ ಭೀರ ಜಾಜ್ಹೆ ತಿಹಿ ತಬಹೀ ॥ ೩೨ ॥

ಅರ್ಥ॥ ಎಂದು ಭಾರತದಲ್ಲಿಯೂ, ಪದ್ಮಪುರಾಣಗಳಲ್ಲಿಯೂ, ಸರ್ವ ಉಪನಿಷತ್ತುಗಳಲ್ಲಿಯೂ ಉಲ್ಲೇಖವುಂಟು. ವಿಷ್ಣುರೂಪದಿಂದಲೇ ಈ ಸರ್ವ ಜಗತ್ತೂ ಉತ್ಪನ್ನವಾಗಿರುವದು. ಅತಿದಾರುಣವಾದ ಪೀಡಾದಿಗಳು ಉತ್ಪನ್ನವಾಗಲು, ವಿಷ್ಣುವಿನ ಆರಾಧನೆಯನ್ನು ಮಾಡುವರು. ಆಗ-

॥ ಚೌಪಾಈ ॥

ವಿವಿಧವೇಷಕೊ ಧರಿ ಅವತಾರಾ ।
ಸಬ ದೇವನಕೂ ದೇತ ಸಹಾರಾ ॥
ಯಾತೈ ತಾಕೀ ಕೀಜೈ ಪೂಜಾ ।
ವಿಸ್ನು ಸಮಾನ ಸೇವ್ಯ ನಹೀ ದವಜಾ ॥ ೩೩ ॥

ಅರ್ಥ॥ ಅನೇಕ ರೂಪಗಳಿಂದ ಅವತಾರಮಾಡಿ, ಸರ್ವದೇವತೆಗಳ ಪೀಡೆಯನ್ನು ದೂರಮಾಡುವನು. ಅದರಿಂದ ವಿಷ್ಣುವು ಪೂಜನೀಯ ದೇವನು, ಇವನ ಹೊರ್ತು ಅನ್ಯ ಯಾವದೇವನೂ ಸೇವ್ಯನಲ್ಲ.

॥ ಚೌಪಾಈ ॥

ವಿಸ್ನು ಭಕ್ತಶಿವ ಉತ್ತಮ ಕಹಿಯೆ ॥
ತಥಾಪಿ ಸೇವ್ಯ ಸುರೂಪ ನ ಲಹಿಯೆ ॥
ರೂಪ ಅಮಂಗಲ ಸಿವಕೊ ಸಹಜಸಮ
ಧ್ಯಾನ ಕರೈ ನಹಿ ತಾಕೌ ಯೂ ಹಮ ॥ ೩೪ ॥

ಅರ್ಥ॥ ಯದ್ಯಪಿ ವಿಷ್ಣುವಿಗಿಂತಲೂ, ಶಿವನು ಉತ್ತಮನೆಂದು ಭಕ್ತರು ಹೇಳುತ್ತಿರುವರು. ತಥಾಪಿ ಅವನಿಗೆ ಸೇವ್ಯರೂಪವು ಪ್ರಾಪ್ತವಾಗಿರುವುದಿಲ್ಲ; ಶಿವನರೂಪವು ಸಹಜವತ್ ಅಮಂಗಲವಾಗಿರುವದು.



॥ ಚೌಪಾಈ ॥

ರಾಖ ಡಮರೂ ಗಜಚರ್ಮ ಕಪಾಲಾ ।
ಧರೈ ಆಪ ಕಿಹಿ ಕರೈ ನಿಹಾಲಾ ॥
ತಾಕೊ ಪೂತ ಗನೇಸ ಹು ತೈಸೊ ।
ರೂಪ ವಿಲಚ್ಛನ ನರಪಶು ಜೈಸೊ ॥೩೫॥

ಅರ್ಥ—ಭಸ್ಮಾಂಗನಾಗಿಯೂ, ಹಸ್ತದಲ್ಲಿ ಡಮರುಗ ಧರಿಸಿದವನಾಗಿ, ಗಜಚರ್ಮಾಂಬರನಾಗಿಯೂ, ರುಂಡಮಾಲಾಧರನಾಗಿಯೂ ಇರುವ ಶು ಕಲ್ಯಾಣಪ್ರದನೆಂದು ಹೇಗೆ ಹೇಳಬಹುದು? ಈ ಕಾರಣದಿಂದ ವು ಅವನ ಧ್ಯಾನವನ್ನು ಮಾಡುವುದಿಲ್ಲ. ಅವನ ಪುತ್ರನಾದರೂ ವಿಲಕ್ಷಣ ಪವುಳ್ಳವನು, ಕೇವಲ ನರಪಶುವಿನಂತೆ ಸ್ವರೂಪವುಳ್ಳವನು.

॥ ಚೌಪಾಈ ॥

ಸಠ ಹಠತೈ ಧ್ಯಾವತ ಜೊ ದೇವೀ ।
ತಾಮುಸ ರೂಪ ಧರತ ತಿಹಿ ಸೇವೀ ॥
ತಿಯ ನಿಂದಿತ ಅಸುಚೀ ನ ಪವಿತ್ರಾ ।
ಔಗುನ ಗನೈ ನ ಜಾತ ವಿಚಿತ್ರಾ ॥ ೩೬ ॥

ಅರ್ಥ—ಯಾವ ಮೂರ್ಖರು ಹಠದಿಂದ ದೇವಿಯನ್ನು ಧ್ಯಾನಿಸುವ ಅವರು ದೇವಿಯಂತೆಯೆ ರೂಪವುಳ್ಳರಾಗುವರು. ಆ ದೇವಿಯ ವು ನಿಂದಿತವಾಗಿದ್ದದ್ದೂ ಅಶುಚಿ, ಅತಿಪವಿತ್ರವಾದದ್ದೂ ವಿಚಿತ್ರ ದ ಅಗಣಿತಯುಕ್ತವಾದದ್ದೂ ಇರುವುದು.

॥ ಚೌಪಾಈ ॥

ಕಪಟ ಕೂಟಕೊ ಆಕರ ಕಹಿಯೆ ।
ಪರಾಧೀನ ನಿಜ ತಂತ್ರನ ಲಹಿಯೆ ॥
ಐಸೊ ರೂಪ ಜು ಚಹಿಯೆ ಜಾಕೂ ।
ಸೋ ಸೇವಹು ನರ ಖರಸಮ ತಾಕೂ ॥೩೭॥

ಅರ್ಥ॥ ಕಪಟ ಮತ್ತು ದೋಷಗಳ ಆಗರವೂ ಅದಂಥಾ ಅಸ್ವತಂತ್ರವೂ ...ನವೂ ಅದ ಯಾವ ರೂಪವು ಉಂಟಾಗಬೇಕೆಂಬ ಯಾವನು ಅಪೇ... ...ನಸೋ ಅವನು ಖರವತ್ ಅವಳ ಸೇವೆಯನ್ನು ಮಾಡಲಿ.

|| ಚೌ ಪಾ ಈ ||

ಭ್ರಮತ ಫಿರೈ ನಿಸದಿನ ಯಹ ಭಾನೂ ।
ರಹತ ನ ನಿಶ್ಚಲ ಛನ ಇಕಥಾನೂ ||
ಭ್ರಮತೌ ಫಿರೈ ಉಪಾಸಕ ತಾಕೊ ।
ತಿಹಿ ಸಮಾನ ಸೇವಕ ಔಜಾಕೊ || ೩೮ ||

ಅರ್ಥ|| ಸೂರ್ಯನು ರಾತ್ರಿಂದಿವಸ ಭ್ರಮಣಮಾಡುತ್ತಿರುವನು ಒಂದು ಸ್ಥಳದಲ್ಲಿ ನಿಶ್ಚಲನಾಗಿ ಇರುವದಿಲ್ಲ. ಇವನಂತೆಯೇ ಇವನ ಉಪಾಸಕರಾದರೂ ಅಹೋರಾತ್ರಿ ಭ್ರಮಣ ಮಾಡಬೇಕಾಗುವದು. ಇದು ನಿಶ್ಚಯವು.

|| ಚೌ ಪಾ ಈ ||

ಆನದೇವ ಯಾತೈ ಸಬತ್ಯಾಗೈ ।
ಸೇವನೀಯ ಇಕ ಹರಿ ನಿತಜಾನೈ ||
ಪೂಜ ಧ್ಯಾನ ಕರನ ವಿಧಿ ಜೊ ಹೈ ।
ನಾರದ ಪಂಚರಾತ್ರಮೈ ಸೊ ಹೈ ||೩೯||

ಅರ್ಥ— ಈ ಕಾರಣದಿಂದ ಅನ್ಯಸರ್ವದೇವತೆಗಳನ್ನು ತ್ಯಾಗಮಾ[ಡಿ] ನಿತ್ಯ ಜಾಗ್ರತನೂ,ಸೇವನೀಯನೂ ಆದ ಒಬ್ಬ ಹರಿಯೇ ಇದ್ದಾನೆ. ಅವ[ನ] ಪೂಜಾ,ಧ್ಯಾನ ಕ್ರಮವನ್ನು ನಾರದ ಪಂಚರಾತ್ರದಲ್ಲಿ ಬಹು ವಿಧವಾ[ಗಿ] ವರ್ಣಿಸಿದ್ದಾರೆ.

ಟೀಕಾ—ವಿಷ್ಣುವನ್ನು ತ್ಯಾಗಮಾಡಿ, ಪ್ರಸಿದ್ಧವಾದ ನಾಲ್ಕು ಉಪಾ[ಸ]ನೆಗಳುಂಟು. ಅವುಗಳಲ್ಲಿ ಒಂದೊಂದನ್ನೇ ನಿಷೇಧಮಾಡಿದರೂ ಸಹ ಸ್ಮಾರ್ತ ಉಪಾಸನೆಯನ್ನೂ ನಿಷೇಧ ಮಾಡಿದಂತಾಗುತ್ತದೆ. ಕಾರಣವೇ ನೆಂದರೆ; ಪಂಚದೇವತೆಗಳಲ್ಲಿಯೂ ಸಮಬುದ್ಧಿಯನ್ನಿಟ್ಟು ಉಪಾಸನೆಯನ್ನು ಮಾಡುವುದಕ್ಕೆ ಸ್ಮಾರ್ತ ಉಪಾಸನಾ ಎನ್ನುತ್ತಾರೆ. ಶಿವ ಮೊದಲಾ[ದ] ನಾಲ್ಕು ದೇವತೆಗಳು, ವಿಷ್ಣು ಸಮರಲ್ಲವೆಂದು ನಿಷೇಧಿಸಿದ ಬಳಿಕ ಸ್ಮಾರ್ತ ಉಪಾಸನೆಯನ್ನು ಸಹಾ ಅರ್ಥಾತ್ ನಿಷೇಧಿಸಿದಂತಾಯಿತು.

||೫೦೨|| ಶಿವೋಪಾಸಕರ ಉತ್ತರ

|| ಚೌ ಪಾ ಈ ||

ಶಿವಸೇವಕ ಮುನಿ ಸುನಿ ತಿಹಿ ಬೈನಾ ।



ಕ್ರೋಧಸಹಿತ ಬೋಲ್ಯೋ ಚಲನೈನಾ ||
ಸುನ ರಾಜನ ಬಾನೀ ಇಕ ಮೋರೀ ।
ಜಾನ್ಯೈ ವಚನ ಪ್ರಮಾನ ಕರೋರೀ || ೪೦ ||

ಅರ್ಥ.--ಈ ಪ್ರಕಾರ ವಿಷ್ಣು ಉಪಾಸಕರಿಂದ ನಿಂದಾರೂಪವಾದ [ವಾ]ಕ್ಯಗಳನ್ನು ಲಾಲಿಸಿ ಶಿಭಕ್ತನು ಆರಕ್ತನಯನನಾಗಿ ಎಲೈ ರಾಜನೇ ! [ದೇ]ವ ಶಿವನನ್ನು ಆರಾಧಿಸುವ ವಿಷಯದಲ್ಲಿ ಅನೇಕ ಪ್ರಮಾಣಗಳುಂಟೋ [ಅವು]ಗಳನ್ನು ವಿವರಿಸುವೆನು ಚಿತ್ತೈಸು.

|| ಚೌಪಾಈ ||

ಶಿವಸಮಾನ ಆನಕೊ ಕಹಿಯೆ ।
ಮಾಂಗೈ ದೇತ ಜಾಹಿ ಜೊ ಚಹಿಯೆ ||
ಸಬ ವಿಭೂತಿ ಹರಿಕೂ ದೈ ಮಾಗೀ ।
ಧರತ ವಿಭೂತಿ ಆಪ ನಿತ್ಯತ್ಯಾಗೀ ||೪೧||

ಅರ್ಥ—. ಶಿವ ಸಮಾನರಾದ ದೇವತೆಗಳು ಅನ್ಯರಾರೂ ಇಲ್ಲ. ಭಕ್ತ[ನು] ಇಚ್ಛಿಸಿದ್ದನ್ನು ಅವನು ಪರಿಪೂರ್ಣ ಮಾಡುವನು. ಹರಿಯು ಶಿವನನ್ನು [ಆರ]ಾಧಿಸಲು ಸರ್ವ ಐಶ್ವರ್ಯವನ್ನು ಅವನಿಗಿತ್ತು ತಾನು ಭಸ್ಮಲೇಪನ [ಮಾ]ಡಿ ಕೊಂಡನು.

||ಚೌಪಾಈ||

ಚರ್ಮಕಪಾಲ ಹೇತು ಇಹಿ ಧಾರೈ ।
ಸಮ ನಹಿ ಉತ್ತಮ ಅಧಮ ವಿಚಾರೈ ||
ನಗ್ನರಹತ ಉಪದೇಸತ ಯೇಹೀ ।
ವಿಹಿ ವಿರಾಗ ಸಮ ಸುಖ ಹ್ವೈ ಕೇಹಿ ||೪೨||

ಅರ್ಥ—ಈಕಾರಣದಿಂದಲೇ ಚರ್ಮ ಕಪಾಲವನ್ನು ಧಾರಣಮಾಡಿ[ದ]ನು. ಉತ್ತಮರು ಅಧಮರೆಂದು ಭೇದವನ್ನೆಣಿಸುವುದಿಲ್ಲ. ಎಲ್ಲರನ್ನೂ [ಸಮ]ನಾಗಿಯೇ ನೋಡುವನು. ಅಹರ್ನಿಶನ್ನರಾಗಿ ಇರಲು ಉಪದೇಶಿಸುವ[ನು]. ವೈರಾಗ್ಯದಲ್ಲಿಯ ಸುಖಕ್ಕೆ ಸಮಾನವಾಗಿ ವಿಷಯದಲ್ಲಿ ಸುಖವುಂಟಾ[ಗು]ವುದಿಲ್ಲ.

ಟೀಕಾ—ವೈಷ್ಣವರು ಚರ್ಮಕಪಾಲ ಮೊದಲಾದ ನಿಂದಿತವಸ್ತುಗ[ಳ]ನ್ನು ಧಾರಣ ಮಾಡಿರುವನೆಂದು ಆಕ್ಷೇಪನೆಯನ್ನು ತೆಗೆಯುವರೇ. ಇದ

೧
ಕ್ಕೆ ಸಮಾಧಾನವೇನೆಂದರೆ ಮಹಾದೇವನನಿಗೆ ಸರ್ವಪದಾರ್ಥಗಳಲ್ಲಿ ಸಮ ಬುದ್ಧಿಯು ಇದೆ.

ಟಿಪ್ಪಣಿ ೧. ಮಹಾದೇವನನಿಗೆ ಆತ್ಮಾರಾಮ ಉಂಟಾದ್ದರಿಂದ ಸರ್ವಪದಾರ್ಥಗಳಲ್ಲಿ ಸಮ ಅಂದರೆ (ಮಿಥ್ಯತ್ವ]ದ ಬುದ್ಧಿಯು ಇದೆ. ಅಥವಾ ಸಮ ಅಂದರೆ ಏಕ[ಬ್ರಹ್ಮ]ತ್ವ ಬುದ್ಧಿಯು ಇದೆ. ಈ ಕಾರಣದಿಂದ ಶಿವನು ಸರ್ವವಿಭೂತಿಗಳಲ್ಲಿ ವಿರಕ್ತನಾಗಿ ಚರ್ಮ ಕಪಾಲಾದಿ ನಿಂದಿತ ವಸ್ತುಗಳನ್ನೇ ಧಾರಣಮಾಡುವನು. ಇದನ್ನು ಮಹಿಮ್ನ ಸ್ತೋತ್ರದಲ್ಲಿ ಪುಷ್ಪದಂತಾಚಾರ್ಯನು ಸಹ ...ಲ್ಲೆ ಪರದ? ಇಂದ್ರಾದಿ ದೇವತೆಗಳು ನಿನ್ನ ಭ್ರುಕುಟಿಯಿಂದ ರಚಿತವಾದ ಸಮೃದ್ಧಿಗಳನ್ನು ಧರಿಸುವರು; ಮತ್ತು ನಿನ್ನ ಬಳಿಯಲ್ಲಿ ಕುಟುಂಬದ ಉಪಕರಣ [ಸಾಧನ)ಗಳು ನಂದಿಕೇಶ್ವರ, ಖಟ್ವಾಂಗ [ನಾಲ್ಕು ಧಾರೆಗಳುಳ್ಳ ಪಟ್ಟೆರೂಪ ಕಾಷ್ಠಮಯ ಶಸ್ತ್ರ] ಕುಠಾರ, ಗಜಚರ್ಮ, ಭಸ್ಮ, ಮತ್ತು ಸರ್ಪಗಳು ಇವೆ. ಇವೆಲ್ಲವುಗಳ ಮೇಲಿಂದ ಬರುವುದೇನೆಂದರೆ, ಸ್ವಾತ್ಮಾರಾಮ ಪುರುಷನಿಗೆ ವಿಷಯರೂಪ ಮೃಗತೃಷ್ಣೆಯು (ಜಲವೆಂದು ತಿಳಿದು ಗ್ರಹಣಮಾಡಲಿಕ್ಕೆ ಹೋಗುವ ಸೂರ್ಯನಕಿರಣ] ಭ್ರಮಿಸುವುದಿಲ್ಲ.

॥ಚೌಪಾಈ॥

ಸದಾವರ್ತ ಐಸೊ ದೆ ಭಾರೀ। ಕಾಸೀಪುರೀ ಮರೆನರನಾರೀ॥
೧
ಸೊ ಸಾಯುಜ್ಯಮುಕ್ತಿಕೊ ಜಾವೈ।
ಗರ್ಭವಾಸ ಸಂಕಟ ನಹಿ ಪಾವೈ ॥೪.॥

ಅರ್ಥ॥ಕಾಶೀಪಟ್ಟಣದಲ್ಲಿ ಯಾವಪುರುಷನ,ಅಥವಾ ಸ್ತ್ರೀಯ ದೇಹವು ಪತಿತವಾಗುವುದೋ,ಅವರಿಗೆ ಮುಂದೆ ಗರ್ಭವಾಸ ಸಂಕಟವು ತಪ್ಪುವುದು. ಮತ್ತು ಅವರು ಸಾಯುಜ್ಯಮುಕ್ತಿಯನ್ನು ಹೊಂದುವರು ಎಂಬದಾಗಿ ಆಖ್ಯಾಯಿಕೆಯುಂಟು.

ಟಿಪ್ಪಣಿ—೧ ಶಿವಸಮಾನ ಐಶ್ವರ್ಯಯುಕ್ತ ಶಿವಲೋಕವು.

॥ ಚೌ ಪಾ ಈ ॥

ಶಿವಸಮಾನ ನರನಾರೀತೆ ಸಬ।
ಲಹತ ಸು ದಿವ್ಯಭೋಗಸಗರೆ ತಬ॥
ಕರತ ಆಪ ಅದ್ವಯ ಉಪದೇಸಾ।



ತಜತಲಿಂಗ ಯೂ ಬ್ರಹ್ಮ ಪ್ರವೇಸಾ ॥ ೪ ॥

ಅರ್ಥ॥ ನರನಾರಿಯರು ಸರ್ವರು ಶಿವನಸಮಾನರಾಗಿ ಆ ದಿವ್ಯಭೋಗನ್ನು ಸಂಪೂರ್ಣವಾಗಿ ಅನುಭೋಗಿಸುವರು. ಲಿಂಗದೇಹವನ್ನು ...ಸಿ, ಬ್ರಹ್ಮಸ್ವರೂಪವನ್ನು ಹೊಂದುವರು ಎಂಬದಾಗಿ ತಾವು ಉಪದೇಶವನ್ನು ಮಾಡುವಿರಿ.

॥ ಚೌಪಾಈ ॥

ಊಚನೀಚ ರಂಚಹು ನಹಿ ದೇಖೈ।
ಮುಕ್ತಿಸಬನಕೂ ದೈ ಇಕ ಲೇಖೈ ॥
ಶಿವ ಸಮಾನ ರಾಜನ ಕೊ ದಾತಾ।
ಭಕ್ತ ಅಭಕ್ತ ಸಬನಕೊ ತ್ರಾತಾ ॥ ೪೫ ॥

ಅರ್ಥ॥ ಉಚ್ಚನೀಚರೆಂಬ ಭೇದವನ್ನು ನೋಡದೆ, ಸರ್ವರಿಗೂ ಸಮವಾದ ಮುಕ್ತಿಯನ್ನು ಕೊಡುವನು. ಶಿವಸಮಾನ ದಾತರು ಇಲ್ಲ; ಭಕ್ತಾಭಕ್ತರನ್ನು ರಕ್ಷಿಸುವವನು ಶಿವನೇ ಎಂದು ಭಾವಿಸು.

॥ ಚೌಪಾಈ ॥

ವಿಸ್ನು ಸುಭಾವ ಹುನ್ಯೊ ಹಮ ಐಸೊ।
ಜಗಮ್ಹೆ ಜನ ಪ್ರಾಕೃತ ಹ್ವೈ ತೈಸೊ ॥
ತ್ರಾತಾ ಭಕ್ತ ಅಭಕ್ತ ನ ತ್ರಾತಾ।
ಯಹ ಪ್ರಸಿದ್ಧ ಸಬ ಜಗಮ್ಹೆ ನಾತಾ ॥ ೪೬ ॥

ಅರ್ಥ ॥ ವಿಷ್ಣುವು ಭಕ್ತರನ್ನು ರಕ್ಷಿಸಿ, ಅಭಕ್ತರನ್ನು ನಾಶಮಾಡುವನು. ಎಂಬದಾಗಿ ಜಗಪ್ರಸಿದ್ಧ ಆಖ್ಯಾಯಿಕೆಯನ್ನು ನಾವು ಕೇಳಿದ್ದೇವೆ.

॥ ಚೌಪಾಈ ॥

ಹರಿಸೇವಕ ಹರ ಸೇವ್ಯ ಬಖಾನ್ಯೊ ॥
ರಾಮಚಂದ್ರರಾಮೇಶ್ವರಮಾನ್ಯೊ।
ಸ್ಕಂದ ಪುರಾನ ವ್ಯಾಸ ಬಹು ಭಾಖ್ಯೋ।
ಹರಿ ಸೇವಕ ಹರ ಸೇವ್ಯಹಿ ರಾಖ್ಯೊ ॥ ೪೭ ॥

ಅರ್ಥ ॥ ಹರಿ ಸೇವಕನು, ಹರನು ಸೇವ್ಯನು ಎಂದು ತಿಳಿ ; ಯಾಕೆಂ

ದರೆ,ರಾಮಚಂದ್ರನು ರಾಮೇಶ್ವರನ ಪೂಜೆ ಮಾಡಿದನು. ಇದಲ್ಲದೆ ಸ್ಕಂದ ಪುರಾಣದಲ್ಲಿ ಹರಿಯು ಸೇವಕನೆಂತಲೂ ಹರನುಸೇವ್ಯನೆಂತಲೂ ವ್ಯಾಸರು ಹೇಳಿದ್ದಾರೆ.

---

॥ ಚೌಪಾಈ ॥

ಕಹ್ಯೊ ಜು ಭಾರತ ಪದ್ಮಪುರಾನಾ ।
ಸಬ ದೇವನತೈ ಹರಿ ಅಧಿಕಾನಾ ॥
ಭಾರತ ತಾತಪರ್ಯ ನಹಿ ದೇಖ್ಯೊ ।
ಜೊ ಅಪ್ಪಯ ದೀಛಿತ ಬುಧ ಲೇಖ್ಯೋ ॥ ೪೮ ॥

ಅರ್ಥ॥ ವೈಷ್ಣವರಿಂದ ಈ ರೀತಿಯಾಗಿ ಹೇಳಲ್ಪಡುತ್ತದೆ;-"ಭಾರತಾದಿ ಗ್ರಂಥಗಳಲ್ಲಿ ಸರ್ವದೇವತೆಗಳಿಗಿಂತಲೂ ವಿಷ್ಣುವು ಪೂಜ್ಯನೆಂದು ಹೇಳಲ್ಪಟ್ಟದೆ;ಇದು ಸಂಭವಿಸುವುದಿಲ್ಲ. ಕಾರಣವೇನೆಂದರೆ;- ಭಾರತ ಗ್ರಂಥದ ತಾತ್ಪರ್ಯವನ್ನು ನೋಡುತ್ತಿರಲು, ಶಿವನಲ್ಲಿಯೇ ಈಶ್ವರತ್ವವು ಪ್ರತೀತ[೧]ವಾಗುತ್ತದೆ" ಎಂಬದಾಗಿ ಅಪ್ಪಯ್ಯದೀಕ್ಷಿತ ನಾಮಕ ವಿದ್ವಾಂಸರು ಸಕಲ ಪುರಾಣೇತಿಹಾಸಗಳ ತಾತ್ಪರ್ಯವನ್ನು ಬರೆದಿರುವರು. ಇಲ್ಲಿ ಭಾರತದಲ್ಲಿ ಈಪ್ರಕಾರ ಕಥನವಿದೆ. ಹೇಗೆಂದರೆ- ಅಶ್ವತ್ಥಾಮನು ನಾರಾಯಣಾಸ್ತ್ರ ಮತ್ತು ಆಗ್ನೇಯಾಸ್ತ್ರಗಳನ್ನು ಪ್ರಯೋಗಿಸಿದನು. ಆಗ ಬಹು ಸೈನ್ಯವು ಹತವಾಯಿತು. ಆದರೆ ಪಂಚಪಾಂಡವರಲ್ಲಿಯಾರೂ ಮೃತರಾಗಲಿಲ್ಲ. ಅದನ್ನು ಕಂಡು, ಅಶ್ವತ್ಥಾಮನು ರಥವನ್ನಿಳಿದು ಧನುರ್ವೇದವನ್ನೂ ಮತ್ತು ಆಚಾರ್ಯನನ್ನೂ ಧಿಕ್ಕರಿಸಿ ವನಕ್ಕೆ ಗಮನಮಾಡಿದನು. ಅಲ್ಲಿ ವ್ಯಾಸರ ದರ್ಶನವಾಯಿತು. ಆಗ ಅವರು ಹೇಳಿದ್ದೇನೆಂದರೆ- ಎಲೌ ಬ್ರಾಹ್ಮಣನೇ! ನೀನು ಧನುರ್ವೇದವನ್ನೂ ಮತ್ತು ಆಚಾರ್ಯನನ್ನೂ ಧಿಕ್ಕರಿಸಬೇಡ. ಈ ಅರ್ಜುನ ಮತ್ತು ಕೃಷ್ಣ ಈಉಭಯತ್ರರೂ ನರ ನಾರಾಯಣರೂಪವಾಗಿದ್ದಾರೆ. ಅವರು ಶಿವನನ್ನು ಬ್ರಹ್ಮಪ್ರಕಾರವಾಗಿ ಪೂಜಿಸಿರುವರು. ಅವರ ಭಕ್ತಿಗೆ ಮೆಚ್ಚಿ ತ್ರಿಶೂಲಿಯು ಅವರ ರಥದ ಮುಂಭಾಗದಲ್ಲಿರುವನು. ಆದರಿಂದ ಅವರಮೇಲೆ ಪ್ರಯೋಗಿಸಿದ ಶಸ್ತ್ರಾಸ್ತ್ರಗಳ ಸಾಮರ್ಥ್ಯವನ್ನು ಮಹಾದೇವನು ನಾಶಮಾಡುತ್ತಾನೆ. ಈ ಭಾರತ ಪ್ರಸಂಗದಿಂದ ನಾರಾಯಣರೂಪಿ ಕೃಷ್ಣನ ವಿಭೂತಿಯು ಮಹಾದೇವನ ಕೃಪೆಯಿಂದ ಉತ್ಪನ್ನವಾಗಿರುವದು ಎಂದು ಸಿದ್ಧವಾದಂತಾಯಿತು. ಈಕಾರಣದಿಂದ ವಿಷ್ಣು ಚರಿತ್ರ ಪ್ರತಿಪಾದಕ ಗ್ರಂಥ



ಳಲ್ಲವೂ ಶಿವನ ಆಧಿಕ್ಯವನ್ನು ಪ್ರತಿಪಾದನೆಮಾಡುತ್ತವೆ. ಕಾರಣವೇನೆಂ ...ವಿಷ್ಣುಪ್ರತಿಪಾದಕ ಗ್ರಂಥಗಳಲ್ಲಿ ವಿಷ್ಣುವು ಸೇವ್ಯನೆಂಬುದಾಗಿ ವರ್ಣಿ...ಯುಂಟು. ಆದರೆ ಈ ಮಹಾಭಾರತ ಪ್ರಸಂಗದಿಂದ ವಿಷ್ಣುವು ಶಿವಭಕ್ತ...ಬುದಾಗಿ ಕಂಡುಬರುವುದರಿಂದ ಶಿವನೇ ಪರಮ ಸೇವ್ಯನೆಂದೂ ಈಶಿವನ ...ಪೆಯಿಂದ ವಿಷ್ಣುವಿಗೆ ಸೇವ್ಯತ್ವವು ಪ್ರಾಪ್ತವಾಗಿದೆಯೆಂದೂ ಸಿದ್ಧವಾಗು...ದೆ. ಈರೀತಿಯಿಂದ ಅಪ್ಪಯ್ಯದೀಕ್ಷಿತರು ಸಕಲ ವೈಷ್ಣವ ಗ್ರಂಥಗಳಿಂದ ...ನನು ಪ್ರತಿಪಾದ್ಯನೆಂದು ಹೇಳಿರುವರು.

---

...ಪ್ಪಣಿ. ೧-ಈ ಪಂಡಿತನು ದಕ್ಷಿಣ ದಿಕ್ಕಿನಲ್ಲಿರುವ ಶಿವಕಾಂಜೀಪುರದಲ್ಲಿ ಇದ್ದನು. ಅವನು ಶಿವೋಪಾಸಕರಲ್ಲಿ ಶ್ರೇಷ್ಠನಾಗಿದ್ದನು. ಇವನು ಸಿದ್ಧಾಂತ ಲೇಶ ನಾಮಕ ವೇದಾಂತ ಗ್ರಂಥವನ್ನು ರಚಿಸಿರುವನು.

॥ ಚೌಪಾಈ ॥

ಸಿವ ಸಬಕೊ ಪ್ರತಿಪಾದ್ಯ ಬಖಾನ್ಯೋ ।
ಭಕ್ತನಮೈ ಉತ್ತಮ ಹರಿ ಗಾನ್ಯೋ ॥
ಈಸ ದೇವ ಪದ ಸಬಮೈ ಕಹಿಯೆ ।
ಮಹತ ಸಹಿತ ಇಕ ಸಿವಮೈ ಲಹಿಯೆ ॥೪೯॥

ಅರ್ಥ॥ ಮಹಾದೇವ, ಮಹೇಶನೆಂದು ಶಿವನಿಗೇ ಹೇಳುತ್ತಾರೆ. ಉ...ದ ದೇವತೆಗಳಿಗೆ ದೇವ, ಈಶ ಎಂದು ಹೇಳುವರು.

---

॥ ಚೌಪಾಈ ॥

ಸಿವತೈ ಭಿನ್ನ ಅಸಿವ ಜೊ ಕಹಿಯೆ ।
ತಿಹಿ ತಜಿ ಸಿವ ಕಲ್ಯಾನಹಿ ಲಹಿಯೆ ॥
ಜಲಸಾಯಿಮ ಜಿಹಿ ನಾಮ ಬಖಾನ್ಯೊ ।
ಸೊ ಜಾಗ್ಯೆ ಯಹ ಮಿಥ್ಯಾ ಗಾನ್ಯೊ ॥೫೦॥

ಅರ್ಥ॥ ಕಲ್ಯಾಣಕ್ಕೆ ಶಿವ ಎನ್ನುತ್ತಾರೆ. ಅದಕ್ಕೆ ಭಿನ್ನವಾದದ್ದು ಅಶಿವ [ಅಕಲ್ಯಾಣ]ವು. ಇದರ ಮೇಲಿಂದ ಸಿದ್ಧವಾದ ಅರ್ಥವು ಯಾವದೆಂದರೆ;- ...ವನಿಂದ ಭಿನ್ನವಾಗಿದ್ದ ಅನ್ಯದೇವತೆಗಳು ಅಶಿವ ಅಂದರೆ ಅಕಲ್ಯಾಣರೂಪ...ವಾಗಿವೆ. ಈ ಕಲ್ಯಾಣರೂಪ ದೇವತೆಗಳನ್ನು ತ್ಯಾಗಮಾಡಿ, ಕಲ್ಯಾಣರೂಪ ...ಶಿವನನ್ನು ಉಪಾಸನಾ ಮಾಡಬೇಕು.

|| ಚೌ ಪಾ ಈ ||

ವಿಖ ಲಖ ಜಬ ಸಬಕೊ ಉಪಜ್ಯೊ ಡರ ।
ನಿರ್ಭಯ ಕಿಯೆ ಸಕಲ ಗರ ಧರಿ ಗರ ||
ಜಾಕೊ ಪೂತ ಗನೇಸ ಕಹಾವೈ ।
ವಿಘ್ನಜಾಲ ತತ್ಕಾಲ ನಸಾವೈ ||೫೧||

ಅರ್ಥ|| ಸಮುದ್ರ ಮಥನಕಾಲದಲ್ಲಿ ಹಾಲಾಹಲವೆಂಬ ವಿಷವು ಉತ್ಪನ್ನವಾಗಲು, ಸಮಸ್ತ ದೇವಾಸುರರು ಭಯಭೀತರಾದರು. ಆಗ ಮಹಾದೇವನು ಅದನ್ನು ಪ್ರಾಶನಮಾಡಿ, ಸಮಸ್ತರನ್ನೂ ನಿರ್ಭಯರನ್ನಾಗಿ ಮಾಡಿದನು. ಮಹಾದೇವನ ಪುತ್ರನಾದ ಗಣಪತಿಯು ಧ್ಯಾನಮಾತ್ರದಿಂದ ವಿಘ್ನಜಾಲವು ತತ್ಕಾಲದಲ್ಲಿಯೆ ನಾಶವಾಗುವದು.

---

|| ಚೌ ಪಾ ಈ ||

ಕಾರಜಮ್ಯೆ ಕಾರನ ಗುನ ಹೋವೈ ।
ಯಾ ಸಿವ ವಿಘ್ನ ಮೂಲತೈ ಖೋವೈ ||
ಜನ್ಮ ಮರನ ದುಃಖ ವಿಘ್ನ ಕಹಾವೈ ।
ತಿಹಿ ಸಮೂಲ ಸಿವಧ್ಯಾನ ನಸಾವೈ ||೫೨||

ಅರ್ಥ|| ಕಾರ್ಯದಲ್ಲಿ ಯಾವ ಗುಣವಿರುವುದೋ, ಆ ಸರ್ವವೂ ಕಾರಣದ್ದೇ ಇರುತ್ತವೆಂದು ತಿಳಿ. ಈ ಕಾರಣದಿಂದ ಶಿವನ ಧ್ಯಾನದಿಂದ ವಿಘ್ನಗಳು ಸಮೂಲ ನಾಶವನ್ನು ಹೊಂದುತ್ತವೆ. ಜನ್ಮ, ಮರಣಗಳೆಂಬ ವಿಘ್ನಗಳು ಸಹ ಶಿವಧ್ಯಾನದಿಂದ ನಾಶವಾಗುವವು.

---

|| ಚೌ ಪಾ ಈ ||

ಸೇವನ ಯೋಗ್ಯ ಸದಾಶಿವ ಏಕಾ ||
ಜಾಗೈ ಸಹಿತ ಸಮಾಧಿ ವಿವೇಕಾ ||
ತಂತ್ರ ಪಾಸುಪತ ರೀತಿ ಜು ಗಾವೈ ।
ತ್ಯೂ ಪೂಜನಕರಿ ಧ್ಯಾನ ಲಗಾವೈ ||೫೩||

ಅರ್ಥ|| ಸದಾಶಿವನೊಬ್ಬನೇ ಶ್ರೇಷ್ಠನಾದ್ದರಿಂದ ಅವನೇ ಸೇವ್ಯನು. ಎಂಬುದನ್ನುಸಮಾಧಿಸಹಿತ ವಿವೇಕದಿಂದಲೂಜಾಗ್ರತೆಯಿಂದಲೂನೋಡು.



ಶುಪತ ತಂತ್ರದಲ್ಲಿ ಪೂಜಾಪ್ರಕಾರವನ್ನು ಹೇಗೆ ವರ್ಣಿಸಿರುವರೋ ಅದ ತೆ ಧ್ಯಾನಾದಿಗಳನ್ನು ಮಾಡಿ, ಶಿವಪದವನ್ನು ಹೊಂದಬೇಕು.

---

||ಚೌಪಾಈ||

ನಾರದ ಪಾಂಚರಾತ್ರ ಮತ ಜ್ಯಾತೇ ।
ಯಹ ಪರಿಮಲ ಪರಸಂಗ ಅನೂಠೊ ||
ಯಾತ್ರೈ ಸಿವಸೇವಾ ಚಿತ ಲಾವೈ ।
ಪುರುಷಾರಥ ಜೊ ಚಹೈ ಸು ಪಾವೈ ||೫೪||

ಅರ್ಥ|| ನಾರದ ಪಂಚರಾತ್ರ ಮತವನ್ನು ಸೂತ್ರ ಭಾಷ್ಯದಲ್ಲಿ ಖಂಡನ ಮಾಡಿದ್ದಾರೆ. ತದನುಸಾರವಾಗಿಯೇ ರಾಮಾನುಜ ಮೊದಲಾದ ನವೀನ ವೈಷ್ಣವರ ಮತವನ್ನು ಕಲ್ಪತರು[೧] ನಾಮಕ ಗ್ರಂಥದ ಟೀಕೆಯಾದ ಪರಿಮಲ ನಾಮಕ ಗ್ರಂಥದಲ್ಲಿ ಖಂಡನಮಾಡಿದ್ದಾರೆ. ಈ ಕಾರಣದಿಂದ ಯಾವನು ಶಿವಸೇವೆಯನ್ನು ಮನಃಪೂರ್ವಕವಾಗಿ ಮಾಡುವನೋ ಅವನು ಸಂಪೂರ್ಣ ಪುರುಷಾರ್ಥವನ್ನು ಹೊಂದುವನು.

ಟಿಪ್ಪಣಿ. ೧. ಶ್ರೀ ಶಂಕರಾಚಾರ್ಯ ಕೃತ ಬ್ರಹ್ಮಸೂತ್ರ ಭಾಷ್ಯದ ಮೇಲೆ ವಾಚಸ್ಪತಿ,ಮಿಶ್ರಕೃತ,ಭಾಮತಿನಿಬಂಧ ನಾಮಕಟೀಕೆಯುಂಟು. ಇದರ ವ್ಯಾಖ್ಯಾನದ ನಾಮವು ಕಲ್ಪತರು ಎಂದು ಇದೆ. ಇದಕ್ಕೆ ಪರಿಮಲ ನಾಮಕ ವ್ಯಾಖ್ಯಾನವಿದೆ.

---

ಗಣೇಶೋಪಾಸಕರ ಉತ್ತರವು.

|| ಚೌಪಾಈ ||

ಸಿವಕೊ ಪೂತ ಗನೇಸ ಬತಾಯೊ ।
ಕಾರನ ಗುನ ಕಾರಜಮ್ಯೆ ಗಾಯೊ ||
ಸುನಿ ಗನೇಸಕೊ ಪೂಜಕ ಬೊಲ್ಯೊ ।
ಅಸ ಕಿಯ ಕೋಗ ಸಿಂಹಾಸನ ಡೋಲ್ಯೋ ||೫೫||

ಅರ್ಥ—ಗಣಪತಿಯು ಶಿವನ ಪುತ್ರನೆಂದು ಹೇಳಿದ್ದನ್ನೂ ಕಾರಣದ ಗುಣವನ್ನು ಕಾರ್ಯದಲ್ಲಿ ವರ್ಣಿಸಿದ್ದನ್ನೂ ಕೇಳಿ, ಗಣೇಶೋಪಾಸಕರು ಕೋಪದಿಂದ ಮಾತನಾಡ ಹತ್ತಿದರು. ಅದರಿಂದ ಸಭಾ ಗೃಹವೆಲ್ಲವೂ ಕಂಪಿಸ ಹತ್ತಿತು.

|| ಚೌ ಪಾ ಈ ||

ರಾಜನ ಸುನ ದೋನೂ ಯ ಝೂಠೈ ।
ವಚನ ಸತ್ಯ ಸಮು ಕಹತ ಅನೂಠೆ ॥
ಸಿವಕೊ ಪೂತ ಗನೇಸ ಬತಾವೈ ।
ಪರಾಧೀನತಾ ತಾಮೈ ಗಾವೈ ||೫೬||

ಅರ್ಥ—ರಾಜನ್! ಈ ಉಭಯತ್ರರು ಹೇಳಿದ್ದೆಲ್ಲವೂ ಅಸತ್ಯವು. ಗಣಪತಿಯು ಶಿವನ ಪುತ್ರನೆಂದು ಅವನಲ್ಲಿ ಪರಾಧೀನತೆಯನ್ನು ವರ್ಣಿಸುವರು,

|| ಚೌ ಪಾ ಈ ||

ಕಹು ಪ್ರಸಂಗ ಸುನಹು ಇಕ ಐಸೊ ।
ಲಿಖ್ಯೊ ವ್ಯಾಸ ಭಗವತ ಮುನಿ ಜೈಸೊ ॥
ಚಢೆ ತ್ರಿಪುರ ಮಾರನಕೂ ಸಾರೈ ।
ಹರಿಹರ ಸಹಿತ ದೇವ ಅಧಿಕಾರೈ ||೫೭||

ಅರ್ಥ|| ಇನ್ನು ಈ ವಿಷಯದಲ್ಲಿ ನಿಶ್ಚಿತವಾದ ಒಂದು ಆಖ್ಯಾಯಿಕೆಯನ್ನು ವ್ಯಾಸಮಹರ್ಷಿಯು ಪುರಾಣದಲ್ಲಿ ಬರೆದಿರುವನು. ಅದು ಏನೆಂದರೆ, ತ್ರಿಪುರವನ್ನು ಸಂಹಾರಮಾಡುವುದಕ್ಕಾಗಿ ಹರಿಹರ ಸಹಿತ ಸರ್ವದೇವತಾಧಿಕಾರಿಗಳು ಹೊರಟರು.

|| ಚೌ ಪಾ ಈ ||

ನಹಿ ಗನೇಸಕೊ ಪೂಜನ ಕೀನೊ ।
ತ್ರಿಪುರ ನ ರಂಚಹು ತಿನತೈ ಛೀನೊ ॥
ಪುನಿ ಪಛಿತಾಯ ಮನಾಯು ಗನೇಸಾ ।
ತ್ರಿಪುರ ವಿನಾಸ್ಯೊ ರಹ್ಯೊ ನ ಲೇಸಾ ||೫೮||

ಅರ್ಥ—ಆಕಾಲದಲ್ಲಿ ಗಣಪತಿಯನ್ನು ಪೂಜೆಮಾಡದೆ ಇದ್ದದರಿಂದ ತ್ರಿಪುರವನ್ನು ಜಯಿಸಲು ಆಗಲಿಲ್ಲ; ಆಮೇಲೆ ಪಶ್ಚಾತ್ತಾಪ ಯುಕ್ತರಾಗಿ ಗಣಪತಿಯನ್ನು ಪೂಜಿಸಲು ತತ್ಕಾಲದಲ್ಲಿಯೇ ತ್ರಿಪುರವು ವಿಧ್ವಂಸವಾಯಿತು.

|| ಚೌಪಾಈ ||

ಭಯೊ ಸಮರ್ಥ ಕಿಯೆ ಜಿಹಿ ಪೂಜಾ ।



ಸೇವನ ಯೋಗ್ಯ ಸು ಇಕ ನಹಿ ದೂಜಾ ॥
ರಾಮುಪೂತ ದಸರಥಕೊ ಜೈಸೈ ।
ವಿಘ್ನಹರನ ಸಿವಕೊ ಸುತ ತೈಸೈ ||೫೯||

ಅರ್ಥ—ಗಣಪತಿ ಪೂಜೆಯಿಂದಲೇ ಹರಿಹರಾದಿ ದೇವತೆಗಳ ಸಾಮರ್ಥ್ಯವುಂಟಾಯಿತು. ಗಣಪತಿಯೊಬ್ಬನೇ ಸೇವ್ಯನಾಗಿದ್ದಾನೆ. ರಾಮುಚಂದ್ರನು ದಶರಥಸುತನಾದಂತೆ ವಿಘ್ನಹರನಾದ ಗಣಪತಿಯು ಶಿವಸುತನಾಗಿದ್ದಾನೆ.

|| ಚೌಪಾಈ ||

ವ್ಯಾಸ ಗನೇಸ ಪುರಾನ ಬನಾಯೊ ।
ಸಬಕೊ ಹೇತು ಗನೇಸ ಬತಾಯೊ ॥
ಹರಿ ಹರ ವಿಧಿ ರವಿ ಸಕ್ತಿ ಸಮೇತಾ ।
ತುಂಡೀತೈ ಉಪಜತ ಸಬ ತೇತಾ ||೬೦||

ಅರ್ಥ—ವ್ಯಾಸನು ಗಣೇಶ ಪುರಾಣವನ್ನು ಬರೆದಿರುವನು. ಅದರಲ್ಲಿ ಸರ್ವಕ್ಕೂ ಕಾರಣನು ಗಣಪತಿಯೆಂತಲೇ ವರ್ಣಿಸಿರುವನು. ಇದಲ್ಲದೆ ಶಿವನ ತುಂಡಾದಂಡದಿಂದಲೇ ಹರಿ, ಹರ, ಬ್ರಹ್ಮ, ಶಕ್ತಿಮೊದಲಾದವರು ಉತ್ಪನ್ನರಾದರು ಎಂದು ಆಖ್ಯಾಯಿಕೆಯುಂಟು.

|| ಚೌಪಾಈ ||

ಕರತ ಧ್ಯಾನಜಿಹಿ ಛನ ಜನ ಮನಮೈ ।
ನಾಸತ ವಿಘ್ನ ಪ್ರಧಾನ ಗನನ ಮೈ ॥
ವಿಘ್ನ ಹರನ ಯೂ ಜಾಗತ ನಿಸದನ ।
ಭಕ್ತಿ ಸಹಿತ ಸೇವಹು ತಿಹಿ ಅನಛನ ||೬೧||

ಅರ್ಥ—ಯಾರು ಮನಸ್ಸಿನಲ್ಲಿ ಒಂದು ಕ್ಷಣಕಾಲ ಗಣಪತಿಯನ್ನು ಧ್ಯಾನಮಾಡುವರೋ, ಅವರ ಸರ್ವವಿಘ್ನಗಳು ನಾಶವಾಗುವವು. ಇಂಥ ವಿಘ್ನಹರನನ್ನು ಭಕ್ತಿಯುತರಾಗಿ ಅಪರ್ನಿಶ ಯಾರು ಸೇವೆಯನ್ನು ಮಾಡುವರೋ ಅಂಥವರ ಪುಣ್ಯಕ್ಕೆ ಎಣೆಯುಂಟೇ ?

||೫೦೪|| ದೇವೀ ಭಕ್ತ ಉತ್ತರ.

|| ಚೌಪಾಈ ||

ಹೇತು ಗನೇಸ ಸಕ್ತಿಕೊ ಸುನಿಕೆ ।

ಭಗತ ಭಾಗವತ ಉಚರ್‍ಯೊ ಗುನಿಕೆ ॥

ಸುನ ರಾಜನ ಬಾನೀ ಮಮ ಸಾಚೀ ।

ತೀನೂ ಸಕಲ ಕಹತ ಯೆ ಕಾಚೀ ॥೬೨॥

ಅರ್ಥ— ಗಣೇಶೋಪಾಸಕರ ಗಣಪತಿಯ ಸ್ತುತಿಯನ್ನೂ ದೇವಿಯ ಅಪ್ರತಿಷ್ಠತೆಯ ವಚನವನ್ನೂ ಲಾಲಿಸಿ ಕೋಪಿಷ್ಠರಾಗಿ ಎದ್ದು ನಿಂತು, ರಾಜನ್ ! ಈ ಮೂವರೂ ಹೇಳಿದ್ದು ಅಪ್ರಮಾಣವಾಗಿದೆ. ನಾನು ಸತ್ಯ ವಾಕ್ಯವನ್ನು ಕಥನ ಮಾಡುತ್ತೇನೆ; ಚಿತ್ತವಿಟ್ಟು ಲಾಲಿಸು!

॥ ಚೌಪಾಈ ॥

ಸೂನೇ ದೇವ ಸಕ್ತಿ ಬಿನ ಸಾರೆ ।

ಮೃತಕ ದೇಹ ಸಮ ಲಖಿ ಹತ್ಯಾರೆ ॥

ಸಕ್ತಿ ಹೀನ ಅಸಮರ್ಥ ಕಹಾವೈ ।

ಸೊ ಕೈಸೈ ಕಾರಜ ಉಪಜಾವೈ ॥೬೩॥

ಅರ್ಥ--ಶಕ್ತಿಯಿಲ್ಲದಿರಲು ದೇಹವು ಮೃತಸಮಾನವು. ಶಕ್ತಿಯಿಲ್ಲದ ವನಿಗೆ ಶಕ್ತಿಹೀನನೆಂದು ಎನ್ನುತ್ತಾರೆ, ಶಕ್ತಿಹೀನನಿಂದ ಯಾವ ಕಾರ್ಯವು ಸಾಧ್ಯವಾಗುವುದು ? ಯಾವದೂ ಇಲ್ಲ.

॥ ಚೌಪಾಈ ॥

ಜಿನ ಬಹು ಸಕ್ತಿ ಉಪಾಸನ ಧಾರೀ ।

ತಾತೈ ಭಯೆ ಸಕಲ ಅಧಿಕಾರೀ ॥

ಹರಿ ಹರ ಸೂರ ಗನೇಸ ಪ್ರದಾನಾ ।

ಕಿನಮೈ ಸಕ್ತಿ ದೇಖಿಯತ ನಾನಾ ॥೬೪॥

ಅರ್ಥ—ಯಾವನು ಶಕ್ತಿಯನ್ನು ಬಹು ರೀತಿಯಿಂದ ಉಪಾಸನೆ ಮಾಡುವನೋ ಅವನು ಸಕಲಕ್ಕೂ ಅಧಿಕಾರಿಯಾಗಿರುವನು. ಹರಿ, ಹರ, ಸೂರ್ಯ, ಗಣಪತಿ ಇವರೆಲ್ಲರಿಗಿಂತಲೂ ಶಕ್ತಿಯು ಶ್ರೇಷ್ಠಳು. ಇವರೆಲ್ಲರಲ್ಲಿಯೂ ಬಗೆಬಗೆಯ ಶಕ್ತಿಯನ್ನು ಉಂಟು ಮಾಡಿದವಳು ದೇವಿಯೇ ಆಗಿದ್ದಾಳೆ.

॥ ಅರ್ಥ ಚೌಪಾಈ ॥

ಸಕ್ತಿ ಲೋಕಮೈ ಬಾಖತ ಜಾಕೂ ।



ರೂಪ ಭಗವತೀಕೊ ಲಖಿ ತಾಕೂ ॥

ಟೀಕಾ॥ ದೇವಿಗೆ, (೧) ಸಾಮಾನ್ಯ ಮತ್ತು (೨) ವಿಶೇಷ ಎಂಬ ಎರಡು ರೂಪಗಳುಂಟು. (೧) ಸರ್ವ ಪದಾರ್ಥಗಳಲ್ಲಿ ತನ್ನ ಕಾರ್ಯವನ್ನು ಮಾಡ ಲ್ಕೆ ಯಾವಸಾಮರ್ಥ್ಯರೂಪಶಕ್ತಿ ಇರುವುದೋ ಅದು ಭಗವತಿಯ ಸಾಮಾನ್ಯರೂಪವಾಗಿದೆ. ಮತ್ತು (೨) ಅಷ್ಟಭುಜಾದಿಕ ಸಹಿತ ಮೂರ್ತಿಯು ವಿಶೇಷರೂಪವು.

ಸಾಮಾನ್ಯರೂಪ ಶಕ್ತಿಯು ಅಸಂಖ್ಯ ಅಂಶಗಳುಳ್ಳವು. ಯಾವನಲ್ಲಿ ಶಕ್ತಿಯು ನ್ಯೂನ ಅಂಶವಿರುವುದೋ, ಅವನಿಗೆ ಅಲ್ಪಶಕ್ತಿಯುತ ಅಸಮರ್ಥ ನೆನ್ನುತ್ತಾರೆ. ಯಾವನಲ್ಲಿ ಶಕ್ತಿಯು ಅಧಿಕ ಅಂಶವಿರುವುದೋ ಅವನಿಗೆ ಸಮರ್ಥನೆನ್ನುತ್ತಾರೆ. ವಿಷ್ಣು, ಶಿವ, ಮೊದಲಾದವರಲ್ಲಿ ಶಕ್ತಿಯ ಅಂಶವು ಅಧಿಕವಾಗಿದೆ. ಈ ಕಾರಣದಿಂದ ಅವರಿಗೆ ಅಧಿಕ ಸಮರ್ಥರೆನ್ನುತ್ತಾರೆ.

ಈ ಪ್ರಕಾರವಾಗಿ ಭಗವತಿಯ ಸಾಮಾನ್ಯರೂಪ ಶಕ್ತಿಯ ಅಂಶದ ಆಧಿಕ್ಯದಿಂದ ವಿಷ್ಣು, ಶಿವ, ಗಣೇಶ, ಸೂರ್ಯ ಇವರ ಮಹಿಮೆಯು ಪ್ರಸಿದ್ಧವಾಗಿದೆ. ಮತ್ತು ಶಕ್ತಿಯಿಂದ ರಹಿತವಾಗಲು ಹೇಗೆ ಪ್ರಾಣವಿಲ್ಲದೆ ಶರೀರವು ಅಮಂಗಲ ರೂಪವಾಗುವುದೋ ಹಾಗೆ ಸರ್ವದೇವತೆಗಳು ಶಕ್ತಿ ಇಲ್ಲದೆ ಅಮಂಗಲ ರೂಪರಾಗುವರು. ಯಾವ ಶಕ್ತಿಯ ಆಧಿಕ್ಯದಿಂದ ದೇವತೆಗಳ ಮಹಿಮೆಯು ಪ್ರಸಿದ್ಧವಾಗಿರುವುದೊ, ಆ ಮಹಿಮೆಯೇ ಶಕ್ತಿಯದಾಗಿರುವದು; ದೇವತೆಗಳದು ಅಲ್ಲ. ವಿಷ್ಣು ಶಿವಾದಿಗಳು ಭಗವತಿಯ ಸಾಮಾನ್ಯರೂಪ ಶಕ್ತಿಯನ್ನು ಅಧಿಕವಾಗಿ ಉಪಾಸನೆಮಾಡಿದ್ದರಿಂದ ಅವರಲ್ಲಿ ಶಕ್ತಿಯು ಅಧಿಕ ಅಂಶವಿದೆ. ಈ ಪೂರ್ವದಲ್ಲಿ ಹೇಳಿದ ಅಂದರೆ ೬೩ ಮತ್ತು ೬೪ನೇ ಚೌಪಾಈ ಗಳಲ್ಲಿ ಇದ್ದ ಅಭಿಪ್ರಾಯವು ಆ ಭಕ್ತರ ಅಭಿಪ್ರಾಯವಾಗಿದೆ.

ಹೇಗೆ ಭಗವತಿಯ ನಿರಾಕಾರರೂಪಶಕ್ತಿಯ ಅನಂತ ಅಂಶಗಳುಳ್ಳವೆಯೋ ಹಾಗೆ ಸಾಕಾರರೂಪದ ಅನಂತ ಅಂಶಗಳೂ ಇವೆ. ಈ ಸಾಕಾರ ಅಂಶಗಳಲ್ಲಿ ಕಾಲೀರೂಪವು ಪ್ರಧಾನವಾದದ್ದು ಮತ್ತು ಮಾಹೇಶ್ವರೀ, ವೈಷ್ಣವೀ ಗೌರೀ, ಗಣೇಶೀ ಮೊದಲಾದ ಪ್ರಧಾನ ಅಂಶಗಳೂ ಇರುವವು. ವಿಷ್ಣುವಿಗೆ ಭಗವತಿಯ ಉಪಾಸನೆಯಿಂದ ವೈಷ್ಣವೀನಾಮಕ ಭಗವತಿಯ ಅಂಶದ ಲಾಭವು, ಇದರಂತೆ ಅನ್ಯದೇವತೆಗಳಿಗೂ ಭಗವತಿಯ ಉಪಾಸನೆಯಿಂದ ಮಾಹೇಶ್ವರೀ ಮೊದಲಾದ ಅಂಶಗಳ ಲಾಭವೂ ಆಗಿವೆ. ಇವರೆಲ್ಲರಲ್ಲಿ ವಿಷ್ಣು ಮತ್ತು ಶಿವ ಈ ಉಭಯತ್ರರು ಭಗವತಿಯ ಶ್ರೇಷ್ಠಭಕ್ತರಾಗಿದ್ದಾರೆ. ಕಾರಣವೇನೆಂದರೆ;—ಧ್ಯಾನ ಮಾಡುವವನಿಗೆ ಧ್ಯೇಯ ರೂಪದ

ಪ್ರಾಪ್ತಿಯಾಗುವುದೇ, ಉಪಾಸನೆಯ ಪರಮಾವಧಿಯು. ವಿಷ್ಣು ಮತ್ತು ಶಿವಇವರಿಗೆ ಉಪಾಸನೆಯಿಂದ ಧ್ಯೇಯರೂಪದಪ್ರಾಪ್ತಿಯು ಆಗಿರುವುದು. ಈ ಕಾರಣದಿಂದ ಪ್ರಧಾನ ಉಪಾಸಕರಾಗಿದ್ದಾರೆ. ಈ ಸಂಗತಿಯನ್ನು ಈ ಕೆಳಗಿನ ಅರ್ಧ ಚೌಪಾಈ ಯಿಂದ ಪ್ರತಿಪಾದನ ಮಾಡಿದೆ.

॥ ಅರ್ಧ ಚೌಪಾಈ ॥

ಲಾಖ ಕರೋರಿ ಮಾತ್ರಿಕಾ ಗನ ಪುನಿ ।
ತಂತ್ರ ಗ್ರಂಥ ಲಖಿ ಅಂಸ ಖಕಲ ಗುನಿ ॥೬೫॥

ಅರ್ಥ—ಲಕ್ಷ, ಮತ್ತು ಕೋಟಿ ಸಂಖ್ಯಾಕವಾದ ಅಂಶಗಳನ್ನು ಪಾಶುಪತವೆಂಬ ತಂತ್ರಗ್ರಂಥದಲ್ಲಿ ವರ್ಣಿಸಿದ್ದಾರೆ.

॥ ಚೌ ಪಾ ಈ ॥

ಕಾಲೀ ತಾಕೊ ಅಂಸ ಪ್ರಧಾನಾ ।
ಮಾಹೇಶ್ವರೀ ಆದಿ ಲಖಿ ನಾನಾ ॥
ಹರಿ ಹರ ಬ್ರಹ್ಮ ಸಕಲ ತಿಹೀ ಧ್ಯಾವೈ ।
ನಿಜನಿಜ ಅಂಸ ಕೃಪಾ ತಿಹಿ ಪಾವೈ ॥೬೬॥

ಅರ್ಥ—ಈ ಅಂಶಗಳಲ್ಲಿ ಕಾಲೀ ಅಂಶವು ಪ್ರಧಾನವು, ಮತ್ತು ಮಹೇಶ್ವರೀ ಅಂಶವೂ ಶ್ರೇಷ್ಠವು. ಹರಿ, ಹರ, ಬ್ರಹ್ಮಾದಿಗಳು ಈ ಶ್ರೇಷ್ಠಾಂಶಗಳನ್ನು ಧ್ಯಾನ ಮಾಡಿದ್ದರಿಂದ ಆ ಭಗವತಿಯ ಕೃಪೆಯಿಂದ ನಿಜಾಂಶವು ಪ್ರಾಪ್ತವಾಗಿದೆ.

ಟಿಪ್ಪಣಿ—೧. ಹರಿಹರಾದಿಗಳು ನಿಜ ನಿಜ ಅಂದರೆ ವೈಷ್ಣವೀ ಮಾಹೇಶ್ವರೀ ಮೊದಲಾದ ಭಗವತಿಯ ಅಂಶಗಳನ್ನು ಆ ದೇವಿಯ ಕೃಪೆಯಿಂದಲೇ ಹೊಂದಿರುವರು ಎಂಬದಾಗಿ ದೇವೀಭಾಗವತದಲ್ಲಿ ಸ್ಪಷ್ಟವಾಗಿ ವಿವರಿಸಿದೆ.

॥ ಚೌ ಪಾ ಈ ॥

ಧ್ಯೇಯರೂಪ ಧ್ಯಾತಾ ಹ್ವೈಜಬಹೀ।
ಸಿದ್ಧ ಉಪಾಸನ ಲಖಿಯೆ ತಬಹೀ ॥
ಅಸ ಉಪಾಸನಾ ಹರಿ ಅರು ಹರಕೀ।
ನಾರೀ ಮೂರ್ತಿ ಧರಿ ತಜಿ ನರಕೀ ॥೬೭॥

ಅರ್ಥ—ಉಪಾಸಕನು ಯಾವಾಗ ಉಪಾಸ್ಯದೇವತೆಯ ರೂಪವನ್ನು ಹೊಂದುವನೋ ಆಗ ಅವನನ್ನು ಸಿದ್ಧ ಉಪಾಸಕನೆಂದು ತಿಳಿ? ಹರಿಹರರು ಈ ಪ್ರಕಾರ ಉಪಾಸನೆಯನ್ನು ಮಾಡಿ ಪುರುಷತ್ವವನ್ನು ತ್ಯಾಗಮಾಡಿ ಸ್ತ್ರೀವೇಷವನ್ನು ಪಡೆದನು.

॥ ದೋ ೀ ಹಾ ॥

ಅಮೃತ ಮಥನ ಪ್ರಸಂಗಮ್ಯೆ । ಹರಿ ಮೋಹಿನೀ ಸ್ವರೂಪ ॥
ಅರ್ಧ ಅಂಗ ಸಿವಕೊ ಲಸ್ಯೆ। ದೇವೀ ರೂಪ ಅನೂಪ ॥೬೮॥

ಟೀಕಾ॥ ಸಮುದ್ರ ಮಥನ ಮಾಡಲು ಅಮೃತವು ಪ್ರಕಟವಾಯಿತು. ಅದರಿಂದ ಸುರಾಸುರರಲ್ಲಿ ವಿವಾದವು ಬೆಳೆಯಿತು. ಈ ವಿವಾದವನ್ನು ಪರಿಹರಿಸುವುದು ವಿಷ್ಣುವಿಗೆ ಅಸಾಧ್ಯವಾಗಲು, ಅವನು ತನ್ನ ಉಪಾಸ್ಯಳಾದ ಭಗವತಿಯ ಧ್ಯಾನವನ್ನು ಏಕಾಗ್ರಚಿತ್ತದಿಂದ ಮಾಡಲು, ಆಗ ಅವನಿಗೆ ಉಪಾಸ್ಯರೂಪವು ಪ್ರಾಪ್ತವಾಯಿತು.ಆರೂಪದ ಮಹಾತ್ಮೆಯಿಂದ ಅಸುರರು ಸಹಾ ಅನುಕೂಲಿಗಳಾದರು. ಇದರಂತೆ ಶಿವನು ಸಹಾ ಸಮಾಧಿಯಲ್ಲಿ ಭಗವತಿಯ ಧ್ಯಾನಮಾಡಿದ್ದರಿಂದ ಶಿವನ ಅರ್ಧಶರೀರವು ಉಪಾಸ್ಯರೂಪವುಳ್ಳದ್ದಾಯಿತು. ಕದಾಚಿತ್ ವಿಕ್ಷೇಪದಿಂದ ಸಮಾಧಿಯ ಅಭಾವವಾದ್ದರಿಂದ ಶಿವನ ಸರ್ವವಿಗ್ರಹವು ಉಪಾಸ್ಯರೂಪವನ್ನು ಹೊಂದಲಿಲ್ಲ. ಈ ಪ್ರಕಾರದಿಂದ ಸರ್ವದೇವತೆಗಳು ಭಗವತಿಯ ಉಪಾಸಕರೇ ಆಗಿದ್ದಾರೆ. ಈ ಉಪಾಸನಾ ಕ್ರಮವು ಎರಡು ವಿಧವಾಗಿದೆ. (೧) ದಕ್ಷಿಣ ಆಮ್ನಾಯ ಮತ್ತೊಂದು (೨) ಉತ್ತರ ಆಮ್ನಾಯ. ಈ ಎರಡು ವಿಧಗಳಲ್ಲಿ ಪ್ರಥಮತಃ ದಕ್ಷಿಣ ಆಮ್ನಾಯವನ್ನು ಹೇಳಿ, ಆಮೇಲೆ ಉತ್ತರ ಆಮ್ನಾಯವನ್ನು ಹೇಳುವೆವು.

॥ ಚೌ ಪಾ ಈ ॥

ಭಕ್ತ ಭಗವತೀಕೆ ಹರಿ ಹರ ಹೈ ।
ಇನ ಸಮ ಕೌನ ಉಪಾಸನ ಕರಿ ಹೈ ॥
ತದಪಿ ಮಹಾಮಾಯಾ ಜೊಧ್ಯಾವೈ ।
ತುರತ ಸಕಲ ಪುರುಷಾರಥ ಪಾವೈ ॥೬೯॥

ಅರ್ಥ॥ ಹರಿಹರರು ಭಗವತಿಯ ಪೂರ್ಣಭಕ್ತರಾಗಿದ್ದಾರೆ. ಅವರಂತೆ ಅನ್ಯರಾರು ಉಪಾಸನೆಯನ್ನು ಮಾಡುವರು ? ಯಾರಿಂದಲೂ ಸಾಧ್ಯವಿಲ್ಲ. ತಥಾಪಿ ಈ ಮಹಾಮಾಯೆಯ ಧ್ಯಾನವನ್ನು ಯಾರು ಮಾಡುವರೋ ಅವರು ಸರ್ವ ಪುರುಷಾರ್ಥಗಳನ್ನು ಹೊಂದುವರು.

॥ ಚೌ ಪಾ ಈ ॥

ನಹಿ ಸಾಧನ ಜಗಮ್ಯೆ ಅಸ ಔರಾ।
ಉಪಜೈ ಭೋಗ ಮೋಛ ಇಕಠೌರಾ ॥
ಭಕ್ತ ಭಗವತೀಕೋ ಜೊ ಜಗಮ್ಯೆ ।
ಭೋಗ್ಯೆ ಭೋಗ ನ ಆವತ ಭಗಮ್ಯೆ ॥೭೦॥

ಅರ್ಥ॥ ಇಂಥ ಅನ್ಯಸಾಧನವು ಈ ಜಗತ್ತಿನಲ್ಲಿ ಯಾವದೂ ಇಲ್ಲ. ಈ ಒಂದೇ ಸಾಧನದಿಂದ ಭೋಗ ಮೋಕ್ಷಗಳೆರಡೂ ಲಭಿಸುವುವು. ಯಾವ ಭಕ್ತನು ಈ ಜಗತ್ತಿನಲ್ಲಿ ಭಗವತಿಯ ಆರಾಧನೆಯನ್ನು ಮಾಡುವನೋ, ಅವನು ಇಹದಲ್ಲಿ ಸರ್ವಭೋಗಗಳನ್ನು ಅನುಭವಿಸುವನು. ಅವನ ಗರ್ಭವಾಸವು ತಪ್ಪುವುದು.

॥ ಚೌಪಾಈ ॥

ಸಿವಕೃತ ತಂತ್ರರೀತಿ ಯಹ ಗಾಈ ।
ಭಕ್ತಿ ಭಗವತೀ ಅತಿಸುಖ ದಾಈ ॥
ಪಂಚಮಕಾರ ನ ತಜಿಯೆ ಕಬಹೂ ।
ಜಿನಹಿ ಸನಾತನ ಸೇವತ ಸಬಹೂ ॥೭೧॥

ಅರ್ಥ॥ ಸುಖದಾಯಿನಿಯಾದ ಈ ಭಗವತಿಯ ಭಕ್ತಿಯ ಪ್ರಕಾರವನ್ನು ಶಿವಕೃತ ತಂತ್ರದಲ್ಲಿ ವರ್ಣಿಸಿರುವರು. ಯಾವನು ಕಾಲತ್ರಯಗಳಲ್ಲಿಯೂ ಪಂಚ 'ಮ' ಕಾರಗಳನ್ನು ತ್ಯಜಿಸದೆ ಭಗವತಿಯ ಧ್ಯಾನಾಸಕ್ತನಾಗುವನೋ ಅವನು ಸಹಾ ಸನಾತನಸುಖವನ್ನು ಹೊಂದುವನು.

॥ ಚೌ ಪಾ ಈ ॥

ಕೃಷ್ನದೇವ ಬಲದೇವ ಸುಜ್ಞಾನೀ ।
ಪ್ರಥಮಾ ಪಿಬತ ಸದಾ ಜ್ಞ್ಯಾ ಪಾನೀ ॥
ಔರಪ್ರಧಾನ ಪುರಾತನ ಜೇತೇ ।
ಸೇವತ ಸಕಲ ಮಕಾರಹಿ ತೇತೆ ॥೭೨॥

ಅರ್ಥ॥ ಕೃಷ್ಣ ಮತ್ತು ಬಲರಾಮ ಈ ಉಭಯರೂ ಸುಜ್ಞಾನಿಗಳಾಗಿ ಭಗವತಿಯ ಭಕ್ತರಾದ್ದರಿಂದ ಪ್ರಥಮ 'ಮ' ಕಾರವನ್ನೇ ಸೇವಿಸುವರು. ಇನ್ನು ಉಳಿದ ಶ್ರೇಷ್ಠ ಪುರಾತನರು ಪಂಚ 'ಮ' ಕಾರಗಳನ್ನೂ ಸೇವನೆ ಮಾಡುವರು.



॥ ಚೌ ಪಾ ಈ ॥

ತಿನ ಸೇವಕೀ ಜೊ ವಿಧಿ ಸಾರೀ ।
ಶಿವ ನಿಜಮುಖ ಭಾಖೀ ಉಪಕಾರೀ ॥
ಶಿವಕೊ ವಚನ ಧರೈ ಜೊ ಮನಮ್ಯೆ ।
ಲಹೈ ಸುಭೋಗ ಮೋಛ ಇಕ ತನಮ್ಯೆ ॥೭೩॥

ಅರ್ಥ॥ ಆ ಸೇವಾಪ್ರಕಾರವನ್ನು ಪರೋಪಕಾರಾರ್ಥವಾಗಿ ಶಿವನು ಸಂಪೂರ್ಣವಾಗಿ ಹೇಳಿರುವನು. ಆ ಶಿವ ವಚನವನ್ನು ಮನಸ್ಸಿನಲ್ಲಿ ಯಾರು ಧಾರಣಮಾಡುವರೋ ಅವರಿಗೆ ಒಂದೇ ಜನ್ಮದಲ್ಲಿ ಭೋಗ ಮತ್ತು ಮೋಕ್ಷಗಳು ಲಭಿಸುವುವು,

॥ ಚೌ ಪಾ ಈ ॥

ಗ್ರಂಥ ಭಾಗವತ ವ್ಯಾಸ ಬನಾಯೊ ।
ಉಪಪುರಾನ ಕಾಲೀ ಸಮುಝಾಯೊ ॥
ಭಕ್ತ ಭಗವತೀಕೀ ಇಕ ಗಾಈ ।
ಪೂಜಾ ವಿಧಿ ಸಗರೀ ಸಮುಝಾಈ॥೭೪॥

ಅರ್ಥ॥ ವ್ಯಾಸಮಹರ್ಷಿಯು ಭಾಗವತವನ್ನು ರಚಿಸಿದನು. ಇದರಂತೆ ಮತ್ತೊಂದು ಪುರಾಣದಲ್ಲಿ ಭಗವತಿಯ ಭಕ್ತಿಯೊಂದನ್ನೇ ಸ್ತವನಮಾಡಿ ಬಹುವಿಧವಾಗಿ ಪೂಜಾಪ್ರಕಾರವನ್ನು ಹೇಳಿರುವನು.

॥ ಚೌ ಪಾ ಈ ॥

ಧ್ಯಾತಾ ಸಕಲ ಭಗವತೀಕೆ ಹೈ ।
ಹರಿ ಹರ ಸೂರ ಗನೇಸ ಜಿತೆ ಹೈ ॥
ಸಕಲ ಪಿಯೆ ಪ್ರಥಮಾ ಮತಿವಾರೆ ।
ಪೂಜತ ಸಕ್ತಿ ಮಗ್ನ ಮನಸಾರೆ ॥೭೫॥

ಅರ್ಥ ॥ ಹರಿ, ಹರ, ಸೂರ್ಯ, ಗಣೇಶ, ಮೊದಲಾದ ಸಮಸ್ತರು ಭಗವತಿಯ ಉಪಾಸಕರೇ ಆಗಿರುವರು. ಪ್ರಥಮ 'ಮ' ಕಾರವನ್ನು ಸೇವಿಸಿ, ಉನ್ಮತ್ತರಾಗಿ ಏಕಾಗ್ರಚಿತ್ತದಿಂದ ದೇವಿಯನ್ನು ಪೂಜಿಸುವರು.

|| ಅರ್ಥ ಚೌಪಾಈ ||

ಜಗ ಜನನೀಜಾಗ್ಯೆ ಇಕ ದೇವೀ।
ಪರಮಾನಂದಲಹ್ಯೆ ತಿಹಿ ಸೇವಿ||

ಅರ್ಥ || ಜಗಜ್ಜನನಿಯ ಸೇವೆಯೊಂದರಿಂದಲೇ ಪರಮಾನಂದವನ್ನು ಹೊಂದುವರು. ದೇವಿಯೊಬ್ಬಳೇ ಜಾಗ್ರತಳು.

||೫೦೫|| ಸೂರ್ಯ ಭಕ್ತರ ಉತ್ತರ.

|| ಅರ್ಥಚೌಪಾಈ ||

ಸೂರ್ಯಭಕ್ತ ಭಗವತೀಕೊ ಯಹ ಸುನಿ।
ಕ್ರೋಧ ಸಹಿತ ಬೋಲ್ಯೋ ಇಕಮುನಿ ಪುನಿ ||೭೬||

ಅರ್ಥ || ಭಗವತಿಯ ಮಹಾತ್ಮ್ಯವನ್ನು ಕೇಳಿ, ಸೂರ್ಯಭಕ್ತನಾದ ಒಬ್ಬ ಮುನಿವರ್ಯನು ಕೋಪದಿಂದ ಮಾತನಾಡಹತ್ತಿದನು.

|| ಚೌಪಾಈ ||

ಸುನ ರಾಜನ ಬಾನೀ ಇಕ ಮೋರೀ।
ಭಾಖೂ ಝೂಟನ ಸಪಥ ಕರೋರೀ ||
ಅತಿ ದಾಪಿಷ್ಟ ನೀಚ ಮತ ಯಾಕೊ।
ಶ್ರವನ ಸನೇಹ ಸುನ್ಯೋ ತ್ಯೆ ಜಾಕೊ ||೭೭||

ಅರ್ಥ—ಮಹಾರಾಜನೇ ! ನಾನು ಕೋಟಿ ಶಪಥಗಳನ್ನುಮಾಡಿ ಯಥಾರ್ಥ ವಚನವನ್ನುಹೇಳುತ್ತೇನೆ. ಈ ಪರಿಯಂತರ ನೀನು ಆಸ್ಥೆಯಿಂದ ಲಾಲಿಸಿದ ವಚನಗಳೆಲ್ಲವೂ ಅಸತ್ಯವಾದವುಗಳು. ಮತ್ತು ಪಾಪ ಫಲದಾಯಕಗಳಾಗಿರುವುವು.

|| ಚೌ ಪಾ ಈ ||

ಔಗುನ ಜಿತೆ ಬಖಾನನ ಜಗಮ್ಯೆ ।
ತೆ ಗಿನಿಯತ ಗುನಗುನ ಯಾ ಭಗಮ್ಯೆ ||
ಮಧ್ಯ ಮಲೀ ನಹಿ ತೀರಥ ರಾಖತ।
ಸುದ್ಧ ನಾಮು ಆಮಿಷಕೊ ಆಖತ ||೭೮||

ಅರ್ಥ|| ಈ ಭೋಲೋಕದಲ್ಲಿ ಯಾವ ಅವಗುಣಗಳಿರುವವೋ ಅವುಗ



ನ್ನು ಈ ದೇವೀ ಉಪಾಸಕ ಮತದಲ್ಲಿ ಸುಗುಣಗಳೆಂದು ತಿಳಿಯುವರು, ಮಲಿನವಾದ ಮದ್ಯಕ್ಕೆ ಇವರು ತೀರ್ಥವೆಂದೂ, ಮಾಂಸಕ್ಕೆ ಶುದ್ಧ ವೆಂದೂ ಹೆಸರನ್ನಿಟ್ಟದ್ದಾರೆ.

|| ಚೌ ಪಾ ಈ ||

ಕಹತ ಔರ ಯೂ ಸಬ ವಿಪರೀತಾ।
ಸಂಭುತಂತ್ರ[೧] ಸೇವೀ ಮತಿರೀತಾ ||
ದಚ್ಛಿನ ಸಂಪ್ರದಾಯು ಜೊ ದೂಜೀ।
ಯದ್ಯಪಿ ಶ್ರೇಷ್ಟ ಅನೇಕ ನ ಪೂಜೀ ||೭೯||

ಅರ್ಥ—ಇಂಥ ಎಷ್ಟೋ ವಿಪರೀತ ವಚನಗಳುಂಟು; ಈ ಕಾರಣ ದಿಂದ ಶಂಭುತಂತ್ರವು ಮಿಥ್ಯಾಭೂತವಾದದ್ದೆಂದು ಯಾರೂ ಸೇವಿಸುವುದಿಲ್ಲ, ದಕ್ಷಿಣ ಸಂಪ್ರದಾಯವು ಸಿಶ್ಚಿತವಾಗಿದ್ದರೂ ಸಹ, ಶ್ರೇಷ್ಠರು ಅದನ್ನು ಮನ್ನಿಸುವದಿಲ್ಲ,

ಟಿಪ್ಪಣಿ—[೧ "ಶಂಭುಶಂತ್ರ" ವೆಂದರೆ, ಪಾಮರ ಪುರುಷರಿಗೆ ಸಹ ಕಿಂಚಿತ್ ಆಶೆಯು ಇರುವುದು ಎಂಬ ಅಭಿಪ್ರಾಯದಿಂದ ವಾಮ ಮಾರ್ಗದ ಪ್ರತಿಪಾದಕವಾದ ಶಿವತಂತ್ರ (ವಾಮತಂತ್ರ)ವು ಅದರ ಅನುಸಾರಿಗಳಾದವರ 'ಮತಿರೀತಾ, ಎಂದರೆ ಬುದ್ಧಯುಕ್ತಿ ಪ್ರಮಾಣಗಳಿಂದ ಶೂನ್ಯವಾಗಿರುವುದರಿಂದ, ಬರಿಯದು ಆಗಿದೆ.

|| ಚೌಪಾಈ ||

ತಥಾಪಿ ಬಿನ ಭಾನೂ ಸಬ ಅಂಧೆ।
ಇನ ಸಬಕೆ ಮನ ಜನಮ್ಯೆ ಬಂಧೆ ||
ಕರತ ಭಾನು ಸಗರೊ ಉಜಿಯಾರೊ।
ತಾ ಬಿನ ಹೋತ ತುರತ ಅಂಧಿಯಾರೊ ||೮೦||

ಅರ್ಥ||ತಥಾಪಿ ದಿನಕರನಿಲ್ಲದಿರಲು ಸರ್ವರೂ ಅಂಧರಂತೆಯೇ ವರ್ತಿಸುವರು. ಸರ್ವರ ಮನಸ್ಸು ಅವನಲ್ಲಿಯೇ ಬದ್ಧವಾಗಿರುವುದು. ಭಾನುವಿನಿಂದಲೇ ಸರ್ವಜಗತ್ತು ಪ್ರಕಾಶಿಸುವುದು ; ಅವನು ಇಲ್ಲದಿರಲು ಸರ್ವತ್ರ ಅಂಧಕಾರವು ಪ್ರಸರಿಸುವುದು.

|| ಚೌ ಪಾ ಈ ||

ಔರ ಪ್ರಕಾಸಕ ಜಗಮ್ಯೆ ಜೆ ಪ್ಯೆ।

ಅಂಸ ಸಬೈ ಸೂರಜಕೆ ತೆ ಹೈ ॥
ಭಾನು ಸಮಾನ ಕೌನ ಹಿತಕಾರೀ ।
ಭ್ರಮತ ಆಪ ಪರಹಿತ ಮತಿ ಧಾರೀ ॥೮೧॥

ಅರ್ಥ—ಅನ್ಯಪ್ರಕಾಶಕರು ಈಜಗತ್ತಿನಮೇಲೆ ಯಾರು ಇರುವರೋ ಅವರು ನಿಶ್ಚಯವಾಗಿ ಸೂರ್ಯಾಂಶರು. ಸೂರ್ಯನಂತೆ ಹಿತಮಾಡುವವರು ಯಾರೂ ಅಲ್ಲ. ಪರೋಪಕಾರಾರ್ಥವಾಗಿ ಅವನು ಸ್ವತಃ ಸರ್ವದಾ ಸಂಚರಿಸುತ್ತಿರುವನು.

॥ ಚೌಪಾಈ ॥

ಕಾಲ ಅಧೀನ ಹೋತ ಸಬ ಕಾರಜ॥
ತಾಹಿ ತ್ರಿವಿಧ ಭಾಖತ ಆಚಾರಜ ॥
ವರ್ತಮಾನ ಭಾವೀ ಅರು ಭೂತಾ ।
ಸೂರಜ ಕ್ರಿಯಾ ಕರತ ಯಹ ಸೂತಾ ॥೮೨॥

ಅರ್ಥ—ಸರ್ವಕಾರ್ಯಗಳು ಕಾಲಾಧೀನವಾಗಿರುವುವು. ಆ ಕಾಲಗಳು ಭೂತ, ವರ್ತಮಾನ, ಭವಿಷ್ಯ ಎಂಬದಾಗಿ ತ್ರಿವಿಧವಾಗಿರುವುವೆಂದು ಸುಜ್ಞರು ಹೇಳುವರು. ಸೂರ್ಯನ ಗತಿಯಿಂದಲೇ ಈಕಾಲಕ್ರಮವು ನಡೆಯುತ್ತಿರುವುದು.

॥ ಚೌಪಾಈ ॥

ಯಾ ವಿಧಿ ಸಕಲ ಭಾನುತೈ ಉಪಜೈ ।
ಭಸ್ಮ ಹೋತ ಸಬ ಜಬ ವಹ ಕುಪಿಜೈ ॥
ಭಾನು ರೂಪ ದ್ವೈ ಭಾಂತಿ ಪಿಛಾನಹು ।
ನಿರಾಕಾರ ಸಾಕಾರಹಿ ಜಾನಹು ॥೮೩॥

ಅರ್ಥ — ಸರ್ವವೂ ಭಾನುವಿನಿಂದಲೇ ಉತ್ಪನ್ನವಾಗುವುವು. ಅವನು ಕುಪಿತನಾದ ಪಕ್ಷದಲ್ಲಿ ಸರ್ವವೂ ಭಸ್ಮೀಭೂತವಾಗುವುವು. ಈದಿವಾಕರನಿಗೆ ಸಾಕಾರ ನಿರಾಕಾರ ಎಂಬ ಎರಡು ರೂಪಗಳಿರುವವು.

॥ ಚೌಪಾಈ॥

ನಿರಾಕಾರಪರಕಾಸ ಜು ಕಹಿಯೆ ।



ನಾಮ ರೂಪಸೈ ವ್ಯಾಪಕ ಲಹಿಯೆ॥
ಅಧಿಷ್ಠಾನ ಸಬಕೊ ಸೊ ಏಕಾ।
ಜಪತ ವಿವರ್ತ ಹ್ವೈ ಜಿಹಿ ಅವಿವೇಕಾ ॥೮೪॥

ಅರ್ಥ —ನಿರಾಕಾರವೆನ್ನುತ್ತಿರುವ ಪ್ರಕಾಶವು ನಾಮರೂಪಗಳಲ್ಲಿ ವ್ಯಾಪಕವಾಗಿರುವುದು. ಅದು ಸರ್ವದಲ್ಲಿಯೂ ಅಧಿಷ್ಠಾನವಾಗಿರುವುದು. ಅದನ್ನು ತಿಳಿಯದೆ ಸೂರ್ಯನಿಗೆ ಯಾವತ್ತೂ ಜಗತ್ತು ವಿವರ್ತವಾಗಿರುವುದು.

॥ಅರ್ಥ ಚೌಪಾಈ॥

"ಅಹಂ ಭಾನು" ಅಸವೃತ್ತಿ ಉದೈ ಜಬ ।
ತಾಮೈ ಪ್ರಗಟ ವಿನಾಸತ ತಮ ಸಬ ॥೮೫॥

ಅರ್ಥ॥ ಸೂರ್ಯನ ಸ್ವರೂಪಗಳು ಎರಡು ಉಂಟು: ಒಂದು ನಿರಾಕಾರಪ್ರಕಾಶ; ಮತ್ತೊಂದು ಸಾಕಾರಪ್ರಕಾಶ. ಇವುಗಳಲ್ಲಿ ನಿರಾಕಾರಪ್ರಕಾಶವು ಸರ್ವನಾಮರೂಪಗಳಲ್ಲಿ ವ್ಯಾಪಕವಾಗಿದೆ. ಯಾವುದನ್ನು ವೇದಾಂತಿಗಳು ಭಾತಿ ಎಂಬ ಶಬ್ದದಿಂದ ವ್ಯವಹಾರಮಾಡುತ್ತಿರುವರೋ, ಆ ನಿರಾಕಾರ ಪ್ರಕಾಶವು ಸೂರ್ಯನ ಸಾಮಾನ್ಯರೂಪವು. ಸರ್ವಜಗತ್ತಿನ ಅಧಿಷ್ಠಾನವೂ ಅದೇಆಗಿದೆ. ಇದರ ಅಜ್ಞಾನದಿಂದ ಜಗತ್ತಿನ ವಿವರ್ತಭಾನವಾಗುತ್ತಿದೆ. ಈ ನಿರಾಕಾರ ಪ್ರಕಾಶವೇ ಅಂತಃಕರಣದ ವೃತ್ತಿಯಲ್ಲಿ ಪ್ರತಿಬಿಂಬಸಹಿತ ಜ್ಞಾನವೆನ್ನುವರು. "ಅಹಂ ಭಾನು" ಎಂಬ ಅಂತಃಕರಣದ ವೃತ್ತಿಯೂ ಪ್ರಕಾಶದಿಂದ ಪ್ರತಿಬಿಂಬಸಹಿತವಾಗಲು, ಆಗ ಅಜ್ಞಾನ ನಿವೃತ್ತಿದ್ವಾರಾ ಜಗತ್ತಿನ ನಿವೃತ್ತಿಯಾಗುವುದು.

॥ಚೌಪಾಈ॥ ಸುನಿ ಸಾಕಾರರೂಪ ಯಹತಾಕೋ।
೧
ಹೋಯ ಚಾಂದಿನಾ ದಿನಮೈ ಜಾಕೋ॥
ತಾಕೆ ಅಂಸ ಔರ ಬಹು ತೇರೆ ।
ಚಂದ ತಾರಕಾ ದೀಪ ಘನೇರೆ ॥೮೬॥

ಅರ್ಥ ॥ ಉದಯಕಾಲದಲ್ಲಿ ಯಾವನ ತೇಜವು ಪ್ರಕಾಶಿಸುವುದೋ ಅದು ಭಾನುವಿನ ಸಾಕಾರರೂಪವು. ಇದಲ್ಲದೆ ಚಂದ್ರ, ನಕ್ಷತ್ರ, ಮೊದಲಾದ ಅಂಶಗಳು ಬಹಳ ಇವೆ.

ಟಿಪ್ಪಣಿ—೧. ಪ್ರಕಾಶ.

||ಚೌಪಾಈ||

ಯಾತೈ ದ್ವೈವಿಧ ಭಾನು ಬತಾಯೊ ।
ಜ್ಞೇಯ ಧ್ಯೇಯಕೊ ಭೇದ ಜನಾಯೊ ||
ವೇದ ಸಕಲ ಯಾಹೀಕೊ ಬಾಖಿತ।
ರೂಪ ಪ್ರಕಾಸ ಸತ್ಯ ತಿಹಿ ಆಖತ ||೮೭||

ಅರ್ಥ || ನಿರಾಕಾರ, ಮತ್ತು ಸಾಕಾರ ಎಂಬ ಎರಡು ರೂಪಗಳು ಭಾನುವಿಗೆ ಉಂಟು; ಇವುಗಳಲ್ಲಿ ನಿರಾಕಾರ ರೂಪವು ಜ್ಞೇಯವು. ಸಾಕಾರ ರೂಪವು ಧ್ಯೇಯವು. ಇದಕ್ಕೇ ವೇದಾಂತದಲ್ಲಿ ನಿರ್ಗುಣ, ಸಗುಣ, ಭೇದದಿಂದ ದ್ವಿವಿಧ ಬ್ರಹ್ಮವೆನ್ನುತ್ತಾರೆ.

ಟಿಪ್ಪಣಿ—೧. ವೇದದ ಅಂತಭಾಗರೂಪ ಉಪನಿಷತ್ತುಗಳಲ್ಲಿ.

||ಅರ್ಥ ಚೌಪಾಈ||

ಜಾಮ್ಯೆ ಲೇಸ ನ ತಮಕೊ ಕಬಹೀ ।
ಲಖಿ ತಿಹಿ ಜಗ ಜನ ಜಾಗತ ಸಬಹೀ ||೮೮||

ಅರ್ಥ||ಯಾವನಲ್ಲಿ ಕಿಂಚಿತ್ತಾದರೂ ತಮಾದಿಗಳು ಇಲ್ಲವೆಂಬುದನ್ನು ತಿಳಿದು ಜಗತ್ತಿನಲ್ಲಿಯ ಪ್ರಾಣಿಗಳು ಸ್ವಸ್ವಕರ್ಮಗಳಲ್ಲಿ ಜಾಗ್ರತರಾಗಿರುವರೊ

||ಚೌಪಾಈ||

ಕಬಹು ನ ಸೋವೈ ಸೊ ಯೂಜಾಗೈ ।
ಧ್ಯಾನಕರತ ತಾಕೊ ತಮ ಭಾಗೈ ||
ಔಸಹಿ ಜಾಗತ ಬಾಖತ ಸಗರೆ ।
ರಾಜನ ಜಾನಿ ಝೂಠತೆ ಝಗರೆ |||೮೯||

ಅರ್ಥ|| ಎಂದೂ ನಿದ್ರಿತನಾಗದೆ ಸದಾ ಜಾಗ್ರತನಾಗಿರುವನೋ, ಯಾವನ ಧ್ಯಾನದಿಂದ ತಮವು ನಾಶವಾಗುವುದೋ, ಅಂಥ ದಿವಾಕರನನ್ನು ತ್ಯಾಗ ಮಾಡಿ, ಅನ್ಯದೇವತೆಗಳು ಜಾಗ್ರತರೆಂದು ಹೇಳುವ ವಚನಗಳೆಲ್ಲವು ಮಿಥ್ಯ ವಾದವುಗಳೆಂದು ತಿಳಿ.

## ೫೦೬ ಮೇಲೆಹೇಳಿದ ಮತಗಳ ಅನುವಾದಪೂರ್ವಕಸ್ಮಾರ್ತಮತ.

||ಚೌಪಾಈ||

ಐಸ್ಯೆಪಾಂಚ ಉಪಾಸಕ ಬೋಲೆ।



ನಿಜಗುಣ ಅವಗುಣ ಪರಕೆ ಖೋಲೆ ||
ಪಂಡಿತ ಔರ ಅನೇಕ ಜು ಆಯೆ ।
ಭಿನ್ನ ಭಿನ್ನ ನಿಜ ಮತ ಸಮಝಾಯೆ ||೯೦||

ಅರ್ಥ|| ಹೇಗೆ ಈ ಐದು ಜನ ಉಪಾಸಕರು ಪರಸ್ಪರ ವಿರುದ್ಧವಾಕ್ಯಗಳನ್ನು ಹೇಳಿದರೋ, ಹಾಗೆ ಅನೇಕಜನ ಪಂಡಿತರು ತಮ್ಮತಮ್ಮ ಬುದ್ಧಿಯ ಅನುಸಾರವಾಗಿ ವಿರುದ್ಧವನ್ನೂ ಹೇಳಿದರು.

ಹೇಗೆ ಈ ಐವರ ಮತಗಳು ಪರಸ್ಪರ ವಿರುದ್ಧವಾಗಿರುವವೋ ಹಾಗೆ ಸ್ಮಾರ್ತಮತಾನುಯಾಯಿಗಳಾದ ಪಂಡಿತರು ಈ ಐದುದೇವತೆಗಳಲ್ಲಿ ಭೇದ ಬುದ್ಧಿಯನ್ನು ಮಾಡುವುದಿಲ್ಲ. ಇವರ ಮತವಾದರೂ ಸಹ ಇವರೆಲ್ಲರ ಮತಕ್ಕಿಂತ ವಿರುದ್ಧವಾಗಿದೆ. ಕಾರಣವೇನೆಂದರೆ-ವಿಷ್ಣು ಸಮಾನರಾದ ಅನ್ಯದೇವರು ಇಲ್ಲ. ಸರ್ವರೂ ವಿಷ್ಣುಭಕ್ತರಾಗಿದ್ದಾರೆ. ಮತ್ತು ವಿಷ್ಣುವಿನ ಯಾವ ರಾಮ ಕೃಷ್ಣನಾರಾಯಣಾದಿ ನಾಮಗಳು ಇರುವುವೋ, ಈ ನಾಮಗಳಿಗೆ ಸಮಾನ ಅನ್ಯದೇವರ ನಾಮಗಳು ಇರುವುವೆಂದು ಯಾವನು ತಿಳಿಯುವನೋ,[೧] ಅವನು ನಾಮಾಪರಾಧಿಯು. ಅವನಿಗೆ ರಾಮಕೃಷ್ಣಾದಿ ನಾಮೋಚ್ಚಾರಣೆಯ ಯಥಾರ್ಥಫಲವು ಲಭಿಸುವುದಿಲ್ಲ, ಎಂದು ವೈಷ್ಣವರ ಮತವು.

ಇದರಂತೆ ಶೈವಮತದಲ್ಲಿ ಶಿವನ ಸಮಾನರಾದ ಅನ್ಯದೇವರು ಇಲ್ಲ. ಮತ್ತು ಶಿವನಾಮೋಚ್ಚಾರಣೆಯ ಫಲವು ವಿಷ್ಣು ನಾಮೋಚ್ಚಾರಣದಿಂದ ಉಂಟಾಗುವದಿಲ್ಲ.

ಈ ರೀತಿಯಾಗಿ ಸರ್ವರ ಮತದಲ್ಲಿ ತಮ್ಮ ತಮ್ಮ ಉಪಾಸ್ಯದೇವರ ಸಮಾನ ಅನ್ಯದೇವರಿಲ್ಲವೆಂಬದಾಗಿ ಪ್ರತಿಪಾದಿಸುವರು. ಆದರೆ ಸ್ಮಾರ್ತ ಮತದಲ್ಲಿ ಸರ್ವದೇವರೂ ಸಮಾನರೆಂದು ನಿರ್ಣಯವಿರುವದರಿಂದ ಅವರ ಮತವು ಈ ಐದು ಮತಕ್ಕೂ ವಿರುದ್ಧವಾಗಿದೆ.

ಟಿಪ್ಪಣಿ,[೧] ದಶನಾಮಾಪರಾಧಿಗಳಲ್ಲಿಯ ಯಾವದಾದರೊಂದು ನಾಮಾಪರಾಧವನ್ನು ಮಾಡಿದರೂ ಸಹ ಅವನು ನಾಮಾಪರಾಧಿಯಾಗುವನು. ಆ ದಶವಿಧನಾಮಾಪರಾಧಗಳು ಯಾವುವೆಂದರೆ,—

ಶ್ಲೋಕ|| ಸನ್ನಿಂದಾಸತಿ ನಾಮವೈ ಭವಕಥಾ, ಶ್ರೀಶೇಶಯೋರ್ಭೇದಧೀ।
ರಶ್ರದ್ಧಾ ಶ್ರುತಿಶಾಸ್ತ್ರದೈಶಿಕಗಿರಾಂ ನಾಮ್ನ್ಯರ್ಥವಾದಭ್ರಮಃ||
ನಾಮ್ನಾಸ್ತೀತಿ ನಿಷಿದ್ಧವೃತ್ತಿ ವಿಹಿತತ್ಯಾಗೋಹಿ ಧರ್ಮಾಂತರೈ ||
ಸಾಮ್ಯಂ ನಾಮ್ನಿ ಜಪೆ ಶಿವಸ್ಯಚ ಹರೇರ್ನಾಮಾಪರಾಧಾದಶ ||

ಇದರ ಅರ್ಥ॥ (೧)ಸತ್ಪುರುಷರ ನಿಂದಾ [೨) ಅಸಾಧುಪುರುಷರ ಹತ್ತಿರ ನಾಮ ಮಹಿಮೆಯ ಕಥನ (೩)ವಿಷ್ಣುವಿಗೂ ಶಿವನಿಗೂ ಭೇದ [೪]ಶಿವನಿಗೂ ವಿಷ್ಣುವಿಗೂ ಭೇದ [೫] ಶ್ರುತಿವಾಕ್ಯಗಳಲ್ಲಿ ಅಶ್ರದ್ಧಾ [೬] ಶಾಸ್ತ್ರವಾಕ್ಯಗಳಲ್ಲಿ ಅಶ್ರದ್ಧಾ [೭] ದೇಶಿಕರ ವಾಕ್ಯದಲ್ಲಿ ಅಶ್ರದ್ಧಾ (೮) ನಾಮವಿಷಯದಲ್ಲಿ ಅರ್ಥವಾದದ (ಮಹಿಮೆಯ ಸ್ತುತಿಯ) ಭ್ರಮ (೯] ಅನೇಕ ಪಾಪಗಳ ನಾಶಕವಾದ ನಾಮವು ನನ್ನ ಬಳಿಯಲ್ಲಿ ಇದೆ, ಎಂಬ ವಿಶ್ವಾಸದಿಂದ ನಿಷಿದ್ಧ ಕರ್ಮಗಳ ಆಚರಣೆ, ಉಕ್ತವಿಶ್ವಾಸದಿಂದಲೇ ವಿಹಿತ ಕರ್ಮಗಳ ತ್ಯಾಗ (೧೦)ಅನ್ಯಧರ್ಮಗಳ ಅನ್ಯದೇವರನಾಮಗಳಿಗೂ ಭಗವನ್ನಾಮಕ್ಕೂ ಸಮತ್ವವನ್ನು ತಿಳಿದುಕೊಳ್ಳುವುದು. ಈ ಹತ್ತು ವಿಷ್ಣು ಶಿವನಾಮಗಳ ಜಪದಲ್ಲಿ ನಾಮಾಪರಾಧಗಳು.

ಇದೇ ಅಭಿಪ್ರಾಯವುಳ್ಳದ್ದಾದ ದೋಹಾವನ್ನು ಯಾವನೋ ಒಬ್ಬ ಮಹಾತ್ಮನು ಹೇಳಿರುವನು. ಅದು ಯಾವುದೆಂದರೆ.

॥ ದೋಹಾ ॥

ರಾಮ ರಾಮ ಸಬಕೊ ಕಹೈ । ದಶರಿತ ಕಹೈ ನ ಕೋಯ ।
ಏಕವಾದ ದಶರಿತ ಕಹೈ । ತು ಕೋಟಿ ಜಜ್ಞ ಫಲ ಹೋಯ ॥೧॥

ಅರ್ಥ॥ ರಾಮ ರಾಮ ಎಂಬುದಾಗಿ ಎಲ್ಲರೂ ಎನ್ನುವರು. ಆದರೆ ದಶ ಅಪರಾಧಗಳಿಂದ ರಹಿತನಾಗಿ ರಾಮನಾಮವನ್ನು ಯಾವನೂ ಎನ್ನುವುದಿಲ್ಲ. ಆದರೆ ದಶಾಪರಾಧಗಳಿಂದ ರಹಿತನಾಗಿ ಒಂದುವೇಳೆ ರಾಮನಾಮವನ್ನು ಭಜನೆ ಮಾಡಿದರೆ ಅವನಿಗೆ ಕೋಟಿ ಯಜ್ಞಗಳ ಫಲವುಂಟಾಗುವುದು.

## ॥೫೦೭॥ ಷಟ್‌ಶಾಸ್ತ್ರಗಳಲ್ಲಿಯ ಪರಸ್ಪರ ವಿರುದ್ಧತ್ವವು.

(೧) ಸಾಂಖ್ಯ, (೨) ಪಾತಂಜಲ [೩] ನ್ಯಾಯ, [೪] ವೈಶೇಷಿಕ [೫] ಪೂರ್ವಮೀಮಾಂಸಾ, [೬] ಉತ್ತರಮೀಮಾಂಸಾ, ಈ ಆರು ಶಾಸ್ತ್ರಗಳ ಮತಗಳು ಪರಸ್ಪರ ವಿರುದ್ಧವಾಗಿರುವುವು. ಕಾರಣವೇನೆಂದರೆ- [೧] ಸಾಂಖ್ಯಶಾಸ್ತ್ರದಲ್ಲಿ ಈಶ್ವರನ ಅಂಗೀಕಾರವಿಲ್ಲ. (೨) ಯೋಗಶಾಸ್ತ್ರದಲ್ಲಿ ನಿರಪೇಕ್ಷ ಪ್ರಕೃತಿಪುರುಷನ ವಿವೇಕಜ್ಞಾನದಿಂದ ಮೋಕ್ಷವೆಂದು ಹೇಳಲ್ಪಟ್ಟದೆ. (೩) ನ್ಯಾಯಶಾಸ್ತ್ರದಲ್ಲಿ ನಾಲ್ಕು ಪ್ರಮಾಣಗಳು. (೪) ವೈಶೇಷಿಕ ಶಾಸ್ತ್ರದಲ್ಲಿ ಎರಡು ಪ್ರಮಾಣಗಳು ಇವೆ. ಇದೇ ವಿರೋಧವು. ಇದರಂತೆ ನ್ಯಾಯ ಮತ್ತು ವೈಶೇಷಿಕ ಶಾಸ್ತ್ರಗಳ ಇನ್ನೂ ಬಹಳ ವಿರೋಧಗಳುಂಟು. ಅವು ಜಿಜ್ಞಾಸುವಿಗೆ ಅನಪೇಕ್ಷಿತವಾದವುಗಳೆಂದು ತಿಳಿದು ಬರೆದಿರುವುದಿಲ್ಲ. (೫) ಇದರಂತೆ ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ಈಶ್ವರನ ಅಂಗೀಕಾರವಿಲ್ಲ. ಮೋಕ್ಷರೂಪ ಸುಖದ ಅಂಗೀಕಾರವಿಲ್ಲ. ಆದರೆ ಕರ್ಮಜನ್ಯ ವಿಷಯ ಸುಖವೇ ಪುರುಷಾರ್ಥವೆಂದು ಇದೆ. (೬) ಉತ್ತರ ಮೀಮಾಂಸಾ



ಶಾಸ್ತ್ರದಲ್ಲಿ ಈಶ್ವರನ ಮತ್ತು ಮೋಕ್ಷದ ಅಂಗೀಕಾರವುಂಟು, ವಿಷಯ ಸುಖವು ಪುರುಷಾರ್ಥವಲ್ಲ. ಈ ಉತ್ತರ ಮೀಮಾಂಸೆಯ ಮತವೇ ಈ ಗ್ರಂಥದಲ್ಲಿ ಸ್ಪಷ್ಟವಾಗಿ ಇದೆ. ಸರ್ವ ಶಾಸ್ತ್ರಗಳ ಮತವು ಇದಕ್ಕೆ ವಿರುದ್ಧವಾಗಿದೆ. ಅನ್ಯಶಾಸ್ತ್ರಗಳಲ್ಲಿ ಭೇದವಾದವುಂಟು; ಈ ಗ್ರಂಥದಲ್ಲಿ ಭೇದವಾದದ ಖಂಡನೆಯೂ ಮತ್ತು ಅಭೇದದ ಪ್ರತಿಪಾದನವೂ ಇದೆ. ಈ ಪ್ರಕಾರದಿಂದ ಸಕಲ ಶಾಸ್ತ್ರಗಳ ಸಿದ್ಧಾಂತವು ಪರಸ್ಪರ ವಿರುದ್ಧವಾಗಿ ಇದೆ.

ಟಿಪ್ಪಣಿ—(೧)ಯೋಗನಿರಪೇಕ್ಷ ಎಂದರೆ ಸಮಾಧಿರೂಪ ಯೋಗದ ಅಪೇಕ್ಷೆಯಿಂದ ಕೇವಲ ರಹಿತ.

---

## ॥೫೦೮॥ ತರ್ಕದೃಷ್ಟಿಯ ಮತ್ತು ಶುಭಸಂತತಿ ನಾಮಕ ರಾಜನ ಸಂಯೋಗ.

॥ ಚೌಪಾಈ ॥

ವಚನ ವಿರುದ್ಧ ಸುನೆ ಜಬ ರಾಜಾ ।
ಯಹ ಸಂಸೆ ಉಪಜ್ಯೊ ತಿಹಿ ತಾಜಾ ॥
ಇನಮೈ ಕೌನ ಸತ್ಯ ಬುಧ ಭಾಖಿತ ।
ಯುಕ್ತಿ ಪ್ರಮಾನ ಸಕಲ ಸಮ ಆಖಿತ ॥೯೧॥

ಅರ್ಥ ॥ ಈ ಪ್ರಕಾರ ಪರಸ್ಪರರು ತಮ್ಮ ಮತದ ಶ್ರೇಷ್ಠತ್ವವನ್ನು ಸಪ್ರಮಾಣವಾಗಿ ತೋರಿಸಲು, ಆ ರಾಜನ ಮನಸ್ಸಿನಲ್ಲಿ "ಯಾವ ಪಂಡಿತನು ಹೇಳಿದ್ದು ನಿಜವು?" ಎಂಬುದು ತಿಳಿಯದೆ, ಪುನಃ ನೂತನ ಸಂಶಯವು ಉತ್ಪನ್ನವಾಯಿತು.

---

ಟಿಪ್ಪಣಿ— ೧. ಒಬ್ಬಾನೊಬ್ಬ ಗೃಹಸ್ಥನ ಮನೆಯ ಅಂಗಳದಲ್ಲಿ ಒಂದು ಬೆಕ್ಕು ಸತ್ತು ಬಿದ್ದಿತ್ತು. ಅವನು ಕೋಟೆಯ ದಿಡ್ಡಿಯ ದ್ವಾರದೊಳಗಿಂದ ದಾಟಿ, ಗ್ರಾಮದ ಹೊರಭಾಗದಲ್ಲಿ ಅದನ್ನು ಒಯ್ದು ಚೆಲ್ಲಿದನು. ಅವನು ಹೋದ ಕೂಡಲೇ ಇತ್ತ ಬಂದು ರೋಗಿಷ್ಟನಾದ ಉಷ್ಟ್ರ(ಒಂಟೆ)ವು ಬಂದು ಅವನ ಅಂಗಳದಲ್ಲಿ ಸತ್ತು ಬಿದ್ದಿತ್ತು. ಇದರಿಂದ ಆ ಗೃಹಸ್ಥನಿಗೆ ಹೇಗೆ ದೊಡ್ಡ ಚಿಂತೆಯುಂಟಾಯಿತೊ ಹಾಗೆ ಶುಭಸಂತತಿ ರಾಜನು ಉಪಾಸ್ಯದೇವನಾರು? ಎಂಬ ಸಂಶಯವನ್ನು ಕಳೆದುಕೊಳ್ಳುವುದಕ್ಕಾಗಿ ಪಂಡಿತರನ್ನು ಕುರಿತು ಪ್ರಶ್ನೆ ಮಾಡಿದನು. ಆದರಿಂದ ನೂತನ ಅಂದರೆ ಹೊಸ ಸಂಶಯವು ಉತ್ಪನ್ನವಾಯಿತು. ಅದರ ನಿವಾರಣೆಯ ಚಿಂತೆಯು ಅವನಿಗೆ ವಿಶೇಷವಾಯಿತು.

॥ ಚೌ ಪಾ ಈ ॥

ಸಂಸೈ ಸೋಕ ದುಖಿತ ಯೂ ಜಯುವ್ಯೆ ।
ಕೊ ಉಪಾಸ್ಯ ಯಹ ಲಖ್ಯೊ ನ ಹಿಯುವ್ಯೆ ॥
ಚಿಂತಾ ಹೃದಯು ಹುಈ ಯಹ ಜಾಕೂ ।
ನಿಜ ಸಂದೇಹ ಸುನಾಉ ಕಾಕೂ ॥ ೯೨ ॥

ಅರ್ಥ॥ ಈ ಪ್ರಕಾರ ಸಂಶಯಶೋಕದಿಂದ ದುಃಖಿತನಾಗಿ “ಯಾವನು ಉಪಾಸ್ಯ ದೇವನೆಂಬುದು ನಿಶ್ಚಯವಾಗಿ ತಿಳಿಯದೆ ಹೋಯಿತಲ್ಲಾ! ಯಾರನ್ನು ಕೇಳಿ ನನ್ನ ಸಂದೇಹವನ್ನು ನಿವಾರಣೆಮಾಡಿಕೊಳ್ಳಲಿ?” ಎಂಬ ವ್ಯಸನವನ್ನು ಹೃದಲ್ಲಿಯದಲ್ಲಿ ತಾಳಿದನು.

---

॥ ಚೌ ಪಾ ಈ ॥

ಸಾಸ್ತ್ರ ನಿಪುನ ಪಂಡಿತ ಜಗ ಜೇತೆ ।
ಸುನೆ ವಿರುದ್ಧ ಬಕತ ಯಹ ತೇತೆ ॥
ಯೂ ಚಿಂತತ ಬಹುಕಾಲ ಭಯೋ ಜಬ ।
ತರ್ಕದೃಷ್ಟಿ ತಿಹಿ ಆಯು ಮಿಲ್ಯೊ ತಬ ॥ ೯೩ ॥

ಅರ್ಥ ॥ “ಜಗತ್ತಿನಲ್ಲಿಯ ಪಂಡಿತರೆಲ್ಲರೂ ಶಾಸ್ತ್ರನಿಪುಣರಾಗಿದ್ದು ಅವರು ಪರಸ್ಪರ ವಿರುದ್ಧವಾಗಿ ಪ್ರಮಾಣಗಳನ್ನೇ ತೋರಿಸುವರು. ಇನ್ನು ಮನಸ್ಸಿನ ಸಂಶಯುಗಳನ್ನು ಹೇಗೆ ನಿವಾರಣ ಮಾಡಿಕೊಳ್ಳಲಿ?” ಎಂದು ಚಿಂತಿಸುತ್ತಲೇ ಬಹು ದಿವಸಗಳನ್ನು ಕಳೆದನು. ಆಮೇಲೆ ಒಂದುದಿವಸ ತರ್ಕ ದೃಷ್ಟಿಯು ಭೆಟ್ಟಿಯಾದನು.

---

॥ ದೋ ಹಾ ॥

ಮಿಲೆ ಪರಸ್ಪರ ತೆ ಉಭೈ। ಪುತ್ರ ಪಿತಾ ಜಿಹಿ ರೀತಿ ।
ಕರಿ ಪ್ರನಾಮು ಆಶಿಷ ದುಹು। ಆಸನ ಲಹೆ ಸಪ್ರೀತಿ ॥ ೯೪ ॥

ಅರ್ಥ॥—ಆಗ ಆ ಉಭಯುತ್ರರು ಪರಸ್ಪರ ಆಲಿಂಗನಮಾಡಿದರು. ಆಮೇಲೆ ವಿಧಿವತ್ತಾಗಿ ಪಿತಾ ಪುತ್ರರ ಪರ್ಸ್ಯಸಕಾಲದಲ್ಲಿ ಪುತ್ರನುನಮಸ್ಕಾರ ಮಾಡಿದ ಕೂಡಲೆ, ಪಿತನು ಆಶೀರ್ವದಿಸುವಂತೆ ಪರಸ್ಪರನಮಸ್ಕಾರ, ಆಶೀರ್ವಾದಗಳನ್ನುಹೊಂದಿ ಬಹುಪ್ರೀತಿಯಿಂದ ತಮ್ಮತಮ್ಮ ಆಸನಗಳನ್ನು ಹೊಂದಿದರು.



(ತರ್ಕದೃಷ್ಟಿಯು ಪಿತನಿಗೆ ಮಾಡಿದ ಉಪದೇಶವು) ॥ ೫೧೯—೫೨೨ ॥

॥ ೫೧೯ ॥ ಕಾರಣರೂಪದ ಉಪಾಸ್ಯತ್ವವೂ, ಮತ್ತು ಕಾರ್ಯರೂಪದ ನಿಕೃಷ್ಟತ್ವವೂ.

॥ ದೋಹಾ ॥

ನಿಜಪಿತು ಚಿಂತಾಸಹಿತ ಲಖಿ । ಸುತ ಬೋಲ್ಯೊ ಯಹ ಬಾತ॥
೧
ಕೊ ಚಿಂತಾ ಚಿತ ರಾವರೆ । ಮುಖಪ್ರಸನ್ನ ನಹಿ ತಾತ ॥ ೯೫ ॥

ಅರ್ಥ—ನಿಜಪಿತನು ಚಿಂತಾಯುಕ್ತನಾಗಿ ಇದ್ದದ್ದನ್ನು ಕಂಡು ತರ್ಕದೃಷ್ಟಿಯು ಪಿತನನ್ನು ಉದ್ದೇಶಿಸಿ, “ಎಲೌ ತಾತ? ತಮ್ಮ ಹೃದಯುದಲ್ಲಿಯು ಚಿಂತೆಯು ಯಾವುದು? ತಮ್ಮ ಮುಖವು ಮ್ಲಾನವಾಗಿರುವ ಕಾರಣವೇನು?” ಎಂದು ವಿಚಾರಿಸಿದನು.

ಟಿಪ್ಪಣಿ—(೧) ನಿಮ್ಮ ಚಿತ್ತದಲ್ಲಿ ಯಾವ ಚಿಂತೆಯು ಇದೆ.

---

॥ ಚೌಪಾಈ ॥ ಸುಭಸಂತತಿ ಸುತಕೀ ಸುನಿ ಬಾನೀ ।
ತಿಹಿ ಭಾಖೀ ನಿಜ ಸಕಲ ಕಹಾನೀ ॥
ಚಿತ ಚಿಂತಾಕೊ ಹೇತು ಸುನಾಯೊ ।
ಕೊ ಉಪಾಸ್ಯ ಯಹ ತತ್ವನ ಪಾಯೊ ॥ ೯೬ ॥

ಅರ್ಥ—ಶುಭಸಂತತಿಯು ಮಗನ ಪ್ರಶ್ನೆಯನ್ನು ಶ್ರವಣ ಮಾಡಿ ತನ್ನ ಚಿಂತೆಯ ಸರ್ವಕಾರಣಗಳನ್ನು ಹೇಳಿ, “ಉಪಾಸ್ಯನಾದ ದೇವನು ಯಾರು?” ಎಂಬ ನಿಶ್ಚಯ ಜ್ಞಾನವು ಉಂಟಾಗದೆ ಇರುವುದೇ ವ್ಯಸನಕ್ಕೆ ಕಾರಣವೆಂದು ಹೇಳಿದನು.

---

॥ ಚೌಪಾಈ ॥

ತರ್ಕದೃಷ್ಟಿ ಸುನಿ ಪಿತುಕೆ ಬೈನಾ ।
ಬೋಲ್ಯೊ ಸುಭಸಂತತಿ ಸುಖ ದೈನಾ ॥
ಕಾರನರೂಪ ಉಪಾಸ್ಯ ಪಿಛಾನಹು ।
ತಾಕೆ ನಾಮು ಅನಂತ ಹಿ ಜಾನಹು ॥ ೯೭ ॥

ಅರ್ಥ—ತರ್ಕದೃಷ್ಟಿಯು ಪಿತನ ವಚನಗಳನ್ನು ಕೇಳಿ, ರಾಜನ್! ಕಾರಣರೂಪ ಉಪಾಸ್ಯದೇವನು ಸುಖದಾತೃವೆಂಬ ತತ್ವವನ್ನು ತಿಳಿ; ಅವನ ನಾಮಗಳು ಅನಂತಾನಂತವಾಗಿರುವವು.

॥ ಚೌಪಾಈ ॥

ಕಾರಜ ರೂಪ ತುಛ ಲಖಿ ತಜಿಯೆ ।
ಯುಹ ಸಿದ್ಧಾಂತ ವೇದಕೊ ಭಜಿಯೆ ॥
ರಚೇವ್ಯಾಸ ಇತಿಹಾಸ ಪುರಾನಾ ।
ತಿನಮ್ಮೆ ಯುಹೀ ಮತೊ ನಹಿ ನಾನಾ ॥ ೯೮ ॥

ಅರ್ಥ—ಕಾರ್ಯರೂಪವು ತುಚ್ಛವಾದದ್ದೆಂದು ತಿಳಿ. ಇದೇ ವೇದಗಳ ಮುಖ್ಯ ಸಿದ್ಧಾಂತವು. ವ್ಯಾಸಮಹರ್ಷಿಗಳು ರಚಿಸಿದ ಅನೇಕ ಪುರಾಣೇತಿಹಾಸಗಳಲ್ಲಿ ಸಹ ಇದೇಸಿದ್ಧಾಂತ ವಿರುವುದು. ಅನ್ಯವಿಲ್ಲ.

॥ ಚೌಪಾಈ ॥

ಮನಸ್ಮೆ ಮರ್ಮನ ಲಖತ ಜು ಪಂಡಿತ ।
ಕರತ ಪರಸ್ಪರ ಮತ ತೆ ಖಂಡಿತ ॥
ನೀಲಕಂಠ ಪಂಡಿತ ಬುಧನೀಕೊ ।
ಕಿಯೋ ಗ್ರಂಥ ಭಾರತಕೊ ಟೀಕೋ ॥ ೯೯ ॥

ಅರ್ಥ—ನಿಜವಾದ ತತ್ವವನ್ನು ಅರಿತುಕೊಳ್ಳದೆ ಪಂಡಿತರು ಪರಸ್ಪರ ಮತಖಂಡನ ಮಾಡುತ್ತಿರುವರು. ನೀಲಕಂಠ ಪಂಡಿತನೆಂಬುವನು ಭಾರತಕ್ಕೆ ಟೀಕೆಯನ್ನು ಬರೆದಿರುವನು.

॥ ಅರ್ಥಚೌಪಾಈ ॥

ತಿನ ಯುಹ ಪ್ರಥಮಹಿ ಲಿಖ್ಯೊ ಪ್ರಸಂಗಾ ॥
ಶ್ರುತಿ ಸಿದ್ಧಾಂತ ಕಹ್ಯೊ ಜೊ ಚಂಗಾ ॥ ೧೦೦ ॥

ಅರ್ಥ—ಅವನು ಆ ಭಾರತದ ಟೀಕೆಯನ್ನು ಪ್ರಥಮತಃ ಇದೇ ಸಿದ್ಧಾಂತವನ್ನು ಬರೆದು ಅದಕ್ಕೆ ಶ್ರುತಿ ಪ್ರಮಾಣಗಳನ್ನು ಹೇಳಿ, ಯಥಾರ್ಥವಾಗಿ ವರ್ಣಿಸಿರುವನು.

## ॥ ೫೧೦ ಪುರಾಣೋಕ್ತ ಸ್ತುತಿ, ಮತ್ತು ನಿಂದಾ ಮಾಡುವದರಲ್ಲಿ ವ್ಯಾಸರ ಅಭಿಪ್ರಾಯವು.

ಟೀಕಾ ॥ ಸಕಲ ಪುರಾಣಗಳು ವ್ಯಾಸಮಹರ್ಷಿ ಕೃತವಾದವುಗಳು, ಅವರೇ ಸ್ಕಂದ ಪುರಾಣದಲ್ಲಿ, ಶಿವನಿಗೆ ಸ್ವಾತಂತ್ರ್ಯಾದಿಕ ಈಶ್ವರ ಧರ್ಮಗಳನ್ನೂ ಮತ್ತು ಅನ್ಯ ದೇವರುಗಳಿಗೆ ಶಿವಕೃಪೆಯಿಂದ ಸರ್ವವಿಭೂತಿಯು



ಪ್ರಾಪ್ತವಾಗಿದೆಯೆಂದೂ ಹೇಳುತ್ತಾರೆ. ಅದರಿಂದ ಜೀವ ಧರ್ಮವನ್ನುಹೇಳಿದನು. ಇದರಂತೆ ವಿಷ್ಣುಪುರಾಣ ಪದ್ಮಪುರಾಣಗಳಲ್ಲಿ ವಿಷ್ಣುವಿಗೆ ಈಶ್ವರತ್ವವನ್ನು ಹೇಳಿರುವನು. ಇದರಂತೆ ಗಣಪತಿ ಮೊದಲಾದ ದೇವತೆಗಳಿಗೆ ಉಳಿದ ಪುರಾಣಗಳಲ್ಲಿಯೂ ಉಪಪುರಾಣಗಳಲ್ಲಿಯೂ ಈಶ್ವರತ್ವವನ್ನುಹೇಳಿದ್ದಾನೆ. ಈರೀತಿಯಿಂದ ವ್ಯಾಸೋಕ್ತಿಗಳಲ್ಲಿವಿರೋಧವು ಪ್ರತೀತವಾಗುತ್ತದೆ ಈ ವಿರೋಧಕ್ಕೆ ಸಮಾಧಾನವೇನೆಂದರೆ- ಸರ್ವರೂ ಈಶ್ವರರೇ ಇರುವರು. ಯಾವ ಪ್ರಕರಣದಲ್ಲಿ ಅನ್ಯದೇವರ ನಿಂದೆ ಇರುವುದೋ ಆ ನಿಂದೆಯಿಂದ ಆ ದೇವತೆಯ ಉಪಾಸನೆಯನ್ನು ತ್ಯಾಗಮಾಡುವ ವಿಷಯದಲ್ಲಿ ವ್ಯಾಸರ ಅಭಿಪ್ರಾಯವಿಲ್ಲ. ಆದರೆ ವೈಷ್ಣವ ಪುರಾಣದಲ್ಲಿ ಶಿವಾದಿಗಳ ನಿಂದೆಯೂ, ಮತ್ತು ವಿಷ್ಣುವಿನ ಸ್ತುತಿಯೂ ಇರುವುದರಿಂದ ವಿಷ್ಣು ಉಪಾಸನೆಯಲ್ಲಿ ಪ್ರವೃತ್ತಿಯುಂಟಾಗಬೇಕೆಂಬುದೆ ಮನೀಷೆಯು. ಇದರಂತೆಶಿವಪುರಾಣದಲ್ಲಿ ಇರುವ ವಿಷ್ಣು ಮೊದಲಾದವರ ನಿಂದೆಯು ವಿಷ್ಣ್ವಾದಿಗಳ ಉಪಾಸನೆಯ ತ್ಯಾಗಾರ್ಥವಾಗಿ ಅಲ್ಲ; ಆದರೆ ಅವರ ನಿಂದೆಯಿಂದ ಶಿವಉಪಾಸನೆಯಲ್ಲಿ ಪ್ರವೃತ್ತಿಯಾಗಬೇಕೆಂಬುದೇಮುಖ್ಯಉದ್ದೇಶವು. ಪ್ರಸಂಗವಶಾತ್ ಒಂದು ಪ್ರಕರಣದಲ್ಲಿ ಅನ್ಯರನಿಂದೆಯು ತ್ಯಾಗದಸಲುವಾಗಿ ಎಂದರೆ ಸರ್ವ ಉಪಾಸನೆಯ ತ್ಯಾಗವಾಗಬಹುದು. ಹೀಗೆ ಅಲ್ಲ. ಈಕಾರಣದಿಂದ ಅನ್ಯರ ನಿಂದೆಯಿಂದ ಒಬ್ಬರ ಸ್ತುತಿಯ ಅರ್ಥವುಇದೆ, ತ್ಯಾಗಾರ್ಥವಲ್ಲ. ಈವಿಷಯದಲ್ಲಿ ಒಂದು ದೃಷ್ಟಾಂತವನ್ನು ಹೇಳುವೆನು- ಅಗ್ನಿಹೋತ್ರದ ಕಾಲಗಳು ಎರಡು ಎಂದು ವೇದದಲ್ಲಿ ಹೇಳಿದೆ. ಮೊದಲನೆಯದು ಸೂರ್ಯೋದಯಾತ್ಪೂರ್ವದಲ್ಲಿ ಎರಡನೆಯದು ಸೂರ್ಯೋದಯಾನಂತರ, ಇವುಗಳಲ್ಲಿ ಉದಯಕಾಲ ಪ್ರಸಂಡಲ್ಲಿ ಅನುದಯಕಾಲದ ನಿಂದೆಯೂ, ಅನುದಯಕಾಲದ ಪ್ರಸಂಗದಲ್ಲಿ ಉದಯಕಾಲದ ನಿಂದೆಯೂ ಇರುವುದು. ಇಲ್ಲಿನಿಂದೆಯ ತಾತ್ಪರ್ಯವು ತ್ಯಾಗಾರ್ಥವಾಗಿಯೇಎಂದು ಕಲ್ಪಿಸಿದರೆ ಎರಡೂ ಕಾಲಗಳಲ್ಲಿ ಹೋಮವನ್ನು ಮಾಡಬಾರದು ಎಂದು ಸಿದ್ಧವಾದೀತು; ಹೀಗೆ ಆಗುವುದಿಲ್ಲ. ಯಾಕೇದರೆ;-ನಿತ್ಯಕರ್ಮದ ತ್ಯಾಗವು ಸಂಭವಿಸುವುದಿಲ್ಲ. ಈ ಕಾರಣದಿಂದ ಉದಯಕಾಲದ ಸ್ತುತಿಯಸಲುವಾಗಿ ಅನುದಯಕಾಲದ ನಿಂದೆಯೂ, ಅನುದಯಕಾಲದ ಸ್ತುತಿಯ ಸಲುವಾಗಿ ಉದಯಕಾಲದ ನಿಂದೆಯೂ, ಇರುವುದು. ಇದರಂತೆ ಒಬ್ಬದೇವನ ಉಪಾಸನೆಯಪ್ರಸಂಗದಲ್ಲಿ ಅನ್ಯದೇವರ ನಿಂದೆಯು ಒಬ್ಬನ ಸ್ತುತಿಯಲ್ಲಿ ತಾತ್ಪರ್ಯವೇ ಹೊರತು, ಅನ್ಯರ ನಿಂದೆಯಲ್ಲಿ ತಾತ್ಪರ್ಯವಲ್ಲ.

ಟಿಪ್ಪಣಿ—(೧) ಸರ್ವರು ಅಂದರೆ ವಿಷ್ಣು, ಶಿವ, ಗಣಪತಿ, ದೇವೀ, ಮತ್ತು ಸೂರ್ಯ ಈ ಐದು ದೇವರು.

## ||೫೧೧|| ಐದು ದೇವರ ಉಪಾಸಕರಿಗೆ ಸಮಫಲದ (ಬ್ರಹ್ಮಲೋಕದ) ಪ್ರಾಪ್ತಿಯು.

ಶಾಖಾಭೇದದಿಂದ ಕೆಲವರು ಉದಯಕಾಲದಲ್ಲಿ ಹೋಮಮಾಡುವರು. ಕೆಲವರು ಅನುದಯಕಾಲದಲ್ಲಿ ಮಾಡುವರು. ಹೇಗ ಮಾಡಿದರೂ ಫಲವು ಸಮವಾಗಿಯೇ ದೊರೆಯುವುದು. ಇದರಂತೆಯೇ ಇಚ್ಛಾಭೇದದಿಂದ ಐದು ದೇವರಲ್ಲಿ ಯಾವನೊಬ್ಬನನ್ನಾದರೂ ಉಪಾಸನೆಮಾಡಿದರೆ ಆ ಸರ್ವ ಉಪಾಸಕರಿಗೂ ಬ್ರಹ್ಮಲೋಕಪ್ರಾಪ್ತಿಯೇ ಆಗುವುದು. ಆಗ ಭೋಗವನ್ನನುಭವಿಸಿದ ಮೇಲೆ ವಿದೇಹ ಮೋಕ್ಷವಾಗುವುದು.

ಯದ್ಯಪಿ ವಿಷ್ಣು ಮೊದಲಾದವರ ಉಪಾಸನೆಯಿಂದ ವೈಕುಂಠಲೋಕಾದಿಗಳ ಪ್ರಾಪ್ತಿಯೆಂದು ಪುರಾಣಾದಿಗಳಲ್ಲಿ ಹೇಳಿದೆ, ಬ್ರಹ್ಮಲೋಕವೆಂದು ಅಲ್ಲ. ತಥಾಪಿ ಉತ್ತಮ ಉಪಾಸಕನು ವಿದೇಹಮುಕ್ತಿಗೆ ಅಧಿಕಾರಿಯಾಗಿರುವನು. ಅದರಿಂದ ಅಂಥ ಅಧಿಕಾರಿಗಳೆಲ್ಲರು ದೇವಯಾನ ಮಾರ್ಗದಿಂದ ಬ್ರಹ್ಮಲೋಕವನ್ನು ಹೊಂದುವರು. ಆದರೆ ಈ ಒಂದೇ ಬ್ರಹ್ಮಲೋಕವು ವಿಷ್ಣು ಉಪಾಸಕರಿಗೆ ವೈಕುಂಠಲೋಕ ಪ್ರತೀತಿಯಾಗಿ, ಈ ಲೋಕವಾಸಿಗಳೆಲ್ಲರೂ ಚತುರ್ಭುಜರಾಗಿ ಪ್ರತೀತಿಯಾಗುವರು. ತಾನು ಸಹ ಚತುರ್ಭುಜನಾಗುವನು. ಇದರಂತೆ ಶಿವೋಪಾಸಕರಿಗೆ ಅದೇ ಬ್ರಹ್ಮಲೋಕವು, ಶಿವಲೋಕದಂತೆಯೂ ಅಲ್ಲಿರುವವರೂ ತಾನೂ ಸಹ ತ್ರಿನೇತ್ರಧಾರಿಯಂತೆಯೇ ಪ್ರತೀತರಾಗುವರು. ಈ ರೀತಿಯಿಂದ ಸರ್ವ ಉಪಾಸಕರಿಗೆ ಬ್ರಹ್ಮಲೋಕವೇ ತಮ್ಮ ಉಪಾಸ್ಯದೇವರ ಲೋಕದಂತೆಯೇ ಪ್ರತೀತವಾಗುವುದು. ಕಾರಣವೇನೆಂದರೆ;-

೧
ದೇವಯಾನ ಮಾರ್ಗವನ್ನು ಬಿಟ್ಟು ಅನ್ಯಮಾರ್ಗದಿಂದ ಯಾವನು ಹೋಗುವನೋ ಅವನು ಮರಳಿ ಸಂಸಾರಕ್ಕೇ ಬರುವನು. ಬ್ರಹ್ಮಲೋಕಕ್ಕೆ ದೇವಯಾನ ಮಾರ್ಗವೊಂದೇ ಉಂಟು. ಈ ಕಾರಣದಿಂದ ವಿದೇಹಮೋಕ್ಷಕ್ಕೆ ಯೋಗ್ಯರಾದ ಉಪಾಸಕರೆಲ್ಲರೂ ಬ್ರಹ್ಮಲೋಕಕ್ಕೇ ಹೋಗುವರು. ಆ ಬ್ರಹ್ಮಲೋಕದಲ್ಲಿ ಉಪಾಸಕರ ಇಚ್ಛಾನುಸಾರವಾಗಿ ಸರ್ವಸಾಮಗ್ರಿ ಸಹಿತ ಆಬ್ರಹ್ಮಲೋಕವೇ ಅವರಿಗೆ ಪ್ರತೀತಿಯಾಗುವದು. ಇಂಥ ಒಂದು ಶಕ್ತಿಯುಂಟು. ಈಪ್ರಕಾರದಿಂದ ಐದು ದೇವರ ಉಪಾಸಕರಿಗೂ ಸಮಫಲವು ದೊರಕುವುದು.



ಟಿಪ್ಪಣಿ. (೧) ೧ ದೇವಯಾನ, ೨. ಪಿತೃಯಾನ, ೩. ಜಾಯಸ್ವಮ್ರಿಯಸ್ವ ಎಂಬುದಾಗಿ ಸಂಸಾರಕ್ಕೆ ಮೂರು ಮಾರ್ಗಗಳು ಇರುವುವು. ಇವುಗಳಲ್ಲಿ (೧) ಸೂರ್ಯಮಂಡಲವನ್ನು ಭೇದಿಸಿ, ಬ್ರಹ್ಮಲೋಕವನ್ನು ಪ್ರವೇಶಿಸುವಂಥ ಮಾರ್ಗವೇ ದೇವಯಾನ ಮಾರ್ಗವು. (೨) ಚಂದ್ರಮಂಡಲನ್ನು ಭೇದಿಸಿ, ಇಂದ್ರಲೋಕರೂಪ ಬ್ರಹ್ಮಲೋಕದಲ್ಲಿ ಹೋಗತಕ್ಕ ಮಾರ್ಗಕ್ಕೆ ಪಿತೃಯಾನ ಮಾರ್ಗವೆನ್ನುತ್ತಾರೆ. ಇದಕ್ಕೆ ಧೂಮಮಾರ್ಗವೆಂದೂ ಹೇಳುವರು. (೩) ಪುನಃ ಪುನಃ ಜನ್ಮಮೃತ್ಯುವಿಗೆ ಕಾರಣವಾದ ಮೃತ್ಯುಲೋಕದಲ್ಲಿ ಬರತಕ್ಕ ಮಾರ್ಗಕ್ಕೆ ಜಾಯಸ್ವಮ್ರಿಯಸ್ವಮಾರ್ಗವೆನ್ನುತ್ತಾರೆ. ಈಮೂರೂ ಸಂಸಾರದ ಮಾರ್ಗಗಳು. ಇನ್ನು ನಾಲ್ಕನೆ ಬ್ರಹ್ಮಜ್ಞಾನರೂಪಮಾರ್ಗವೇ ಮೋಕ್ಷದ ಮಾರ್ಗವಿದೆ.

## ||೫೧೨|| ಒಬ್ಬ ಪರಮಾತ್ಮನಲ್ಲಿಯೇ ಅನೇಕ ನಾಮ ರೂಪಗಳು ಸಂಭವಿಸುತ್ತವೆ.

ಈ ವಿಷಯದಲ್ಲಿ ಉಂಟಾಗುವ ಆಕ್ಷೇಪಣೆಯೆನೆಂದರೆ "ಐದೂ ದೇವರ ನಾಮ ರೂಪಗಳು ಭಿನ್ನಭಿನ್ನಗಳಾಗಿರುವುವು; ಮತ್ತು ಈಶ್ವರನು ಒಬ್ಬನೇ ಇರುವನು. ಒಬ್ಬ ಈಶ್ವರನಿಗೆ ಅನೇಕ ರೂಪಗಳು ಸಂಭವಿಸುವದಿಲ್ಲ."

ಇದಕ್ಕೆ ಸಮಾಧಾನವೇನೆಂದರೆ "ವಿಚಾರಮಾಡಿ ನೋಡಿದರೆ ಪರಮಾತ್ಮನಲ್ಲಿ ಯಾವನಾಮರೂಪಗಳೂ ಇಲ್ಲ. ಮಂದಬುದ್ಧಿಗಳಿಗೆ ಉಪಾಸನೆಯ ಸಲುವಾಗಿ ನಾಮರೂಪರಹಿತ ಪರಮಾತ್ಮನ ಮಾಯಾಕೃತ ಕಲ್ಪಿತ ನಾಮರೂಪಗಳನ್ನು ಹೇಳಿರುವರು. ಈ ಕಾರಣದಿಂದ ಒಬ್ಬ ಪರಮಾತ್ಮನಲ್ಲಿ ಮಾಯಾಕೃತ ಕಲ್ಪಿತ ಅನೇಕ ನಾಮರೂಪಗಳು ಸಂಭವಿಸುತ್ತವೆ. ಈರೀತಿಯಿಂದ ಸರ್ವಪುರಾಣ ವಾಕ್ಯಗಳ ವಿರೋಧವು ದೂರವಾಗುವುದು.

## ||೫೧೩|| ಸರ್ವಪುರಾಣಗಳ ಕಾರಣ, ಮತ್ತು ಕಾರ್ಯ ಬ್ರಹ್ಮದ ಉಪಾಸನೆಯ ಕ್ರಮದಿಂದ ಉಪಾದೇಯತ್ವ, ಮತ್ತು ಹೇಯತ್ವದಲ್ಲಿ ತಾತ್ಪರ್ಯವು. ||೫೧೩—೫೧೪||

ಪುರಾಣವಾಕ್ಯಗಳಲ್ಲಿ ವಿರೋಧ ಆಕ್ಷೇಪಣೆಗಳ ಮುಖ್ಯ ಸಮಾಧಾನವೇನೆಂದರೆ-ವಿಷ್ಣು, ಶಿವ, ಗಣಪತಿ, ದೇವಿ, ಸೂರ್ಯ, ಇತ್ಯಾದಿ ನಾಮಗಳೆಲ್ಲವು ಕಾರಣಬ್ರಹ್ಮ, ಮತ್ತು ಕಾರ್ಯದ ಬ್ರಹ್ಮವೂ ಆಗಿರುವವು. ಮಾಯಾವಿಶಿಷ್ಟಕ್ಕೆ ಕಾರಣಬ್ರಹ್ಮನೆನ್ನುವರು. ಹಿರಣ್ಯಗರ್ಭ ಕಾರ್ಯವು. ಇದಕ್ಕೂ ಸಹ ಬ್ರಹ್ಮನೆನ್ನುವರು. ಈ ಪ್ರಕಾರದಿಂದ ಕಾರಣಬ್ರಹ್ಮಕ್ಕೆ ವಿಷ್ಣು, ಶಿವ, ಗಣಪತಿ, ದೇವೀ, ಸೂರ್ಯ ಮೊದಲಾದ ಪ..ಗಳಿಂದ ಸಂಬೋ

ಧಿಸುವರು. ಮತ್ತು ಕಾರ್ಯಬ್ರಹ್ಮಕ್ಕೂ ಸಹ ಇವೇ ಐದು ಪದಗಳಿಂದ ಸಂಬೋಧಿಸುವರು. ಇದರಂತೆ ಐದೂ ಪದಗಳಿಗೆ ನಾರಾಯಣ,ನೀಲಕಂಠ, ವಿಘ್ನೇಶ,ಶಕ್ತಿ, ಭಾನು, ಇತ್ಯಾದಿ ಅನಂತ ಪರ್ಯಾಯನಾಮಗಳು ಇವೆ. ಈ ಸರ್ವಪದಗಳ ಕಾರಣಬ್ರಹ್ಮ ಮತ್ತು ಕಾರ್ಯಬ್ರಹ್ಮ ಈ ಎರಡನ್ನೂ ಬೋಧಿಸುವುವು ಕೆಲವೆಡೆಯಲ್ಲಿ ಕಾರಣ ಬ್ರಹ್ಮವನ್ನು ಕೆಲವೆಡೆಯಲ್ಲಿ ಕಾರ್ಯಬ್ರಹ್ಮವನ್ನು ಪ್ರಸಂಗಾನುಸಾರ ಬೋಧನ ಮಾಡುವವು. ಸೈಂಧವ ಪದವು, ಅಶ್ವ, ಮತ್ತು ಲವಣ, ಈಎರಡನ್ನೂ ಬೋಧಿಸುತ್ತದೆ. ಭೋಜನಕಾಲದಲ್ಲಿ ಸೈಂಧವ ಪದದಿಂದ ಉಪ್ಪು ಎಂದೂ, ಪ್ರಮಾಣ ಪ್ರಸಂಗದಲ್ಲಿ ಕುದುರೆ ಎಂದೂ ಬೋಧಿಸುವುದು.ವಿಷ್ಣುಪುರಾಣದಲ್ಲಿಯ ನಾರಾಯಣ ಮೊದಲಾದ ಪದಗಳು ಕಾರಣಬ್ರಹ್ಮ ಬೋಧಕಗಳಾಗಿವೆ. ಶಿವ, ಗಣೇಶ, ಸೂರ್ಯಾದಿ ಪದಗಳು ಕಾರ್ಯ ಬ್ರಹ್ಮ ಬೋಧಕಗಳಾಗಿವೆ.

||೫೧೪|| ೧. ಈ ಕಾರಣದಿಂದ ವಿಷ್ಣುಗ್ರಂಥಗಳಲ್ಲಿ ವಿಷ್ಣುವಿನ ಸ್ತುತಿಯೂ, ಮತ್ತು ಶಿವಾದಿಗಳ ನಿಂದೆಯು. ಇದರ ಮೇಲಿಂದ ವ್ಯಾಸಾಭಿಪ್ರಾಯವು ಕಂಡುಬರುವದೇನೆಂದರೆ, ಕಾರಣಬ್ರಹ್ಮ ಉಪಾಸ್ಯವು, ಕಾರ್ಯಬ್ರಹ್ಮವು ಉಪಾಸ್ಯವಲ್ಲ. ಇದರಂತೆ-

೨. ಸ್ಕಂದಪುರಾಣ ಮೊದಲಾದ ಶೈವಗ್ರಂಥಗಳಲ್ಲಿ ಶಿವ, ಮಹೇಶಾದಿ ಪದಗಳು ಕಾರಣಬ್ರಹ್ಮ ಬೋಧಕವಾಗಿಯೂ, ಮತ್ತು ವಿಷ್ಣು, ಗಣೇಶ, ದೇವೀ, ಸೂರ್ಯಾದಿ ಪದಗಳು ಕಾರ್ಯಬ್ರಹ್ಮದ ಬೋಧಕಗಳಾಗಿಯೂ ಇವೆ. ಈ ಕಾರಣದಿಂದ ಇವುಗಳಲ್ಲಿ ಸಹಾ ಕಾರ್ಯಬ್ರಹ್ಮದ ಸ್ತುತಿಯೂ, ಮತ್ತು ಕಾರ್ಯಬ್ರಹ್ಮ ನಿಂದೆಯೂ ಇದೆ.

೩. ಇದರಂತೆ ಗಣೇಶಪುರಾಣದಲ್ಲಿ ಗಣೇಶಪದವು ಕಾರಣಬ್ರಹ್ಮವಾಚಕವೂ, ಮತ್ತು ವಿಷ್ಣು ಶಿವಾದಿಕ ಪದಗಳು ಕಾರ್ಯಬ್ರಹ್ಮ ವಾಚಕಗಳಾಗಿಯೂ ಇವೆ. ಇದರಿಂದ ಕಾರಣದ ಸ್ತುತಿಯೂ, ಕಾರ್ಯದ ನಿಂದೆಯುಇದೆ.

೪. ಇದರಂತೆದೇವೀಪುರಾಣದಲ್ಲಿ ಕಾಲಿ,ದೇವಿ,ಮೊದಲಾದಪದಗಳು ಕಾರಣಬ್ರಹ್ಮ ಬೋಧಕವೂ ವಿಷ್ಣು, ಶಿವ, ಗಣೇಶ, ಸೂರ್ಯಾದಿ ಪದಗಳು ಕಾರ್ಯಬ್ರಹ್ಮ ಬೋಧಕಗಳೂ ಆಗಿವೆ. ಈ ಕಾರಣದಿಂದ ಕಾಲೀಪದ ಬೋಧ್ಯಗಳು ಕಾರಣದ ಸ್ತುತಿ ಮತ್ತು ವಿಷ್ಣು, ಶಿವಾದಿಕ ಪದಗಳು ಬೋಧ್ಯಕಾರ್ಯಬ್ರಹ್ಮದ ನಿಂದೆಯುಳ್ಳವುಗಳೂ ಆಗಿವೆ.

೫. ಇದರಂತೆ ಸೌರಪುರಾಣದಲ್ಲಿ :ಸೂರ್ಯ, ಭಾನು ಪದಗಳ

